# ಶ್ರೀಮದ್ಭಾಗವತ

## ದ್ವಿತೀಯಸ್ಕಂಧ



ಪ್ರಕಾಶನ : ವಿಶ್ವಮಧ್ವಮಹಾಪರಿಷತ್ ಉತ್ತರಾದಿಮಠ

ಅನುವಾದ ಹಾಗೂ ಸಂಪಾದನೆ

**ಪಂ. ಪೂ. ಗುತ್ತಲ ರಂಗಾಚಾರ್ಯರು**

ಕುಲಪತಿಗಳು ಶ್ರೀ ಜಯತೀರ್ಥವಿದ್ಯಾಪೀಠ

ವಿಶ್ವಮಧ್ವಮಹಾಪರಿಷತ್ ಗ್ರಂಥಮಾಲಾ - 80

# ಶ್ರೀಮದ್ಭಾಗವತ

## ದ್ವಿತೀಯಸ್ಕಂಧ

*ಅನುವಾದ ಹಾಗೂ ಸಂಪಾದನೆ*

ಪಂ.ಪೂ.ಗುತ್ತಲ ರಂಗಾಚಾರ್ಯರು

ಕುಲಪತಿಗಳು, ಶ್ರೀಜಯತೀರ್ಥವಿದ್ಯಾಪೀಠ

ಸಹ ಸಂಪಾದನೆ :

ಪಂ. ವಾದಿರಾಜಾಚಾರ್ಯ ಕರಣಂ

ಪ್ರಕಾಶನ :

ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನ

ಶ್ರೀಉತ್ತರಾದಿಮಠ

ವಿಶ್ವಮಧ್ವಮಹಾಪರಿಷತ್, ಬೆಂಗಳೂರು - ೪

**Srimad Bhagavata Dwiteetya Skandha**
A highly scholarly yet simple translation in Kannada with word by word meaning, summary and detailed in-depth notes based on Bhavata Tatparya of Sri Madhwacharya a deptly summarizing all available commentaries on the subject by **Sudha Visharada Pandita Poojya Rangacharya Guttal**, Kulapati of Sri Jayateertha Vidyapitha.

Published by : **Vishva Madhwa Maha Parishat**

Copies : 1000

First Edition : October 2010

No.of Pages : 16+336



Price. [In India] **Rs. 150**

**Copies can be had from :**

Vishva Madhwa Maha Parishat
Research Center, #11, 2nd Floor,
Uttaradimath Building, Uttaradi Math Road,
Shankarpuram, Basavanagudi
BANGALORE - 4 Phone : 080 26603692

Type Setting : V.M.M.P Research wing.

Cover Design : Gopalakrishna

Printed by :
**VAGARTHA,** 149, 8th Cross, N R Colony, Bangalore-4 Ph 2242 7677



ಶ್ರೀಮಜ್ಜಗದ್ಗುರುಮಧ್ವಾಚಾರ್ಯಮೂಲಮಹಾಸಂಸ್ಥಾನ
ಶ್ರೀಮದುತ್ತರಾದಿಮಠಾಧೀಶರಾದ, ಶ್ರೀಜಯತೀರ್ಥವಿದ್ಯಾಪೀಠದ
ಸಂಸ್ಥಾಪಕರಾದ ಶ್ರೀ 1008 ಶ್ರೀ ಸತ್ಯಪ್ರಮೋದತೀರ್ಥಶ್ರೀಪಾದಂಗಳವರ
ಅಡಿದಾವರೆಗಳಲ್ಲಿ ಭಕ್ತಿಪೂರ್ವಕ ಸಮರ್ಪಣೆ



ಶ್ರೀಮಜ್ಜಗದ್ಗುರುಮಧ್ವಾಚಾರ್ಯಮೂಲಮಹಾಸಂಸ್ಥಾನಶ್ರೀಮದುತ್ತರಾದಿಮಠಾಧೀಶರಾದ,

ಶ್ರೀ 1008 ಶ್ರೀಸತ್ಯಾತ್ಮತೀರ್ಥಶ್ರೀಪಾದಂಗಳವರ ಅಡಿದಾವರೆಗಳಲ್ಲಿ

ಭಕ್ತಿಪೂರ್ವಕ ಸಮರ್ಪಣೆ

॥ ಶ್ರೀದಿಗ್ವಿಜಯರಾಮೋ ವಿಜಯತೇ ॥

ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನ
ಶ್ರೀಮದುತ್ತರಾದಿಮಠಾಧೀಶರಾದ
ಶ್ರೀ ಶ್ರೀ ೧೦೦೮ ಶ್ರೀಸತ್ಯಾತ್ಮತೀರ್ಥಶ್ರೀಪಾದಂಗಳವರ

## ಅನುಗ್ರಹ ಸಂದೇಶ

**ಶ್ಲೋಕಾರ್ಧಂ ಶ್ಲೋಕಪಾದಂ ವಾ ನಿತ್ಯಂ ಭಾಗವತೋದ್ಭವಮ್ ।**
**ಯಃ ಪಠೇತ್ ಪ್ರಾತರುತ್ಥಾಯ ಸ ಜೀವನ್ನೇವ ಮುಕ್ತಿಗಃ ॥**

ಎಂಬ ಉಕ್ತಿಯಂತೆ ಧರ್ಮದ ರಕ್ಷಣೆಗಾಗಿ ಅವತರಿಸಿದ ಶ್ರೀಕೃಷ್ಣನ ಪ್ರತಿಮೆಯಂತಿರುವ, ಅಜ್ಞಾನಾಂಧಕಾರಕ್ಕೆ ಸೂರ್ಯನಂತೆ ಇರುವ 'ಶ್ರೀಮದ್ಭಾಗವತ' ಗ್ರಂಥದ ಒಂದು ಶ್ಲೋಕದ ಅರ್ಧಭಾಗವನ್ನು ಅಥವಾ ಪಾದವನ್ನು ಪಠಿಸಿದರೂ ಮಹಾಫಲವಿದೆ. ಆದರೆ ಅರ್ಥಾನುಸಂಧಾನವಿದ್ದಾಗ ಮಾತ್ರ ಅಧಿಕವಾದ ಲಾಭ. ಆದರೆ ಭಾಗವತದ ಒಂದೊಂದು ಶ್ಲೋಕಗಳೂ ಕಬ್ಬಿಣದ ಕಡಲೆಗಳಂತೆ. ಶ್ರೀಮದಾಚಾರ್ಯರ ಭಾಗವತತಾತ್ಪರ್ಯ, ವಿಜಯಧ್ವಜತೀರ್ಥರು, ಯಾದವಾರ್ಯರು, ಶ್ರೀಸತ್ಯಧರ್ಮತೀರ್ಥರು, ಶ್ರೀನಿವಾಸತೀರ್ಥರೇ ಮೊದಲಾದವರ ವ್ಯಾಖ್ಯಾನಗಳ ಉಪಕಾರವಿಲ್ಲದೇ ಶ್ರೀಮದ್ಭಾಗವತ ಅರ್ಥವಾಗುವುದು ಅಸಾಧ್ಯ. ಈ ನಿಟ್ಟಿನಲ್ಲಿ ಶ್ರೀಮದ್ಭಾಗವತ ಹಾಗೂ ಶ್ರೀಮದ್ಭಾಗವತತಾತ್ಪರ್ಯಕ್ಕೆ ಉಪಲಬ್ಧವಿರುವ ಮುದ್ರಿತ ಹಾಗು ಅಮುದ್ರಿತ ಸಕಲಟೀಕಾಟಿಪ್ಪಣಿಗಳ ಅಭಿಪ್ರಾಯಗಳನ್ನು ಹಾಗು ಅದಕ್ಕನುಗುಣವಾಗಿ ಶ್ರೀಮದ್ಭಾಗವತದ ಪದಪದಾರ್ಥ ಹಾಗು ವಿಶೇಷಾರ್ಥಗಳನ್ನು ಭಾಗವತದ ಅಧ್ಯಯನ ಹಾಗು ಪಾಠಪ್ರವಚನಾಸಕ್ತರಾದ ಎಲ್ಲ ಜಿಜ್ಞಾಸುಗಳಿಗೆ ತಿಳಿಸುವುದಕ್ಕಾಗಿ ನಮ್ಮ ಸ್ವರೂಪೋದ್ಧಾರಕ ಗುರುಗಳಾದ ಶ್ರೀ ಶ್ರೀ ೧೦೦೮ ಶ್ರೀ ಸತ್ಯಪ್ರಮೋದತೀರ್ಥಶ್ರೀಪಾದ ಒಡೆಯರ ಪ್ರಿಯಶಿಷ್ಯರಾದ, ಜಯತೀರ್ಥ ವಿದ್ಯಾಪೀಠದ ಕುಲಪತಿಗಳಾದ, ನಿರಂತರ ಸುಧಾ, ವ್ಯಾಸತ್ರಯ, ದ್ವೈತದ್ಯುಮಣ್ಯಾದಿಗಳ ಪಾಠ ಪ್ರವಚನಗಳಲ್ಲಿ ಆಸಕ್ತರಾದ ಪಂಡಿತವರೇಣ್ಯ ಶ್ರೀಗುತ್ತಲ ಆಚಾರ್ಯರವರು (ಪಂ.ರಂಗಾಚಾರ್ಯರು) ಸಕಲ ವ್ಯಾಖ್ಯಾನಗಳಿಂದ ಸಹಿತವಾದ ಶ್ರೀಮದ್ಭಾಗವತ ಅನುವಾದ ಕಾರ್ಯವನ್ನು ಮಾಡುತ್ತಾ ಬಂದಿದ್ದಾರೆ. ಈಗಾಗಲೇ ಪ್ರಾಯಃ ಸಮಗ್ರವಾದ ಭಾಗವತದ ಅನುವಾದಕಾರ್ಯವು ಸಂಪನ್ನವಾಗಿದೆ. ಅದರಲ್ಲಿ ನವಮ, ದಶಮ, ತೃತೀಯ ಏಕಾದಶ ಸ್ಕಂಧಗಳ ಅನುವಾದಗಳು ಐದಾರು ಸಂಪುಟಗಳಲ್ಲಿ ಈಗಾಗಲೇ ಪ್ರಕಾಶಿತವಾಗಿವೆ. ಅನೇಕ ಆಸಕ್ತ ವಿದ್ವಾಂಸರು ಹಾಗು

ಲೌಕಿಕ ಜಿಜ್ಞಾಸುಗಳು ಇವುಗಳ ಅಧ್ಯಯನದಿಂದ ವಿಶೇಷ ಲಾಭವಾಗಿದೆ ಎಂಬುದಾಗಿ ಮುಕ್ತಕಂಠದಿಂದ ಹೇಳುತ್ತಿದ್ದಾರೆ. ಎಷ್ಟೋ ವ್ಯಾಖ್ಯಾನಗಳು ಮುದ್ರಿತವೇ ಆಗಿಲ್ಲ, ಮುದ್ರಿತವಾದ ವ್ಯಾಖ್ಯಾನಗಳಲ್ಲಿ ಮುದ್ರಣದೋಷಗಳು ಸಾಕಷ್ಟು ಇರುತ್ತವೆ. ಇವುಗಳೆಲ್ಲವನ್ನು ಸರಿಪಡಿಸಿಕೊಂಡು ಓದುವಷ್ಟು ಅವಧಾನ-ಅನುಕೂಲತೆಗಳು ಇರುವುದಿಲ್ಲ. ಇಂತಹ ಸಂದರ್ಭಗಳಲ್ಲಿ ಬಹಳ ಪರಿಶ್ರಮಪೂರ್ವಕವಾಗಿ ಆ ಎಲ್ಲ ವ್ಯಾಖ್ಯಾನಗಳನ್ನು ಶೋಧಿಸಿ ಏಕತ್ರ ಸಂಗ್ರಹಿಸಿ ಮಾಡಿದ ಈ ಅನುವಾದಕಾರ್ಯವು ಸಿಜಕ್ಕೂ ಲಾಭದಾಯಕವಾಗುವಲ್ಲಿ ಸಂದೇಹವಿಲ್ಲ. ಉಪವಾಸ, ಸಭೆ-ಸಮಾರಂಭ ಯಾವುದೇ ಪ್ರಸಂಗವಿರಲಿ ಹಗಲಿರುಳೆನ್ನದೆ ಈ ಅನುವಾದ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಇದೊಂದು ಭಗವಂತನಿಗೆ ಅತ್ಯಂತ ಪ್ರೀತಿಕರವಾದ ತಪಸ್ಸು ಎನ್ನುವುದರಲ್ಲಿ ಸಂದೇಹವಿಲ್ಲ.

ಪ್ರಕೃತ ಭಾಗವತ-ತಾತ್ಪರ್ಯ-ವ್ಯಾಖ್ಯಾನಗಳಿಂದ ಸಹಿತವಾದ ದ್ವಿತೀಯಸ್ಕಂಧದ ಅನುವಾದರೂಪವಾದ ಈ ಕೃತಿಯನ್ನು ವಿಶ್ವಮಧ್ವಮಹಾಪರಿಷತ್ತಿನ ವತಿಯಿಂದ ಪ್ರಕಾಶನ ಮಾಡಲಾಗುತ್ತಿದೆ. ಇಂತಹ ಮಹತ್ ಕಾರ್ಯವನ್ನು ಮಾಡಿದ ಆಚಾರ್ಯರವರಿಗೆ ಜ್ಞಾನ-ಭಕ್ತಿ-ವೈರಾಗ್ಯಾದಿಗಳನ್ನು ಕೊಟ್ಟು ನಿರಂತರ ಸುಧಾದಿಗ್ರಂಥಗಳ ಪಾಠಪ್ರವಚನದ ಕಾರ್ಯವು, ಗ್ರಂಥಲೇಖನಾದಿಗಳು ಇವರಿಂದ ನಡೆಯಲಿ ಎಂದು ನಮ್ಮ ಉಪಾಸ್ಯಮೂರ್ತಿಗಳಾದ ಶ್ರೀಮೂಲರಾಮ-ದಿಗ್ವಿಜಯರಾಮ ವೇದವ್ಯಾಸದೇವರಲ್ಲಿ ಪ್ರಾರ್ಥಿಸುತ್ತೇವೆ.

ಶ್ರೀ 1008 ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರು
ಉತ್ತರಾದಿಮಠ

ವಿಕೃತಿ ನವರಾತ್ರಿಮಹೋತ್ಸವ
17-10-2010 ಬೆಂಗಳೂರು

# ಮುನ್ನುಡಿ

ಭಗವದ್ಭಕ್ತಿಯ ಮಹಾಪೂರದಿಂದ ಮೈದುಂಬಿ ಹರಿವ ನದಿಯೊಂದಿರುವುದಾದರೆ ಅದು ''ಭಾಗವತ ಮಹಾಪುರಾಣ'' ಈ ಭಾಗವತ ನದಿ ಅಪಾರವಾದ ಸಂಸಾರ ಸಾಗರಕ್ಕೆ ಸೇರಿತೆಂದರೆ ಈ ಸಾಗರ ಒಣಗುವುದು ಖಂಡಿತ. ಭೋರ್ಗರೆಯುವ ಈ ಭಾಗವತನದಿ ನಮ್ಮ ಜೀವನದಲ್ಲಿ ಒಮ್ಮೆಯಾದರೂ ನಮ್ಮ ಅಂತರಂಗವನ್ನು ಬಾಚಿ, ಬಳಸಿ, ಉಬ್ಬಿ ತಬ್ಬಿ ಹರಿಯಿತೆಂದರೆ, ತನು-ಮನಗಳಲ್ಲಿ ಆನಂದೋತ್ಸಾಹಗಳ ಫಸಲು ಬರುವುದರಲ್ಲಿ ಇನಿತೂ ಸಂದೇಹವಿಲ್ಲ.

ಪರಿಶುದ್ಧ ಜೀವನಕ್ಕೆ ಅತ್ಯವಶ್ಯಕವಾದ ಬೆಳಕಿನ ಹೊನಲು, ಬದುಕಿನ ಬೇಸಿಗೆಯಲ್ಲಿ ಬರುವ ವಸಂತ, ಬರಡು ಬದುಕಿಗೊಂದು ಚೈತನ್ಯದ ಚಿಲುಮೆ ಈ ಭಾಗವತ. ನಮ್ಮ ಮನಸ್ಸಿನ ಕೊಳೆಯೆಂಬ ಕಳೆಯನ್ನು ಕಿತ್ತಿ ಭಗವದ್ಭಕ್ತಿಯ ಬೀಜವನ್ನು ಬಿತ್ತಲು ಅನಿವಾರ್ಯವಾದದ್ದು ಭಾಗವತ ಕೃಷಿ. ಆತ್ಮಸಂದೇಶವನ್ನು ಹೊತ್ತ ಓಲೆಯ ವಿಸ್ತೃತ ರೂಪ.

ಇಂತಹ ಭಾಗವತದ ವ್ಯಾಖ್ಯಾನವನ್ನು ಮಾಡುವುದರಲ್ಲಿಯೇ ಸಾರ್ಥಕತೆಯನ್ನು ಕಂಡವರು ಶ್ರೀಯಾದವಾರ್ಯರು, ಶ್ರೀಸತ್ಯಧರ್ಮತೀರ್ಥರು, ಶ್ರೀಶ್ರೀನಿವಾಸತೀರ್ಥರು ಮುಂತಾದ ಮಹನೀಯರು. ಮಹಾಮೇಧಾವಿಗಳಾದ ಇವರ ಪ್ರತಿಭೆಯೂ ಪ್ರಕಾಶಕ್ಕೆ ಬಂದದ್ದು ಈ ಭಾಗವತ ವ್ಯಾಖ್ಯಾನವೆಂಬ ಕಾಯಕವನ್ನು ಕೈಗೊಂಡದ್ದರಿಂದಲೇ ಎಂದರೆ ತಪ್ಪಾಗಲಾರದು. ಇಂತಹ ಭಾಗವತವನ್ನು ಕನ್ನಡದಲ್ಲಿ ಅನುವಾದಿಸಲು ಅವಕಾಶವನ್ನು ಕರುಣಿಸಿದ ಆ ಭಗವಂತನಿಗೆ ನನ್ನ ಅನಂತ ನಮನಗಳು. ನನ್ನ ಪಾಲಿಗೆ ಇದರ ಅನುವಾದವೆಂಬುದು ಬಹು ಜನ್ಮದ ತಪಸ್ಸಿನ ಫಲ. ಬಾಳಿನಲ್ಲಿ ದೊರಕಬಹುದಾದಂತಹ ಅಪರೂಪದ ಸುಯೋಗ. ಈ ಸುಯೋಗ ನನಗೆ ಒದಗಿ ಬಂದದ್ದು ನನ್ನ ಅದೃಷ್ಟದ ಪರಿಪಾಕವೇ ಸರಿ ಎಂಬುದಾಗಿ ಭಾವಿಸುವೆ.

ಪ್ರಕೃತ ಭಾಗವತ ೨ನೇ ಸ್ಕಂಧವನ್ನು ಜನರ ಮುಂದಿರಿಸಲು ಮನಸ್ಸು ಮುದಗೊಳ್ಳುತ್ತಿದೆ.

ಈ ಗ್ರಂಥದ ಸಂಪಾದನಾಕಾರ್ಯದಲ್ಲಿ ವಿಶೇಷಪರಿಶ್ರಮ ವಹಿಸಿದ ಶ್ರೀ.ಪಂ. ಕರಣಂ ವಾದಿರಾಜಾಚಾರ್ಯ ಇವನಿಗೆ ಕುಲಸ್ವಾಮಿ ತೊರವೆಯ ನಾರಸಿಂಹನು ಆಯುರಾರೋಗ್ಯಗಳನ್ನು ಕೊಟ್ಟು ಅನುಗ್ರಹಿಸಲೆಂದು ಪ್ರಾರ್ಥಿಸುವೆ.

ಅದರಂತೆ ಈ ಪುಸ್ತಕಕ್ಕೆ ಸುಂದರ ರೂಪವನ್ನು ಕೊಟ್ಟ ಪಂ. ಮಹಿದಾಸಾಚಾರ್ಯ

ಜೋಶಿ ಇವರಿಗೆ, ಸುಂದರಮುಖಪುಟದ ವಿನ್ಯಾಸವನ್ನು ಮಾಡಿದ ಶ್ರೀ ಗೋಪಾಲಕೃಷ್ಣನಿಗೆ ಭಗವಂತ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

ಕೊನೆಯದಾಗಿ, ಯಾವ ಗುರುಗಳ ಅನುಗ್ರಹದಿಂದ ನನಗೆ ಈ ಅನುವಾದ ಸಾಮರ್ಥ್ಯವು ಬಂದಿತೋ ಅಂತಹ ಶ್ರೀ ಶ್ರೀ ಸತ್ಯಪ್ರಮೋದತೀರ್ಥ ಶ್ರೀಪಾದಂಗಳವರ ಅಡಿದಾವರೆಯಲ್ಲಿ ಅನಂತ ಪ್ರಣಾಮಗಳನ್ನು ಸಲ್ಲಿಸುವೆ. ಹಾಗೆಯೇ ಯಾವ ಗುರುಗಳ ಆಶೀರ್ವಾದ ಬಲದಿಂದಾಗಿ ಈ ನನ್ನ ಅನುವಾದ ಕಾರ್ಯವು ಸಾಂಗವಾಗಿ ನೆರವೇರಿತೋ ಅಂತಹ ಉತ್ತರಾದಿಮಠಾಧೀಶರಾದ ಶ್ರೀಶ್ರೀಸತ್ಯಾತ್ಮತೀರ್ಥರ ಪಾದಾರವಿಂದಗಳಿಗೂ ಸಭಕ್ತಿ ಅನಂತ ನಮನಗಳನ್ನು ಸಲ್ಲಿಸಿ ಇನ್ನು ಮುಂದೆ ನನ್ನಿಂದ ಹೀಗೆಯೇ ಸತ್ಕರ್ಮಗಳನ್ನು ಮಾಡಿಸಲೆಂದು ಮದ್ಗುರ್ವಂತರ್ಯಾಮಿ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಲಕ್ಷ್ಮೀನರಸಿಂಹನಲ್ಲಿ ಪ್ರಾರ್ಥಿಸುವ

ಭಾಗವತ ಜನಪ್ರಿಯ
ಪಂ.ರಂಗಾಚಾರ್ಯ ಗುತ್ತಲ

ವಿಕೃತಿ ನವರಾತ್ರಿ
೧೭-೧೦-೨೦೧೦

# ವಿಷಯಾನುಕ್ರಮಣಿಕಾ

ಶಬ್ದಸ್ಯ ಹಿ ಬ್ರಹ್ಮಣ ಏಷ ಪಂಥಾ
ಯನ್ನಾಮಭಿರ್ಧ್ಯಾಯತಿ ಧೀರಪಾರ್ಥೈಃ ।
ಪರಿಭ್ರಮಂಸ್ತತ್ರ ನ ವಿಂದತೇಽರ್ಥಾನ್
ಮಾಯಾಮಯೇ ವಾಸನಯಾ ಶಯಾನಃ ॥

# ಶ್ರೀಮದ್ಭಾಗವತೇ ದ್ವಿತೀಯಸ್ಕಂಧೇ

## ಅಥ ಪ್ರಥಮೋಽಧ್ಯಾಯಃ

**ಪ್ರಥಮಾಧ್ಯಾಯ ಸಾರಾಂಶ**

ಮರಣಶೀಲನಾಗಿರುವ ಮನುಷ್ಯ ಸದಾ ಯಾವುದರ ಶ್ರವಣವನ್ನು ಮಾಡುತ್ತಿರಬೇಕು. ಯಾವುದನ್ನು ಜಪಿಸಬೇಕು. ಯಾವುದನ್ನು ಕೇಳಬಾರದು. ಯಾವುದನ್ನು ಜಪಿಸಬಾರದು ಮುಂತಾಗಿ ನೀನು ಕೇಳಿರುವ ಪ್ರಶ್ನೆಯು ಉತ್ತಮವಾಗಿದೆ. ಈ ಪ್ರಶ್ನೆ ಲೋಕೋಪಕಾರಕವಾಗಿದೆ. ಈ ಪ್ರಶ್ನೆಯನ್ನೇ ಮಾಡಿಕೊಳ್ಳದೇ ಅಜ್ಞರಾದ ಮನುಷ್ಯರು ವ್ಯರ್ಥವಾಗಿ ಜೀವನವನ್ನು ಕಳೆಯುತ್ತಾರೆ. ಆಯುಷ್ಯವನ್ನು ಹರಣಮಾಡುತ್ತಾರೆ. ವಿಷಕ್ಕಿಂತಲೂ ಭಯಾನಕವಾದ ವಿಷಯಗಳಲ್ಲಿ ಆಸಕ್ತರಾಗಿ ಹಾಳಾಗಿಹೋಗುತ್ತಾರೆ. ಮುಮುಕ್ಷುವಾದವನು ಮಾತ್ರ ಯಾವಾಗಲೂ ಸಾಧನೆ ಮಾಡುತ್ತಲೇ ಇರಬೇಕು. ವಿಷಯಗಳಲ್ಲಿ ಆಸಕ್ತನಾಗಬಾರದು. ಯಾವಾಗಲೂ ಶ್ರೀಹರಿಯ ಕಥಾಶ್ರವಣವನ್ನೇ ಮಾಡುತ್ತಿರಬೇಕು. ಶ್ರೀಹರಿಯ ನಾಮಗಳನ್ನೇ ಅರ್ಥಾನುಸಂಧಾನಪೂರ್ವಕವಾಗಿ ಜಪಿಸುತ್ತಿರಬೇಕು. ಅವನನ್ನೇ ಸ್ಮರಿಸುತ್ತಿರಬೇಕು. ಸಂತತವೂ ಹೀಗೆ ಹರಿಯಲ್ಲಿ ಚಿಂತನೆಯನ್ನು ಮಾಡುವುದರಿಂದ ಮಾತ್ರ ಅಂತ್ಯಕಾಲದಲ್ಲಿ ಶ್ರೀಹರಿಯನ್ನು ಸ್ಮರಣಮಾಡಲು ಸಾಧ್ಯವಾಗುತ್ತದೆ. ಅಂತ್ಯಕಾಲದ ಹರಿಸ್ಮರಣೆಯೇ ತಾರಕವಾಗಿದೆ. ಮುಕ್ತರಾದವರು ವಿಧಿ-ನಿಷೇಧ ಬದ್ಧರಾಗದಿದ್ದರೂ ಯಾವಾಗಲೂ ಶ್ರವಣಾದಿಗಳನ್ನು ಆದರದಿಂದ ಮಾಡುತ್ತಾರೆ. ಅಂದಮೇಲೆ ವಿಧಿ-ನಿಷೇಧಬದ್ಧರಾದ ಮಾನವರು ಅತ್ಯಂತಆದರದಿಂದ ಶ್ರೀಹರಿವಿಷಯಕವಾದ ಶ್ರವಣಾದಿಗಳನ್ನು ಅತ್ಯಂತಅನಿವಾರ್ಯವಾಗಿ ಮಾಡಲೇಬೇಕೆಂಬುದು ಕೈಮುತ್ಯಸಿದ್ಧ. ಆದ್ದರಿಂದ ಹೇ ಪರೀಕ್ಷಿತನೇ ! ನಿನ್ನ ಪ್ರಶ್ನೆಗಳಿಗೆ ಉತ್ತರರೂಪವಾಗಿ ಭಾಗವತವನ್ನು ನಿನಗೆ

ಉಪದೇಶಿಸುತ್ತೇನೆ. ಈ ಭಾಗವತ ಪುರಾಣವು ವೇದಕ್ಕೆ ಸಮಾನವೆನಿಸಿದೆ. ಸರ್ವಜ್ಞರಾದ ವೇದವ್ಯಾಸರು ಈ ಪುರಾಣವನ್ನು ರಚಿಸಿದ್ದಾರೆ. ಕೃಷ್ಣಾವತಾರಕ್ಕಿಂತಲೂ ಪೂರ್ವದಲ್ಲಿಯೇ ರಚಿತವಾದ ಪುರಾಣವಿದಾಗಿದೆ. ಇದರಲ್ಲಿ ಯಾವ ದೋಷಗಳೂ ಇಲ್ಲ. ಆದ್ದರಿಂದ ಈ ಗ್ರಂಥವನ್ನು ಅಧ್ಯಯನ ಮಾಡುವುದು ಅತ್ಯಂತ ಆವಶ್ಯಕವಾಗಿದೆ. ಶ್ರೀಹರಿಯ ಆರಾಧನೆಯಲ್ಲಿ ಕಳೆಯುವ ಒಂದು ಮುಹೂರ್ತವೂ ಸಾರ್ಥಕವಾಗುತ್ತದೆ. ಏಳು ದಿನದಲ್ಲಿ ನಾನೇನು ಸಾಧನೆ ಮಾಡಬಹುದೆಂದು ವಿಚಾರಿಸಬೇಡ. ಖಟ್ವಾಂಗನೆಂಬ ರಾಜ ತನ್ನ ಆಯುಷ್ಯ ಇನ್ನು ಒಂದೇ ಮುಹೂರ್ತವಿದೆ ಎಂಬುದನ್ನು ತಿಳಿದು ಸರ್ವಸಂಗವನ್ನು ತೊರೆದು ತನ್ನ ಸಾಧನೆಯನ್ನು ಪೂರ್ಣಗೊಳಿಸಿಕೊಂಡನು. ಆ ಮುಹೂರ್ತದ ಸಾಧನೆಯಿಂದಲೇ ಮುಕ್ತನಾದನು. ಶ್ರೀಹರಿಯನ್ನು ಸೇರಿದನು. ನಿನಗಾದರೂ ಏಳುದಿನಗಳ ಆಯುಷ್ಯವಿದೆ. ಆದ್ದರಿಂದ ಸಾಧನೆಯನ್ನು ಮಾಡು. ಅಂತ್ಯಕಾಲ ಸಮೀಪಿಸಿದಾಗ ಮುಮುಕ್ಷುವಾದವನು ಮನೆಯನ್ನು ತೊರೆಯಬೇಕು. ಮನಸ್ಸಿನಲ್ಲಿಯ ಮಮತೆಯನ್ನು ದೂರಸರಿಸಬೇಕು. ಶ್ರೀಹರಿಯನ್ನು ಸ್ಮರಿಸುತ್ತಾ ತೀರ್ಥ-ಕ್ಷೇತ್ರಗಳನ್ನು ಸಂಚರಿಸಬೇಕು. ಯಮ-ನಿಯಮ-ಪ್ರಾಣಾಯಾಮಾದಿಗಳಿಂದ ದೇಹವನ್ನು ಪವಿತ್ರಗೊಳಿಸಿಕೊಳ್ಳಬೇಕು. ಮುಖ್ಯಪ್ರಾಣದೇವರ, ತತ್ತ್ವಾಭಿಮಾನಿ-ದೇವತೆಗಳ ಅನುಗ್ರಹಕ್ಕೆ ಪಾತ್ರನಾಗಬೇಕು. ಭಗವಂತನ ಅವಯವಗಳನ್ನು ಸಮಗ್ರವಾಗಿ ಧ್ಯಾನಮಾಡಲು ಆಗದಿದ್ದವನು ಒಂದೊಂದೇ ಅಂಗವನ್ನು ಧ್ಯಾನ ಮಾಡಬೇಕು. ಆ ಅಂಗಗಳ ಧ್ಯಾನ ಪರಿಪಕ್ವವಾಗುತ್ತ ಹೊದಂತೆ ಸಮಗ್ರಾಂಗದ ಧ್ಯಾನ ಮಾಡಲು ಪ್ರಯತ್ನಿಸಬೇಕು. ಹೀಗೆ ಈ ರೀತಿಯಾದ ಧ್ಯಾನದಿಂದ ಮನಸ್ಸನ್ನು ವಶಪಡಿಸಿ-ಕೊಳ್ಳಬೇಕು. ಹೀಗೆ ಮಾಡುವುದರಿಂದ ಶ್ರೀಹರಿಯಲ್ಲಿಯೇ ಮನಸ್ಸನ್ನು ನಿಲ್ಲಿಸಲು ಸಾಧ್ಯವಾಗುತ್ತದೆ. ಭಗವಂತ ಬ್ರಹ್ಮಾಂಡದಲ್ಲಿ ವ್ಯಾಪ್ತನಾಗಿದ್ದಾನೆ. ಈ ಬ್ರಹ್ಮಾಂಡ ಪರಮಾತ್ಮನ ಪ್ರತಿಮೆ ಎಂದು ತಿಳಿಯಬೇಕು. ಪಾತಾಳಾದಿಲೋಕಗಳು ವಿರಾಡ್ರೂಪಿಯಾದ ಪರಮಾತ್ಮನ ಪ್ರತಿಮೆಯ ಅವಯವಗಳು ಎಂದು ಚಿಂತಿಸಬೇಕು. ಪಾತಾಳಾದಿ ಲೋಕಗಳು ಪರಮಾತ್ಮನ ಸ್ವರೂಪಭೂತವಾದ ಜ್ಞಾನಾನಂದಾತ್ಮಕವಾದ ಪಾದತಲಾದಿಗಳಿಂದ ಜನಿಸಿವೆ. ಆ ಪಾದತಲಾದಿಗಳನ್ನೇ ಆಶ್ರಯಿಸಿಕೊಂಡಿವೆ ಎಂಬ ಚಿಂತನೆಯನ್ನು ಮಾಡಬೇಕು. ಈ ಚಿಂತನೆ ಮನುಷ್ಯನನ್ನು ಸಾಧಕನಾಗುವಂತೆ ಮಾಡುತ್ತದೆ.

ಶ್ರೀಮದ್ಭಾಗವತಸಂಹಿತಾ ಪ್ರಾರಂಭವಾಗುವುದಕ್ಕೆ ಕಾರಣವನ್ನು ಸವಿಸ್ತಾರವಾಗಿ ತಿಳಿಸಿ, ಈಗ ಭಾಗವತಸಂಹಿತೆಯನ್ನು ಪ್ರಾರಂಭಿಸುತ್ತಿದ್ದಾರೆ. ಮೊದಲಿಗೆ ಪ್ರಥಮಸ್ಕಂಧದ ಕೊನೆಗೆ ಮಾಡಿದ ಪರೀಕ್ಷಿತನ ಪ್ರಶ್ನೆಯನ್ನು ಅನುವಾದಮಾಡಿ ಸ್ತುತಿಸುತ್ತಾರೆ.

**ಶುಕ ಉವಾಚ-**

**ವರೀಯಾನೇಷ ತೇ ಪ್ರಶ್ನಃ ಕೃತೋ ಲೋಕಹಿತಂ ನೃಪ ।**
**ಆತ್ಮವಿತ್ಸಮ್ಮತಃ ಪುಸಾಂ ಶ್ರೋತವ್ಯಾದಿಷು ಯಃ ಪರಃ ॥ ೧ ॥**

**ಹೇ ನೃಪ** ಎಲೋ ರಾಜನೇ, **ಪುಂಸಾಂ** ಅಧಿಕಾರಿಗಳಿಗೆ, **ಶ್ರೋತವ್ಯಾದಿಷು ಯಃ ಪರಃ ಇತಿ** ಕೇಳಬೇಕಾದುದರಲ್ಲಿ ಯಾವುದು ಶ್ರೇಷ್ಠವೆಂದು, **ತೇ ಪ್ರಶ್ನಃ** ನೀನು ಕೇಳಿದ ಪ್ರಶ್ನೆಯು ಯಾವುದಿದೆಯೋ, **ಏಷಃ** ಇದು, **ವರೀಯಾನ್** ಅಂಗಿಕಾರ್ಯತಮವು, ಏಕೆಂದರೆ, **ಲೋಕಹಿತಂ** ಎಲ್ಲರಿಗೂ ಹಿತವಾಗುವಂತೆ ಈ ಪ್ರಶ್ನೆಯನ್ನು ಮಾಡಿರುವಿ ಮತ್ತು, **ಆತ್ಮವಿತ್ಸಮ್ಮತಃ** ಬ್ರಹ್ಮಜ್ಞಾನಿಗಳಾದ ಬ್ರಹ್ಮಾದಿಗಳಿಗೂ ಈ ಪ್ರಶ್ನೆಯು ಸಮ್ಮತವಾಗಿದೆ, **ಶ್ರೋತವ್ಯಾದಿಷು ಯಃ ಪರಃ ಸ ಏವ ಆತ್ಮವಿತ್ಸಮ್ಮತಃ** ಕೇಳಬೇಕಾದವುಗಳಲ್ಲಿ ಶ್ರೇಷ್ಠನಾದವನು ಪರಮಾತ್ಮನೇ ಎಂದು ಜ್ಞಾನಿಗಳಿಗೆ ಸಮ್ಮತನು. ಆದುದರಿಂದ ನಿನ್ನ ಪ್ರಶ್ನೆ ಭಗವದ್ವಿಷಯಕವಾಗಿದೆ. ಹೀಗಾಗಿ ಶ್ರೇಷ್ಠವಾಗಿದೆ ಎಂದು ಭಾವ.

ಮೇಲಿನ ಶ್ಲೋಕದಲ್ಲಿ 'ಶ್ರೋತವ್ಯಾದಿಷು ಯಃ ಪರಃ' ಎಂಬುದು ಅನನ್ವಿತವಾಗಿ ಕಾಣುವದು. ಕಾರಣ 'ಇತಿ' ಎಂಬ ಶಬ್ದವನ್ನು ಅಧ್ಯಾಹಾರ ಮಾಡಿ ಅನ್ವಯವನ್ನು ಮತ್ತು ತಾತ್ಪರ್ಯವನ್ನು ತಿಳಿಸುತ್ತಾರೆ. (ಯಃ ಪರಃ ಇತಿ)

ಕೇಳಲು ಯೋಗ್ಯವಾದವುಗಳಲ್ಲಿ, ಧ್ಯಾನ (ಜಪ) ಮಾಡಲು ಯೋಗ್ಯವಾದವುಗಳಲ್ಲಿ ಶ್ರೀಹರಿಯೇ ಶ್ರೇಷ್ಠನಾಗಿರುವುದರಿಂದ ನೀನು ಮಾಡಿದ ಭಗವದ್ವಿಷಯಕವಾದ ಪ್ರಶ್ನೆಯು ಅತಿಶ್ರೇಷ್ಠವಾದುದು.

ಹಿಂದೆ 'ಯಚ್ಛ್ರೋತವ್ಯಮಥೋ ಜಪ್ಯಮ್' ಎಂದು ರಾಜನು ಪ್ರಶ್ನೆ ಮಾಡಿದ್ದಾನೆ. ಇದಕ್ಕೆ ಅನುಗುಣವಾಗಿ 'ಯತ್ ಶ್ರೋತವ್ಯಮ್' ಎಂಬ ರೀತಿಯಲ್ಲಿಯೇ ಪೂರ್ವಪ್ರಸಕ್ತವಾದ ಪ್ರಶ್ನೆಯ ಅನುವಾದವನ್ನು ಮಾಡಬೇಕು. ಹೀಗೆ ಮಾಡದೇ 'ಶ್ರೋತವ್ಯಾದಿಷು ಯಃ ಪರಃ' ಎಂದು ಪ್ರಶ್ನೆಯ ಅನುವಾದವನ್ನು ಮಾಡಿದ್ದಾರೆ. ಈ ಅನುವಾದ ಸರಿಯಲ್ಲವೆಂದು ಅನಿಸುತ್ತದೆ. ಆದರೆ, ಪೂರ್ವದಲ್ಲಿ ಪ್ರಸ್ತುತವಾದ 'ಯಚ್ಛ್ರೋತವ್ಯಂ' ಎಂಬ ಪ್ರಶ್ನೆಯು ಕೂಡಾ 'ಶ್ರೋತವ್ಯಾದಿಷು ಯಃ ಪರಃ' ಎಂಬ

ಅಭಿಪ್ರಾಯದಿಂದಲೇ ಹೊರಟಿದೆ. ಆ ಅಭಿಪ್ರಾಯದ ಅನುವಾದವನ್ನು ಇಲ್ಲಿ ಮಾಡಿದ್ದಾರೆ. ಆದ್ದರಿಂದ 'ಶ್ರೋತವ್ಯಾದಿಷು ಯಃ ಪರಃ' ಎಂಬ ಅನುವಾದವು ಸಮಂಜಸವೇ ಆಗಿದೆ. ।। ೧ ।।

*ನೀವು ಹೇಳುವ ಶ್ರೋತವ್ಯಾದಿಗಳಲ್ಲಿ ನಾನು ಹೇಗೆ ವಿಶ್ವಾಸ ಮಾಡಲಿ. ಅನೇಕರು ಅನೇಕರೀತಿಯಾದ ಶ್ರೋತವ್ಯಾದಿಗಳನ್ನು ಹೇಳುವುದರಿಂದ ವಿರುದ್ಧವಾಕ್ಯಗಳಿಂದ ಸಂಶಯ ಬರುವುದು ಎಂಬ ರಾಜನ ಶಂಕೆಯನ್ನು ಉಪೋದ್ಘಾತದಿಂದಲೇ ನಿರಾಕರಿಸುವರು-*

**ಶ್ರೋತವ್ಯಾನೀಹ ರಾಜೇಂದ್ರ ನೃಣಾಂ ಸಂತಿ ಸಹಸ್ರಶಃ ।**
**ಅಪಶ್ಯತಾಮಾತ್ಮತತ್ತ್ವಂ ಗೃಹೇಷು ಗೃಹಮೇಧಿನಾಮ್ ।। ೨ ।।**

**ರಾಜೇಂದ್ರ** ಪರೀಕ್ಷಿತನೇ, **ಇಹ** ಈ ಲೋಕದಲ್ಲಿಅಧಿಕಾರಿ-ಅನಧಿಕಾರಿವರ್ಗದಲ್ಲಿ, **ಆತ್ಮತತ್ತ್ವಂ** ಪರಾಪರ ತತ್ತ್ವವನ್ನು ನಿದ್ರಯಾ **ಅಪಶ್ಯತಾಂ** ಅವಿದ್ಯೆ ಎಂದು ಕರೆಸಿಕೊಳ್ಳುವ ಬಂಧಕಪ್ರಕೃತಿಯಿಂದಾಗಿ ಚೆನ್ನಾಗಿ ತಿಳಿಯದಿರುವ, **ಗೃಹೇಷು** ಗೃಹಸ್ಥಾಶ್ರಮದಲ್ಲಿ ಇರುವ, **ಗೃಹಮೇಧಿನಾಂ** ಗೃಹಸ್ಥಾಶ್ರಮವಿಹಿತಯಜ್ಞಾನುಷ್ಠಾನ ಮಾಡುವ ಕಾಮ್ಯಕರ್ಮಿಗಳಾದ **ನೃಣಾಂ** ಬಹಿರ್ಮುಖರಾದ ಜನರಿಗೆ, **ಸಹಸ್ರಶಃ** ಸಾವಿರಸಾವಿರ, **ಶ್ರೋತವ್ಯಾನಿ** ಶ್ರೋತವ್ಯಾದಿಗಳು, **ಸಂತಿ** ಇರುತ್ತವೆ.

ಶ್ರೋತವ್ಯಾದಿಗಳು ಅನೇಕ ಎಂದು ಹೇಳುವವರು ತತ್ತ್ವಜ್ಞಾನಿಗಳಲ್ಲ. ಆದ್ದರಿಂದ ಅವರ ಮಾತಿನಿಂದ ನೀನು ಸಂಶಯ ಮಾಡುವುದು ಯುಕ್ತವಲ್ಲವೆಂದು ಭಾವ.

**ತಾತ್ಪರ್ಯ- ಅಪಶ್ಯತಾಂ ನಿದ್ರಯಾ ।।**

ಮೇಲಿನ ಶ್ಲೋಕದಲ್ಲಿ 'ಅಪಶ್ಯತಾಂ' ಎಂಬುದಕ್ಕೆ ಪೂರ್ವಾರ್ಧದಲ್ಲಿ ಸಂಗತಿ ಇಲ್ಲದಿರುವುದರಿಂದ ಉತ್ತರವಾಕ್ಯದಿಂದ ಸಂಗತಿ ಹೇಳುವರು 'ಅಪಶ್ಯತಾಂ' ಎಂಬ ಪದದ ನಂತರ ಮುಂದಿನ ಶ್ಲೋಕದಲ್ಲಿರುವ 'ನಿದ್ರಯಾ' ಎಂಬ ಪದವನ್ನು ಸೇರಿಸಿಕೊಳ್ಳಬೇಕು. 'ನಿದ್ರಯಾ' ಎಂಬ ಪದದ ಮುಂದೆ 'ಇತ್ಯುತ್ತರೇಣ ಅನ್ವಯಃ' ಎಂದು ತಾತ್ಪರ್ಯದಲ್ಲಿ ಶೇಷ ಮಾಡಬೇಕು. ಇದರಿಂದ ''ಅಪಶ್ಯತಾಂ'' ಎಂದಾರಂಭಿಸಿ ಒಂದುವರಿ ಶ್ಲೋಕಕ್ಕೆ ಏಕಾನ್ವಯ ಎಂದಾಗುವುದು.

ಇಲ್ಲಿ ಸೇರಿಸಿಕೊಂಡ ನಿದ್ರಾಪದಕ್ಕೆ ಅವಿದ್ಯಾ ಎಂದು ಅರ್ಥ ಹೇಳಬೇಕು. ಮುಂದಿನ ಶ್ಲೋಕದಲ್ಲಿ ಈ ನಿದ್ರಾಶಬ್ದಕ್ಕೆ ಪ್ರಸಿದ್ಧವಾದ ನಿದ್ರೆ ಎಂಬ ಅರ್ಥವನ್ನೇ ಸ್ವೀಕರಿಸಬೇಕು.

*ಶ್ರೋತವ್ಯಾದಿಗಳು ಅನೇಕ ಎಂದು ಹೇಳುವವರು ತತ್ವಜ್ಞಾನಿಗಳಲ್ಲ ಎನ್ನಲು 'ನಿದ್ರಯಾ...' ಎಂಬ ಶ್ಲೋಕದಿಂದ ಯುಕ್ತಿಯನ್ನು ಹೇಳುತ್ತಾರೆ-*

**ನಿದ್ರಯಾ ಹ್ರಿಯತೇ ನಕ್ತಂ ವ್ಯವಾಯೇನ ನವಂ ವಯಃ ।**
**ದಿವಾ ಚಾಽರ್ಥೇಹಯಾ ರಾಜನ್ ಕುಟುಂಬಭರಣೇನ ವಾ ॥ ३ ॥**

**ರಾಜನ್** ರಾಜನೇ, ಅನೇಕಶ್ರೋತವ್ಯಗಳನ್ನು ಹೇಳುವವರಿಂದ ಮತ್ತು ಅವರ ಅನುವರ್ತಿಗಳಿಂದ, **ನಕ್ತಂ** ರಾತ್ರಿಯು, **ನಿದ್ರಯಾ** ನಿದ್ದೆಯಿಂದ, **ಹ್ರಿಯತೇ** ಕಳೆಯಲ್ಪಡುತ್ತದೆ, **ನವಂ ವಯಃ** ಯೌವನಾವಸ್ಥೆಯ ಆಯುಷ್ಯವು, **ವ್ಯವಾಯೇನ** ಸ್ತ್ರೀಸಂಭೋಗದಿಂದ, **ದಿವಾ** ಹಗಲು, **ಅರ್ಥೇಹಯಾ** ಶ್ರೀಹರಿಯ ಆರಾಧನೆಗೆ ಉಪಯೋಗವಾಗದ ದ್ರವ್ಯಸಂಪಾದನೆಯಿಂದ, ಸ್ವಯಂ ತಾನು ಧನಿಕನಾಗಿದ್ದರೆ, **ಕುಟುಂಬಭರಣೇನ ವಾ ಹ್ರಿಯತೇ** ಕುಟುಂಬಪೋಷಣೆಯಲ್ಲಿ ಕಳೆಯಲ್ಪಡುತ್ತದೆ.

(ಈ ವಿಷಯದಲ್ಲಿ 'ಅಪ್ಯಕಾರ್ಯಶತಂ ಕೃತ್ವಾ ಭರ್ತವ್ಯಾ ಮನುರಬ್ರವೀತ್' ಎಂಬ ವಚನವನ್ನು ಅವರು ಅವಲಂಬಿಸುತ್ತಾರೆ.)

ಇಲ್ಲಿ ಹೀಗೆ ಯುಕ್ತಿಯನ್ನು ತಿಳಿಯಬೇಕು. 'ವಿವಾದಾಸ್ಪದಾಃ ವಾದಿನಃ ತದನುವರ್ತಿನಶ್ಚ ನ ಸಮ್ಯಗ್ಜ್ಞಾನಿನಃ ವ್ಯರ್ಥಾಯುಷ್ಯಹರಣಕರ್ತೃತ್ವಾತ್' ಎಂದು.

*ನಶ್ವರವಾದ, ತನಗೆ ಕ್ಷೀಣತೆಯನ್ನು ತಂದು ಕೊಡುವ, ಅಸಾಧುವಾದ ಕುಟುಂಬಪೋಷಣದಲ್ಲಿ ಬುದ್ಧಿವಂತನಾದವನು ಹೇಗೆತಾನೆ ಆಯುಷ್ಯವನ್ನು ವ್ಯರ್ಥಗೊಳಿಸುತ್ತಾನೆ ? ಎಂಬುದನ್ನು ಈ ಶ್ಲೋಕದಲ್ಲಿ ಹೇಳುತ್ತಿದ್ದಾರೆ-*

**ದೇಹಾಪತ್ಯಕಲತ್ರಾದಿಷ್ವಾತ್ಮದೈನ್ಯೇಷ್ವಸತ್ಸ್ವಪಿ ॥**
**ತೇಷು ಪ್ರಸಕ್ತೋ ನಿಧನಂ ಪಶ್ಯನ್ನಪಿ ನ ಪಶ್ಯತಿ ॥ ४ ॥**

**ಅಸತ್ಸು ಅಪಿ** ಅಮಂಗಳಕರವಾದ ಆದ್ದರಿಂದಲೇ ಆಸಕ್ತಿಯನ್ನು ಹೊಂದಬಾರದಾಗಿದ್ದರೂ ಕೂಡಾ, **ಆತ್ಮದೈನ್ಯೇಷು** ತನಗೆ ಕ್ಷೀಣತೆಯನ್ನು ತಂದುಕೊಡುವ, **ದೇಹಾಪತ್ಯಕಲತ್ರಾದಿಷು** ಮೈ, ಮಗ, ಮಡದಿ ಮುಂತಾದವುಗಳಲ್ಲಿ **ಪ್ರಸಕ್ತಃ** ವಿಶೇಷವಾಗಿ ಆಸಕ್ತನಾದವನು, **ನಿಧನಂ** ನಾಶವನ್ನು, **ಪಶ್ಯನ್ ಅಪಿ** ತನ್ನ ತಂದೆ ಮುಂತಾದವರ ಮರಣದ ದೃಷ್ಟಾಂತದಿಂದ ಕಂಡರೂ, **ನ ಪಶ್ಯತಿ** ಅನುಸಂಧಾನ ಮಾಡಿಕೊಳ್ಳುವುದಿಲ್ಲ. ಅತಿಶಯವಾದ ಕುಟುಂಬಾಸಕ್ತಿಯು ಪ್ರೆಕ್ಷಾಪ್ರತಿಬಂಧಕವೆಂದು ಭಾವ ॥ ४ ॥

ಈ ಶ್ಲೋಕದಲ್ಲಿಯ 'ಅಸತ್ಸು' ಎಂಬ ಶಬ್ದಕ್ಕೆ 'ಮಿಥ್ಯಾ' ಎಂದು ಅರ್ಥವಾಗದಿರಲು ಸಪ್ರಮಾಣವಾಗಿ ವ್ಯಾಖ್ಯಾನಿಸುವರು.

ತಾತ್ಪರ್ಯ- 'ಅಸತ್ಸು ಅಭದ್ರೇಷು' 'ಸದ್ಭಾವೇ ಸಾಧುಭಾವೇ ಚ' ಇತಿ ವಚನಾತ್ ॥ ೪ ॥

ಸಚ್ಛಬ್ದವು ಇರುವಿಕೆ, ಸಾಧುತ್ವ ಎಂಬ ಎರಡೂ ಅರ್ಥದಲ್ಲಿರುವುದರಿಂದ ಪ್ರಕೃತ "ಅಸತ್ಸು" ಎಂಬುದಕ್ಕೆ ಅಮಂಗಲಕರ ಎಂದೇ ಅರ್ಥಮಾಡಬೇಕು. ಹೊರತು ಮಿಥ್ಯಾ ಎಂದು ಅರ್ಥ ಮಾಡಬಾರದು. ॥ ೪ ॥

**ತಸ್ಮಾದ್ಭಾರತ ಸರ್ವಾತ್ಮಾ ಭಗವಾನ್ ಹರಿರೀಶ್ವರಃ ।**
**ಶ್ರೋತವ್ಯಃ ಕೀರ್ತಿತವ್ಯಶ್ಚ ಸ್ಮರ್ತವ್ಯಶ್ಚೇಚ್ಛತಾಽಭಯಮ್ ॥ ೫ ॥**

**ತಸ್ಮಾತ್** ಇತರರು ಹೇಳುವ ಶ್ರೋತವ್ಯಾದಿಗಳು ಅಜ್ಞಾನಮೂಲಕವಾದುದರಿಂದ ಆಯುಷ್ಯಹರಣಕ್ಕೆ ಕಾರಣವಾದ್ದರಿಂದ, **ಭಾರತ** ಭರತವಂಶದಲ್ಲಿ ಜನಿಸಿದ ಪರೀಕ್ಷಿತನೇ, **ಸರ್ವಾತ್ಮಾ** ಸರ್ವಸ್ವಾಮಿಯಾದ ಸರ್ವಾಭಿಷ್ಟಪ್ರದನಾದ, **ಭಗವಾನ್** ನಿರತಿಶಯ ಐಶ್ವರ್ಯಾದಿಗುಣಗಳುಳ್ಳ, **ಹರಿಃ** ಸಂಸಾರಭಯಹರಣ ಮಾಡುವ, **ಈಶ್ವರಃ** ಅಘಟಿತಘಟಕಶಕ್ತಿಯುಳ್ಳ ಪರಮಾತ್ಮನು, **ಅಭಯಂ ಇಚ್ಛತಾ** ಅಪರೋಕ್ಷಜ್ಞಾನವನ್ನು ಇಚ್ಛಿಸುವವನಿಂದ, **ಶ್ರೋತವ್ಯಃ** ಕೇಳಲರ್ಹನು, **ಕೀರ್ತಿತವ್ಯಃ** ಮನನಾರ್ಹನು, **ಸ್ಮರ್ತವ್ಯಃ** ಧ್ಯಾನಾರ್ಹನು ಆಗಿದ್ದಾನೆ.

'ಯತ್ಕರ್ತವ್ಯಮ್' ಎಂದು ಸಾಮಾನ್ಯವಾಗಿ ಮನನಾದಿಗಳ ಬಗ್ಗೆ ಕೇಳಿದ್ದರಿಂದ ಉತ್ತರದಲ್ಲಿಯೂ ಮನನಾದಿಗಳನ್ನೇ ಹೇಳಿರುವರು. ಅಪರೋಕ್ಷಜ್ಞಾನವು ಸಂಸಾರವನ್ನು ಪರಿಹರಿಸುತ್ತದೆ ಎಂಬುದನ್ನು ಹರಿಃ ಎಂಬ ಶಬ್ದವು ಸೂಚಿಸುತ್ತದೆ.

ಅವ್ಯಕ್ತಸ್ವಭಾವದವನಾಗಿದ್ದರೂ ಪರಮಾತ್ಮನು ಭಕ್ತರಿಗೆ ಕಾಣಿಸಿಕೊಳ್ಳುತ್ತಾನೆ ಎಂಬ ಪ್ರಮೇಯವನ್ನು, ಅನಾದಿಯಾದ ಸಂಸಾರವನ್ನೂ ದೇವರು ಪರಿಹರಿಸುತ್ತಾನೆ ಎಂಬ ವಿಷಯವನ್ನು 'ಈಶ್ವರಃ' ಎಂಬ ಶಬ್ದವು ಸೂಚಿಸುತ್ತದೆ.

ಇವನು ಕೇವಲ ಅನಿಷ್ಟನಿವರ್ತಕನಲ್ಲ, ಕಿಂತು ಸ್ವರೂಪಾನಂದಾದಿಸರ್ವೇಷ್ಟಪ್ರದ ಎಂದು ಹೇಳಲು 'ಸರ್ವಾತ್ಮಾ' ಎಂಬ ಶಬ್ದವನ್ನು ಪ್ರಯೋಗಿಸಿದ್ದಾರೆ.

ಇದೆಲ್ಲವೂ ಪರಿಪೂರ್ಣವಾಗಿ ಪರಮಾತ್ಮನಲ್ಲಿಯೇ ಇವೆ ಎಂಬುದನನ್ನು "ಭಗವಾನ್" ಎಂಬ ಶಬ್ದವು ಸೂಚಿಸುತ್ತದೆ. ಇದರಿಂದ ಇತರ ಶ್ರೋತವ್ಯಗಳಿಗಿಂತ ಶ್ರೀಹರಿ ಶ್ರೇಷ್ಠನೆಂದು ಹೇಳಿದಂತಾಗುತ್ತದೆ. ॥೫॥

*ಅಪರೋಕ್ಷಜ್ಞಾನಸಾಧನವೆಂದು ಸಾಂಖ್ಯಾದಿಗಳನ್ನು ಹೇಳಿರುವುದರಿಂದ ಭಗವಂತನ ಶ್ರವಣವೆ ಎಂಬ ನಿಯಮವೇಕೆ ಎಂದರೆ ಹೇಳುವರು-*

**ಏತಾವಾನ್ ಸಾಂಖ್ಯಯೋಗಾಭ್ಯಾಂ ಸ್ವಧರ್ಮಪರಿನಿಷ್ಠಯಾ ।**
**ಜನ್ಮಲಾಭಃ ಪರಃ ಪುಂಸಾಮಂತೇ ನಾರಾಯಣಸ್ಮೃತಿಃ ॥ ೬॥**

**ಸಾಂಖ್ಯಯೋಗಾಭ್ಯಾಂ** ಜೀವಸಂಬಂಧಿಜ್ಞಾನ ಅಷ್ಟಾಂಗಯೋಗ ಪೂಜಾದಿಗಳಿಂದಲೂ, **ಸ್ವಧರ್ಮಪರಿನಿಷ್ಠಯಾ** ಸ್ವಧರ್ಮಾನುಷ್ಠಾನ ನಿಯಮದಿಂದಲೂ, ಆಗುವ ನಾರಾಯಣ ಸ್ಮರಣಶ್ರವಣಾದಿಗಳು ಸಂಪಾದಿಸಲ್ಪಡುವದೆಂಬುದೇನಿದೆಯೋ, **ಏತಾವಾನ್** ಇದಿಷ್ಟೇ, **ಪುಂಸಾಂ ಜನ್ಮಲಾಭಃ** ಜನ್ಮದ ಸಾಫಲ್ಯವು, **ಅಂತೇ ಸ್ಮೃತಿಃ ಪರಃ ಲಾಭಃ** ಸಾಯುವಾಗ ನಾರಾಯಣಸ್ಮರಣ ಬರುವುದು ಮುಖ್ಯ ಲಾಭವು.

ಅಂದರೆ ಸಾಂಖ್ಯಾದಿಗಳು ಸ್ವತಂತ್ರವಾಗಿ ಅಪರೋಕ್ಷ ಜ್ಞಾನಸಾಧನವಾಗುವದಿಲ್ಲ. ಕಿಂತು ಶ್ರವಣಾದಿಗಳ ಮುಖಾಂತರವೇ ಅಪರೋಕ್ಷಸಾಧನವಾಗುತ್ತವೆ. ಆದ್ದರಿಂದ ಶ್ರವಣಾದಿಗಳು ಆವಶ್ಯಕವಾಗಿವೆ. ಈ ಶ್ರವಣಾದಿಗಳಿಂದಲೇ ಮನುಷ್ಯನ ಜನ್ಮ ಸಫಲವಾಗುತ್ತದೆ. ಅಂತೇ ನಾರಾಯಣಸ್ಮೃತಿಯು ಪರಮಲಾಭರೂಪವಾಗಿದೆ ಎಂಬುದನ್ನು ಪ್ರಾಸಂಗಿಕವಾಗಿ ಹೇಳಿದ್ದಾರೆ.

**ಪ್ರಾಯೇಣ ಮುನಯೋ ರಾಜನ್ನಿವೃತ್ತಾ ವಿಧಿನಿಷೇಧತಃ ।**
**ನೈರ್ಗುಣ್ಯಸ್ಥಾ ರಮಂತೇ ಸ್ಮ ಗುಣಾನುಕಥನೇ ಹರೇಃ ॥ ೭ ॥**

**ಹೇ ರಾಜನ್** ಪರೀಕ್ಷಿತನೇ, **ಮುನಯಃ** ಸ್ವಸ್ವಯೋಗ್ಯಜ್ಞಾನವಂತರು, **ವಿಧಿನಿಷೇಧತಃ ನಿವೃತ್ತಾಃ** ವಿಧಿ ನಿಷೇಧಗಳಿಂದ ರಹಿತರಾದವರೂ, **ನೈರ್ಗುಣ್ಯಸ್ಥಾಃ** ಮುಕ್ತರೂ, **ಹರೇಃ ಗುಣಾನುಕಥನೇ** ಶ್ರೀಹರಿಯ ಗುಣಗಳನ್ನು ಹೇಳುವುದರಲ್ಲಿ, **ಪ್ರಾಯೇಣ** ಪ್ರಾಯಿಕವಾಗಿ, **ರಮಂತೇ ಸ್ಮ** ಸಂತೋಷಿಸುವರು. ಅಂದ್ರ ಮೇಲೆ ವಿಧಿನಿಷೇಧಬದ್ಧವಾದ, ಗುಣಮಯ-ದೇಹದಲ್ಲಿರುವ ಜಿಜ್ಞಾಸುಗಳು ಹರಿಶ್ರವಣಾದಿಗಳನ್ನು ಸರ್ವದಾ ಮಾಡಬೇಕು ಎಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

ಈ ಶ್ಲೋಕದಲ್ಲಿ 'ಪ್ರಾಯೇಣ' ಎಂದು ಹೇಳಿದ್ದರಿಂದ ಕೆಲವು ಸಲ ಗುಣಾನುಕಥನದಲ್ಲಿ ಸಂತೋಷಿಸುವುದಿಲ್ಲ ಎಂದು ತೋರುವುದು ಆದ್ದರಿಂದ ಇದರ ಅಭಿಪ್ರಾಯವನ್ನು ಹೇಳುವರು.

ತಾತ್ಪರ್ಯ- ಧ್ಯಾನಾಪೇಕ್ಷಯಾ ಪ್ರಾಯೇಣ । ನೈರ್ಗುಣ್ಯಸ್ಥಾಃ ಮುಕ್ತಾಃ ॥ 'ಏತತ್ಸಾಮ ಗಾಯನ್ನಾಸ್ತೇ । ಇತಿ ಶ್ರುತೇಃ ॥

ನಿಜ. ಕೆಲವು ಸಲ ಗುಣಾನುಕಥನದಲ್ಲಿ ರಮಿಸುವುದಿಲ್ಲ ಆದರೆ ಆಗಲು ಧ್ಯಾನವನ್ನೇ ಮಾಡುವರು ಲೌಕಿಕ ವಾರ್ತೆಯನ್ನಲ್ಲ ಆದ್ದರಿಂದ ಪ್ರಾಯಃ ಎಂದು ಹೇಳಿದರೂ ವಿರೋಧವಿಲ್ಲ. ನಿರ್ಗುಣನಾದ ಭಗವಂತನ ಸ್ಥಾನಗಳಾದ ಅನಂತಾಸನ, ಶ್ವೇತದ್ವೀಪ, ವೈಕುಂಠಗಳಲ್ಲಿರುವ ಮುಕ್ತರು ಶ್ರವಣಾದಿಗಳನ್ನು ಮಾಡುವರು ಎಂಬುದು (ಏತತ್ಸಾಮ 'ಗಾಯನ್ನಾಽಽಸ್ತೇ ಸಾಮಗಾನ ಮಾಡುತ್ತಿರುವರು) ಎಂದು ಹೇಳುವ ಶ್ರುತಿಯಿಂದ ಸಿದ್ಧವಾಗಿದೆ. ॥೭॥

*ಹಾಗಾದರೆ ಭಗವದ್ವಿಷಯಕವಾದ ಯಾವುದಾದರೊಂದು ಗ್ರಂಥವನ್ನೂ ಕೇಳಿಸಿರಿ ಎಂದಾಗ ಆಗಲಿ ಎಂದು ಭಾಗವತವನ್ನು ಸ್ತುತಿಸುವರು-*

**ಇದಂ ಭಾಗವತಂ ನಾಮ ಪುರಾಣಂ ಬ್ರಹ್ಮಸಮ್ಮಿತಮ್ ।**
**ಅಧೀತವಾನ್ ದ್ವಾಪರಾದೌ ಪಿತುರ್ದ್ವೈಪಾಯನಾದಹಮ್ ॥ ೮ ॥**

**ಇದಂ** ಹೇಳಬೇಕೆಂದು ಬುದ್ಧಿಸನ್ನಿಹಿತವಾದ, **ಭಾಗವತಂ ನಾಮ** ಭಗವದ್ವಿಷಯವೆಂದು ಪ್ರಸಿದ್ಧವಾದ, ಆದ್ದರಿಂದಲೇ ಭಾಗವತವೆಂದು ಕರೆಸಿಕೊಳ್ಳುವ, **ಪುರಾಣಂ** ಪುರಾಣವು, **ಬ್ರಹ್ಮ ಸಮ್ಮಿತಂ** ವೇದಸಮಾನವಾದುದು. **ಅಹಂ**ನಾನು, **ಪಿತುಃ** ತಂದೆಯಾದ, **ದ್ವೈಪಾಯನಾತ್** ವೇದವ್ಯಾಸರಿಂದ, **ದ್ವಾಪರಾದೌ** ದ್ವಾಪರಯುಗದ ಕೊನೆಯಲ್ಲಿ ಕೃಷ್ಣಾವತಾರದ ಮೊದಲು, **ಅಧೀತವಾನ್** ಅಧ್ಯಯನ ಮಾಡಿದೆನು ॥ ೮ ॥

ಈ ಭಾಗವತವು ಸ್ವಕಪೋಲಕಲ್ಪಿತವಲ್ಲ ಸಂಪ್ರದಾಯಾಗತವಾದದ್ದು ಎಂದು 'ಅಧೀತ ವಾನ್' ಎಂಬ ಶಬ್ದದಿಂದ ತಿಳಿಸುತ್ತಾರೆ. ಅಧ್ಯಾಪಕನು ಮೋಸಗಾರನಾಗಿರಬಹುದಲ್ಲಾ ಎಂಬ ಶಂಕೆಯನ್ನು 'ಪಿತುಃ' ಎಂಬ ಶಬ್ದದಿಂದ ಪರಿಹರಿಸುತ್ತಾರೆ. ಅಧ್ಯಯನ ಮಾಡಿದರೂ ಬಹಳದಿವಸವಾಗಿದ್ದರೆ ಮರೆತಿರಬಹುದಲ್ಲ ಎಂದರೇ ಬಹಳ ದಿನವಾಗಿಲ್ಲವೆಂದು 'ದ್ವಾಪರಾದೌ' ಎಂಬ ಶಬ್ದದಿಂದ ಹೇಳುತ್ತಾರೆ.

'ದ್ವಾಪರಾದೌ' ಎಂಬ ಶಬ್ದಕ್ಕೆ ದ್ವಾಪರದ ಆದಿಯಲ್ಲಿ ಎಂದರ್ಥ ತೋರುವುದು. ಆದ್ದರಿಂದ ವ್ಯಾಖ್ಯಾನಿಸುವರು-

ತಾತ್ಪರ್ಯ- ದ್ವಾಪರೇ (ಚ) ಆದೌ ಚ । ಕೃಷ್ಣಾವತಾರಾಪೇಕ್ಷಯಾ । 'ವ್ಯಾಸಃ ಷಟ್ಶತ ವರ್ಷೀಯೊ ಧೃತರಾಷ್ಟ್ರಮಜೀಜನತ್ । ಇತಿ ಸ್ಕಾಂದೇ ॥

'ದ್ವಾಪರಾದೌ' ಎಂಬಲ್ಲಿ ದ್ವಾಪರಶಬ್ದದ ಮುಂದಿನ ಸಪ್ತಮೀವಿಭಕ್ತಿಯು ಲೋಪವಾಗಿದೆ. ಆದ್ದರಿಂದ ಇಲ್ಲಿ 'ದ್ವಾಪರಾದೌ' ಎಂಬುದು ಒಂದೇ ಪದ ಅಲ್ಲ. ಕಿಂತು 'ದ್ವಾಪರೇ' 'ಆದೌ' ಎಂಬ ಎರಡು ಪದಗಳಿವೆ. ತಾತ್ಪರ್ಯದಲ್ಲಿಯ 'ದ್ವಾಪರೇ ಆದೌ ಚ' ಎಂಬ ಪಾಠಕ್ಕೆ ಅನುಗುಣವಾಗಿ ಈ ರೀತಿಯಾಗಿ ತಿಳಿದುಕೊಳ್ಳಬೇಕು.

'ದ್ವಾಪರೇ ಚ ಆದೌ ಚ' ಎಂಬ ತಾತ್ಪರ್ಯದ ಪಾಠಕ್ಕೆ ಅನುಗುಣವಾಗಿ 'ದ್ವಾಪರೇ ಚ ಆದೌ ಚ ದ್ವಾಪರಾದೌ' ಎಂಬುದು ದ್ವಂದ್ವೈಕವದ್ಭಾವವಾಗುತ್ತದೆ.

ಹೀಗೆ ದ್ವಾಪರೇ ಆದೌ ಚ ಎಂದಾಗಲೀ ದ್ವಾಪರೇ ಚ ಆದೌ ಚ ಎಂದಾಗಲೀ ವ್ಯಾಖ್ಯಾನಿಸಿಕೊಂಡಾಗ ದ್ವಾಪರದಲ್ಲಿ ಮತ್ತು ಆದಿಯಲ್ಲಿ ಎಂದು ಅರ್ಥವನ್ನು ಹೇಳಿದಂತೇ ಆಗುತ್ತದೆ. ಹಾಗಾದರೆ ಯಾವುದರ ಮೊದಲು ಎಂದು ಅರ್ಥವಾಗುವುದಿಲ್ಲ. ಆದ್ದರಿಂದ ಕೃಷ್ಣಾವತಾರಾಪೇಕ್ಷಯಾ ಎಂದು ಶ್ರೀಮದಾಚಾರ್ಯರು ಹೇಳುತ್ತಾರೆ. ಕೃಷ್ಣಾವತಾರದ ಮೊದಲು ಎಂದರ್ಥವಾಗುತ್ತದೆ.

ಮಹಾಭಾರತದಲ್ಲಿ ಕೃಷ್ಣಾವತಾರವು ದ್ವಾಪರದ ಕೊನೆಗೆ ಆಗಿದೆ ಎಂದು ಹೇಳಿದ್ದಾರೆ. ಆದ್ದರಿಂದ ಕೃಷ್ಣಾವತಾರಕ್ಕಿಂತಲೂ ಮೊದಲು, ದ್ವಾಪರಯುಗದ ಕೊನೆಯಲ್ಲಿ ಶುಕಾಚಾರ್ಯರು ವೇದವ್ಯಾಸರಿಂದ ಅಧ್ಯಯನ ಮಾಡಿದ್ದಾರೆಂದು ಸಿದ್ಧವಾಗುತ್ತದೆ.

(ಹೀಗೆ ಏಕೆ ಹೇಳಬೇಕೆಂದರೆ ದ್ವಾಪರಕ್ಕಿಂತ ಮೊದಲು, ದ್ವಾಪರದ ಆದಿಭಾಗದಲ್ಲಿ ಎಂದು ಅರ್ಥ ಅಸಂಭಾವಿತವಾಗುತ್ತದೆ. ಯಾಕೆಂದರೇ ಆಗ ವ್ಯಾಸಾವತಾರವೇ ಆಗಿಲ್ಲ. ವ್ಯಾಸರು ಆರುನೂರು ವರ್ಷದವರಿದ್ದಾಗ ಧೃತರಾಷ್ಟ್ರನನ್ನು ಹುಟ್ಟಿಸಿದರು ಎಂದು ಸ್ಕಂದಪುರಾಣದಲ್ಲಿ ಹೇಳಿದೆ. ಧೃತರಾಷ್ಟ್ರನು ದ್ವಾಪರದ ಕೊನೆಯಲ್ಲಿಯೇ ಹುಟ್ಟಿರುವನೆಂದು ಭಾರತದಲ್ಲಿದೆ. ಆಗ ವ್ಯಾಸರಿಗೆ ೬೦೦ ವರ್ಷವೆಂದರೆ ವ್ಯಾಸಾವತಾರವೂ ದ್ವಾಪರ ಕೊನೆಯ ಭಾಗದಲ್ಲಿ ಎಂದು ತಿಳಿದು ಬರುತ್ತದೆ. ಮುಖ್ಯವಾಗಿ ಶ್ರೀಕೃಷ್ಣನನ್ನು ಪ್ರತಿಪಾದಿಸುವ ಭಾಗವತವು ಅವನ ಅವತಾರಕ್ಕಿಂತ ಮುಂಚೆಯೇ ತ್ರಿಕಾಲಜ್ಞಾನಿಗಳಾದ ವೇದವ್ಯಾಸದೇವರು ರಚಿಸಿದ್ದಾರೆ. ಆದ್ದರಿಂದ ವ್ಯಾಸರು ಸರ್ವಜ್ಞರು. ಅವರಿಗೆ ವಿವಕ್ಷಿತಾರ್ಥಜ್ಞಾನವಿದೆ ಎಂದು ತಿಳಿಸಲು ದ್ವಾಪರಾಂತೇ ಎಂದು ಸ್ಪಷ್ಟವಾಗಿ ಹೇಳದೇ ಹೀಗೆ ಹೇಳಿದ್ದಾರೆ ಎಂದು ತಿಳಿಯಬೇಕು.

ಈ ಶ್ಲೋಕಕ್ಕೆ ಪಾಂಫ್ರೀ ಶ್ರೀನಿವಾಸಾಚಾರ್ಯರು ಅನೇಕ ಅರ್ಥಗಳನ್ನು ಬರೆದಿದ್ದಾರೆ. ಆ ಅರ್ಥಗಳು ಈ ರೀತಿಯಾಗಿವೆ. ಕೆಲವೆಡೆ ಅನ್ವಯ ಪೂರ್ಣವಾಗಿಲ್ಲ.

ಉಪಲಬ್ಧವಾದ ಪ್ರತಿಯನ್ನು ಉಪಯೋಗಿಸಿಕೊಂಡು ಈ ಅರ್ಥಗಳು ನಿರೂಪಿಸಲ್ಪಟ್ಟಿವೆ.

೧) ದ್ವಾಪರಃ ಆದಿಃ ಯಸ್ಯ ತಸ್ಮಿನ್ ಅಂದರೆ ದ್ವಾಪರವೇ ಆದಿಯಾಗಿ ಉಳ್ಳ ಕಲಿ-ದ್ವಾಪರಗಳ ಸಂಧಿಕಾಲದಲ್ಲಿ ಎಂದರ್ಥ.

೨) ದ್ವಾಪರಶ್ಚ ಆದಿಶ್ಚ ಎಂದು ವಿಗ್ರಹ ಮಾಡಬೇಕು. ಅಂದರೆ ದ್ವಾಪರದಲ್ಲಿ ಮತ್ತು ವರ್ತಮಾನ ಕಾಲದ ಪೂರ್ವದಲ್ಲಿ ಎಂದೂ ಅರ್ಥ.

೩) ದ್ವಾಪರಾದೌ ದ್ವೌ ಪರಃ ಅದಃ ಯಸ್ಮಿನ್ ತತ್ ದ್ವಾಪರಾದಂ ತಸ್ಮಿನ್ ದ್ವಾಪರಾದೌ । ಪರಃ ಸರ್ವೋತ್ತಮನಾದ ಶ್ರೀಹರಿಯು ಮತ್ತು, ಅದಃ (ಅತ್ತಿ ಇತಿ) ಕರ್ಮ ಫಲವನ್ನುಣ್ಣುವ ಜೀವನು ದ್ವೌ ಇವರೀರ್ವರು ಯಸ್ಮಿನ್ ಯಾವುದರಲ್ಲಿ ನಿರ್ಣೇಯರಾಗಿರುವರೋ ತತ್ ಆ ಪುರಾಣವನ್ನು ಅಧೀತವಾನ್ ಓದಿದೆನು. ಜೀವ-ಬ್ರಹ್ಮರ ಸ್ವರೂಪವನ್ನು ನಿರ್ಣಯ ಮಾಡುವ ಪುರಾಣ ಎಂದರ್ಥ. ಈ ಪಕ್ಷದಲ್ಲಿ ದ್ವಾಪರಾದೌ ಪುರಾಣಂ ಎಂದನ್ವಯವಾಯಿತು.

೪) **ಹೇ ಭಾಗವ** ಜೀವ-ಬ್ರಹ್ಮ ವಿಭಾಗ ತಿಳಿದವನೇ, ಭಾಗಂ ವಾತಿ ಇತಿ ಭಾಗವಃ ತಸ್ಯ ಸಂಬುದ್ಧಿ ಹೇ ಭಾಗವ ಎಂಬ ವಿಗ್ರಹಕ್ಕೆ ಅನುಗುಣವಾಗಿ ಭಾಗಂ ಜೀವಬ್ರಹ್ಮ ವಿಭಾಗವನ್ನು ವಾತಿ ತಿಳಿಯುತ್ತಾನೆ. 'ವಾ' ಗತಿಗಂಧನಯೋಃ ಎಂಬ ಧಾತು ಗತ್ಯರ್ಥಕವಾದದ್ದರಿಂದ ಜ್ಞಾನಾರ್ಥಕವಾಗಿದೆ. ಆದ್ದರಿಂದ ಭಾಗವ ಎಂಬ ಶಬ್ದಕ್ಕೆ ಭೇದವನ್ನು ತಿಳಿದವನೇ ಎಂದು ಅರ್ಥವಾಗುತ್ತದೆ. ಇದು ಸಂಬುದ್ಧ್ಯಂತವಾದ ಶಬ್ದವಾಗಿದೆ.

೫) ಅಥವಾ, **ಇದಂಭಾಗವ** ಈ ಪ್ರಪಂಚದ ಪಂಚಮಹಾಭೇದವನ್ನು ತಿಳಿದವನೇ. ಪ್ರಕೃತ 'ಇದಂಭಾಗವ' ಎಂಬುದು ಒಂದೇ ಪದವಾಗಿದೆ. ಅಸ್ಯ ಭಾಗಂ ವಾತೀತಿ ಇದಂಭಾಗವಃ ತಸ್ಯ ಸಂಬುದ್ಧಿ ಹೇ ಇದಂಭಾಗವ । **ಅಸ್ಯ** ಈ ಪ್ರಪಂಚದ **ಭಾಗಂ** ಪಂಚಮಹಾಭೇದಾತ್ಮಕತ್ವವನ್ನು **ವಾತಿ** ತಿಳಿದವನು.

೬) **ದ್ವಾಪರಾದೌ** ಸಂಶಯ ಕಾರಣವಿದ್ದಾಗ ಎಂದರ್ಥ. ಇಲ್ಲಿ ದ್ವಾಪರ ಎಂಬ ಶಬ್ದಕ್ಕೆ ಸಂದೇಹ ಎಂದು ಅರ್ಥ. ಈ ವಿಷಯದಲ್ಲಿ 'ಸಂದೇಹದ್ವಾಪರೌ ಚಾಽಥ' ಎಂದು ಅಮರವಿದೆ. ಆದಿ ಎಂಬ ಶಬ್ದಕ್ಕೆ 'ಆದಿರ್ನಾ ಕಾರಣಂ ಬೀಜಂ' ಎಂಬ ಕೋಶವು ಕಾರಣ ಎಂದು ಅರ್ಥವನ್ನು ಹೇಳಿದೆ. ಪ್ರಕೃತ ದ್ವಾಪರಸ್ಯ ಆದಿಃ ದ್ವಾಪರಾದಿಃ ತಸ್ಮಿನ್ ದ್ವಾಪರಾದೌ ಎಂದು ವಿಗ್ರಹವನ್ನು ಮಾಡಿಕೊಳ್ಳಬೇಕು.

೭) ದ್ವಾಪರಾತ್ ಊ ಎಂದು ಪದಚ್ಛೇದ ಮಾಡಿ ಮತ್ತೊಂದು ಅರ್ಥವನ್ನು ತಿಳಿದುಕೊಳ್ಳಬೇಕು. ಇಲ್ಲಿ ದ್ವಾಪರಃ ಎಂಬ ಶಬ್ದಕ್ಕೆ **ದ್ವಾ** ಐವತ್ತು ವರ್ಷವೆಂಬ ಅರ್ಧವಾದ **ಪರ** ಪರ ಎಂಬ ಆಯುಷ್ಯ ಉಳ್ಳ ಬ್ರಹ್ಮದೇವರು ಎಂದು ಅರ್ಥ. ಮತ್ತು ಉ ಎಂದರೇ ರುದ್ರದೇವರು ಎಂದು ಅರ್ಥ. ಉ ಶಬ್ದದ ಸಪ್ತಮೀವಿಭಕ್ತಿಯು ಊ ಎಂದು ಆಗುತ್ತದೆ.

**ಊ** ನನ್ನ (ಶುಕಾಚಾರ್ಯರ) ಮೂಲರೂಪವಾದ ರುದ್ರಜನ್ಮದಲ್ಲಿ **ಅಹಂ** ನಾನು, **ದ್ವಾಪರಾತ್** ಬ್ರಹ್ಮದೇವರಿಂದ ಅಧ್ಯಯನ ಮಾಡಿದೆನೆಂದರ್ಥ. (ದ್ವೌ ಪಂಚಾಶದ್ವತ್ಸರಕಾಲೇನ ಅರ್ಧೀಕೃತಪರನಾಮಕಆಯುಃ ದ್ವಾಪರಃ ಬ್ರಹ್ಮಾ ತಸ್ಮಾತ್)

೮) ಹೇ ದ್ವಾಪರ ಎಂದು ರಾಜನಿಗೆ ಸಂಬೋಧನೆ. **ದ್ವಾಭ್ಯಾಂ** ಜಡೇಶ್ವರರಿಂದ **ಪರಃ** ವಿಲಕ್ಷಣನಾದವನೇ.

೯) ದ್ವೌ ಪಾಲಯತೀತಿ ದ್ವಾಪರಃ ಎಂಬ ವಿಗ್ರಹವನ್ನಾಶ್ರಯಿಸಿ ಅರ್ಥವನ್ನು ಹೇಳಬೇಕು. **ದ್ವೌ** ವ್ಯವಹಾರ-ಪರಮಾರ್ಥ ಇವೆರಡನ್ನೂ ಪಾಲಿಸುವವನೇ ಎಂದರ್ಥ. 'ಪೃಪಾಲನ ಪೂರಣಯೋಃ' ಎಂದು ಧಾತು ಇದೆ.

೧೦) ಎಂತಹ ಪುರಾಣವೆಂದರೆ, **ಇ** ವಿಚಿತ್ರಂ ಅದ್ಭುತಂ, **ದಂ** ಬುದ್ಧಿಃ ಜ್ಞಾನಂ ಯಸ್ಮಿನ್ ತತ್ ಭಾಗವತಂ ಇದಮ್ ಅಂದರೇ **ಇ** ಅದ್ಭುತವಾದ, **ದಂ** ಜ್ಞಾನವು ಯಾವ ಗ್ರಂಥದಲ್ಲಿದೆಯೋ ಆ ಗ್ರಂಥವೇ ಭಾಗವತ ಎಂದು ಅರ್ಥ. ಆದ್ದರಿಂದ ಇದಂ ಅದ್ಭುತ ಜ್ಞಾನಾಧಿಕಾರಣವಾದದ್ದು ಎಂದು ಅರ್ಥ. 'ಇ ವಿಚಿತ್ರೇ ಸ್ಮರೇ ಪುಮಾನ್' ಎಂದು ಅಭಿಧಾನವಿದ್ದದ್ದರಿಂದ **ಇ** ಎಂದರೇ ಅದ್ಭುತವಾದದ್ದು ಎಂದು ಅರ್ಥ. 'ದಂ ಕಲತ್ರಂ ದಂ ಚ ಬುದ್ಧಿಃ ದಂ ದಾನೇ ದಂ ಚ ದಾತರಿ' ಎಂದೂ ಅಭಿಧಾನವಿದ್ದದ್ದರಿಂದ **ದಂ** ಎಂದರೇ ಬುದ್ಧಿ ಎಂದು ಅರ್ಥ. ಆದ್ದರಿಂದ ಅವಶ್ಯ ಆಧ್ಯೇಯವಾಗಿದೆ ಈ ಭಾಗವತ ಎಂದು ಅಭಿಪ್ರಾಯ.

೧೧) ಭಾಗವತಂ 'ಭಗಂ ಶ್ರೀಕಾಮಮಾಹಾತ್ಮ್ಯವೀರ್ಯಯತ್ನಾರ್ಕಕೀರ್ತಿಷು' ಎಂದು ಅಮರವಿರುವುದರಿಂದ ವಿಷ್ಣುಮಾಹಾತ್ಮ್ಯಪ್ರತಿಪಾದಕವೆಂದರ್ಥ. 'ಐಶ್ವರ್ಯಸ್ಯ ಸಮಗ್ರಸ್ಯ ವೀರ್ಯಸ್ಯ ಯಶಸಃ ಶ್ರಿಯಃ । ಜ್ಞಾನವೈರಾಗ್ಯಯೋಶ್ಚೈವ ಷಣ್ಣಾಂ ಭಗ ಇತೀರಣಾ ॥ ಎಂಬ ವಚನದಿಂದಲೂ ವಿಷ್ಣುಮಾಹಾತ್ಮ್ಯಪ್ರತಿಪಾದಕ ಗ್ರಂಥ ಎಂದು ಹೇಳಬಹುದು.

೧೨) ಭಾನಿ ಮೇಷಾದಿರಾಶಿಗಳನ್ನು ಗಚ್ಛಂತಿ ಇತಿ **ಭಗಾಃ** ಸೂರ್ಯಾದಿಗ್ರಹಗಳು, 'ಪ್ರಯಚ್ಛಂತಿ ಫಲಂ ನೃಣಾಂ ಸದೈವ ತು ಶುಭಾಶುಭಂ' ಎಂದು ಹೇಳಿದೆ. ಅಥವಾ ಭಂ ಮೋಕ್ಷಾಖ್ಯಭವನಂ ಗಚ್ಛಂತೀತೀ **ಭಗಾಃ** ಮುಕ್ತಿಯೋಗ್ಯರು, ಅವರು ಸೇವಕರಾಗಿ ಉಳ್ಳವನು ಭಗವಾನ್ ತಸ್ಯೇದಂ ಭಾಗವತಂ, ಅಥವಾ **ಭಂ** ಭಯವನ್ನು (ಪಂಚಕಷ್ಟವೆಂಬ) ಗಚ್ಛಂತೀತಿ **ಭಗಾಃ** ತಮೋಯೋಗ್ಯರೂ ಯಾವನಿಗೆ ನಿಯಮ್ಯರಾಗಿರುವರೊ ಅವನು ಭಗವಾನ್ ತಸ್ಯೇದಂ, ಇದರಿಂದ ಮುಕ್ತಿಯೋಗ್ಯ-ತಮೋಯೋಗ್ಯನಿಯಾಮಕತ್ವಮಹಿಮಾ ಶ್ರೀಹರಿಗೆ ಹೇಳಿದಂತಾಯಿತು.

೧೩) ಇದಂಭಾಗವ ಎಂದು ರಾಜನಿಗೆ ಸಂಬುದ್ಧಿ. ಮುಂದಿನ ತಂ ಎಂಬುದು ಪ್ರಸಿದ್ಧಾರ್ಥಕವಾದದ್ದು. ಪುರಾಣಕ್ಕೆ ವಿಶೇಷಣವಾಗಿದೆ. **ಇ** ವಿಚಿತ್ರವಾದ **ದಂಭಗಾತ್** ದಂಭಪರ್ವತದಿಂದ, **ವಾತಿ** ಗಚ್ಛತೀತಿ **ಇದಂಭಾಗವ** ದಂಭರಹಿತನಾದವನು ಎಂದರ್ಥ. ಅಥವಾ **ಇಃ** ಕಾಮ, **ದಂಭಃ** ದಂಭ ಇವುಗಳನ್ನು **ಅಗ** ಪರ್ವತದಂತೆ ದುರ್ಗಮವೆಂದು, **ವಾತಿ** ತಿಳಿದವನು ಎಂದರ್ಥ. **ಇದಂಭಾಗವ** ಕಾಮ ಮತ್ತು ದಂಭಗಳನ್ನು ಪರ್ವತದಂತೆ ದುರ್ಗಮವೆಂದು ತಿಳಿದವನೇ ಎಂದು ಅರ್ಥವಾಗುತ್ತದೆ.

೧೪. ಇದಂಭಾಗ ಎಂಬುದು ಸಂಬೋಧನವಾಗಿದೆ. **ಅಸ್ಯ** ಈ ಭಗವಂತನ **ಭಾಗ** ಭಕ್ತಿಃ ಅಸ್ಯ ಅಸ್ತೀತಿ ಇದಂಭಾಗ ಭಗವದ್ಭಕ್ತನೇ ಎಂದು ಅರ್ಥ.

೧೫. **ಹೇ ಇದಂಭಾಕ್** ಎಂಬುದು ಕೂಡಾ ಸಂಬುದ್ಧಿಯಾಗಿದೆ. ಇದಂ ಬ್ರಹ್ಮ ಭಜತೇ ಇತಿ ಇದಂಭಾಕ್ ಪರಬ್ರಹ್ಮಭಜಕನೇ ತಂ ಪುರಾಣಂ ಅವ ಆ ಪುರಾಣವನ್ನು ರಕ್ಷಿಸು ಎಂದು ಅರ್ಥ.

೧೬. ಇದಂಭಾಗೋ ಎಂದು ಉಕಾರಾಂತಸಂಬೋಧನ. ಇದಂ ಭಾಸಯಂತೀತಿ ಇದಂಭಾಃ, ಇದಂಭಾಃ ಗಾವಃ ಯಸ್ಯ ಸಃ ಇದಂಭಾಗುಃ ತಸ್ಯ ಸಂಬುದ್ಧಿ ಹೇ ಇದಂಭಾಗೋ. ಬ್ರಹ್ಮಭಾಸಕವಾದ ದೃಷ್ಟಿಯುಳ್ಳವನೇ ಎಂದು ಅರ್ಥ. ಈ ಪಕ್ಷದಲ್ಲಿ ಅತಂ ಎಂಬುದು ಅಕಾರವಾಚ್ಯನಾದ ವಾಸುದೇವನ, **ತಂ** ವಿಸ್ತಾರಕವಾದ ಪುರಾಣ ಎಂದು ಅನ್ವಯ.

೧೭. ಇದಂ ಪುರಾಣಂ ಭಾಗವತಂ ನಾಮ ಅಂದರೇ ಹದಿನೆಂಟು ಸಾವಿರಗ್ರಂಥಾತ್ಮಕವಾದ ಇದು ಭಗಂತನ ಹೆಸರು ಎಂದರ್ಥ. ಅಂದಮೇಲೆ ಎಲ್ಲಿ ಎಲ್ಲಿ ನಾಮಮಾಹಾತ್ಮ್ಯ ಹೇಳುವುದೋ ಅಲ್ಲಲ್ಲಿ ಭಾಗವತಮಾಹಾತ್ಮ್ಯ ಇದೆ ಎಂದು ತಿಳಿಯಬೇಕು. ಭಾಗವತವು ಭಗವನ್ನಾಮವಾಗಿದೆ ಆದ್ದರಿಂದ.

೧೮. ನಾಮಪುರಾಣಂ ಎಂಬುದು ಒಂದೇ ಪದ. ಕಾಕುಸ್ವರದಿಂದ ಇದು ಹೆಸರಿಗೆ ಪುರಾಣವೇ? ಅಲ್ಲವೆಂದು ಇತರಪುರಾಣಸದೃಶವಲ್ಲ ಕಿಂತು ಹೆಸರಾದ ಪುರಾಣ ಎಂದು ನಾಮ್ನಾ ಪುರಾಣ ಎಂದು ಧ್ವನಿತವಾಗುವುದು.

೧೯. 'ಪುರಾಣಂ ಬ್ರಹ್ಮ ಯತ್ರ ಸಮ್ಮಿತಂ ತತ್ ಭಾಗವತಮ್' ಅಂದರೆ ಬ್ರಹ್ಮಾದಿ ಚೇತನರ 'ಪುರಾಣಿ' ಶರೀರಗಳನ್ನು 'ಅಣತಿ' ಪ್ರವೇಶಿಸುವವನಾದ್ದರಿಂದ ಪುರಾಣನೆನಿಸಿದ ಬ್ರಹ್ಮನು, ಎಲ್ಲಿ, **ಸಂ** ಚೆನ್ನಾಗಿ ಸರ್ವೋತ್ತಮತ್ವೇನ, **ಮಿತಂ** ಪ್ರತಿಪಾದಿತನಾಗಿರುವನೋ ಅದು. ಅಥವಾ **ಪುರಾ** ಸೃಷ್ಟಿಯ ಆದಿಯಲ್ಲಿ **ಬ್ರಹ್ಮಸಮ್ಮಿತಂ** ಚತುರ್ಮುಖನಿಂದ ಉತ್ತಮತ್ವೇನ ತಿಳಿಯಲ್ಪಟ್ಟ ಮೋಕ್ಷಸುಖವು, **ಯತ್ರ** ಎಲ್ಲಿ ಪ್ರತಿಪಾದಿತವಾಗಿದೆಯೋ ಅಂತಹಾ ಪುರಾಣ ಭಾಗವತವೆಂದು ತಾತ್ಪರ್ಯ. ।।೮।।

*ನಿಶ್ಚಿತ ಮುಕ್ತಿಯುಳ್ಳ ನಿನಗೆ ಭಾಗವತಾಧ್ಯಯನವೇಕೆ ಎಂಬ ಶಂಕೆಯನ್ನು ಪರಿಸಹರಿಸುತ್ತ ಭಾಗವತವನ್ನು ಹೇಳುವ ಪ್ರತಿಜ್ಞೆ ಮಾಡುವರು-*

**ಪರಿನಿಷ್ಠಿತೋಽಪಿ ನೈರ್ಗುಣ್ಯ ಉತ್ತಮಶ್ಲೋಕಲೀಲಯಾ ।**
**ಗೃಹೀತಚೇತಾ ರಾಜರ್ಷ ಆಖ್ಯಾನಂ ಯದಧೀತವಾನ್ ॥ ೯ ॥**

**ಹೇ ರಾಜರ್ಷೇ** ಪರೀಕ್ಷಿತನೇ, **ನೈರ್ಗುಣ್ಯೇ** ಮೋಕ್ಷವಿಷಯದಲ್ಲಿ **ಪರಿನಿಷ್ಠಿತಃ ಅಪಿ** ಇವನಿಗೆ ಮೋಕ್ಷವಾಗುವುದು ಎಂಬ ನಿಶ್ಚಯ ಉಳ್ಳವನಾದರೂ, **ಉತ್ತಮಶ್ಲೋಕಲೀಲಯಾ** ಶ್ರೀಹರಿಯ ಲೀಲೆಯಿಂದ, **ಗೃಹೀತಚೇತಾಃ** ವಶೀಕೃತಮನಸ್ಸುಳ್ಳ ನಾನು, **ಆಖ್ಯಾನಂ** ಭಾಗವತವನ್ನು **ಯತ್** ಯಾವ ಕಾರಣ, **ಅಧೀತವಾನ್** ಅಧ್ಯಯನ ಮಾಡಿರುವೆನೋ, ಆದ್ದರಿಂದ ಅದನ್ನು ಹೇಳುವೆನು ಎಂದು ಅನ್ವಯಮಾಡಿಕೊಳ್ಳಬೇಕು.

ಈ ಶ್ಲೋಕದಲ್ಲಿ 'ನೈರ್ಗುಣ್ಯೇ ಪರಿನಿಷ್ಠಿತಃ' ಎಂಬ ಶಬ್ದಗಳಿಗೆ ಮೋಕ್ಷದಲ್ಲಿ ಇರುವ ಎಂದು ಅರ್ಥ ತೋರುತ್ತದೆ. ಈ ಅರ್ಥವು ಇನ್ನೂ ಸಂಸಾರಿಗಳಾದ ಶುಕಾಚಾರ್ಯರಿಗೆ ಹೊಂದುವುದಿಲ್ಲ. ಆದ್ದರಿಂದ ಈ ಶಬ್ದಗಳನ್ನು ಸರಿಯಾಗಿ ವ್ಯಾಖ್ಯಾನಿಸುವರು-

ತಾತ್ಪರ್ಯ- ಪರಿನಿಷ್ಠಿತೋಽಪಿ ಮುಕ್ತಿರಸ್ಯ ಭವಿಷ್ಯತೀತಿ ನಿಷ್ಠಿತೋಽಪಿ । 'ಉದರಃ ಸಂಶಯಃ ಪ್ರೋಕ್ತಃ ಪರಿನಿಷ್ಠಾ ವಿನಿಶ್ಚಯಃ' ಇತ್ಯಭಿಧಾನೇ ॥

ಋಷ್ಯುತ್ತಮಾ ದೇವತಾಶ್ಚ ವಿಮುಕ್ತೌ ಪರಿನಿಷ್ಠಿತಾಃ ।
ತಥಾಽಪ್ಯಧಿಕಸೌಖ್ಯಾರ್ಥಂ ಯತಂತೇ ಶುಭಕರ್ಮಸು ।
ವಿಮುಕ್ತಾಸ್ತು ಸ್ವಭಾವೇನ ನಿತ್ಯಂ ಧ್ಯಾನಾದಿತತ್ಪರಾಃ ॥ -ಇತಿ ಗಾರುಡೇ

'ಪರಿನಿಷ್ಠಿತೋऽಪಿ' ಎಂಬುದಕ್ಕೆ ಮುಂದೆ ನನಗೆ ಮುಕ್ತಿಯಾಗುವುದೆಂದು ನಿಶ್ಚಯವಿದ್ದರೂ ಎಂದರ್ಥ. 'ಉದರಂ' ಎಂದರೆ ಸಂಶಯ 'ಪರಿನಿಷ್ಠಾ' ಎಂದರೆ ನಿಶ್ಚಯ ಎಂದು ಅಭಿಧಾನದಲ್ಲಿದೆ.

ಋಷಿಶ್ರೇಷ್ಠರಿಗೆ ಮತ್ತು ದೇವತೆಗಳಿಗೆ ಮೋಕ್ಷವು ನಿಶ್ಚಿತವೇ ಆದರೂ ಮೋಕ್ಷದಲ್ಲಿ ಆನಂದಾತಿಶಯ ಹೊಂದಲು ಶುಭಕರ್ಮ ಮಾಡುತ್ತಾರೆ. ಮುಕ್ತರಾದವರು ಕೂಡಾ ಫಲಾಪೇಕ್ಷೆಯಿಲ್ಲದೇ ಸ್ವಭಾವದಿಂದಲೇ ಯಾವಾಗಲೂ ಧ್ಯಾನಾದಿಗಳಲ್ಲಿಯೇ ಆಸಕ್ತರಾಗಿರುವರು. ಎಂದು ಗಾರುಡದಲ್ಲಿದೆ.

ಆದಕಾರಣ ಶುಕಾಚಾರ್ಯರು ಅಧ್ಯಯನ ಮುಂತಾದ ಶುಭಕರ್ಮ ಮಾಡುವರೆಂದು ಭಾವ. ॥೯॥

**ತದಹಂ ತೇऽಭಿಧಾಸ್ಯಾಮಿ ಮಹಾಪೌರುಷಿಕೋ ಭವಾನ್ ।**
**ಯತ್ರ ಶ್ರದ್ದಧತಾಮಾಶು ಸ್ಯಾನ್ಮುಕುಂದೇ ಮತಿಃ ಸತೀ ॥ ೧೦ ॥**

**ಭವಾನ್ ಮಹಾಪೌರುಷಿಕಃ** ನೀನು ವಿಷ್ಣುಭಕ್ತರಲ್ಲಿ ಉತ್ತಮನಾಗಿರುವಿ. ಆದಕಾರಣ **ತತ್** ನಾನು ಅಧ್ಯಯನ ಮಾಡಿದ ಭಾಗವತವನ್ನು, **ಅಹಂ** ನಾನು, **ತೇ** ನಿನಗೆ, **ಅಭಿಧಾಸ್ಯಾಮಿ** ಹೇಳುವೆನು, **ಯತ್ರ** ಯಾವ ಭಾಗವತದಲ್ಲಿ ಪ್ರತಿಪಾದಿತವಾದ ಅರ್ಥದಲ್ಲಿ, **ಶ್ರದ್ದಧತಾಂ** ವಿಶ್ವಾಸ ಮಾಡುವವರಿಗೆ, **ಮುಕುಂದೇ** ಶ್ರೀಹರಿಯಲ್ಲಿ **ಸತೀ ಮತಿಃ ಸ್ಯಾತ್** ಒಳ್ಳೆಯ ಜ್ಞಾನವಾಗುವುದು. ॥೧೦॥

**ಏತನ್ನಿರ್ವಿದ್ಯಮಾನಾನಾಂ ಇಚ್ಛತಾಮಕುತೋಭಯಮ್ ।**
**ಯೋಗಿನಾಂ ನೃಪ ನಿರ್ಣೀತಂ ಹರೇರ್ನಾಮಾನುಕೀರ್ತನಮ್ ॥ ೧೧ ॥**

**ಹೇ ನೃಪ** ಪರೀಕ್ಷಿತನೇ, **ನಿರ್ವಿದ್ಯಮಾನಾನಾಂ** ಸಾಂಸಾರಿಕದುಃಖದರ್ಶನದಿಂದ ವಿರಕ್ತರಾದ, **ಅಕುತೋಭಯಮಿಚ್ಛತಾಂ** ಯಾರಿಂದಲೂ ಭಯವಿಲ್ಲದ ಮೋಕ್ಷವನ್ನಿಚ್ಛಿಸುವ, **ಯೋಗಿನಾಂ** ಶಮ-ದಮ ಮುಂತಾದ ಉಪಾಯವುಳ್ಳವರಿಗೆ, **ಏತತ್ ಹರೇಃ ನಾಮಾನುಕೀರ್ತನಂ** ಹಿಂದೆ ಹೇಳಿದ ಶ್ರೀಹರಿವಿಷಯಕವಾದ ಗ್ರಂಥದ ಶ್ರವಣ-ಕೀರ್ತನಗಳು **ನಿರ್ಣೀತಂ** ಕರ್ತವ್ಯವೆಂದು ಶಾಸ್ತ್ರದಲ್ಲಿ ನಿರ್ಧರಿಸಲ್ಪಟ್ಟಿದೆ.

ಇಲ್ಲಿ ನಾಮ ಎಂಬ ಶಬ್ದಕ್ಕೆ ಗ್ರಂಥ ಎಂದರ್ಥ. 'ಸೋऽಹಂ ನಾಮವಿದೇವಾऽಸ್ಮಿ' ಎಂಬಲ್ಲಿ ಗ್ರಂಥಗಳಿಗೆ ನಾಮವೆಂದು ಕರೆದಿರುವರು. ॥೧೧॥

*ಇಲ್ಲಿ ವೈರಾಗ್ಯ-ಮುಮುಕ್ಷಾ-ಶಮ-ದಮಾದಿ ಸಂಪತ್ತು ಎಂಬ ಅಧಿಕಾರಿ ವಿಶೇಷಣಗಳೆಂದು ಶಾಸ್ತ್ರದಲ್ಲಿ ಪ್ರಸಿದ್ಧವಾಗಿವೆಯೋ ಅವುಗಳನ್ನೇ ಹೇಳಿರುವರು ಎಂದು ತಿಳಿಯಬೇಕು.*

*ಅತ್ಯಲ್ಪವಾದ ಆಯುಷ್ಯ ಉಳ್ಳ ನನಗೆ ಶ್ರವಣಾದಿಗಳು ಹೇಗೆ ಸಾಧ್ಯ ಎಂಬ ಶಂಕೆ ಬೇಡ ಎಂದು ಹೇಳುವರು-*

**ಕಿಂ ಪ್ರಮತ್ತಸ್ಯ ಬಹುಭಿಃ ಪರೋಕ್ಷೈಃ ಹಾಯನೈರಿಹ ।**
**ಪರಂ ಮೂಹೂರ್ತಂ ವಿದಿತಂ ಘಟತೇ ಶ್ರೇಯಸೇ ಯತಃ ॥ ೧೨ ॥**

**ಪ್ರಮತ್ತಸ್ಯ** ವಿವೇಚನ ಶಕ್ತಿ ಇಲ್ಲದವನಿಗೆ, **ಪರೋಕ್ಷೈಃ** ಇಷ್ಟೇ ಎಂದು ತಿಳಿಯದ, **ಬಹುಭಿಃ ಹಾಯನೈಃ** ಅನೇಕವರ್ಷಗಳಿಂದ, **ಕಿಂ** ಏನು ಪ್ರಯೋಜನ ? (ಶ್ರೇಯಸ್ಸನ್ನುಂಟು ಮಾಡುವುದಿಲ್ಲವಾದ್ದರಿಂದ) **ಯತಃ** ಯಾವುದರಿಂದ, **ಶ್ರೇಯಸೇ ಘಟತೇ** ಶ್ರವಣಾದಿರೂಪ ಶ್ರೇಯಸ್ಸಾಧನದಲ್ಲಿ ಪ್ರಯತ್ನಿಸುವನೋ, **ತತ್ ವಿದಿತಂ ಮುಹೂರ್ತಂ ಪರಂ** ಇಷ್ಟೇ ಎಂದು ತಿಳಿಯಲ್ಪಟ್ಟ ಎರಡು ಘಳಿಗೆಯೇ ಶ್ರೇಷ್ಠವಾದುದು. ॥೧೨॥

*ಇದನ್ನೇ ಕಥೆಯಿಂದ ದೃಢಪಡಿಸುವರು-*

**ಖಟ್ವಾಂಗೋ ನಾಮ ರಾಜರ್ಷಿಃ ಜ್ಞಾತ್ವೇಯತ್ತಾಮಿಹಾಯುಷಃ ।**
**ಮುಹೂರ್ತಾತ್ಸಂಗಮುತ್ಸೃಜ್ಯ ಗತವಾನಭಯಂ ಹರಿಮ್ ॥ ೧೩ ॥**

**ಖಟ್ವಾಂಗೋ ನಾಮ ರಾಜರ್ಷಿಃ** ಪ್ರಸಿದ್ಧನಾದ ಖಟ್ವಾಂಗರಾಜನು, **ಆಯುಷಃ** ಆಯುಷ್ಯದ, **ಇಯತ್ತಾಂ** ಪರಿಮಿತಿಯನ್ನು, **ಜ್ಞಾತ್ವಾ** ತಿಳಿದು, **ಮುಹೂರ್ತಾತ್** ಒಂದೇ ಮುಹೂರ್ತಕಾಲದಲ್ಲಿ, **ಸಂಗಂ ಉತ್ಸೃಜ್ಯ** ರಾಜ್ಯಾದಿಸ್ನೇಹವನ್ನು ತ್ಯಜಿಸಿ, **ಅಭಯಂ ಹರಿಂ ಗತವಾನ್** ಅಭಯರೂಪವಾದ ಮುಕ್ತಿಯನ್ನು ನೀಡುವ ಶ್ರೀಹರಿಯನ್ನು ಹೊಂದಿದನು.

ಖಟ್ವಾಂಗನೆಂಬ ರಾಜನು ದೇವಪಕ್ಷದಲ್ಲಿದ್ದು ದೈತ್ಯರನ್ನು ಗೆದ್ದನು. ಆಗ ಪ್ರಸನ್ನರಾದ ದೇವತೆಗಳು ವರ ಕೇಳೆಂದಾಗ ನನ್ನ ಆಯುಷ್ಯ ಎಷ್ಟೆಂದು ಹೇಳಿರಿ ಎಂದನು. ದೇವತೆಗಳು ಒಂದೇ ಮುಹೂರ್ತ ಉಳಿದಿದೆ ಎಂದರು . ಆಗ ಭಯದಿಂದ ಶೀಘ್ರದಲ್ಲಿ ಭೂಮಿಗೆ ಬಂದು ಅಷ್ಟೇ ಕಾಲದಲ್ಲಿಯೇ ಪುಣ್ಯ ಸಂಪಾದನೆ ಮಾಡಿ ಸದ್ಗತಿ ಹೊಂದಿದನೆಂಬ ಆಖ್ಯಾಯಿಕಾ ಸೂಚಿಸುವರು. ॥೧೩॥

**ತವಾಽಪ್ಯೇತರ್ಹಿ ಕೌರವ್ಯ ಸಪ್ತಾಽಹಂ ಜೀವಿತಾವಧಿಃ ।**
**ಉಪಕಲ್ಪಯ ತತ್ಸರ್ವಂ ಯತ್ತಾವತ್ಸಾಂಪರಾಯಿಕಮ್ ॥ ೧೪ ॥**

**ಯತ್** ಯಾವ ಕಾರಣ, **ತವ ಅಪಿ** ನಿನಗಾದರೂ, **ಏತರ್ಹಿ** ಈಗ, **ಸಪ್ತಾಽಹಂ** ಏಳು ದಿನ, **ಜೀವಿತಾವಧಿಃ** ಆಯುಷ್ಯದ ಅವಧಿಯು ಇದೆ, **ತಾವತ್** ಅಷ್ಟರಲ್ಲಿ **ಸಾಂಪರಾಯಿಕಂ** ಮೋಕ್ಷಸಾಧನವನ್ನು, **ಉಪಕಲ್ಪಯ** ಸಂಪಾದಿಸು. ॥೧೪॥

*ಉಳಿದ ಆಯುಷ್ಯದಲ್ಲಿ ಸಂಪಾದಿಸಬೇಕಾದ ಪ್ರಥಮ ಸಾಧನ ವೈರಾಗ್ಯವೆಂದು ಹೇಳುವರು-*

**ಅಂತಕಾಲೇ ತು ಪುರುಷ ಆಗತೇ ಗತಸಾಧ್ವಸಃ ।**
**ಛಿಂದ್ಯಾದಸಂಗಶಸ್ತ್ರೇಣ ಸ್ಪೃಹಾಂ ದೇಹೇಽನು ಯೇ ಚ ತಮ್ ॥ ೧೫ ॥**

'ಯತ್ಕರ್ತವ್ಯಂ' ಎಂಬ ಪ್ರಶ್ನೆಗೆ ಉತ್ತರವಿದು-

**ಅಂತಕಾಲೇ ಆಗತೇ ಸತಿ** ಕೊನೆಯ ಕಾಲ ಬಂದಾಗ, **ಪುರುಷಃ** ಅಧಿಕಾರಿಯು, **ಗತಸಾಧ್ವಸಃ** ಮರಣದ ಭಯವಿಲ್ಲದವನಾಗಿ, **ಅಸಂಗಶಸ್ತ್ರೇಣ** ನಿತ್ಯಾನಿತ್ಯವಸ್ತುವಿವೇಕ ನಿಶ್ಚಯವೆಂಬ ಅಸಂಗಶಸ್ತ್ರದಿಂದ, **ದೇಹೇ** ದೇಹದಲ್ಲಿ, **ಯೇ ಚ ತಂ ಅನು** ದೇಹಾನುಬಂಧಿಗಳಾದ ಹೆಂಡತಿ ಮಕ್ಕಳಲ್ಲಿ **ಸ್ಪೃಹಾಂ** ಆಸಕ್ತಿಯನ್ನು, **ಛಿಂದ್ಯಾತ್** ಛೇದಿಸಬೇಕು. (ಬಿಡಬೇಕು) ॥೧೫॥

*ವೈರಾಗ್ಯ ಬಂದಮೇಲೆ ಮಾಡಬೇಕಾದುದನ್ನು ಹೇಳುವರು-*

**ಗೃಹಾತ್ಪ್ರವ್ರಜಿತೋ ಧೀರಃ ಪುಣ್ಯತೀರ್ಥಜಲಾಪ್ಲುತಃ ।**
**ಶುಚೌ ವಿವಿಕ್ತ ಆಸೀನೋ ವಿಧಿವತ್ಕಲ್ಪಿತಾಸನೇ ॥ ೧೬॥**

**ಗೃಹಾತ್** ಮನೆಯಿಂದ, **ಪ್ರವ್ರಜಿತಃ** ಹೊರಬಂದು, ( ಮನೆಯಲ್ಲಿಯೇ ಇದ್ದರೆ ಮತ್ತೆ ಆಸಕ್ತಿ ಬರುವುದು) **ಧೀರಃ** ಇಂದ್ರಿಯಗಳನ್ನು ಜಯಿಸುವುದರಲ್ಲಿ ಸಮರ್ಥನಾದವನು, **ಪುಣ್ಯತೀರ್ಥಜಲಾಪ್ಲುತಃ** ಗಂಗಾದಿ ಪುಣ್ಯಪ್ರದವಾದ ನೀರಿನಲ್ಲಿ ಸ್ನಾನಮಾಡಿದವನಾಗಿ, **ಶುಚೌ** ಶುದ್ಧವಾದ, **ವಿವಿಕ್ತೇ** ದುರ್ಜನಸಂಗವಿಲ್ಲದ ಸ್ಥಳದಲ್ಲಿ **ವಿಧಿವತ್ ಕಲ್ಪಿತಾಸನೇ** ಹೆಚ್ಚು ಎತ್ತರವಲ್ಲದ ಹೆಚ್ಚು ಕೆಳಗಲ್ಲದಂತೆ ನಿರ್ಮಿಸಿದ ಆಸನದಲ್ಲಿ, **ಆಸೀನಃ** ಕುಳಿತವನಾಗಿ, (ಮುಂದೆ ಹೇಳಿದಂತೆ ಪ್ರಣವದ ಅಭ್ಯಾಸ ಮಾಡುತ್ತಾ ಮನಸ್ಸನ್ನು ನಿಗ್ರಹಿಸಬೇಕು.) ॥೧೬॥

*ಸ್ಥಿರಾಸನದ ಕೃತ್ಯ ಹೇಳುವರು-*

**ಅಭ್ಯಸೇನ್ಮನಸಾ ಶುದ್ಧಂ ತ್ರಿವೃದ್ ಬ್ರಹ್ಮಾಕ್ಷರಂ ಪರಮ್ ।**
**ಮನೋ ಯಚ್ಛೇಜ್ಜಿತಶ್ವಾಸೋ ಬ್ರಹ್ಮಬೀಜಮನುಸ್ಮರನ್ ॥ ೧೭ ॥**

**ತ್ರಿವೃತ್** ಅಕಾರ ಉಕಾರ ಮಕಾರವೆಂಬ ಮೂರುಗುಣಗಳನ್ನು ಸ್ವೀಕರಿಸುವುದರಿಂದ ತ್ರಿವೃತ್ ಎನಿಸಿದ, **ಪರಂ** ಸರ್ವಮಂತ್ರೋತ್ತಮವಾದ, **ಬ್ರಹ್ಮಾಕ್ಷರಂ** ಬ್ರಹ್ಮಪ್ರತಿಪಾದಕವಾದ ಪ್ರಣವವನ್ನು, **ಮನಸಾ** ಮನಸ್ಸಿನಿಂದ, **ಶುದ್ಧಂ ಅಭ್ಯಸೇತ್** ಶುದ್ಧವಾಗುವಂತೆ ಆವರ್ತನ ಮಾಡಬೇಕು. (ಅವಸರ ಮುಂತಾದ ದೋಷವಿಲ್ಲದೆ ಎಂದರ್ಥ.) ( ಗಟ್ಟಿಯಾಗಿ ಉಚ್ಚರಿಸಬಾರದು ಆದ್ದರಿಂದ 'ಮನಸಾ' ಎಂದಿದ್ದಾರೆ.) ಈ ರೀತಿ ಜಪವನ್ನು ಹೇಳಿ ಜಪಕಾಲದಲ್ಲಿ ಜಪದ ಮೊದಲು ಮಾಡಬೇಕಾದ ಕರ್ತವ್ಯವನ್ನು ಹೇಳುವರು. **ಬ್ರಹ್ಮಬೀಜಂ** ವೇದರೂಪವಾದ ಮಂತ್ರಕ್ಕೆ ಬೀಜಾಕ್ಷರವಾದ ಪ್ರಣವವನ್ನು, **ಅನುಸ್ಮರನ್** ಮನಸಾ ಆವರ್ತನ ಮಾಡುತ್ತ, **ಬೀಜಂ** ಜಗತ್ಕಾರಣನಾದ, ಪ್ರಣವಾರ್ಥನಾದ, **ಪರಂ** ಸರ್ವೋತ್ತಮನಾದ ಬ್ರಹ್ಮನನ್ನು, **ಅನುಸ್ಮರನ್** ಧ್ಯಾನಮಾಡುತ್ತಾ, **ಜಿತಶ್ವಾಸಃ** ಪ್ರಾಣಾಯಾಮದಿಂದ ಪ್ರಾಣದೇವರ ಪ್ರಸಾದ ಪಡೆದವನಾಗಿ, **ಮನಃ ಯಚ್ಛೇತ್** ಮನಸ್ಸನ್ನು ನಿಗ್ರಹಿಸಬೇಕು. ಮನೋಽಭಿಮಾನಿಗಳಾದ ರುದ್ರದೇವರ ಅನುಗ್ರಹ ಪಡೆಯಬೇಕು.

ಹೀಗೆ ಹೇಳುವುದರಿಂದ ಜಪಕ್ಕಿಂತ ಮೊದಲು ಪ್ರಾಣಾಯಾಮಕಾಲದಲ್ಲಿಯೂ ಮನಸ್ಸಿನಿಂದ ಪ್ರಣವದ ಆವರ್ತನ ಮತ್ತು ಅದರ ಅರ್ಥವಾದ ಪರಬ್ರಹ್ಮಸ್ಮರಣವು ಕರ್ತವ್ಯವೆಂದು ತಿಳಿಸಿದಂತಾಯಿತು. ಅನಂತರ ಜಪಕಾಲದಲ್ಲಿ ಮನಸ್ಸನ್ನು ತನ್ನ ವಶಮಾಡಿಕೊಳ್ಳಬೇಕು. ರುದ್ರದೇವರ ಅನುಗ್ರಹವನ್ನು ಸಂಪಾದಿಸಬೇಕೆಂದು ಭಾವ. ॥೧೭॥

*ಬಾಹ್ಯೇಂದ್ರಿಯಗಳು ವಿಷಯಗಳ ಕಡೆಗೆ ಹೋದರೆ ಮನಸ್ಸು ವಶವಾಗಲಾರದು ಕಾರಣ ಹೇಳುವರು-*

**ನಿಯಚ್ಛೇದ್ವಿಷಯೇಭ್ಯೋಽಕ್ಷಾನ್ಮನಸಾ ಬುದ್ಧಿಸಾರಥಿಃ ।**
**ಮನಃ ಕರ್ಮಭಿರಾಕ್ಷಿಪ್ತಂ ಶುಭಾರ್ಥೇ ಧಾರಯೇದ್ಧಿಯಾ ॥ ೧೮ ॥**

**ಬುದ್ಧಿಸಾರಥಿಃ** ಮೋಕ್ಷೇತರ ಪುರುಷಾರ್ಥಗಳು ಅನಿತ್ಯವೆಂಬ ನಿಶ್ಚಯವೇ ಸಾರಥಿಯಾಗಿ ಉಳ್ಳವನು, **ಮನಸಾ** ವಶೀಕೃತವಾದ ಮನಸ್ಸಿನಿಂದ **ಅಕ್ಷಾನ್** ಬಾಹ್ಯೇಂದ್ರಿಯಗಳನ್ನು **ವಿಷಯೇಭ್ಯಃ ನಿಯಚ್ಛೇತ್** ವಿಷಯಗಳಿಂದ ವಿಮುಖಗಳನ್ನಾಗಿ ಮಾಡಬೇಕು. ಇತರಇಂದ್ರಿಯದೇವತೆಗಳ ಅನುಗ್ರಹವನ್ನೂ ಸಂಪಾದಿಸಬೇಕೆಂದು ಅರ್ಥ.

ಧ್ಯೇಯವನ್ನು ಹೇಳುವರು. **ಕರ್ಮಭಿಃ** ಹಿಂದೆ ಮಾಡಿದ ಕರ್ಮಗಳಿಂದ, **ಆಕ್ಷಿಪ್ತಂ** ಅಶುಭವಿಷಯವ್ಯಾಪಾರಗಳಿಂದ ನಿರಸ್ತವಾದ ದುಃಖಿತವಾದ, **ಮನಃ** ಮನಸ್ಸನ್ನು, **ಧಿಯಾ** ಬುದ್ಧಿರೂಪಸಾರಥಿಯಿಂದ, **ಶುಭಾರ್ಥೇ** ಭಗವಂತನಲ್ಲಿ, **ಧಾರಯೇತ್** ಇರಿಸಬೇಕು. ಅಲ್ಲಿ ಮನಸ್ಸು ಪರಮಾನಂದವನ್ನು ಪಡೆಯುವುದು. ಇದನ್ನು ಉಪಪಾದಿಸಲೆಂದೇ ಭಗವಂತನನ್ನು ಶುಭಾರ್ಥ ಎಂದು ಹೇಳಿದ್ದಾರೆ. **ಕರ್ಮಭಿಃ ಆಕ್ಷಿಪ್ತಂ** ಎಂದು ಹಿಂದಿನ ಅವಸ್ಥೆ ಹೇಳಿದ್ದು ಇದಕ್ಕಾಗಿಯೇ. ಲೋಕದಲ್ಲಿ ದಾರಿದ್ರ್ಯದಿಂದ ದುಃಖಿತನಾದವನಿಗೆ ಮಹಾನಿಧಿಲಾಭವಾದರೇ ಪರಮಾನಂದವಾಗುವುದು ಕಂಡಿದೆ.

ಇಲ್ಲಿ ಶುಭಾರ್ಥವೆಂದರೆ ಶಬ್ದಾದಿಗಳಲ್ಲೇ ಒಂದು ವಿಷಯ ಎಂದು ತೋರುವುದು. ಆದ್ದರಿಂದ ಆದರ ಅರ್ಥವನ್ನು ಹೇಳುತ್ತಾರೆ-

**ತಾತ್ಪರ್ಯ- 'ಶುಭಾರ್ಥೇ ಭಗವತಿ'**

ಶುಭಾರ್ಥವೆಂದರೇ ಪರಮಾತ್ಮ ಎಂದು ಅರ್ಥ. ॥೧೮॥

*ಏಕಕಾಲದಲ್ಲಿ ಎಲ್ಲ ಅವಯವಗಳಿಂದ ಯುಕ್ತನಾದ ಭಗವಂತನ ಧ್ಯಾನ ಮಾಡಲಾಗದಿದ್ದರೇ ಧಾರಣಾವನ್ನು ಅಂದರೇ ಒಂದೊಂದೇ ಅವಯವದ ಧ್ಯಾನವನ್ನು ಮಾಡಬೇಕೆಂದು ಹೇಳುವರು-*

**ತತ್ರೈಕಾವಯವಂ ಧ್ಯಾಯೇದವ್ಯುಚ್ಛಿನ್ನೇನ ಚೇತಸಾ ।**
**ಮನೋ ನಿರ್ವಿಷಯಂ ಯುಂಕ್ತ್ವಾ ತತಃ ಕಿಂಚಿನ್ನ ಸಂಸ್ಮರೇತ್ ।**
**ಪದಂ ತತ್ಪರಮಂ ವಿಷ್ಣೋಃ ಮನೋ ಯತ್ರ ಪ್ರಸೀದತಿ ॥ ೧೯ ॥**

**ತತ್ರ** ಭಗವದ್ರೂಪದಲ್ಲಿ, **ಏಕೈಕಾವಯವಂ** ಒಂದೊಂದೇ ಅವಯವಗಳನ್ನು, **ಅವ್ಯುಚ್ಛಿನ್ನೇನ** ವಿಷಯವಾಸನಾದಿಂದ ಖಂಡಿತವಾಗದ, **ಚೇತಸಾ** ಮನಸ್ಸಿನಿಂದ, **ಧ್ಯಾಯೇತ್** ಅನಾಯಾಸವಾಗಿ ಸ್ಮರಣವಿಷಯುವನ್ನಾಗಿಸಬೇಕು. **ನಿರ್ವಿಷಯಂ** ವಿಷಯುಗಳಿಂದ ತಿರುಗಿ ಬಂದ, **ಮನಃ** ಮನಸ್ಸನ್ನು **ತತ್ರೈವ** ಸರ್ವಾವಯವಯುಕ್ತ

ಭಗವದ್ರೂಪದಲ್ಲೇ, **ಯುಂಜ್ಯಾತ್** ಯೋಜಿಸಿ, **ತತಃ** ಶುಭಾರ್ಥವಾದ ಭಗವಂತನಿಂದ ಭಿನ್ನವಾದ, **ಕಿಂಚಿತ್** ಬೇರೆ ಯಾವುದನ್ನು, **ನ ಸಂಸ್ಮರೇತ್** ಧ್ಯಾನಿಸಬಾರದು. ಅಲ್ಲಿ ಮನಸ್ಸಿಡುವುದೇ ಪರಮಾನಂದಕಾರಣವಾದದ್ದರಿಂದ ಧಾರಣಾ ಆದ ಮೇಲೆ ತನಗೆ ಯೋಗ್ಯವಾದ ಧ್ಯಾನವನ್ನು ಮಾಡಬೇಕು ಎಂದು ಹೇಳಿದಂತಾಯಿತು. **ಯತ್ರ** ಯಾವ ಶುಭಾರ್ಥದಲ್ಲಿ, **ಮನಃ ಪ್ರಸೀದತಿ** ಮನಸ್ಸು ಪರಮಸುಖವನ್ನು ಹೊಂದುವದೋ, **ತತ್** ಅದು, **ವಿಷ್ಣೋಃ ಪರಮಂ ಪದಂ** ಉತ್ತಮವಾದ ಶ್ರೀಹರಿಯ ಸ್ವರೂಪವು.

ಅಂತೂ ಮೂಲದ ಶುಭಾರ್ಥ ಪದದಿಂದ ವಿಷ್ಣುವೇ ವಿವಕ್ಷಿತ ಎಂದು ಮೂಲಕಾರರೇ ತಮ್ಮ ಪದವನ್ನು ಇಲ್ಲಿ ವಿವರಿಸುವರು. ತಾತ್ಪರ್ಯಕಾರರು ಶಿಷ್ಯರ ಹಿತಕ್ಕಾಗಿ ಮುಂದೆ ಹೇಳುವ ವಾಖ್ಯಾನವನ್ನೇ ಮೊದಲಿಗೆ ಮಾಡಿರುವರು ಎಂದು ತಿಳಿಯಬೇಕು ।।೧೯।।

*ಇಲ್ಲಿಯವರೆಗೆ ಧ್ಯಾನಪರ್ಯಂತ ಮಾಡಬೇಕಾದುದನ್ನು ಹೇಳಿದರು. ಈಗ 'ಮನೋ ಯಚ್ಛೇತ್' ಎಂದು ಹೇಳಿದ ಮನೋಜಯವು ಅಶಕ್ಯ. ಮನಸ್ಸು ರಜೋಗುಣ ತಮೋಗುಣಗಳಿಂದ ದೂಷಿತವಾಗಿದೆ ಎಂಬ ಶಂಕೆ ಬಂದರೆ ಮನೋಜಯಕ್ಕೆ ಉಪಾಯವನ್ನು ತಿಳಿಸುವರು-*

**ರಜಸ್ತಮೋಭ್ಯಾಮಾಕ್ಷಿಪ್ತಂ ವಿಮೂಢಂ ಮನ ಆತ್ಮನಃ ।**
**ಯಚ್ಛೇದ್ಧಾರಣಯಾ ಧೀರೋ ಹಂತಿ ಯಾ ತತ್ಕೃತಂ ಮಲಮ್ ॥ ೨೦ ॥**

**ರಜಸ್ತಮೋಭ್ಯಾಂ ಆಕ್ಷಿಪ್ತಂ ವಿಮೂಢಂ** ರಜೋಗುಣದಿಂದ ಆಕ್ಷಿಪ್ತ ಎಂದರೆ ಬಹಿರ್ಮುಖವಾದ (ವಿಷಯಾಕೃಷ್ಟವಾದ) ತಮೋಗುಣದಿಂದ ವಿಮೂಢಂ ಎಂದರೆ ತಮೋಗುಣದ ಕಾರ್ಯವಾದ ಅಜ್ಞಾನದಿಂದ ಕರ್ತವ್ಯ-ಅಕರ್ತವ್ಯಗಳ ವಿಷಯದಲ್ಲಿ ಭ್ರಾಂತಿಯುಳ್ಳ **ಆತ್ಮನಃ** ತನ್ನ **ಮನಃ** ಮನಸ್ಸನ್ನು **ಯಾ** ಯಾವ ಧಾರಣೆಯು, **ತತ್ಕೃತಂ** ರಜಸ್ತಮೋಗುಣಗಳಿಂದ ಉಂಟಾದ, **ಮಲಂ** ರಾಗ-ಅಜ್ಞಾನಗಳನ್ನು, **ಹಂತಿ** ನಾಶ ಮಾಡುವುದೋ, **ತಯಾ ಧಾರಣಯಾ** ಆ ಧಾರಣೆಯಿಂದ, ಒಂದೊಂದು ಅವಯವ ಯುಕ್ತ ಭಗವಂತನ ನಿರಂತರ ಸ್ಮರಣದಿಂದ, **ಯಚ್ಛೇತ್** ವಿಷಯಗಳಿಂದ ಮನಸ್ಸನ್ನು ಹಿಂದಿರುಗಿಸಿ ಧ್ಯೇಯಮಗ್ನವಾಗಿಸಬೇಕು. ಧಾರಣೆಯಿಂದ ಮನೋದೋಷಗಳಾದ ರಾಗಾದಿಗಳ ನಾಶವಾದಾಗ ಮನೋಜಯ ಸುಲಭವೆಂದು ಭಾವ. ।।೨೦।।

*ಧಾರಣೆಯಿಂದ ಕೇವಲ ರಾಗಾದಿಮಲನಾಶವಷ್ಟೇ ಅಲ್ಲ, ಮನೋಜಯೋಪಯುಕ್ತ ಭಕ್ತಿಯೂ ಉಂಟಾಗುವುದು ಎಂದು ಹೇಳುವರು-*

**ಯಸ್ಯಾಂ ಸಂಧಾರ್ಯಮಾಣಾಯಾಂ ಯೋಗಿನೋ ಭಕ್ತಿಲಕ್ಷಣಃ ।**
**ಆಶು ಸಂಪದ್ಯತೇ ಯೋಗ ಆಶ್ರಯಂ ಭದ್ರಮೀಕ್ಷತಃ ॥ ೨೧ ॥**

**ಯಸ್ಯಾಂ** ಯಾವ ಧಾರಣೆಯನ್ನು, **ಸಂಧಾರ್ಯಮಾಣಾಯಾಂ** ಚೆನ್ನಾಗಿ ಮಾಡಿದಾಗ, **ಆಶ್ರಯಂ** ಸರ್ವಜಗದಾಧಾರನಾದ, **ಭದ್ರಂ** ಶ್ರೀಹರಿಯನ್ನು, **ಈಕ್ಷತಃ** ಚಿಂತಿಸುವ, **ಯೋಗಿನಃ** ಮನೋಜಯ ಉಪಾಯವನ್ನು ಅನುಷ್ಠಾನಮಾಡುವವನಿಗೆ, **ಭಕ್ತಿಲಕ್ಷಣಃ ಯೋಗಃ** ಭಕ್ತಿ ಎಂಬ ಮನೋಜಯದ ಉಪಾಯವು, **ಆಶು ಸಂಪದ್ಯತೇ** ಶೀಘ್ರದಲ್ಲಿ ಉಂಟಾಗುವುದು. ಧಾರಣಾದಿಂದ ಮನಸ್ಸಿನ ಮಲವು ನಾಶವಾದಾಗ ಮನಸ್ಸು ಹರಿಮಾಹಾತ್ಮ್ಯ ಶ್ರವಣಾದಿಗಳಿಂದ ಅಲ್ಲಿಯೇ ಸ್ನಿಗ್ಧವಾಗುತ್ತದೆ. ಅದ್ದರಿಂದ ಭಗವಂತನಲ್ಲೇ ಮನಸ್ಸಿಡುವುದೆಂಬ ಮನೋಜಯ ಸುಲಭವೆಂದು ಭಾವ.

ಇಲ್ಲಿ 'ಭದ್ರ' ಎಂಬ ಶಬ್ದವನ್ನು ಅನುವಾದ ಮಾಡಿ ಅದಕ್ಕೆ ಪ್ರಕೃತ ಉಪಯುಕ್ತವಾದ ಅರ್ಥವನ್ನು ತಿಳಿಸುವರು-

**ತಾತ್ಪರ್ಯ- 'ಭದ್ರಂ ಹರಿಂ'**

ಭದ್ರಂ ಎಂದರೆ ಹರಿಯನ್ನು ಎಂದರ್ಥ.

'ಭದಿ ಕಲ್ಯಾಣೇ' ಎಂದು ಧಾತು ಇದೆ. ಕಲ್ಯಾಣ ಎಂದರೆ ಮಂಗಲ 'ಮಂಗಲಂ ಭಗವಾನ್ವಿಷ್ಣುಃ' ಎಂದು ವಚನವಿದೆ. ॥೨೧॥

*ಹೇಳಿದ ಧಾರಣಾದಲ್ಲಿ ವಿಷಯಾದಿಗಳನ್ನು ತಿಳಿಯುವ ಇಚ್ಛೆಯಿಂದ ರಾಜನು ಪ್ರಶ್ನಿಸುವನು-*

**ರಾಜೋವಾಚ-**

**ಯಥಾ ಸಂಧಾರ್ಯತೇ ಬ್ರಹ್ಮನ್ ಧಾರಣಾ ಯತ್ರ ಸಂಮತಾ ।**
**ಯಾದೃಶೀ ವಾ ಹರೇದಾಶು ಪುರುಷಸ್ಯ ಮನೋ ಮಲಮ್ ॥ ೨೨ ॥**

**ಬ್ರಹ್ಮನ್** ಶುಕಾಚಾರ್ಯರೇ, **ಧಾರಣಾ** ಹಿಂದೆ ಮನೋಜಯಕಾರಣವೆಂದು ಹೇಳಿದ ಧಾರಣೆಯು, **ಯಥಾ** ಕಥಂ ಯಾವ ಅಂಗಕಲಾಪಗಳಿಂದ ಕೂಡಿದ್ದು ಎಂಬುದು

ಇತಿ ಕರ್ತವ್ಯತಾ ( ಸಹಕಾರಿಕಾರಣ) ಪ್ರಶ್ನವು. **ಯತ್ರ** ಕುತ್ರ ವಿಷಯ ಯಾವುದು (ಮನೋಜಯಾನಂತರ ಮಾಡುವ ಸ್ವಯೋಗ್ಯಧಾರಣಾ ವಿಷಯವಾದ ಭಗವದ್ರೂಪದ್ದೇ ಅಥವಾ ಬೇರೆ ವಿಷಯದಲ್ಲಿಯೋ ? ಸ್ವಯೋಗ್ಯಧಾರಣೆಯು ಮನೋಜಯಸಾಧ್ಯ ಎಂದು ಹಿಂದೆ ಹೇಳಿದ್ದರಿಂದ ಮನೋಜಯಸಾಧನವಾಗಲಾರದು. ಬೇರೇ ವಿಷಯದಲ್ಲಿ ಎಂದರೆ ಆ ಧಾರಣಾಕ್ಕೆ ವಿಷಯವಾದ ಭಗವದ್ರೂಪ ಯಾವುದು ಎಂದು ಪ್ರಶ್ನೆಯ ಭಾವ. **ಯಾದೃಶೀ** ಕೀದೃಶೀ ಯಾವ ವಿಶೇಷಣಗಳಿಂದ ಕೂಡಿದ ಧಾರಣೆಯು, **ಆಶು** ಬೇಗನೇ, **ಮನೋಮಲಂ ಹರೇತ್** ಮನಸ್ಸಿನ ಮಲವನ್ನು ಕಳೆಯುವುದು. ।।೨೨।।

ಈ ಶ್ಲೋಕದಲ್ಲಿ ಯಥಾ ಯತ್ರ ಯಾದೃಶೀ, ಎಂಬ ಪದಗಳಲ್ಲಿರುವ (ಪ್ರಕೃತಿಯಾದ) ಯಚ್ಛಬ್ದವು ಪರಾಮರ್ಶಾರ್ಥಕವಾದರೆ ಪ್ರಕೃತ ಅಸಂಗತವಾಗುತ್ತದೆ. ತಚ್ಛಬ್ದ ಇಲ್ಲದೇ ಇದ್ದುದರಿಂದ ಅನನ್ವಿತವೂ ಆಗುವದು. ಆದ್ದರಿಂದ ಪ್ರಕೃತೋಪಯುಕ್ತವಾದ ಅರ್ಥವನ್ನು ತಿಳಿಸುವರು-

**ತಾತ್ಪರ್ಯ- 'ಯಚ್ಛಬ್ದಃ ಪ್ರಶ್ನಾರ್ಥೇ । 'ಯತಶ್ಚೋದೇತಿ ಸೂರ್ಯಃ' ಇತ್ಯಾದಿವತ್ । 'ಯಚ್ಛಬ್ದಸ್ತು ಪರಾಮರ್ಶೇ ಪ್ರಶ್ನಾರ್ಥೇ ಚಾऽಭಿಧಣ್ಯತೇ' ಇತ್ಯಭಿಧಾನೇ । ಯಥೇತ್ಯಸ್ಯ ಜಿತಾಸನ ಇತ್ಯಾದಿ । ಯತ್ರ ಸ್ಥೂಲೇ । ಯಾದೃಶೀತ್ಯಸ್ಯ ವಿಶೇಷ ಇತ್ಯಾದಿ ।।೨೨।।**

'ಯಥಾ ಯತ್ರ ಯಾದೃಶೀ' ಎಂಬ ಮೂರು ಪದಗಳಲ್ಲಿದ್ದ ಯಚ್ಛಬ್ದವು ಪ್ರಶ್ನಾರ್ಥಕವಾಗಿದೆ. ಯಚ್ಛಬ್ದ ಪ್ರಶ್ನಾರ್ಥಕವೆನ್ನಲು 'ಯತಶ್ಚ...' ಎಂಬ ಶ್ರುತಿಯಲ್ಲಿಯ ಪ್ರಯೋಗವನ್ನು ತೋರಿಸುತ್ತಾರೆ.

ಸೂರ್ಯನು ಎಲ್ಲಿ ಉದಯಿಸುತ್ತಾನೆ ? ಎಲ್ಲಿ ಅಸ್ತಂಗತನಾಗುತ್ತಾನೆ ? ಎಂದು ಈ ಶ್ರುತಿಯಲ್ಲಿಯ ಯತ್ ಶಬ್ದವು ಪ್ರಶ್ನಾರ್ಥಕವಾಗಿದೆ.

ಇಲ್ಲಿ ಯಚ್ಛಬ್ದವು ಪ್ರಶ್ನಾರ್ಥಕವಾಗಿದೆ ಎಂಬ ವಿಷಯದಲ್ಲಿ ಕೋಶವನ್ನು ಹೇಳುತ್ತಾರೆ. ಯಚ್ಛಬ್ದವು ಪರಾಮರ್ಶ ಎಂಬ ಅರ್ಥದಲ್ಲಿಯೂ ಪ್ರಶ್ನೆ ಎಂಬ ಅರ್ಥದಲ್ಲಿಯೂ ಇದೆ ಎಂದು ಅಭಿಧಾನವು.

ಮುಂದಿನ ಎರಡು ಶ್ಲೋಕಗಳಲ್ಲಿ ಯಾವ ಪ್ರಶ್ನೆಗೆ ಯಾವುದು ಉತ್ತರವೆಂದು ತಿಳಿಯುವುದಿಲ್ಲ ಕಾರಣ ಆದನ್ನು ತಿಳಿಸುವರು. ಯಥಾ ಎಂಬುದಕ್ಕೆ ' ಜಿತಾಸನೋ ಜಿತಶ್ವಾಸೋ ಜಿತಸಂಗೋ ಜಿತೇಂದ್ರಿಯಃ) ಎಂಬುದು ಉತ್ತರವಾಗಿದೆ. (ಅಂದರೆ

ಧಾರಣಾಕ್ಕೆ ಸಾಧನವು ಯಾವುದು ಎಂದರೆ ಆಸನವನ್ನು ತನ್ನ ಅಧೀನವಾಗಿಸಿಕೊಂಡು ವಿರಕ್ತನಾಗಿ ಜಿತೇಂದ್ರಿಯನಾಗಿ ಧಾರಣೆ ಮಾಡಬೇಕೆಂದು ಉತ್ತರ) ಯತ್ರ ಧಾರಣಾ ವಿಷಯ (ಆಶ್ರಯ) ಭಗವದ್ರೂಪ ಯಾವುದು ಎಂದರೆ 'ಸ್ಥೂಲೇ ಭಗವತೋ ರೂಪೇ ಮನಃ ಸಂಧಾರಯೇತ್ ಧಿಯಾ' ವಿರಾಟ್‌ನಾಮಕ ಬ್ರಹ್ಮದೇಹಾಂತರ್ಗತ ರೂಪವನ್ನು ಧ್ಯಾನಿಸಬೇಕು. ಎಂದು ಉತ್ತರ. ಯಾದೃಶೀ ಎಂಬುದಕ್ಕೆ ವಿಶೇಷಸ್ತಸ್ಯ ದೇಹೋಽಯಂ ಬ್ರಹ್ಮಾಂಡಕೋಶದೊಳಗಿನ ಚತುರ್ಮುಖ ಶರೀರ ಸ್ಥಾನವಾದ ೧೪ ಭುವನವು ಮುಂತಾದುದು ಉತ್ತರವೆಂದು ಭಾವ ॥೨೨-೨೩॥

ಶ್ರೀ ಶುಕ ಉವಾಚ

**ಜಿತಾಸನೋ ಜಿತಶ್ವಾಸೋ ಜಿತಸಂಗೋ ಜಿತೇಂದ್ರಿಯಃ ।**
**ಸ್ಥೂಲೇ ಭಗವತೋ ರೂಪೇ ಮನಃ ಸಂಧಾರಯೇದ್ಧಿಯಾ** ॥ ೨೩ ॥

**ಜಿತಾನಸಃ** ಆಸನಜಯ ಉಳ್ಳವನಾಗಿ, **ಜಿತಶ್ವಾಸಃ** ಪ್ರಾಣಜಯ ಉಳ್ಳವನಾಗಿ, **ಜಿತಸಂಗಃ** ವಿಷಯಸ್ನೇಹವನ್ನು ಗೆದ್ದವನಾಗಿ, ಅರ್ಥಾತ್ ವಿರಕ್ತನಾಗಿ, **ಜಿತೇಂದ್ರಿಯಃ** ಇಂದ್ರಿಯಜಯ ಉಳ್ಳವನಾಗಿ, **ಸ್ಥೂಲೇ** ವಿರಾಟ್ ನಾಮಕನಾದ ಬ್ರಹ್ಮದೇವರ ದೇಹಾಂತರ್ಗತವಾದ, **ಭಗವತಃ ರೂಪೇ** ಭಗವಂತನ ರೂಪದಲ್ಲಿ, **ಧಿಯಾ ಮನಃ ಸಂಧಾರಯೇತ್** ವಿವೇಕದಿಂದ ಮನಸ್ಸನ್ನು ಇಡಬೇಕು. ಸ್ಥೂಲರೂಪವನ್ನು ಧ್ಯಾನಿಸಬೇಕು ಎಂದರ್ಥ.॥೨೩॥

*ಕ್ರಮಪ್ರಾಪ್ತವಾದ ಯಾದೃಶೀ ಎಂಬ ಪ್ರಶ್ನೆಗೆ ಉತ್ತರಿಸುವರು-*

**ವಿಶೇಷಸ್ತಸ್ಯ ದೇಹೋಽಯಂ ಸ್ಥವಿಷ್ಠಸ್ಯ ಸ್ಥವೀಯಸಾಮ್ ।**
**ಯತ್ರೇದಂ ದೃಶ್ಯತೇ ವಿಶ್ವಂ ಭೂತಂ ಭವ್ಯಂ ಭವಚ್ಚ ಯತ್** ॥ ೨೪ ॥

**ಭೂತಂ** ಹಿಂದೆ ಆಗಿಹೋದ, **ಭವ್ಯಂ** ಈಗಿರುವ, **ಭವತ್** ಮುಂದೆ ಆಗುವ, **ವಿಶ್ವಂ** ಪ್ರಪಂಚವು, **ಯತ್ರ** ಯಾವ ಬ್ರಹ್ಮಾಂಡದಲ್ಲಿ, **ದೃಶ್ಯತೇ** ಪ್ರಮಾಣಗಳಿಂದ ಇದೆ ಎಂದು ತಿಳಿಯಲ್ಪಡುವುದೋ, **ಸಃ ಅಯಂ** ಇದು, **ಸ್ಥವೀಯಸಾಂ** ಅತ್ಯಂತ ಸ್ಥೂಲವಾದವುಗಳಿಗಿಂತ, **ಸ್ಥವಿಷ್ಠಸ್ಯ** ಸ್ಥೂಲತಮವಾದ, **ಯಃ ವಿಶೇಷಃ** ಅಂಡಕೋಶವಿದೆಯೋ, **ತಸ್ಯ** ಅದರೊಳಗಿನ ಶ್ರೀಹರಿಯ, **ದೇಹಃ** ದೇಹ ಸದೃಶವಾದುದು.

ಇಲ್ಲಿ ವಿಶೇಷ ಎಂದರೆ ಪಂಚಭೂತಗಳಲ್ಲೊಂದಾದ ಪೃಥಿವೀ ಎಂದು ತೋರುವುದು ಅದು ಸರಿಯಲ್ಲ. ಅದಕ್ಕೆ ಮುಂದೆ ಹೇಳುವ ಸಪ್ತಾವರಣಸಂಯುಕ್ತತ್ವ ಕೂಡುವುದಿಲ್ಲ. ಪಾತಾಲಾದ್ಯಾತ್ಮಕ ಪಾದಮೂಲತ್ವಾದಿಗಳೂ ಕೂಡುವುದಿಲ್ಲ ಆದ್ದರಿಂದ ವಿವಕ್ಷಿತವಾದ ಅರ್ಥವನ್ನು ತಿಳಿಸುವರು-

**ತಾತ್ಪರ್ಯ- ''ವಿಶೇಷಃ ಅಂಡಕೋಶಃ ।**

**ಶಿಲಾವತ್ತಸ್ಯ ದೇಹೋಽಯಮಂಡಕೋಶಸ್ತು ಸಾವೃತಿಃ ।**
**ತತ್ತಂತ್ರತ್ವಾನ್ನ ತತ್ಸಂಸ್ಥ ದುಃಖಭೋಗೋಽಸ್ಯ ನ ಕ್ವಚಿತ್ ॥ -ಇತಿ ಬ್ರಹ್ಮವೈವರ್ತೇ**

ವಿಶೇಷವೆಂದರೆ ಬ್ರಹ್ಮಾಂಡಕೋಶವು. ಪೃಥಿವ್ಯಾದಿಆವರಣಗಳಿಂದ ಕೂಡಿದ ಬ್ರಹ್ಮಾಂಡಕೋಶವು ಅದರೊಳಗಿನ ಪರಮಾತ್ಮನಿಗೆ ಶಿಲಾಮಯಪ್ರತಿಮೆಯಂತೆ ದೇಹ ಸದೃಶವಾದುದು. ಬ್ರಹ್ಮಾಂಡಕೋಶವು ಶ್ರೀಹರಿಯ ಅಧೀನವಾಗಿರುವುದರಿಂದ ಹೊರತು ಶ್ರೀಹರಿಗೆ ಬ್ರಹ್ಮಾಂಡದಲ್ಲಿ ಇದ್ದ ಪ್ರಯುಕ್ತ ದುಃಖಭೋಗವು ಎಲ್ಲಿಯೂ ಇಲ್ಲವೇ ಇಲ್ಲ ಎಂದು ಬ್ರಹ್ಮವೈವರ್ತದಲ್ಲಿದೆ.

ಇಲ್ಲಿ ಎಲ್ಲಕಡೆಗೂ ಅಂಡಕೋಶಶಬ್ದದಿಂದ ಅಂಡಕೋಶದಲ್ಲಿರುವ ಹದಿನಾಲ್ಕು ಲೋಕಾತ್ಮಕ ಬ್ರಹ್ಮದೇಹವನ್ನು ಸ್ವೀಕರಿಸಬೇಕು.

ದೇಹಶಬ್ದ ಮುಖ್ಯಾರ್ಥ ಶರೀರದಲ್ಲಿದ್ದಂತೆ, ಅಧಿಷ್ಠಾತೃ ನಿಯಂತೃತ್ವವಿದ್ದಂತೆ, ಪ್ರಪಂಚದಲ್ಲಿ ಶ್ರೀಹರಿಯ ನಿಯತೃಂತ್ವವಿದ್ದುದರಿಂದ ಸಾದೃಶ್ಯದಿಂದ ಗೌಣವಾಗಿ ಪ್ರಯೋಗಿಸಿರುವರು ಎಂದು ಭಾವ ।।೨೪।।

*ಯಾದೃಶೀ ಎಂಬ ಪ್ರಶ್ನೆಗೆ ವಿಶೇಷಃ ಎಂಬುದು ಉತ್ತರ ಹೇಗೆ ? ಭಗವಂತನ ವಿಶೇಷಗಳನ್ನು ಹೇಳಿಲ್ಲವಲ್ಲ ಎಂದರೇ ಬ್ರಹ್ಮಾಂಡಸ್ಥತ್ವರೂಪವಿಶೇಷಣವಿಶಿಷ್ಟತಯಾ ಭಗವಂತನ ಧಾರಣಾ ಇಲ್ಲಿ ಅಭಿಪ್ರೇತವಾಗಿದೆ ಎಂದು ಹೇಳುವರು-*

**ಅಂಡಕೋಶೇ ಶರೀರೇಽಸ್ಮಿನ್ ಸಪ್ತಾವರಣಸಂಯುತೇ ।**
**ವೈರಾಜಃ ಪುರುಷೋ ಯೋಽಸೌ ಭಗವಾನ್ ಧಾರಣಾಶ್ರಯಃ ॥ ೨೫ ॥**

**ಸಪ್ತಾವರಣಸಂಯುತೇ** ಪಂಚಮಹಾಭೂತಗಳು, ಅಹಂಕಾರ, ಮಹತ್ತತ್ವಗಳೆಂಬ ಏಳು ಆವರಣಗಳಿಂದ ಕೂಡಿದ (ಕವಚದಂತಿರುವ) ಹೊರಗೆ ಆವರಿಸಲ್ಪಟ್ಟ **ಅಸ್ಮಿನ್** ಹಿಂದೆ ಹೇಳಿದ, **ಶರೀರೇ** ಅಧೀನವಾದುದರಿಂದ ಶರೀರ ಸದೃಶವಾದ, **ಅಂಡಕೋಶೇ**

ಚತುರ್ದಶ ಭುವನಾತ್ಮಕವಾದ ಬ್ರಹ್ಮದೇವರ ದೇಹದಲ್ಲಿ, **ಯಃ ಪುರುಷಃ** ಪೂರ್ಣವಾದ ಷಡ್ಗುಣಗಳುಳ್ಳವನು ಇದ್ದಾನೋ ಆದ್ದರಿಂದ, **ವೈರಾಜಃ** ವಿರಾಟ್ ಎಂಬ ಅಂಡದಲ್ಲಿರುವುದರಿಂದ ಅಥವಾ ಎಲ್ಲರಿಗಿಂತ ಶ್ರೇಷ್ಠನಾದುದರಿಂದ ವೈರಾಜನೆನಿಸಿದ ಭಗವಾನ್ ಶ್ರೀಹರಿಯು, **ಧಾರಣಾಶ್ರಯಃ** ಧಾರಣಾವಿಷಯನು. ಆದ್ದರಿಂದ ಬ್ರಹ್ಮಾಂಡಂತಸ್ಥತ್ವವಿಶೇಷಣವಿಶಿಷ್ಟತಯಾ ಕೃತವಾದ ಧಾರಣೆಯು ಅಧಿಕಾರಿಯ ಮನೋಮಲವನ್ನು ನಾಶಮಾಡುವುದು ಎಂದು ಉತ್ತರಾಭಿಪ್ರಾಯವು.

ಈ ಶ್ಲೋಕದಲ್ಲಿ 'ವೈರಾಜಃ ಪುರುಷಃ' ಎಂದರೇ ವಿರಿಂಚ ಎಂದು ತೋರುವುದು. ಅದು ಸರಿಯಲ್ಲ. ಪೂರ್ವೋತ್ತರವಿರೋಧ ಬರುವದು. ಆದ್ದರಿಂದ ಅಭಿಪ್ರೇತಾರ್ಥವನ್ನು ಪ್ರಮಾಣದಿಂದ ತಿಳಿಸುವರು.

**ತಾತ್ಪರ್ಯ- ಅಂಡಕೋಶೋ ವಿರಾಟ್ ಪ್ರೋಕ್ತೋ ವಿಶೇಷೇಣ ಪ್ರಕಾಶನಾತ್ ।**
**ವೈರಾಜಸ್ತದ್ಗತೋ ವಿಷ್ಣುರಥವಾ ಸರ್ವತೋ ವರಃ ॥ -ಇತಿ ಭಾಗವತತಂತ್ರೇ**

ವಿಶೇಷವಾಗಿ ಪ್ರಕಾಶಿಸುವುದರಿಂದ ಬ್ರಹ್ಮಾಂಡಕೋಶವು ವಿರಾಟ್ ಎನಿಸುತ್ತದೆ. ಅದರಲ್ಲಿ ನಿಯಾಮಕನಾಗಿದ್ದ ವಿಷ್ಣುವು ವೈರಾಜನೆನಿಸುತ್ತಾನೆ. ಅಥವಾ ಎಲ್ಲರಿಗಿಂತಲೂ ವಿಶೇಷವಾಗಿ ಶ್ರೇಷ್ಠನಾದುದರಿಂದ ಶ್ರೀಹರಿಯು ವೈರಾಜನೆನಿಸುವನು. ಎಂದು ಭಾಗವತತಂತ್ರದಲ್ಲಿದೆ. ॥೨೫॥

*ವೈರಾಜಪುರುಷನು ಧಾರಣಾಶ್ರಯನು ಎಂದು ಹೇಳಿದೆಯಷ್ಟೇ ? ಆ ರೂಪದಲ್ಲಿ ಒಂದೊಂದೇ ಅವಯವಯುಕ್ತ ಸ್ಮೃತಿ ರೂಪ ಧಾರಣಾವನ್ನು ತಿಳಿಸುವರು-*

**ಪಾತಾಲಮೇತಸ್ಯ ಹಿ ಪಾದಮೂಲಂ ಪಠಂತಿ ಪಾರ್ಷ್ಣಿ ಪ್ರಪದೇ ರಸಾತಲಮ್ ।**
**ಮಹಾತಲಂ ವಿಶ್ವಸೃಜಸ್ತು ಗುಲ್ಫೌ ತಲಾತಲಂ ವೈ ಪುರುಷಸ್ಯ ಜಂಘೇ ॥೨೬॥**

**ಏತಸ್ಯ** ಅಂಡಾಂತರ್ಗತ ಶ್ರೀಹರಿಯ, **ಪಾದಮೂಲಂ** ಪಾದದ ಕೆಳಭಾಗವೆಂದು **ಪಾತಾಲಂ** ಪಾತಾಲಲೋಕವನ್ನು, **ಪಠಂತಿ** ಉಪದೇಶಮಾಡುವರು. ತಾವು ಅದೇ ರೀತಿ ಉಪಾಸನೆ ಮಾಡುವರು. **ಪಾರ್ಷ್ಣಿ ಪ್ರಪದೇ** ಪಾದದ ಮೇಲುಭಾಗ ಮತ್ತು ಅಗ್ರಭಾಗಗಳನ್ನು **ರಸಾತಲಂ ಪಠಂತಿ** ರಸಾತಲವೆಂದು ಹೇಳುವರು. ಉಪಾಸಿಸುವರು. **ಮಹಾತಲಂ** ಮಹಾತಲವನ್ನು, **ವಿಶ್ವಸೃಜಃ** ಪ್ರಪಂಚವನ್ನು ಸೃಷ್ಟಿಸುವ ಶ್ರೀಹರಿಯ, **ಸುಗುಲ್ಫೌ** ಸುಂದರವಾದ ಪರ್ವಗಳೆಂದು, **ಪಠಂತಿ** ಹೇಳುವರು. (ಪಾದದ ಗಂಟು) **ತಲಾತಲಂ** ತಲಾತಲವು, **ಪುರುಷಸ್ಯ** ಪರಮಾತ್ಮನ, **ಜಂಘೇ ಪಠಂತಿ** ಮೊಣಕಾಲುಗಳೆಂದು ಹೇಳುವರು.

ಈ ಶ್ಲೋಕದಲ್ಲಿ ಪಾತಾಲಂ ಪಾದಮೂಲಂ ಮುಂತಾಗಿ ಹೇಳುವುದರಿಂದ ಪಾತಾಲಾದಿ ಲೋಕಗಳು ಭಗವಂತನ ಅವಯವಗಳಿಂದ ಅಭಿನ್ನವಾಗಿವೆ ಎಂದು ತೋರುವುದು. ಅದು ಸರಿಯಲ್ಲ. ಲೋಕಗಳು ಜಡವಾದುದರಿಂದ ಜ್ಞಾನಾನಂದಾತ್ಮಕವಾದ ಅವಯವಗಳಿಂದ ಅಭೇದ ಅಸಂಭಾವಿತವಾದದ್ದರಿಂದ ಇಲ್ಲಿ ಅಭಿಪ್ರೇತವಾದ ವಿವಕ್ಷಾಭೇದವನ್ನು ತಿಳಿಸುವರು-

**ತಾತ್ಪರ್ಯ- ಪ್ರತಿಮಾಪೇಕ್ಷಯಾಽಂಗಾನಿ ಸ್ವರೂಪಾಪೇಕ್ಷಯಾ ತಜ್ಜಾನಿ ತದಾಶ್ರಿತಾನಿ ಚ ॥**

ಬ್ರಹ್ಮಾಂಡಾಂತರ್ಗತವಾದ ಚತುರ್ದಶಭುವನಾತ್ಮಕವಾದ ಬ್ರಹ್ಮದೇವರ ದೇಹವು ಶಿಲಾ ಪ್ರತಿಮೆಯಂತೆ ಪ್ರತಿಮೆ ಎಂದು ಹೇಳಿದೆ. ಅಲ್ಲಿರುವ ಭಗವಂತನ ಧಾರಣಾ ಇಲ್ಲಿ ಹೇಳಲ್ಪಡುವುದು. ಪ್ರತಿಮಾ ಎಂಬ ವಿವಕ್ಷಾದಿಂದ ಪಾತಾಲಾದಿಗಳು ಪಾದಮೂಲ ಮೊದಲಾದ ಅಂಗಗಳಿಂದ ಅಭಿನ್ನವಾಗಿವೆ. ಬ್ರಹ್ಮಾಂಡದೊಳಗಿನ ಭಗವಂತನ ಸ್ವರೂಪಭೂತವಾದ ಪಾದಾದಿ ಅವಯವಗಳಿಂದ ಪಾತಾಲಾದಿಲೋಕಗಳು ಜನಿಸಿವೆ. ಮತ್ತು ಆಯಾ ಅವಯವಗಳನ್ನು ಆಶ್ರಯಿಸಿಕೊಂಡಿವೆ. ಈ ಎರಡು ಕಾರಣಗಳಿಂದಾಗಿ ಪಾತಾಲಂ ಪಾದಮೂಲಂ ಇತ್ಯಾದಿಯಾಗಿ ಸಾಮಾನಾಧಿಕರಣ್ಯವು ಉಪಪನ್ನವಾಗುತ್ತದೆ. ಭಗವಂತನ ಪಾದಾದಿಗಳಿಗೆ ಪಾತಾಲಾದಿಗಳು ಅಧೀನವಾಗಿ ಇದ್ದುದರಿಂದ ಅಭೇದವ್ಯವಹಾರವನ್ನು ಮಾಡಿದ್ದಾರೆ. ಈ ವ್ಯವಹಾರವು ಲೋಕಪ್ರಸಿದ್ಧವಾಗಿದೆ. ॥೨೬॥

**ದ್ವೇ ಜಾನುನೀ ಸುತಲಂ ವಿಶ್ವಮೂರ್ತೇರೂರುದ್ವಯಂ ವಿತಲಂ ಚಾಽತಲಂ ಚ ।**
**ಮಹೀತಲಂ ತಜ್ಜಘನಂ ಮಹೀಪತೇ ನಭಸ್ತಲಂ ನಾಭಿಸರೋ ಗೃಣಂತಿ ॥ ೨೭ ॥**

**ಹೇ ಮಹೀಪತೇ** ರಾಜನೇ, **ವಿಶ್ವಮೂರ್ತೇಃ** ಪ್ರಪಂಚವು ಯಾವನ ದೇಹದಲ್ಲಿದೆಯೋ ಅವನ ಅಥವಾ ಪ್ರಪಂಚಾತ್ಮಕವಾದ ಬ್ರಹ್ಮದೇವರ ಶರೀರವೇ ಪ್ರತಿಮೆಯಾಗಿವುಳ್ಳ ಶ್ರೀಹರಿಯ **ಜಾನುನೀ** ಸ್ಥೂಲರೂಪದ ಕಾಲುಗಳ ಗಂಟುಗಳು, (ಮಂಡಿ ತೊಡೆ ಮತ್ತು ಮೊಳಕಾಲುಗಳ ಸಂಧಿ) **ಸುತಲಂ** ಸುತಲವು, **ಊರುದ್ವಯಂ ವಿತಲಂ ಅತಲಂ ಚ** ಎರಡು ತೊಡೆಗಳು ವಿತಲ-ಅತಲಗಳು ಅಂದರೆ ತೊಡೆಯ ಕೆಳಭಾಗದಲ್ಲಿ ವಿತಲ, ಮೇಲ್ಭಾಗದಲ್ಲಿ ಅತಲವಿದೆ ಎಂದು ತಿಳಿಯಬೇಕು. **ಮಹೀತಲೇ** ಮಹೀತಲವು, **ತಜ್ಜಘನಂ** ಸೊಂಟದ ಹಿಂಭಾಗ (ಇದನ್ನು ನೀನು ವಿಶೇಷವಾಗಿ ಸ್ಮರಿಸಬೇಕು ಎಂದು ತಿಳಿಸಲು ಇಲ್ಲಿ ಮಹೀಪತೇ ಎಂದು ಸಂಬೋಧಿಸಿರುವರು) **ನಭಸ್ತಲಂ** ಅಂತರಿಕ್ಷವನ್ನು

ಚತುರ್ದಶ ಭುವನಾತ್ಮಕವಾದ ಬ್ರಹ್ಮದೇವರ ದೇಹದಲ್ಲಿ **ಯಃ ಪುರುಷಃ** ಪೂರ್ಣವಾದ ಷಡ್ಗುಣಗಳುಳ್ಳವನು ಇದ್ದಾನೋ ಆದ್ದರಿಂದ, **ವೈರಾಜಃ** ವಿರಾಟ್ ಎಂಬ ಅಂಡದಲ್ಲಿರುವುದರಿಂದ ಅಥವಾ ಎಲ್ಲರಿಗಿಂತ ಶ್ರೇಷ್ಠನಾದುದರಿಂದ ವೈರಾಜನೆನಿಸಿದ ಭಗವಾನ್ ಶ್ರೀಹರಿಯು, **ಧಾರಣಾಶ್ರಯಃ** ಧಾರಣಾವಿಷಯನು. ಆದ್ದರಿಂದ ಬ್ರಹ್ಮಾಂಡಂತಸ್ಥತ್ವವಿಶೇಷಣವಿಶಿಷ್ಟತಯಾ ಕೃತವಾದ ಧಾರಣೆಯು ಅಧಿಕಾರಿಯ ಮನೋಮಲವನ್ನು ನಾಶಮಾಡುವುದು ಎಂದು ಉತ್ತರಾಭಿಪ್ರಾಯವು.

ಈ ಶ್ಲೋಕದಲ್ಲಿ 'ವೈರಾಜಃ ಪುರುಷಃ' ಎಂದರೇ ವಿರಿಂಚ ಎಂದು ತೋರುವುದು. ಅದು ಸರಿಯಲ್ಲ. ಪೂರ್ವೋತ್ತರವಿರೋಧ ಬರುವದು. ಆದ್ದರಿಂದ ಅಭಿಪ್ರೇತಾರ್ಥವನ್ನು ಪ್ರಮಾಣದಿಂದ ತಿಳಿಸುವರು.

**ತಾತ್ಪರ್ಯ- ಅಂಡಕೋಶೋ ವಿರಾಟ್ ಪ್ರೋಕ್ತೋ ವಿಶೇಷೇಣ ಪ್ರಕಾಶನಾತ್ ।**
**ವೈರಾಜಸ್ತದ್ಗತೋ ವಿಷ್ಣುರಥವಾ ಸರ್ವತೋ ವರಃ ॥ -ಇತಿ ಭಾಗವತತಂತ್ರೇ**

ವಿಶೇಷವಾಗಿ ಪ್ರಕಾಶಿಸುವುದರಿಂದ ಬ್ರಹ್ಮಾಂಡಕೋಶವು ವಿರಾಟ್ ಎನಿಸುತ್ತದೆ. ಅದರಲ್ಲಿ ನಿಯಾಮಕನಾಗಿದ್ದ ವಿಷ್ಣುವು ವೈರಾಜನೆನಿಸುತ್ತಾನೆ. ಅಥವಾ ಎಲ್ಲರಿಗಿಂತಲೂ ವಿಶೇಷವಾಗಿ ಶ್ರೇಷ್ಠನಾದುದರಿಂದ ಶ್ರೀಹರಿಯು ವೈರಾಜನೆನಿಸುವನು. ಎಂದು ಭಾಗವತತಂತ್ರದಲ್ಲಿದೆ. ।।೨೫।।

*ವೈರಾಜಪುರುಷನು ಧಾರಣಾಶ್ರಯನು ಎಂದು ಹೇಳಿದೆಯಷ್ಟೇ ? ಆ ರೂಪದಲ್ಲಿ ಒಂದೊಂದೇ ಅವಯವಯುಕ್ತ ಸ್ಮೃತಿ ರೂಪ ಧಾರಣಾವನ್ನು ತಿಳಿಸುವರು-*

**ಪಾತಾಲಮೇತಸ್ಯ ಹಿ ಪಾದಮೂಲಂ ಪಠಂತಿ ಪಾರ್ಷ್ಣಿ ಪ್ರಪದೇ ರಸಾತಲಮ್ ।**
**ಮಹಾತಲಂ ವಿಶ್ವಸೃಜಸ್ತು ಗುಲ್ಫೌ ತಲಾತಲಂ ವೈ ಪುರುಷಸ್ಯ ಜಂಘೇ ।।೨೬।।**

**ಏತಸ್ಯ** ಅಂಡಾಂತರ್ಗತ ಶ್ರೀಹರಿಯ, **ಪಾದಮೂಲಂ** ಪಾದದ ಕೆಳಭಾಗವೆಂದು **ಪಾತಾಲಂ** ಪಾತಾಲಲೋಕವನ್ನು, **ಪಠಂತಿ** ಉಪದೇಶಮಾಡುವರು. ತಾವು ಅದೇ ರೀತಿ ಉಪಾಸನೆ ಮಾಡುವರು. **ಪಾರ್ಷ್ಣಿ ಪ್ರಪದೇ** ಪಾದದ ಮೇಲುಭಾಗ ಮತ್ತು ಅಗ್ರಭಾಗಗಳನ್ನು **ರಸಾತಲಂ ಪಠಂತಿ** ರಸಾತಲವೆಂದು ಹೇಳುವರು. ಉಪಾಸಿಸುವರು. **ಮಹಾತಲಂ** ಮಹಾತಲವನ್ನು, **ವಿಶ್ವಸೃಜಃ** ಪ್ರಪಂಚವನ್ನು ಸೃಷ್ಟಿಸುವ ಶ್ರೀಹರಿಯ, **ಸುಗುಲ್ಫೌ** ಸುಂದರವಾದ ಪರ್ವಗಳೆಂದು, **ಪಠಂತಿ** ಹೇಳುವರು. (ಪಾದದ ಗಂಟು) **ತಲಾತಲಂ** ತಲಾತಲವು, **ಪುರುಷಸ್ಯ** ಪರಮಾತ್ಮನ, **ಜಂಘೇ ಪಠಂತಿ** ಮೊಣಕಾಲುಗಳೆಂದು ಹೇಳುವರು.

ಈ ಶ್ಲೋಕದಲ್ಲಿ ಪಾತಾಲಂ ಪಾದಮೂಲಂ ಮುಂತಾಗಿ ಹೇಳುವುದರಿಂದ ಪಾತಾಲಾದಿ ಲೋಕಗಳು ಭಗವಂತನ ಅವಯವಗಳಿಂದ ಅಭಿನ್ನವಾಗಿವೆ ಎಂದು ತೋರುವುದು. ಅದು ಸರಿಯಲ್ಲ. ಲೋಕಗಳು ಜಡವಾದುದರಿಂದ ಜ್ಞಾನಾನಂದಾತ್ಮಕವಾದ ಅವಯವಗಳಿಂದ ಅಭೇದ ಅಸಂಭಾವಿತವಾದದ್ದರಿಂದ ಇಲ್ಲಿ ಅಭಿಪ್ರೇತವಾದ ವಿವಕ್ಷಾಭೇದವನ್ನು ತಿಳಿಸುವರು-

**ತಾತ್ಪರ್ಯ- ಪ್ರತಿಮಾಪೇಕ್ಷಯಾಽಂಗಾನಿ ಸ್ವರೂಪಾಪೇಕ್ಷಯಾ ತಜ್ಞಾನಿ ತದಾಶ್ರಿತಾನಿ ಚ ॥**

ಬ್ರಹ್ಮಾಂಡಾಂತರ್ಗತವಾದ ಚತುರ್ದಶಭುವನಾತ್ಮಕವಾದ ಬ್ರಹ್ಮದೇವರ ದೇಹವು ಶಿಲಾ ಪ್ರತಿಮೆಯಂತೆ ಪ್ರತಿಮೆ ಎಂದು ಹೇಳಿದೆ. ಅಲ್ಲಿರುವ ಭಗವಂತನ ಧಾರಣಾ ಇಲ್ಲಿ ಹೇಳಲ್ಪಡುವುದು. ಪ್ರತಿಮಾ ಎಂಬ ವಿವಕ್ಷಾದಿಂದ ಪಾತಾಲಾದಿಗಳು ಪಾದಮೂಲ ಮೊದಲಾದ ಅಂಗಗಳಿಂದ ಅಭಿನ್ನವಾಗಿವೆ. ಬ್ರಹ್ಮಾಂಡದೊಳಗಿನ ಭಗವಂತನ ಸ್ವರೂಪಭೂತವಾದ ಪಾದಾದಿ ಅವಯವಗಳಿಂದ ಪಾತಾಲಾದಿಲೋಕಗಳು ಜನಿಸಿವೆ. ಮತ್ತು ಆಯಾ ಅವಯವಗಳನ್ನು ಆಶ್ರಯಿಸಿಕೊಂಡಿವೆ. ಈ ಎರಡು ಕಾರಣಗಳಿಂದಾಗಿ ಪಾತಾಲಂ ಪಾದಮೂಲಂ ಇತ್ಯಾದಿಯಾಗಿ ಸಾಮಾನಾಧಿಕರಣ್ಯವು ಉಪಪನ್ನವಾಗುತ್ತದೆ. ಭಗವಂತನ ಪಾದಾದಿಗಳಿಗೆ ಪಾತಾಲಾದಿಗಳು ಅಧೀನವಾಗಿ ಇದ್ದುದರಿಂದ ಅಭೇದವ್ಯವಹಾರವನ್ನು ಮಾಡಿದ್ದಾರೆ. ಈ ವ್ಯವಹಾರವು ಲೋಕಪ್ರಸಿದ್ಧವಾಗಿದೆ. ॥೨೬॥

**ದ್ವೇ ಜಾನುನೀ ಸುತಲಂ ವಿಶ್ವಮೂರ್ತೇರೂರುದ್ವಯಂ ವಿತಲಂ ಚಾಽತಲಂ ಚ ।**
**ಮಹೀತಲಂ ತಜ್ಜಘನಂ ಮಹೀಪತೇ ನಭಸ್ತಲಂ ನಾಭಿಸರೋ ಗೃಣಂತಿ ॥ ೨೭ ॥**

**ಹೇ ಮಹೀಪತೇ** ರಾಜನೇ, **ವಿಶ್ವಮೂರ್ತೇಃ** ಪ್ರಪಂಚವು ಯಾವನ ದೇಹದಲ್ಲಿದೆಯೋ ಅವನ ಅಥವಾ ಪ್ರಪಂಚಾತ್ಮಕವಾದ ಬ್ರಹ್ಮದೇವರ ಶರೀರವೇ ಪ್ರತಿಮೆಯಾಗಿವುಳ್ಳ ಶ್ರೀಹರಿಯ **ಜಾನುನೀ** ಸ್ಥೂಲರೂಪದ ಕಾಲುಗಳ ಗಂಟುಗಳು, (ಮಂಡಿ ತೊಡೆ ಮತ್ತು ಮೊಳಕಾಲುಗಳ ಸಂಧಿ) **ಸುತಲಂ** ಸುತಲವು, **ಊರುದ್ವಯಂ ವಿತಲಂ ಅತಲಂ ಚ** ಎರಡು ತೊಡೆಗಳು ವಿತಲ-ಅತಲಗಳು ಅಂದರೆ ತೊಡೆಯ ಕೆಳಭಾಗದಲ್ಲಿ ವಿತಲ, ಮೇಲ್ಭಾಗದಲ್ಲಿ ಅತಲವಿದೆ ಎಂದು ತಿಳಿಯಬೇಕು. **ಮಹೀತಲೇ** ಮಹೀತಲವು, **ತಜ್ಜಘನಂ** ಸೊಂಟದ ಹಿಂಭಾಗ (ಇದನ್ನು ನೀನು ವಿಶೇಷವಾಗಿ ಸ್ಮರಿಸಬೇಕು ಎಂದು ತಿಳಿಸಲು ಇಲ್ಲಿ ಮಹೀಪತೇ ಎಂದು ಸಂಬೋಧಿಸಿರುವರು) **ನಭಸ್ತಲಂ** ಅಂತರಿಕ್ಷವನ್ನು

(ಭುವರ್ಲೋಕವನ್ನು) **ನಾಭಿಸರಃ** ಹೊಕ್ಕಳೆಂದು, **ಗೃಣಂತಿ** ಹೇಳುವರು. ಆಳವಾದ್ದರಿಂದ ಪದ್ಮಕ್ಕೆ ಆಶ್ರವಾದ್ದರಿಂದ ಸರೋವರ (ಸರ) ಎಂದು ಕರೆದಿದ್ದಾರೆ. ।।೨೭।।

**ಊರುಸ್ಥಲಂ ಜ್ಯೋತಿರನೀಕಮಸ್ಯ ಗ್ರೀವಾಮಹರ್ವದನಂ ವೈ ಜನೋಽಸ್ಯ ।**
**ತಪೋ ರರಾಟಂ ವಿದುರಾದಿಪುಂಸಃ ಸತ್ಯಂ ತು ಶೀರ್ಷಾಣಿ ಸಹಸ್ರಶೀರ್ಷ್ಣಃ।। ೨೮ ।।**

ಇಲ್ಲಿ ಎಲ್ಲ ಕಡೆಯಲ್ಲಿಯೂ ಅಲ್ಲಿಂದ ಹುಟ್ಟಿ ಅಲ್ಲಿಯೇ ಆಶ್ರಯಿಸಿ ಇದ್ದುದರಿಂದ ಆಯಾ ಅವಯವಗಳೆಂದು ಕರೆಯುವರು.

**ಅಸ್ಯ** ಸ್ಥೂಲರೂಪದ, **ಊರುಸ್ಥಲಂ** ವಕ್ಷಸ್ಥಲವು (ಎದೆ) **ಜ್ಯೋತಿರನೀಕಂ** ಜ್ಯೋತಿಶ್ಚಕ್ರಸ್ಥಾನೀಯವಾದ ಸ್ವರ್ಗಲೋಕವು, **ಮಹಃ** ಮಹರ್ಲೋಕವು, **ಗ್ರೀವಾ** ಕುತ್ತಿಗೆಯು, **ಜನಃ** ಜನಲೋಕವು, **ಅಸ್ಯ ವದನಂ** ಇವನ ಮುಖವು, **ತಪಃ** ತಪೋಲೋಕವು, **ರರಾಟಂ** ಹಣೆಯೆಂದು, **ಸತ್ಯಂ** ಸತ್ಯಲೋಕವನ್ನು, **ಸಹಸ್ರಶೀರ್ಷ್ಣಃ** ಅನಂತ ತಲೆಗಳುಳ್ಳ **ಆದಿಪುಂಸಃ** ಜಗದಾದಿಕಾರಣನಾದ ಪರಮಾತ್ಮನ, **ಶೀರ್ಷಾಣಿ** ಶಿರಸ್ಸೆಂದು, **ವಿದುಃ** ತಿಳಿದಿರುವರು. ।।೨೮।।

**ಇಂದ್ರಾದಯೋ ಬಾಹವ ಆಹುರಸ್ಯ ಕರ್ಣೌ ದಿಶಃ ಶ್ರೋತ್ರಮಮುಷ್ಯ ಶಬ್ದಃ ।**
**ನಾಸತ್ಯದಸ್ರೌ ಪರಮಸ್ಯ ನಾಸೇ ಘ್ರಾಣಂ ಚ ಗಂಧೋ ಮುಖಮಗ್ನಿರಿದ್ಧಃ ।। ೨೯ ।।**

**ಇಂದ್ರಾದಯಃ** ಇಂದ್ರ ಮುಂತಾದ ದೇವತೆಗಳು, **ಬಾಹವಃ** ಬಾಹುಗಳೆಂದು, **ಆಹುಃ** ಹೇಳುವರು. **ಕರ್ಣೌ** ಕಿವಿಗಳು, **ದಿಶಃ** ದಿಕ್ಕುಗಳು ಅಭಿಮಾನಿದೇವತೆಗಳು **ಅಮುಷ್ಯ** ಇವನ ಗೋಲಕಗಳು **ಶ್ರೋತ್ರಂ** ಶ್ರೋತ್ರೇಂದ್ರಿಯವು, **ಶಬ್ದಃ** ಶಬ್ದಜನಕ ಶಬ್ದಾಶ್ರಯವೆಂದರ್ಥ. **ನಾಸತ್ಯದಸ್ರೌ** ಆಶ್ವಿನೀ ದೇವತೆಗಳು, **ಪರಮಸ್ಯ** ಶ್ರೀಹರಿಯ, **ನಾಸೇ** ಮೂಗಿನ ಹೊರಳೆಗಳಿಂದ ಹುಟ್ಟಿ ಅಲ್ಲೇ ಇರುವವರು. **ಘ್ರಾಣಂ** ಇಂದ್ರಿಯವು, **ಗಂಧಃ** ಗಂಧಜನಕಗಂಧಾಶ್ರಯವು, **ಇದ್ಧಃ ಅಗ್ನಿಃ ಮುಖಂ** ಪ್ರಕಾಶಮಾನವಾದ ಅಗ್ನಿಯು ಮುಖದಿಂದ ಜನಿಸಿ ಮುಖವನ್ನಾಶ್ರಯಿಸಿದೆ. ।।೨೯।।

**ದ್ಯೌರಕ್ಷಿಣೀ ಚಕ್ಷುರಭೂತ್ಪತಂಗಃ ಪಕ್ಷ್ಮಾಣಿ ವಿಷ್ಣೋರಹನೀ ಉಭೇ ಚ ।**
**ತದ್ಭ್ರೂವಿಜೃಂಭಃ ಪರಮೇಷ್ಠಿಧಿಷ್ಣ್ಯಮಾಪೋಽಸ್ಯ ತಾಲೂ ರಸ ಏವ ಜಿಹ್ವಾ ।।**

**ದ್ಯೌಃ** ದ್ಯುಲೋಕವು, **ಅಕ್ಷಿಣೀ** ಕಣ್ಣಿನ ಗೋಲಕಗಳು, **ಚಕ್ಷುಃ** ಚಕ್ಷುರಿಂದ್ರಿಯವು **ಪತಂಗಃ** ಸೂರ್ಯನು, **ಉಭೇ ಅಹನೀ** ದೇವತೆಗಳ ಹಾಗೂ ಮನುಷ್ಯರ ಹಗಲು

ರಾತ್ರಿಗಳು, **ವಿಷ್ಣೋಃ** ಶ್ರೀಹರಿಯ, **ಪಕ್ಷ್ಮಾಣಿ** ಕಣ್ಣಿನ ರೆಪ್ಪೆಗಳು, **ತದ್ಭ್ರೂವಿಜೃಂಭಃ** ಅವನ ಹುಬ್ಬಿನ ಲಾಸ್ಯವು, **ಪರಮೇಷ್ಠಿಧಿಷ್ಣ್ಯಂ** ಬ್ರಹ್ಮಪದವು, **ಆಪಃ** ನೀರುಗಳು, **ಅಸ್ಯ** ಇವನ, **ತಾಲುಃ** ಅಧಿಷ್ಠಾನಗೋಲಕವು (ಜಿಹ್ವೇಂದ್ರಿಯದ) **ಜಿಹ್ವಾ** ಜಿಹ್ವೇಂದ್ರಿಯವು, **ರಸಃ** ಮಧುರಾದಿರಸಗಳು, (ನಾಲಿಗೆಯೇ ಜಿಹ್ವಾ ಅದಕ್ಕೆ ಆಶ್ರಯಸ್ಥಾನ ತಾಲು) ।।೩೦।।

**ಛಂದಾಂಸ್ಯನಂತಸ್ಯ ಗಿರೋ ಗೃಣಂತಿ ದಂಷ್ಟ್ರಾರ್ಯಮೇಂದೂಡುಗಣಾ ದ್ವಿಜಾನಿ ।**
**ಹಾಸೋ ಜನೋನ್ಮಾದಕರೀ ಚ ಮಾಯಾ ದುರಂತಸರ್ಗೋ ಯದಪಾಂಗಮೋಕ್ಷಃ ॥**

**ಛಂದಾಂಸಿ** ಗಾಯತ್ರೀ ಮೊದಲಾದ ಛಂದಸ್ಸುಗಳು, **ಅಸ್ಯ** ಇವನ, **ಗಿರಃ** ಮಾತುಗಳು ಎಂದು, **ಗೃಣಂತಿ** ಹೇಳುವರು. **ಅರ್ಯಮೇಂದೂ** ಸೂರ್ಯ-ಚಂದ್ರರು, **ದಂಷ್ಟ್ರಾ** ಕೋರೆಹಲ್ಲುಗಳು, **ಉಡುಗಣಾಃ** ನಕ್ಷತ್ರಗಳು, **ದ್ವಿಜಾನಿ** ಹಲ್ಲುಗಳು, **ಜನೋನ್ಮಾದಕರೀ ಮಾಯಾ** ಜನರಿಗೆ ಹುಚ್ಚು ಹಿಡಿಸುವ ಮೋಹನಶಕ್ತಿಯು, **ಹಾಸಃ** ನಗೆಯು, **ದುರಂತಸರ್ಗಃ** ಅಪಾರವಾದ ಸೃಷ್ಟಿಯು, **ಯದಪಾಂಗಮೋಕ್ಷಃ** ಯಾವನ ಕಡೆಗಣ್ಣಿನ ನೋಟವು. ಅದರಿಂದಾಗುವುದು ಎಂದರ್ಥ. ।।೩೧।।

ಸೂರ್ಯಚಂದ್ರರಿಗೆ 'ಚಕ್ಷುರಭೂತ್ ಪತಂಗಃ' 'ಮನಶ್ಚಂದ್ರಮಾಃ' ಎಂದು ಚಕ್ಷುರ್ಮನಸ್ಸುಗಳಿಂದ ಅಭೇದ ಹೇಳಿ, ಮತ್ತೆ ದಂಷ್ಟ್ರಾರ್ಯಮೇಂದೂ ಎಂದು ದಂಷ್ಟ್ರಾದಿಂದ ಹೇಳಿದ್ದು ಸರಿಯಲ್ಲ ಒಂದು ಕಡೆ ಹುಟ್ಟಿದವರು ಮತ್ತೊಂದು ಕಡೆ ಹುಟ್ಟುವುದು ಸಾಧ್ಯವಿಲ್ಲವಲ್ಲ ಎಂಬ ಶಂಕೆಗೆ ಉತ್ತರಿಸುವರು-

**ತಾತ್ಪರ್ಯ- ಬಹುರೂಪತ್ವಾತ್ ದಂಷ್ಟ್ರಾರ್ಯಮೇಂದೂ ಇತ್ಯಾದಿ ।**

**ಪ್ರತಿಮಾಪೇಕ್ಷಯಾಂಗಾನಿ ಭೂರಾದೀನಿ ಸ್ವರೂಪತಃ ।**
**ತದಾಶ್ರಿತಾನಿ ತಜ್ಜಾನಿ ಬಹ್ವಂಗತ್ವಂ ಬಹುತ್ವತಃ ॥ -ಇತಿ ಬ್ರಹ್ಮತರ್ಕೇ**

ಸೂರ್ಯಾದಿದೇವತೆಗಳು ಒಬ್ಬೊಬ್ಬರಾದರೂ ಅವರ ರೂಪಗಳು ಬಹಳ ಇದ್ದ ಪ್ರಯುಕ್ತ ಶ್ರೀಹರಿಯ ಅನೇಕ ಅಂಗಗಳಿಂದ ಅನೇಕ ಸಲ ಹುಟ್ಟುವರು ಎಂಬ ಅಭಿಪ್ರಾಯದಿಂದ ದಂಷ್ಟ್ರಾರ್ಯಮೇಂದೂ ಮುಂತಾಗಿ ಅಂದರೆ 'ಸತ್ಯಂ ತು ಶೀರ್ಷಾಣಿ' 'ತದ್ಭ್ರೂವಿಜೃಂಭಃ ಪರಮೇಷ್ಠಿಧಿಷ್ಣ್ಯಂ' ಎಂದು ಹೇಳಿದ್ದು ಯುಕ್ತವೇ ಆಗಿದೆ.

(ಹೇಳಿದ ಎಲ್ಲಾ ವಿಷಯದಲ್ಲಿ ಪ್ರಮಾಣ)

ಭೂರಾದಿಲೋಕಗಳು, ಶ್ರೀಹರಿಯ ಬ್ರಹ್ಮಾಂಡವೆಂಬ ಸ್ಥೂಲಶರೀರದ ಅಂಗಗಳು

ಶ್ರೀಹರಿಯ ಅಂಗಗಳಿಂದ ಹುಟ್ಟಿದವುಗಳು ಅಲ್ಲೇ ಇರವವುಗಳು. ಸೂರ್ಯಾದಿ-ದೇವತೆಗಳಿಗೆ ಬಹುರೂಪಗಳು ಇದ್ದುದರಿಂದ (ಒಂದೊಂದಾವರ್ತಿ ಒಂದೊಂದು ಅಂಗಗಳಿಂದ ಜನಿಸಿರುವುದರಿಂದ) ಅನೇಕಅಂಗಗಳನ್ನು ಆಶ್ರಯಿಸಿಕೊಂಡಿದ್ದಾರೆಂದು ಹೇಳುವುದು ಉಪಪನ್ನವೆಂದು ಬ್ರಹ್ಮತರ್ಕದಲ್ಲಿದೆ. ||೩೧||

**ವ್ರೀಡೋತ್ತರೋಷ್ಠೋಽಧರ ಏವ ಲೋಭೋ**
**ಧರ್ಮಃ ಸ್ತನೋಽಧರ್ಮಪಥಶ್ಚ ಪೃಷ್ಠಃ ।**
**ಕಸ್ತಸ್ಯ ಮೇಢ್ರಂ ವೃಷಣೌ ಚ ಮಿತ್ರಃ**
**ಕುಕ್ಷಿಃ ಸುಮುದ್ರಾ ಗಿರಯೋಽಸ್ಥಿಸಂಘಾಃ ॥ ೩೨ ॥**

**ವ್ರೀಡಾ** ಲಜ್ಜೆಯು, **ಉತ್ತರೋಷ್ಠಃ** ಮೇಲ್ತುಟಿಯು, **ಅಧರ ಏವ** ಕೆಳತುಟಿಯು **ಲೋಭಃ** ಲೋಭವು, **ಧರ್ಮಃ** ಪುಣ್ಯವು, **ಸ್ತನಃ** ಸ್ತನವು, **ಅಧರ್ಮಃ ಪಥಃ** ಪಾಪ ಮಾರ್ಗವು, **ಪೃಷ್ಠಃ** ಬೆನ್ನಿನಿಂದ ಹುಟ್ಟಿದ್ದು, **ಕಃ** ಪ್ರಜಾಪತಿಯು, **ಮೇಢ್ರಂ** ಗುಹ್ಯೇಂದ್ರಿಯವು, **ವೃಷಣೌ ಚ** ಬೀಜದ್ವಯಗಳು, **ಮಿತ್ರಃ** ಮಿತ್ರಾವರುಣರು, **ಕುಕ್ಷಿಃ** ಹೊಟ್ಟೆಯೇ, **ಸಮುದ್ರಃ** ಸಮುದ್ರವು, **ಗಿರಯಃ** ಪರ್ವತಗಳು, **ಅಸ್ಥಿಸಂಘಾಃ** ಎಲಬುಗಳ ಸಮೂಹವು. ||೩೨||

**ನದ್ಯೋಽಸ್ಯ ನಾಡ್ಯೋಽಥ ತನೂರುಹಾಣಿ ಮಹೀರುಹಾ ವಿಶ್ವತನೋಃ ನೃಪೇಂದ್ರ ।**
**ಅನ್ನಂ ಚ ವೀರ್ಯಂ ಶ್ವಸಿತಂ ಮಾತರಿಶ್ವಾ ಗತಿರ್ವಯಃ ಕರ್ಮಗುಣಪ್ರವಾಹಃ ॥**

**ನದ್ಯಃ** ನದಿಗಳು, **ಅಸ್ಯ** ಇವನ, **ನಾಡ್ಯಃ** ನಾಡಿಗಳು, **ತನೂರುಹಾಣಿ** ಕೂದಲುಗಳು, **ಮಹೀರುಹಾಃ** ಗಿಡಗಳು, **ಹೇ ನೃಪೇಂದ್ರ** ರಾಜನೇ, **ವಿಶ್ವತನೋಃ** ಪ್ರಪಂಚವೇ ಶರೀರವಾಗಿ ಉಳ್ಳವನಿಗೆ, **ಅನ್ನಂ** ಜನರು ತಿನ್ನುವ ಅನ್ನವು, **ವೀರ್ಯಂ** ರೇತಸ್ಸು, **ಶ್ವಸಿತಂ** ಶ್ವಾಶೋಚ್ಛ್ವಾಸವೇ, **ಮಾತರಿಶ್ವಾ** ವಾಯುವು, **ಗತಿಃ** ಗಮನವು, **ವಯಃ** ಜನರ ಆಯುಷ್ಯವು, **ಗುಣಪ್ರವಾಹಃ** ಸತ್ತ್ವಾದಿಗುಣಗಳ ಕಾರ್ಯವಾದ ಸಂಸಾರವು, **ತಸ್ಯ ಕರ್ಮ** ಅವನ ವ್ಯಾಪಾರವಿಶೇಷವಾಗಿದೆ. ||೩೩||

**ಈಶಸ್ಯ ಕೇಶಾನ್ವಿದುರಂಬುವಾಹಾನ್ವಾಸಸ್ತು ಸಂಧ್ಯೇ ಕುರುವರ್ಯ ಭೂಮ್ನಃ ।**
**ಅವ್ಯಕ್ತಮಾಹುರ್ಹೃದಯಂ ಮನಸ್ತು ಸ ಚಂದ್ರಮಾಃ ಸರ್ವವಿಕಾರಕೋಶಃ ॥ ೩೪ ॥**

**ಈಶಸ್ಯ** ಶ್ರೀಹರಿಯ, **ಕೇಶಾನ್** ಕೂದಲುಗಳನ್ನು, **ಅಂಬುವಾಹಾನ್ ವಿದುಃ** ಮೋಡಗಳೆಂದು ತಿಳಿದಿರುವರು. **ಸಂಧ್ಯೇ** ಎರಡು ಸಂಧಿಕಾಲಗಳು. **ವಾಸಃ** ವಸ್ತ್ರವು,

**ಹೇ ಕುರುವರ್ಯ** ಕೌರವಶ್ರೇಷ್ಠನೇ, **ಭೂಮ್ನಃ** ಪೂರ್ಣನಾದ ಭಗವಂತನ, **ಹೃದಯಂ** ಹೃದಯವನ್ನು, **ಅವ್ಯಕ್ತಂ ಆಹುಃ** ಮೂಲಪ್ರಕೃತಿ ಎನ್ನುವರು, **ಸರ್ವವಿಕಾರಕೋಶಃ ಸಃ ಚಂದ್ರಮಾಃ ಮನಃ** ಕಾಮಾದಿ ವಿಕಾರಗಳಿಗೆಲ್ಲ ಕೋಶ(ವರಿ) ದಂತೆ ಆಶ್ರಯನಾದ ಪ್ರಸಿದ್ಧನಾದ ಚಂದ್ರನು ಮನಸ್ಸು ।।೩೪।।

*ಚಂದ್ರನು ಎಲ್ಲ ವಿಕಾರಾಶ್ರಯ ಮನೋಭಿಮಾನಿಯಾದ ಕಾರಣ ಸರ್ವಕೋಶತ್ವವು ಯುಕ್ತವೇ ಆಗಿದೆ.*

**ವಿಜ್ಞಾನಶಕ್ತಿಂ ಮತಿಮಾಮನಂತಿ ಸರ್ವಾತ್ಮನೋಽಂತಃಕರಣಂ ಗಿರಿತ್ರಃ ।**
**ಅಶ್ವಾಶ್ವತರ್ಯುಷ್ಟ್ರಗಜಾ ನಖಾನಿ ಸರ್ವೇ ಮೃಗಾಃ ಪಶವಃ ಶ್ರೋಣಿದೇಶೇ।। ೩೫ ।।**

**ವಿಜ್ಞಾನಶಕ್ತಿಂ** ವಿರಿಂಚನನ್ನು, **ಮತಿಂ ಆಮನಂತಿ** ಬುದ್ಧಿ ಎಂದು ಹೇಳುತ್ತಾರೆ. **ಗಿರಿತ್ರಃ** ರುದ್ರದೇವರು, **ಸರ್ವಾತ್ಮನಃ** ಸರ್ವಸ್ವಾಮಿಯಾದ ಶ್ರೀಹರಿಯ, **ಅಂತಃಕರಣಂ** ಅಹಂಕಾರವೆಂದು ಹೇಳುವರು. **ಅಶ್ವಾಶ್ವತರ್ಯುಷ್ಟ್ರಗಜಾಃ** ಅಶ್ವ ಕುದುರೆಯು, ಅಶ್ವತರಿ ಹೇಸರಗತ್ತೆ, ಉಷ್ಟ್ರ ಒಂಟೆ, ಗಜಾಃ ಆನೆಗಳು, **ನಖಾನಿ** ಉಗುರುಗಳು, **ಸರ್ವೇ** ಎಲ್ಲ **ಮೃಗಾಃ** ಮೃಗಗಳು, **ಪಶವಃ** ಪಶುಗಳು, **ಶ್ರೋಣೀದೇಶೇ** ನಿತಂಬದಲ್ಲಿ ಆಶ್ರಯಿಸಿರುವವು ಅಲ್ಲಿಯೇ ಹುಟ್ಟಿದವುಗಳು. ।।೩೫।।

**ವಚಾಂಸಿ ತದ್ವ್ಯಾಹರಣಂ ವಿಚಿತ್ರಂ ಮನುರ್ಮನೀಷಾ ಮನುಜೋ ನಿವಾಸಃ ।**
**ಗಂಧರ್ವವಿದ್ಯಾಧರಚಾರಣಾಪ್ಸರಃ ಸ್ವರಸ್ಮೃತೀರ್ಹ್ಯಸುರಾನೀಕವೀರ್ಯಃ ।। ೩೬।।**

**ವಚಾಂಸಿ** ಲೌಕಿಕವಾದ ಮತ್ತು ವೈದಿಕವಾದ ಮಾತುಗಳು, **ವಿಚಿತ್ರಂ** ಅನೇಕರೂಪವಾದ, **ತದ್ವ್ಯಾಹರಣಂ** ಶ್ರೀಹರಿಯ ಶಬ್ದೋಚ್ಚಾರಣಕ್ರಿಯೆಯು, **ಮನುಃ** ಸಾಯಂಭುವ ಮನುವು **ಮನೀಷಾ ಚ** ವಿಚಾರರೂಪವಾದ ಬುದ್ಧಿಯು, **ಮನುಜಃ** ಪ್ರಿಯವ್ರತಾದಿಗಳು, **ನಿವಾಸಃ** ಶ್ರೀಹರಿಯ ನಿವಾಸಕ್ರಿಯೆಯು, **ಗಂಧರ್ವವಿದ್ಯಾಧರಚಾರಣಾಪ್ಸರಃ** ಗಂಧರ್ವರು ವಿದ್ಯಾಧರರು ಚಾರಣರು ಅಪ್ಸರೆಯರು ಇವರುಗಳಿಗೆ ಜನಕವಾದ, **ಸ್ವರಸ್ಮೃತಿಃ** ಷಡ್ಜಾದಿಸ್ವರಗಳು ಮತ್ತು ಅತೀತವಿಷಯಜ್ಞಾನವುಳ್ಳವನು, ಎರಡು ಪದಮಾಡಿ ಗಂಧರ್ವಾದಿಗಳು ಸ್ವರಸ್ಮೃತಿಗಳು ಹೀಗೂ ಹಿಂದಿನಂತೆ ಮಾಡಬಹುದು. **ಅಸುರಾನೀಕಂ** ಅಸುರಸಮೂಹವು ವೀರ್ಯಪರಾಕ್ರಮವಾಗಿ ಉಳ್ಳವನೂ ಅಸುರ ಸಮೂಹವೂ ಅವನ ಪರಾಕ್ರಮದಿಂದ ಜನ್ಯವಾಗಿದೆ ಮತ್ತು ಅವನನ್ನು ಆಶ್ರಯಿಸಿದೆ ಎಂದು ಭಾವ. ।।೩೬।।

**ಬ್ರಹ್ಮಾನನಃ ಕ್ಷತ್ರಭುಜೋ ಮಹಾತ್ಮಾ ವಿಡೂರುರಂಘ್ರಿಶ್ರಿತಕೃಷ್ಣವರ್ಣಃ ।**
**ಸ್ವಾಹಾಸ್ವಧಾವೀರ್ಯಗುಣೋಪಪನ್ನೋ ಹವ್ಯಾತ್ಮಕಃ ಕರ್ಮವಿತಾನಯೋಗಃ ॥**

**ಬ್ರಹ್ಮಾನನಃ** ಬ್ರಾಹ್ಮಣ ಜಾತ್ಯಭಿಮಾನಿಯಾದವನು ಮುಖವಾಗಿ ಉಳ್ಳ ಬ್ರಾಹ್ಮಣಜಾತ್ಯಭಿಮಾನಿಗೆ ಜನಕವಾದ ಮುಖ ಉಳ್ಳ, **ಕ್ಷತ್ರಭುಜಃ** ಕ್ಷತ್ರಿಯಜಾತ್ಯಭಿಮಾನಿಯೇ ಬಾಹುಗಳಾಗಿ ಉಳ್ಳ ಕ್ಷತ್ರಿಯಜಾತ್ಯಭಿಮಾನಿಗೆ ಜನಕವಾದ ಬಾಹುಗಳುಳ್ಳ , **ವಿಡೂರುಃ** ವೈಶ್ಯಜಾತ್ಯಭಿಮಾನಿಗೆ ಜನಕವಾದ ತೊಡೆಗಳುಳ್ಳ, ವೈಶ್ಯಜಾತ್ಯಭಿಮಾನಿಯೇ ತೊಡೆಯಾಗಿ ಉಳ್ಳ, **ಅಂಘ್ರಿಶ್ರಿತಕೃಷ್ಣವರ್ಣಃ** ಶೂದ್ರಜಾತ್ಯ-ಭಿಮಾನಿಯೇ ಪಾದಗಳಾಗಿ ಉಳ್ಳ, ಶೂದ್ರಜಾತ್ಯಭಿಮಾನಿಗೆ ಜನಕವಾದ ಪಾದಗಳುಳ್ಳ, ಎಂದರ್ಥ.

**ಸ್ವಾಹಾ** ದೇವತೆಗಳಿಗೆ ಕೊಡುವ ಅನ್ನ, **ಸ್ವಧಾ** ಪಿತೃಗಳಿಗೆ ಕೊಡುವ ಅನ್ನ ಇವುಗಳಿಗೆ ಜನಕವಾದ **ವೀರ್ಯಗುಣೋಪಪನ್ನಃ** ರೇತಸ್ಸೆಂಬ ಗುಣವುಳ್ಳ, **ಹವ್ಯಾತ್ಮಕಃ** ಹವ್ಯಜನಕವಾದ ಮಧ್ಯದೇಹವುಳ್ಳ **ಕರ್ಮವಿತಾನಯೋಗಃ** ಅಗ್ನಿಷ್ಟೋಮಾದಿ ಕರ್ಮವಿಸ್ತಾರಕ್ಕೆ ಜನಕವಾದ ಉಪಾಯ ಉಳ್ಳವನು. ।।೩೭।।

*ಹೇಳಿದ್ದನ್ನು ಉಪಸಂಹಾರ ಮಾಡುವರು-*

**ಇಯಾನಸಾವೀಶ್ವರವಿಗ್ರಹಸ್ಯ**
**ಯಃ ಸನ್ನಿವೇಶಃ ಕಥಿತೋ ಮಯಾ ತೇ ।**
**ಸಂಧಾರ್ಯತೇಽಸ್ಮಿನ್ ವಪುಷಿ ಸ್ಥವಿಷ್ಠೇ**
**ಮನಃ ಸ್ವಬುದ್ಧ್ಯಾ ನ ಯತೋಽಸ್ತಿ ಕಿಂಚಿತ್ ॥ ೩೮ ॥**

**ಈಶ್ವರವಿಗ್ರಹಸ್ಯ** ಶ್ರೀಹರಿಯ ಪ್ರತಿಮಾರೂಪವಾದ ವಿರಾಟ್ ದೇಹದ, **ಯಃ ಸನ್ನಿವೇಶಃ** ಅವಯವ ಸಂಸ್ಥಾನವು, **ಇಯಾನ್** ಈ ರೀತಿಯಾದುದು, **ತೇ ಮಯಾ ಕಥಿತಃ** ನಿನಗೆ ನನ್ನಿಂದ ಹೇಳಲ್ಪಟ್ಟಿದೆ. **ಯತಃ** ಯಾವ ಈಶ್ವರ ವಿಗ್ರಹಕ್ಕಿಂತ ದೊಡ್ಡದಾದುದು, **ನ ಕಿಂಚಿದಸ್ತಿ** ಯಾವುದೂ ಇಲ್ಲ. **ಅಸ್ಮಿನ್** ಈ, **ಸ್ಥವಿಷ್ಠೇ ವಪುಷಿ** ಸ್ಥೂಲದೇಹದಲ್ಲಿ ಯೋಗಿಗಳಿಂದ, **ಮನಃ ಸ್ವಬುದ್ಧ್ಯಾ ಸಂಧಾರ್ಯತೇ** ತಮ್ಮ ಬುದ್ಧಿಯಿಂದ ಮನಸ್ಸು ಮಗ್ನಗೊಳಿಸಲ್ಪಡುವದು. ಮನೋನೈರ್ಮಲ್ಯಕ್ಕಾಗಿ ಎಂದು ಭಾವ. ।।೩೮।।

*।। ಇಲ್ಲಿಗೆ ಪ್ರಥಮಾಧ್ಯಾಯ ಸಮಾಪ್ತಿಯಾಯಿತು ಶ್ರೀಕೃಷ್ಣಾರ್ಪಣಮಸ್ತು ।।*

# ಅಥ ದ್ವಿತಿಯೋऽಧ್ಯಾಯಃ

**ಎರಡನೆಯ ಅಧ್ಯಾಯ ಸಾರಾಂಶ**

ಸೃಷ್ಟಿಗಿಂತಲೂ ಪೂರ್ವದಲ್ಲಿ ಸೃಷ್ಟಿಕಾರ್ಯದಲ್ಲಿ ನಿಯುಕ್ತರಾದ ಬ್ರಹ್ಮದೇವರು ಈ ರೀತಿಯಾದ ಧ್ಯಾನವನ್ನು ಮಾಡಿಯೇ ಪ್ರಾಕ್ಕಲ್ಪಾನುಸಾರವಾಗಿ ಸೃಷ್ಟಿಯನ್ನು ಮಾಡಲು ಸಮರ್ಥರಾದರು. ವೈದಿಕಶಬ್ದಗಳೆಲ್ಲವೂ ಪರಮಾತ್ಮನ ನಾಮಗಳೆಂದು ತಿಳಿಯಬೇಕು. ಇಂದ್ರಾದಿಶಬ್ದಗಳು ಪುರಂದರಾದಿವಾಚಕವಾಗಿವೆ ಎಂದು ತಿಳಿಯುವುದೂ ಅಪರಾಧವಾಗುತ್ತದೆ. ಈ ಅಪರಾಧದಿಂದಲೇ ಮನುಷ್ಯ ಈ ಸಂಸಾರದಲ್ಲಿ ಮುಂದುವರೆಯುತ್ತಾನೆ. ಸಂಸಾರವನ್ನು ದಾಟಬೇಕೆಂದು ಬಯಸುವವರೆಲ್ಲರೂ ಇಂದ್ರಾದಿನಾಮಗಳೆಲ್ಲವೂ ಶ್ರೀಹರಿವಾಚಕವಾಗಿವೆ ಎಂದು ತಿಳಿಯಬೇಕು. ಎಲ್ಲವೂ ಹರಿವಾಚಕವೆಂದು ತಿಳಿದಾಗ ವ್ಯವಹಾರವೇ ನಿಲ್ಲಬೇಕಾದೀತು ಎಂಬ ಸಂಶಯ ಬೇಡ. ಇದನ್ನು ಮಾಡಲು ಸಾಧ್ಯವಾಗದವರು ವ್ಯವಹಾರಕ್ಕೆ ಎಷ್ಟು ಬೇಕೋ ಅಷ್ಟು ಮಾತ್ರ ಮಾತನಾಡುವುದರಿಂದ ಯಾವುದೇ ರೀತಿಯಾದ ಅನರ್ಥವಾಗುವುದಿಲ್ಲ. ವಿರಾಡ್ರೂಪದ ಧ್ಯಾನದಿಂದ ಮನೋನಿಗ್ರಹವನ್ನು ಪಡೆದ ಮೇಲೆ ಉತ್ತಮಾಧಿಕಾರಿಗಳು ವ್ಯಾಪ್ತವಾದ ಭಗವಂತನ ರೂಪವನ್ನು ಚಿಂತಿಸಬೇಕು. ಮುಮುಕ್ಷುಗಳೆಲ್ಲರೂ ಸತ್ ಚಿತ್ ಆನಂದ ಆತ್ಮ ಎಂಬ ನಾಲ್ಕು ಗುಣಗಳನ್ನು ಉಪಾಸನೆ ಮಾಡಲೇಬೇಕು. ಮಧ್ಯಮಾಧಿಕಾರಿಗಳು ತಮ್ಮ ಸ್ವರೂಪಶರೀರದ ಹೃದಯದಲ್ಲಿ, ಅಧಮಾಧಿಕಾರಿಗಳು ತಮ್ಮ ಬಾಹ್ಯಶರೀರದ ಹೃದಯದಲ್ಲಿಯೂ ಭಗವದ್ರೂಪದ ಒಂದೊಂದೇ ಅವಯವಗಳನ್ನು ಚಿಂತಿಸಬೇಕು. ಹೀಗೆ ಮಾಡುವುದರಿಂದ ಭಕ್ತಿಯೋಗವು ಸಂಪನ್ನವಾಗುತ್ತದೆ. ಕ್ರಮೇಣ ಪರಮಾತ್ಮನ ಸಾಕ್ಷಾತ್ಕಾರವನ್ನು ಪಡೆಯುತ್ತಾನೆ. ನಂತರ ಪ್ರಾರಬ್ಧವನ್ನು ಕಳೆದುಕೊಂಡಮೇಲೆ ಚರಮಶರೀರವನ್ನು ಪರಿತ್ಯಜಿಸುವಾಗ ಸುಖಾಸನದಲ್ಲಿ ಕುಳಿತು ಪ್ರಾಣಾಯಾಮವನ್ನು ಮಾಡಿ ಇಂದ್ರಿಯಾಭಿಮಾನಿಗಳು ಮನೋऽಭಿಮಾನಿಯಾದ ರುದ್ರನಲ್ಲಿಯೂ, ರುದ್ರದೇವರು ಸರಸ್ವತಿಯಲ್ಲಿಯೂ, ಸರಸ್ವತಿಯು ಬ್ರಹ್ಮ-ಲಕ್ಷ್ಮಿಯರ

ಮುಖಾಂತರ ಕ್ರಮವಾಗಿ ಭಗವದ್ರೂಪದಲ್ಲಿ ಲಯವನ್ನು ಹೊಂದುತ್ತಿದ್ದಾರೆಂದು ಚಿಂತಿಸಬೇಕು. ನಂತರ ಹಿಮ್ಮಡಿಯಿಂದ ಗುದದ್ವಾರವನ್ನು ಪೀಡಿಸಿ ಮೂಲಾಧಾರದಿಂದ ಉದಾನವಾಯುವನ್ನು ಹೊರಹಾಕಿ ನಾಭಿ-ಹೃದಯ-ಕಂಠ-ತಾಲು-ಭ್ರೂಮಧ್ಯಗಳ ಮೂಲಕ ಸಹಸ್ರಾರಕ್ಕೆ ತಂದು ತಲೆಯನ್ನು ಭೇದಿಸಿ ಶರೀರವನ್ನು ತ್ಯಜಿಸಬೇಕು. ಇಂಥವರು ತಮ್ಮ ಸಾಧನ-ತಾರತಮ್ಯಕ್ಕೆ ಅನುಗುಣವಾಗಿ ಮಹರಾದಿ-ವೈಕುಂಠ-ಲೋಕಗಳಲ್ಲಿ ಬ್ರಹ್ಮಪ್ರಲಯಪರ್ಯಂತವಾಗಿ ಸುಖವನ್ನು ಅನುಭವಿಸುತ್ತಾರೆ. ಬ್ರಹ್ಮಪ್ರಲಯವಾದ ನಂತರ ಬ್ರಹ್ಮೋಪದೇಶವನ್ನು ಪಡೆದು ಲಿಂಗದೇಹದಿಂದ ಮುಕ್ತನಾಗಿ ಸ್ವರೂಪಸುಖವನ್ನನುಭವಿಸುತ್ತಾ ಇರುತ್ತಾನೆ. ಮತ್ತೆ ಇವನು ಸಂಸಾರಕ್ಕೆ ತಿರುಗಿ ಬರುವುದಿಲ್ಲ.

*ಇಲ್ಲಿಯ ವರೆಗೆ ಮನೋಜಯಸಾಧನವಾದ ಭಗವಂತನ ಸ್ಥೂಲರೂಪಧಾರಣಾವನ್ನು ಹೇಳಿ ಸ್ವಯೋಗ್ಯಧ್ಯಾನಮಾಡಬೇಕೆಂದು ಹಿಂದೆ ಹೇಳಿದ್ದನ್ನು ಈ ಅಧ್ಯಾಯದಲ್ಲಿ ವಿವರಿಸುವರು. ಮೊದಲಿಗೆ ಹೇಳಿದ ಧಾರಣಾದಲ್ಲಿ ವಿಶ್ವಾಸ ಹುಟ್ಟಿಸಲು ಹಿಂದೆ ಬ್ರಹ್ಮದೇವರು ಧಾರಣಾದ ಫಲವನ್ನು ಪಡೆದಿರುವವರು ಎಂದು ತಿಳಿಸುವರು-*

**ಶುಕ ಉವಾಚ**

**ಏವಂ ಪುರಾ ಧಾರಣಯಾऽತ್ಮಯೋನಿರ್ನಷ್ಟಾಂ ಸ್ಮೃತಿಂ ಪ್ರತ್ಯವರುಹ್ಯ ತುಷ್ಯನ್ ।**
**ತಥಾ ಸಸರ್ಜೇದಮಮೋಘದೃಷ್ಟಿರ್ಯಥಾಪ್ಯಯಾತ್ ಪ್ರಾಗ್ವ್ಯವಸಾಯಬುದ್ಧಿಃ ॥**

**ಆತ್ಮಯೋನಿಃ** ಪರಮಾತ್ಮನೇ ಕಾರಣನಾಗಿ ಉಳ್ಳ ಬ್ರಹ್ಮದೇವರು, **ಪುರಾ** ಸೃಷ್ಟಿಯ ಮೊದಲು **ನಷ್ಟಾಂ** ತಿರೋಹಿತವಾದ, **ಸ್ಮೃತಿಂ** ಪೂರ್ವಕಲ್ಪ ವಿಷಯಕ ಸ್ಮರಣ ಉಳ್ಳವರಾಗಿ, **ಏವಂ** ಹೇಳಿದ ಧಾರಣಾದಿಂದ **ಪ್ರತ್ಯವರುಹ್ಯ** ಅಂಕುರೀಕರಿಸಿ ಅಂದರೆ ಪೂರ್ವಕಲ್ಪದ ಸ್ಮರಣವನ್ನು ಪಡೆದು, **ತುಷ್ಯನ್** ಧಾರಣಾ ವಿಷಯನಾದ ಶ್ರೀಹರಿಯನ್ನು, ಸಂತೋಷಗೊಳಿಸಿ ತಾವೂ ಅಲಂಬುದ್ಧಿಯನ್ನು ಪಡೆದು, **ವ್ಯವಸಾಯಬುದ್ಧಿಃ** ಜಗತ್ಸೃಷ್ಟಿಯ ಉದ್ಯೋಗದ ಜ್ಞಾನ ಉಳ್ಳವರಾಗಿ, **ಅಪ್ಯಯಾತ್ ಪ್ರಾಕ್ ಯಥಾ** ಪ್ರಲಯದ ಮೊದಲು ಹೇಗಿತ್ತೋ, **ತಥಾ** ಹಾಗೆ, **ಇದಂ ಸಸರ್ಜ** ಈ ಜಗತ್ತನ್ನು ಸೃಷ್ಟಿಸಿದನು. ॥೧॥

ಹೀಗೆ ಮನೋಜಯಕ್ಕೆ ಸ್ಥೂಲರೂಪ ಭಗವದ್ಧಾರಣಾರೂಪವಾದ ಒಂದು ಸಾಧನವನ್ನು ಸಂಕ್ಷೇಪ ವಿಸ್ತಾರಗಳಿಂದ ಹೇಳಿ ಈಗ ಭಗವದ್ವಾಚಕಗಳಾದ ಇಂದ್ರ ಅಗ್ನಿ

ಮುಂತಾದ ಎಲ್ಲ ನಾಮಗಳಿಂದ ಬೇರೆ ಪದಾರ್ಥಗಳ ಸ್ಮರಣ ಮಾಡಬಾರದು ಎಂಬ ಮತ್ತೊಂದು ಸಾಧನವನ್ನು ಹೇಳಲು ಮೊದಲಿಗೆ ಎಲ್ಲ ನಾಮಗಳಿಗೆ ಭಗವಂತನೇ ಮುಖ್ಯ ವಾಚ್ಯ ಎಂದು ಪ್ರಮಾಣ ಸಹಿತವಾಗಿ ಹೇಳುವರು-

**ಶಬ್ದಸ್ಯ ಹಿ ಬ್ರಹ್ಮಣ ಏಷ ಪಂಥಾ ಯನ್ನಾಮಭಿರ್ಧ್ಯಾಯತಿ ಧೀರಪಾರ್ಥೈಃ ।**
**ಪರಿಭ್ರಮಂಸ್ತತ್ರ ನ ವಿಂದತೇಽರ್ಥಾನ್ ಮಾಯಾಮಯೇ ವಾಸನಯಾ ಶಯಾನಃ ॥**

**ಮಾಯಾಮಯೇ** ಭಗವದಿಚ್ಛಾಧೀನವಾದ, ಪ್ರಕೃತಿನಿರ್ಮಿತವಾದ ಸಂಸಾರದಲ್ಲಿ **ವಾಸನಯಾ** ಅವಿದ್ಯಾದಿಂದ, ಅನಾದಿಯಾದ ಸಂಸ್ಕಾರದಿಂದ, **ಶಯಾನಃ** ಬದ್ಧನಾದ, **ಜೀವಃ** ಜೀವನು, **ಪರಿಭ್ರಮನ್** ನಾನಾಯೋನಿಗಳಲ್ಲಿ ತಿರುಗುವನು. ಅಥವಾ ಪುರಂದರಾದಿಗಳೇ ಇಂದ್ರಾದಿ ಶಬ್ದಗಳಿಗೆ ಮುಖ್ಯವಾಚ್ಯರೆಂಬ ಭ್ರಮವುಳ್ಳವನಾಗಿ, **ಯತ್** ಯಾವ ಕಾರಣ, **ಅಪಾರ್ಥೈಃ** ಪ್ರವೃತ್ತಿನಿಮಿತ್ತವನ್ನು ಕಾಣಲಾರನು. ಅಥವಾ **ತತ್ರ** ಪುರಂದರಾದಿಗಳಿಂದ, **ಅರ್ಥಾನ್** ಪುರುಷಾರ್ಥಗಳನ್ನು, **ನ ವಿಂದತೇ** ಹೊಂದಲಾರನು. ಹಾಗಾದರೆ ಮುಖ್ಯಾರ್ಥ ಯಾರು ಎಂದರೆ, **ಬ್ರಹ್ಮಣಃ** ಅಪರಿಮಿತವಾದ, **ಶಬ್ದಸ್ಯ** ವೇದಕ್ಕೆ, **ಏಷಃ** ಶ್ರೀಹರಿಯೇ, **ಪಂಥಾಃ** ಮಾರ್ಗನು ಮುಖ್ಯವಾಚ್ಯನೆಂದರ್ಥ. **ಹಿ** ಆಗಮಪ್ರಸಿದ್ಧವು ಕರ್ಮಾದಿಗಳು ವೇದಪ್ರತಿಪಾದ್ಯವಾಗಿರುವಾಗ ಎಲ್ಲ ವೇದಗಳಿಗೆ ಶ್ರೀಹರಿಯೇ ಮುಖ್ಯವಾಚ್ಯ ಹೇಗೆ ? ಎಂಬ ಶಂಕಾನಿರಾಸಮಾಡಲೆಂದೇ ಮುಖ್ಯವಾಚ್ಯನೆಂದು ಹೇಳಬೇಕಾದಲ್ಲಿ ಪಂಥಾ ಎಂದಿರುವರು. ಆದರಿಂದ ಬೇರೆ ಪದಾರ್ಥಗಳಲ್ಲಿ ಶಬ್ದ ಪ್ರವೃತ್ತವಾಗಲು ಶ್ರೀಹರಿಯೇ ಮಾರ್ಗ ಎಂದು ಸಮನ್ವಯ ಪ್ರಕಾರ ಸೂಚಿಸಿದ್ದರಿಂದ ಮಾಡಿದ ಶಂಕೆಗೆ ಅವಕಾಶವಿಲ್ಲ 'ಮಾಂ ವಿಧತ್ತೇಽಭಿಧತ್ತೇ ಮಾಂ' ಮುಂತಾಗಿ ಹೇಳುವರು.

ಇಲ್ಲಿ ಹರಿಃ ಅಶೇಷ ಇಂದ್ರಾದಿ ಶಬ್ದ ಮುಖ್ಯವಾಚ್ಯಃ ತಥಾ ಧ್ಯಾನೇನ ಪುರುಷಾರ್ಥಪ್ರದತ್ವಾತ್ ವ್ಯತಿರೇಕೇಣ ಇಂದ್ರಾದಿವತ್ ಎಂಬ ಅನುಮಾನವು ಅಭಿಪ್ರೇತವಾಗಿದೆ. 'ತತ್ರ ನ ವಿಂದತೇಽರ್ಥಾನ್' ಎಂಬುದರಿಂದ ಹೇತು ಸೂಚನ ಮಾಡಿರುವರು.

ಈ ಶ್ಲೋಕದಲ್ಲಿ ಏಷಃ ಎಂಬ ಪದದಿಂದ ಪ್ರಕೃತನಾದ ವಿರಿಂಚನನ್ನು ಪರಾಮರ್ಶ ಮಾಡಿದರೆ ಅವನಿಗೆ ಸರ್ವಶಬ್ದವಾಚ್ಯತ್ವ ಸಮರ್ಥನ ಮಾಡಲಾಗದು ಕಾರಣ ಅನುವಾದ ಮಾಡಿ ಪರಾಮರ್ಶ ವಿಷಯ ಯಾರೆಂದು ಹೇಳುವರು. ''ಏಷಃ ಹರಿಃ''

ಇಲ್ಲಿ ಏಷಃ ಎಂದರೆ ಶ್ರೀಹರಿಯು ಅವನು ಆತ್ಮಯೋನಿಃ ಎಂಬಲ್ಲಿ ಆತ್ಮಪದದಿಂದ ಪ್ರಕೃತನಾಗಿರುವನು ಎಂದು ಭಾವ.

ಯನ್ನಾಮಭಿಃ ಎಂಬುದು ಒಂದೇ ಪದವೆಂದಾದರೆ ಧ್ಯಾಯತಿ ಎಂಬುದಕ್ಕೆ ಕರ್ಮ ವಾಚಕವಿಲ್ಲದಂತಾಗುವದು. ಕಾರಣ ಯತ್ ಎಂಬುದು ಭಿನ್ನ ಪದವು ಕರ್ಮವಾಚಕ ಎಂದು ತೋರಿಸುತ್ತಾ ಅನ್ವಯ ಹೇಳುವರು ''ಯತ್ ಅಪಾರ್ಥ್ಯೈಃ ಧ್ಯಾಯತಿ ತತ್ರ ಅರ್ಥಾನ್ ನ ವಿಂದತೇ'' ಯಾವ ಪುರಂದರಾದಿಗಳನ್ನು ಇಂದ್ರಾದಿನಾಮಗಳಿಂದ ನಿರಂತರ ಸ್ಮರಿಸುವನೋ ಅವರಿಂದ ಪುರುಷಾರ್ಥವನ್ನು ಹೊಂದುವುದಿಲ್ಲ. ಯತ್ ಎಂಬುದು ಹೇತ್ವರ್ಥವೂ ಆಗಿದೆ ಎಂದಿಟ್ಟುಕೊಂಡು ಅನ್ವಯ ತೋರಿಸುವರು. ಯದಪಾರ್ಥ್ಯೈಃ ಎಂದು ಯಾವ ಕಾರಣ ಪ್ರವೃತ್ತಿನಿಮಿತ್ತಗಳಿಲ್ಲದ ನಾಮಗಳಿಂದ ಸ್ಮರಿಸುವನಾದ್ದರಿಂದ ಎಂದರ್ಥ ।।೨।।

ಈಗ ಮನೋಜಯಕ್ಕೆ ಬೇಕಾದ ಸಹಕಾರಿಕಾರಣವಾದ ಶಬ್ದಗಳಿಂದ ಇತರ ಪದಾರ್ಥಗಳನ್ನು ಸ್ಮರಿಸದಿರುವುದನ್ನೇ ಹೇಳುವರು-

**ಅತಃ ಕವಿರ್ನಾಮಸು ಯಾವದರ್ಥಃ ಸ್ಯಾದಪ್ರಮತ್ತೋ ವ್ಯವಸಾಯಬುದ್ಧಿಃ ।**
**ಸಿದ್ಧೇಽನ್ಯಥಾರ್ಥೇ ನ ಯತೇತ ತತ್ತತ್ಪರಿಶ್ರಮಂ ತತ್ರ ಸಮೀಕ್ಷಮಾಣಃ ।। ೩ ।।**

**ಅತಃ** ಎಲ್ಲ ನಾಮಗಳೂ ಶ್ರೀಹರಿಯ ಮುಖ್ಯವಾಚಕಗಳಾದ್ದರಿಂದ, **ಕವಿಃ** ಜ್ಞಾನಿಯಾದವನು, **ನಾಮಸು** ಇಂದ್ರಾದಿನಾಮಗಳಲ್ಲಿ, **ಅಪ್ರಮತ್ತಃ ಸ್ಯಾತ್** ಇತರಾರ್ಥ-ಸ್ಮರಣಶೀಲನಾಗಬಾರದು. **ವ್ಯವಸಾಯಬುದ್ಧಿಃ** ಶರೀರಯಾತ್ರಾ ನಡಿಸಬೇಕೆಂಬ ಬುದ್ಧಿಯುಳ್ಳವನೂ ಸಹ, **ಯಾವದರ್ಥಃ** ಎಷ್ಟು ಇತರ ಪದಾರ್ಥಸ್ಮರಣದಿಂದ ತನ್ನ ಪ್ರಯೋಜನವಾಗುವುದೋ ಅಷ್ಟು ಮಾಡಬಹುದು. (ಶರೀರಯಾತ್ರೋಪಯುಕ್ತ ಇತರಾರ್ಥ ಸ್ಮರಣ ಮನೋಜಯ ಪ್ರತಿಬಂಧಕವಲ್ಲವೆಂದು ಭಾವ (ಇತರ ಅರ್ಥಗಳನ್ನು ಸ್ಮರಿಸುವಾಗಲೂ ಹರಿವಿಷಯಕತ್ವಾನುಸಂಧಾನ ಆವಶ್ಯಕ ಎಂದೂ ತಿಳಿಸಲು ವ್ಯವಸಾಯಬುದ್ಧಿಃ ಎಂದಿರುವರು. ಅಂದರೆ ನಾಮಗಳೆಲ್ಲ ಮುಖ್ಯವಾಗಿ ಹರಿವಾಚಕಗಳೇ ಎಂಬ ನಿಶ್ಚಯಬುದ್ಧಿಯುಳ್ಳವನಾಗಬೇಕು ಅನಿವಾರ್ಯವಾಗಿ ಬೇರೆ ಕಡೆ ಉಪಯೋಗಿಸುವುದು ಎಂದು ತಿಳಿಯಬೇಕು) **ಅನ್ಯಥಾ** ಇತರ ಅರ್ಥಗಳನ್ನು ಸ್ಮರಿಸದೇ, **ತತ್** ಆ ಅರ್ಥೇ ಪ್ರಯೋಜನವು, **ಸ್ವತಃ ಏವ ಸಿದ್ಧೇ** ತಾನಾಗಿ ಆಗುತ್ತಿದ್ದರೆ, **ತತ್** ಅದರಲ್ಲಿ ನ **ಯತೇತ** ಪ್ರಯತ್ನ ಮಾಡಬಾರದು ಏಕೆಂದರೆ ಇಷ್ಟವಾದ

ಮನೋಜಯವಾಗಲಾರದು, ಅನಿಷ್ಟವಾದ ನರಕಾದಿಗಳಾಗುವವು ಎಂಬ ತನ್ನ ನಾಶವನ್ನು ತಿಳಿದವನಾಗಿ ಇತರ ಪ್ರಯತ್ನ ಮಾಡಬಾರದು ಎಂದು ಭಾವ. ।।೩।।

ಎರಡೂ ಶ್ಲೋಕದ ಅರ್ಥದಲ್ಲಿ ಪ್ರಮಾಣ ಹೇಳುವರು-

**ತಾತ್ಪರ್ಯ- ಸರ್ವನಾಮಾ ಯತೋ ವಿಷ್ಣುಸ್ತದನ್ಯಾರ್ಥಾನ್ನ ತು ಸ್ಮರೇತ್ ।**
**ಸ್ಮರಂಸ್ತು ಯಾವದರ್ಥಃ ಸ್ಯಾದನ್ಯಥಾ ಸ್ವಾತ್ಮಹಾ ಸ್ಮೃತಃ ।। -ಇತಿ ಬ್ರಹ್ಮಾಂಡೇ**

ಎಲ್ಲ ನಾಮಗಳಿಂದಲೂ ಶ್ರೀಹರಿಯೇ ಮುಖ್ಯವಾಗಿ ಹೇಳಲ್ಪಡುವುದರಿಂದ ಬೇರೆ ಅರ್ಥಗಳನ್ನು ಸ್ಮರಣ ಮಾಡಬಾರದು. ದೇಹಯಾತ್ರೆಗಾಗಿ ಸ್ಮರಿಸುವುದಾದರೂ ತನ್ನ ಪ್ರಯೋಜನ ಎಷ್ಟರಿಂದ ಸಿದ್ಧವಾಗುವುದೋ ಅಷ್ಟನ್ನು ಮಾತ್ರ ಸ್ಮರಿಸಬೇಕು. ಪ್ರಯೋಜನ ಬೇರೇರೀತಿಯಿಂದ ಆಗುವಾಗಲೂ ಅನ್ಯಾರ್ಥಸ್ಮರಣ ಮಾಡಿದರೆ ತನ್ನ ಹಾನಿಯನ್ನೇ ತಾನು ಮಾಡಿಕೊಂಡಂತೆ. ಅವನಿಗೆ ಮನೋಜಯವಾಗುವುದಿಲ್ಲ. ನರಕವಾಗುತ್ತದೆ ಎಂದು ಬ್ರಹ್ಮಾಂಡ ಪುರಾಣದಲ್ಲಿದೆ. ।।೩।।

*ಈಗ ಸ್ವತಃಸಿದ್ಧಿಯ ಪ್ರಕಾರವನ್ನು ತಿಳಿಸುವರು-*

**ಸತ್ಯಾಂ ಕ್ಷಿತೌ ಕಿಂ ಕಶಿಪೋಃ ಪ್ರಯಾಸೈಃ ಬಾಹೌ ಸ್ವಸಿದ್ಧೇ ಹ್ಯುಪಬರ್ಹಣೈಃ ಕಿಮ್ ।**
**ಸತ್ಯಂಜಲೌ ಕಿಂ ಪುರುಪರ್ಣಪಾತ್ರ್ಯೈಃ ದಿಗ್ವಸ್ತ್ರಲಾಭೇ ಸತಿ ಕಿಂ ದುಕೂಲೈಃ ।। ೪ ।।**

**ಸತ್ಯಾಂ ಕ್ಷಿತೌ** ಭೂಮಿಯು ಇರುವಾಗ, **ಕಶಿಪೋಃ** ಹಾಸಿಗೆಯ ಸಂಪಾದನೆಗಾಗಿ ಮಾಡುವ, **ಪ್ರಯಾಸೈಃ ಕಿಂ** ಆಯಾಸದಿಂದೇನು ಪ್ರಯೋಜನ ? ಮಾಡಬೇಕಿಲ್ಲವೆಂದರ್ಥ. **ಬಾಹೌ** ಕೈಗಳು (ತೋಳುಗಳು), **ಸ್ವಸಿದ್ಧೇ** ಅನಾಯಾಸವಾಗಿರುವಾಗ, **ಉಪಬರ್ಹಣೈಃ ಕಿಂ** ತಲೆದಿಂಬು ಏತಕ್ಕೆ ? **ಅಂಜಲೌ ಸತಿ** ಬೊಗಸಿ ಇರುವಾಗ, **ಪುರುಪರ್ಣಪಾತ್ರೈಃ ಕಿಂ** ವಿಶಾಲವಾದ ಪತ್ರಾವಳಿ ಏಕೆ ? **ದಿಗ್ವಸ್ತ್ರಲಾಭೇ ಸತಿ ದೂಕೂಲೈಃ ಕಿಂ** ದಿಗಂಬರನಾಗಿರಲು ಬರುತ್ತಿರಲು ರೇಷ್ಮೇ ವಸ್ತ್ರವೇಕೆ ?

ಬೇರೇ ಬೇರೇ ಪದಾರ್ಥಗಳಿಗಾಗಿ ಪ್ರಯತ್ನಿಸುವಾಗ ಅವುಗಳಲ್ಲಿ ಶಬ್ದಗಳನ್ನು ಉಪಯೋಗಿಸಬೇಕಾಗುವುದು. ಅವುಗಳೇ ಬೇಡವೆಂದಾದರೇ ಯಾರನ್ನೂ ಏನನ್ನೂ ಯಾವ ಶಬ್ದದಿಂದಲೂ ಕೇಳಬೇಕಿಲ್ಲವೆಂದು ಭಾವ ।।೪।।

*ಇದುವರೆಗೆ ಪರಿಪಕ್ವಯೋಗಿಗಳಿಗೆ ಸ್ವತಃಸಿದ್ಧಿಪ್ರಕಾರವನ್ನು ತಿಳಿಸಿ ಅಪರಿಪಕ್ವಯೋಗಿಗಳಿಗೂ ಸ್ವತಃಸಿದ್ಧಿಯನ್ನು ತಿಳಿಸುವರು-*

**ಚೀರಾಣಿ ಕಿಂ ಪಥಿ ನ ಸಂತಿ ದಿಶಂತಿ ಭಿಕ್ಷಾಂ**
**ನೋ ವಾಽಂಘ್ರಿಪಾಃ ಪರಭೃತಃ ಸರಿತೋಽಪ್ಯಶುಷ್ಯನ್ ।**
**ರುದ್ಧಾ ಗುಹಾಃ ಕಿಮವಧೂತಸುಹೃನ್ನ ಕೃಷ್ಣಃ**
**ಕಸ್ಮಾದ್ಭಜಂತಿ ಕವಯೋ ಧನದುರ್ಮದಾಂಧಾನ್ ॥ ೫ ॥**

'ಪಟಚೀರಾಣಿ ಗೃಹಿಭಿರ್ದೇಯಾನಿ ಪಥಿ ತೋರಣೇ' । 'ದರಿದ್ರಾಣಾಂ ಚ ಭಿಕ್ಷೂಣಾಮಾಚ್ಛಾದನಕರಾಣಿ ಚ' ಎಂದು ಸ್ಮೃತಿ ಇದೆ. ಗೃಹಸ್ಥಾಶ್ರಮಿಗಳು ಬಡವರಿಗಾಗಿ ಭಿಕ್ಷುಕರಿಗಾಗಿ ಹೊರ ಬಾಗಿಲಲ್ಲಿ ಮಾರ್ಗಗಳಲ್ಲಿ ತಾವು ಬಳಸಿದ ಬಟ್ಟೆಗಳನ್ನು ಇರಿಸಬೇಕು. ಅವುಗಳನ್ನು ಇವರು ಸ್ವೀಕರಿಸುವರು ಎಂದು ಹೇಳಿದೆ.

**ಪಥಿ** ಹೊರ ಬಾಗಿಲಲ್ಲೇ, **ಚೀರಾಣಿ** ವಸ್ತ್ರಗಳು, **ನ ಸಂತಿ ಕಿಂ** ಇಲ್ಲವೇನು ? **ಪರಭೃತಃ** ಹಣ್ಣು ಮುಂತಾದವುಗಳಿಂದ ಬೇರೆಯವರನ್ನು ಪೋಷಿಸುವ, **ಅಂಘ್ರಿಪಾಃ** ವೃಕ್ಷಗಳು, ಭಿಕ್ಷಾಂ **ನ ದಿಶಂತಿ ಕಿಂ** ಫಲಾದಿರೂಪವಾದ ಅನ್ನವನ್ನು ಕೊಡುವುದಿಲ್ಲವೇನು. **ಸರಿತಃ ಅಶುಷ್ಯನ್ ಕಿಂ** ನೀರಿಗಾಗಿ ನದಿಗಳೇ ಒಣಗಿದವೇ ? **ಗುಹಾಃ** ಗುಡ್ಡದ ಗುಹೆಗಳೇನು, **ರುದ್ಧಾಃ ಕಿಂ** ವಾಸ ಮಾಡದಂತೆ ಮುಚ್ಚಿರುವವೇನು ? ಕ್ರೂರಪ್ರಾಣಿಗಳಿಂದ ಭಯಪರಿಹರಿಸಲು, **ಕೃಷ್ಣಃ** ಶ್ರೀಕೃಷ್ಣನು, **ಅವಧೂತಸುಹೃತ್ ನ ಕಿಂ** ಧೂಲಿಧೂಸರಾಂಗರಾದ ಅವಧೂತರಿಗೆ ಗೆಳೆಯ ಅಲ್ಲವೇನು ? ಗೆಳೆಯನೇ ಆಗಿದ್ದಾನೆ. ಆದ್ದರಿಂದ ಅವಶ್ಯವಾಗಿ ಭಯವನ್ನು ಪರಿಹರಿಸುತ್ತಾನೆ. ಈ ರೀತಿ ಎಲ್ಲವೂ ಸ್ವತಃ ಸಿದ್ಧವಾದಾಗ, **ಕವಯಃ** ಜ್ಞಾನಿಗಳು, **ಧನದುರ್ಮದಾಂಧಾನ್** ಧನಮದವುಳ್ಳವರನ್ನು, **ಕಸ್ಮಾದ್ಭಜಂತಿ** ಏಕೆ ಸೇವಿಸುವರು ? ಸೇವಿಸುವುದಿಲ್ಲ. ಆದ್ದರಿಂದ ಇವರೂ ಸಹ ಶಬ್ದಗಳನ್ನು ಬೇರೆ ಕಡೆ ಉಪಯೋಗಿಸಬೇಕಿಲ್ಲವೆಂದು ಭಾವ. ॥೫॥

*ಈವರೆಗೆ ಮನೋಜಯಸಾಧನಗಳೆರಡನ್ನು ಹೇಳಿ ಅದರಿಂದ ಸಾಧ್ಯವಾದ ಸ್ವಯೋಗ್ಯ ಧ್ಯಾನವನ್ನು ವಿವರಿಸುವರು-*

**ಏವಂ ಸ್ವಚಿತ್ತೇ ಸ್ವತ ಏವ ಸಿದ್ಧೇ ಆತ್ಮಪ್ರಿಯೋಽರ್ಥೋ ಭಗವಾನನಂತಃ ।**
**ತಂ ನಿರ್ವೃತೋ ನಿಯತಾರ್ಥೋ ಭಜೇತ ಸಂಸಾರಹೇತೂಪರಮಶ್ಚ ಯತ್ರ ॥**

**ಯತ್ರ** ಯಾವ ಭಜನೆಯನ್ನು ಮಾಡಿದಾಗ, **ಸಂಸಾರಹೇತೂಪರಮಃ** ಸಂಸಾರ ಕಾರಣವಾದ ಅವಿದ್ಯಾ-ಕಾಮ-ಕರ್ಮಾದಿಗಳ ಆತ್ಯಂತಿಕನಿವೃತ್ತಿಯಾಗುವುದೋ ಅಂತಹ, **ಏವಂ** ಹಿಂದೆ ಹೇಳಿದ ಎರಡು ಸಾಧನಗಳಿಂದ, **ಸ್ವಚಿತ್ತೇ** ತನ್ನ ಜಡರೂಪವಾದ ಮತ್ತು

ಸ್ವರೂಪ ಮನಸ್ಸು ಸ್ವತ **ಏವ ಸಿದ್ಧೇ** ವಶವಾದಾಗ, **ಆತ್ಮಾ** ಭಕ್ತರನ್ನು ತನ್ನವರೆಂದು ಸ್ವೀಕರಿಸುವ, **ಪ್ರಿಯಃ ಅರ್ಥಃ** ಆತ್ಮ-ಆತ್ಮೀಯ ವಸ್ತುಗಳಿಗಿಂತ ಪ್ರಿಯನಾದ, **ಅನಂತಃ** ತ್ರಿವಿಧಾನಂತ್ಯ ಉಳ್ಳ **ಭಗವಾನ್** ಶ್ರೀಹರಿ ಎನಿರುವನೋ ಅವನನ್ನು, **ಭಜೇತ** ಧ್ಯಾನಿಸಬೇಕು. **ನಿಯತಾರ್ಥಃ ನಿರ್ವೃತಃ** ದೇಹದಿಂದ ಹೊರಬಂದು ಪರಮಾತ್ಮನನ್ನು ಹೊಂದುವೆನು ಎಂದು ಶ್ರುತಿಯಲ್ಲಿ ಹೇಳಿದ ಪ್ರಯೋಜನ ನಿಶ್ಚಯವುಳ್ಳವನಾಗಿ ಭಜಿಸಬೇಕು. ನಂತರ **ನಿರ್ವೃತಃ** ಸ್ವರೂಪಾನಂದಾನುಭವದಿಂದುಂಟಾದ ರೋಮಾಂಚನ ಉಳ್ಳವನಾಗಿ ಭಜಿಸಬೇಕು.

ನಿಯತಾರ್ಥ ಶಬ್ದದ ಅರ್ಥವನ್ನು ತಿಳಿಸುವರು-

**ತಾತ್ಪರ್ಯ- ''ಏತಮಿತಸ್ತಂ ಪ್ರೇತ್ಯಾಭಿ ಸಂಭವಿತಾಽಸ್ಮಿ'' ಇತಿ ನಿಯತಾರ್ಥಃ ॥**

ಮರಣಾನಂತರ ಪರಮಾತ್ಮನನ್ನು ಹೊಂದೇ ಹೊಂದುವೆನು ಎಂದು ಪ್ರಯೋಜನ ನಿಶ್ಚಯ ಉಳ್ಳವನಾಗಿ ಎಂದರ್ಥ. ॥೬॥

ಅನುಂಸಂಧಾನ ಮಾಡಬೇಕಾದ ಗುಣಗಳನ್ನು ತಿಳಿಸುತ್ತ ಪುನಃ ಧ್ಯಾನವನ್ನು ಮಾಡಬೇಕೆಂದು ಹೇಳಿ, ಮಾಡದಿದ್ದರೇ ಬಾಧಕವನ್ನೂ ಹೇಳುವರು-

**ಸ ಸರ್ವವಿದ್‌ಹೃದ್ಯನುಭೂಶ್ಚ ಸರ್ವ ಆತ್ಮಾ ಯಥಾ ಸುಪ್ತಜನೇಕ್ಷಿತೈಕಃ ।**
**ತಂ ಸತ್ಯಮಾನಂದನಿಧಿಂ ಭಜೇತ ಸರ್ವಾತ್ಮನಾಽತೋನ್ಯತ ಆತ್ಮಘಾತಃ ॥ ೭ ॥**

**ಸಃ** ಭಜನೀಯನಾದ ಅನಂತನು, **ಸರ್ವವಿತ್** ಎಲ್ಲವನ್ನೂ ನೋಡುವವನು, **ಹೃದಿ** ಎಲ್ಲರ ಹೃದಯದಲ್ಲಿ, **ಸ್ಥಿತಃ** ಇರುವವನು, **ಅನುಭೂಃ** ತನ್ನ ಇಚ್ಛಾನುಸಾರ ವಿಗ್ರಹ ಸ್ವೀಕರಿಸುವುದರಿಂದ ಅನುಭೂ ಎನಿಸಿದ (ಇಚ್ಛಾಂ ಅನುಭವತೀತಿ ಅನುಭೂಃ) **ಚ** ಮತ್ತು ಕರ್ಮಗಳಿಗೆ ಒಡೆಯನಾದವನು ಎಲ್ಲರ ನಿಯಾಮಕನು, **ಸರ್ವಃ** ಗುಣಪೂರ್ಣನು, **ಆತ್ಮಾ** ಸ್ವಾಮಿಯು, **ಯಥಾ** ಹೇಗೆ, **ಏಕಃ** ತಾನೊಬ್ಬನೇ, **ಅಸುಪ್ತಃ** ನಿದ್ರೆ ಮಾಡದೇ, **ಸುಪ್ತಜನೇಕ್ಷಿತಾ** ಸುಪ್ತ್ಯವಸ್ಥೆಯಲ್ಲಿ ನಿದ್ರಿಸುವ ಬಹು ಜನರನ್ನು ನೋಡುವನು, **ತಥಾ** ಹಾಗೆ ಜಾಗ್ರದವಸ್ಥೆಯಲ್ಲಿಯೂ, **ಏಕ ಏವ** ಒಬ್ಬನೇ ಅಜ್ಞಾನರಹಿತನಾದವನು, **ಸುಪ್ತಜನೇಕ್ಷಿತಾ** ಅಜ್ಞಾನಬದ್ಧರಾದ ಜನರನ್ನು ನೋಡುವನು, (ಆವೃತ್ತಿಮಾಡಿ ಅರ್ಥ ಮಾಡಿದ್ದು) **ತಂ** ಆ, **ಸತ್ಯಂ** ಸರ್ವೋತ್ತಮನಾದ, **ಆನಂದನಿಧಿಂ** ಪೂರ್ಣಾನಂದನಾದ, (ಆನಂದಃ ನಿತರಾಂ ಧೀಯತೇ ಅಸ್ಮಿನ್ ಇತಿ ಆನಂದನಿಧಿಃ ತಂ) **ಸರ್ವಾತ್ಮನಾ ಭಜೇತ** ಅವಶ್ಯವಾಗಿ ಎಂತಹ ಸಂದರ್ಭದಲ್ಲಿಯೂ ಉಪಾಸಿಸಬೇಕು.

(ಆಧಿವ್ಯಾಧಿಗಳಿದ್ದರೂ) 'ಓಂ ಆನಂದಾದಯಃ ಪ್ರಧಾನಸ್ಯ ಓಂ' ಎಂಬ ಸೂತ್ರದಲ್ಲಿ ಸರ್ವಾಧಿಕಾರಿಸಾಧಾರಣವಾಗಿ ಹೇಳಿದ ಸತ್, ಚಿತ್, ಆನಂದ, ಆತ್ಮಾ ಎಂಬ ನಾಲ್ಕು ಗುಣಗಳನ್ನು ಸರ್ವವಿತ್, ಆತ್ಮಾ, ಸತ್ಯಂ, ಆನಂದನಿಧಿಂ ಎಂಬ ನಾಲ್ಕುಪದಗಳಿಂದ ತಿಳಿಸಿರುವರು. **ಅತೋಽನ್ಯತಃ** ಭಜನೆ ಮಾಡದಿದ್ದರೇ ವಿಷಯ ಸೇವನೆ ಮಾಡಿದರೆ, **ಆತ್ಮಘಾತಃ** ತನ್ನ ನಾಶವಾದಂತೇ. ಇಷ್ಟವಾದ ಮೋಕ್ಷ ಆಗುವುದಿಲ್ಲ ಅನಿಷ್ಟವಾದ ನರಕ ಆಗುತ್ತದೆ. ಎಂದು ಭಾವ.

ವಿಜಯಧ್ವಜರು 'ಯಥಾ ಏಕಃ' ಮುಖ್ಯಪ್ರಾಣದೇವರು ಒಬ್ಬರೆ ಹೇಗೆ ಸುಪ್ತಜನರನ್ನು ನೋಡುವರೊ ಹಾಗೆ ಸರ್ವವಿತ್ ಹರಿಯು ಎಲ್ಲವನ್ನು ನೋಡುವನು ಎಂದು ಯೋಜಿಸಿರುವರು. ಮತ್ತು ಆನಂದನಿಧಿಂ ಎಂಬುದಕ್ಕೆ 'ಅನೇನ ಪ್ರಾಣೇ ದತ್ತಾನಿ ಕರ್ಮಾಣಿ ಇತಿ ಆನಂದಪದೇನ ಕರ್ಮಾಣಿ' ಎಂದು ಮಾಡಿ ಅವುಗಳನ್ನು ಫಲಪರ್ಯಂತ ನಿಧಾಪಕನಾದ್ದರಿಂದ ಆನಂದನಿಧಿ ಎಂದರ್ಥ ಮಾಡಿರುವರು.

ಈ ಶ್ಲೋಕದಲ್ಲಿಯ 'ಸುಪ್ತಜನೇಕ್ಷಿತೈಕಃ' 'ಅನುಭೂಃ' 'ಸರ್ವಃ' 'ಸತ್ಯಂ' ಎಂಬ ಪದಗಳ ಅರ್ಥವನ್ನು ತಿಳಿಸುವರು-

**ತಾತ್ಪರ್ಯ- ಯಥೈಕಸ್ತು ಬಹೂನ್ ಸುಪ್ತಾನ್ ಅಸುಪ್ತಃ ಪಶ್ಯತಿ ಪ್ರಭುಃ ।**
**ಏವಮೀಶೋ ಬಹೂನ್ ಜೀವಾನಜ್ಞಾನ್ ಪಶ್ಯತಿ ನಿತ್ಯದೃಕ್ ॥**
**-ಇತಿ ವ್ಯೋಮ ಸಂಹಿತಾಯಾಂ ॥**

**ಸ್ವಪ್ನೇನ ಶಾರೀರಮಭಿಪ್ರಹತ್ಯ ಅಸುಪ್ತಃ ಸುಪ್ತಾನಭಿಚಾಕಶೀತಿ ॥ -ಇತಿ ಚ**
**ಯಥೇಷ್ಟಭವನಾದ್ವಿಷ್ಣುರನುಭೂಃ ಪರಿಕೀರ್ತಿತಃ ।**
**ಉದಧಿಃ ಕರ್ಮಣಾಮೀಶಃ ಸರ್ವಃ ಪೂರ್ಣಗುಣೋ ಯತಃ ।**
**ಸತ್ಯಃ ಕೇವಲಸಾರತ್ವಾತ್ ನಿಯಮೋ ನಿಯತೇರಜಃ । -ಇತಿ ಬೃಹತ್ಸಂಹಿತಾಯಾಮ್**

ಶ್ರೀಹರಿಯು ಸರ್ವಸಮರ್ಥನಾಗಿದ್ದಾನೆ. ತಾನೊಬ್ಬನೇ ನಿದ್ರಿಸದೇ ಇದ್ದು, ನಿದ್ರಿಸುತ್ತಿರುವ ಬಹು ಜೀವರನ್ನು ನೋಡುತ್ತಾನೆ. ಅದರಂತೆಯೇ ನಿತ್ಯಜ್ಞಾನವುಳ್ಳವನಾಗಿ ಅಜ್ಞಾನಬದ್ಧರಾದ ಅನೇಕಜೀವರನ್ನು ಜಾಗ್ರದವಸ್ಥೆಯಲ್ಲಿ ನೋಡುತ್ತಾನೆ. ಹೀಗೆಂದು ವ್ಯೊಮಸಂಹಿತೆಯಲ್ಲಿ ಹೇಳಿದೆ.

ಜೀವನಿಗೆ ಗಾಢ ನಿದ್ರೆ ಬರುವಂತೆ ಮಾಡಿ ತಾನು ಮಾತ್ರ ನಿದ್ರೆ ಮಾಡದೇ ಗಾಢವಾಗಿ ನಿದ್ರಿಸುವ ಜೀವರನ್ನು ಚೆನ್ನಾಗಿ ನೋಡುತ್ತಾನೆ ಎಂದು ಶ್ರುತಿಯು ಇದೆ

(ಶ್ರೀಹರಿಯು ತನ್ನ ಇಚ್ಛಾನುಸಾರವಾಗಿ ದೇಹವನ್ನು ಸ್ವೀಕರಿಸುವುದರಿಂದ 'ಅನುಭೂ' ಎಂದೂ ಕರ್ಮಗಳಿಗೆ ಪ್ರೇರಕನಾದುದರಿಂದ 'ಉದಧಿ' ಎಂದೂ ಪೂರ್ಣಗುಣ-ನಾದುದರಿಂದ 'ಸರ್ವ' ಎಂದೂ ನಿರವಧಿಕ ಉತ್ತಮನಾದ್ದರಿಂದ 'ನಿತ್ಯ' ಎಂದು, ಸರ್ವಪ್ರೇರಕನಾದ್ದರಿಂದ 'ನಿಯಮ' ಎಂದೂ ಹೇಳಲ್ಪಡುತ್ತಾನೆ ಎಂದು ಬೃಹತ್ಸಂಹಿತೆಯಲ್ಲಿದೆ ।।೭।।

ಈಗ ಹೇಳಿದ್ದನ್ನೇ ಅನ್ಯವಿಷಯಗಳ ಚಿಂತನೆಯನ್ನು ನಿಂದಿಸುವ ಮೂಲಕ ದೃಢಪಡಿಸುತ್ತಾರೆ-

**ಕಸ್ತಂ ತ್ವನಾದೃತ್ಯ ಪರಾನುಚಿಂತಾಮೃತೇ ಪಶುತ್ವಮಸತೀಂ ನಾಮ ಯುಂಜ್ಯಾತ್ ।**
**ಪಶ್ಯನ್ ಜನಂ ಪತಿತಂ ವೈತರಣ್ಯಾಂ ಸ್ವಕರ್ಮಜಾನ್ ಪರಿತಾಪಾನ್ ಜುಷಾಣಮ್ ।।**

**ಸ್ವಕರ್ಮಜಾನ್** ತಮ್ಮ ಪಾಪಕರ್ಮಗಳಿಂದುಂಟಾದ, **ಪರಿತಾಪಾನ್** ದುಃಖಗಳನ್ನು **ಜುಷಾಣಂ** ಅನುಭವಿಸುವ, **ವೈತರಣ್ಯಾಂ** ದಾಟಲು ಆಗದೇ ಇದ್ದದ್ದರಿಂದ 'ವಿತರಣ' ಎಂಬ ನರಕದಲ್ಲಿರುವುದರಿಂದ ವೈತರಣೀ ಎಂಬ ನದಿಯಲ್ಲಿ **ಪತಿತಂ** ಶ್ರೀಹರಿಯನ್ನು ಅನಾದರ ಮಾಡಿ ಇತರ ಚಿಂತನದಿಂದ ಬಂದ ದೋಷದಿಂದ ಬಿದ್ದಿರುವ, **ಜನಂ** ಜನರನ್ನು **ಪಶ್ಯನ್** ಗುರುಗಳು ಉಪದೇಶಿಸಿದ ಶಾಸ್ತ್ರದಿಂದ ತಿಳಿದು, **ಕಃ ನಾಮ** ಯಾವ ವಿವೇಕಿಯು **ತಂ ತು** ಹಿಂದೆ ಹೇಳಿದ ವಿಶೇಷಣಗಳಿಂದ ವಿಶಿಷ್ಟನಾದ ಮತ್ತು ದುಃಖನಿವರ್ತಕನಾದ ಶ್ರೀಹರಿಯನ್ನು, **ಅನಾದೃತ್ಯ** ಆದರಿಸದೇ, ಉಪಾಸಿಸದೇ, **ಅಸತೀಂ** ಅಶುಭವಾದ, **ಪರಾನುಚಿಂತಾಂ** ಇತರವಿಷಯಗಳ ಸ್ಮೃತಿಯನ್ನು, **ಪಶುತ್ವಂ ಋತೇ** ವಿವೇಕಬುದ್ಧಿ ಇಲ್ಲದವನನ್ನು ಬಿಟ್ಟು **ಯುಂಜ್ಯಾತ್** ಮಾಡಿಯಾನು? ಯಾವನೂ ಮಾಡಲಾರ. ಮಾಡಿದರೇ ಅವನು ಪಶುವೇ ಎಂದು ಭಾವ ।।೮।।

*ಈವರೆಗೆ ಉತ್ತಮಾಧಿಕಾರಿಗಳ ಧ್ಯಾನವನ್ನು ಹೇಳಿ ಇತರರು ಮಾಡಬೇಕಾದ ಧ್ಯಾನವನ್ನೂ ಹೇಳುವರು-*

**ಕೇಚಿತ್ ಸ್ವದೇಹಾಂತಃ ಹೃದಯಾವಕಾಶೇ**
**ಪ್ರಾದೇಶಮಾತ್ರಂ ಪುರುಷಂ ವಸಂತಮ್ ।**
**ಚತುರ್ಭುಜಂ ಕಂಜರಥಾಂಗಶಂಖ-**
**ಗದಾಧರಂ ಧಾರಣಯಾ ಸ್ಮರಂತಿ** ।। ೯ ।।

ಈ ಶ್ಲೋಕದಲ್ಲಿಯ 'ಸ್ವದೇಹ' ಎಂಬ ಶಬ್ದಕ್ಕೆ ಮಧ್ಯಮಾಧಿಕಾರಿಗಳ ಮತ್ತು ಅಧಮಾಧಿಕಾರಿಗಳ ದೇಹ ಎಂಬುದಾಗಿ ಅರ್ಥಮಾಡಬೇಕು. 'ಸ್ವಶ್ಚಾಸೌ ದೇಹಶ್ಚ' ಎಂದು ವಿಗ್ರಹವನ್ನು ಮಾಡಿದಾಗ ಸ್ವರೂಪದೇಹ ಎಂಬ ಅರ್ಥವು ಬರುತ್ತದೆ. ಇದು ಮಧ್ಯಮಾಧಿಕಾರಿಪರ. 'ಸ್ವಸ್ಯ ದೇಹಃ' ಎಂದು ವಿಗ್ರಹ ಮಾಡಿದಾಗ ತನಗೆ ಅಧೀನವಾದ ದೇಹ ಎಂದು ಅರ್ಥಬರುತ್ತದೆ ಇದು ಅಧಮಾಧಿಕಾರಿಪರ ಎಂದು ತಿಳಿಯಬೇಕು.

**ಕೇಚಿತ್** ಕೆಲವರು, **ಸ್ವದೇಹಾಂತಃ ಹೃದಯಾವಕಾಶೇ** ಮಧ್ಯಮ ಅಧಿಕಾರಿಗಳು ತಮ್ಮ ಸ್ವರೂಪದೇಹದ, ಅಧಮಾಧಿಕಾರಿಗಳು ತಮಗೆ ಅಧೀನವಾದ ಜಡದೇಹದ ಮಧ್ಯದಲ್ಲಿ ಇರುವ ಹೃದಯದಲ್ಲಿರುವ ಅವಕಾಶದಲ್ಲಿ, **ವಸಂತಂ** ವಾಸಿಸುವ, **ಪ್ರಾದೇಶಮಾತ್ರಂ** ಒಂದು ಚೋಟು ಪ್ರಮಾಣದ (ತೋರು ಬೆರಳು ಮತ್ತು ಹೆಬ್ಬೆರಳು ಸೇರಿಸಿದರೆ ಆಗುವ ಅಳತೆ) **ಪುರುಷಂ** ಪೂರ್ಣಷಡ್ಗುಣನಾದ, **ಚತುರ್ಭುಜಂ** ನಾಲ್ಕು ಕೈಗಳುಳ್ಳ **ಕಂಜ**ಕಮಲ, **ರಥಾಂಗ** ಚಕ್ರ, **ಶಂಖ** ಶಂಖ, **ಗದಾ** ಗದಾ ಇವುಗಳನ್ನು **ಧರಂ** ನಾಲ್ಕು ಕೈಗಳಲ್ಲಿ ಧರಿಸಿದವನನ್ನು, **ಧಾರಣಯಾ ಸ್ಮರಂತಿ** ಮೊದಲು ಒಂದೊಂದು ಅವಯವದಿಂದ ಕೂಡಿದವನನ್ನು ಸ್ಮರಿಸಿ, ನಂತರ ಸಂಪೂರ್ಣಸ್ಮರಣ ಮಾಡುವರು.

*ನಾಲ್ಕು ಶ್ಲೋಕಗಳಿಂದ ಶ್ರೀಹರಿಯ ವಿಶೇಷಣಗಳನ್ನೇ ಹೇಳುವರು-*

**ಪ್ರಸನ್ನವಕ್ತ್ರಂ ನಲಿನಾಯತೇಕ್ಷಣಂ ಕದಂಬಕಿಂಜಲ್ಕಪಿಶಂಗವಾಸಸಮ್ ।**
**ಲಸನ್ಮಹಾಹಾರಹಿರಣ್ಮಯಾಂಗದಂ ಸ್ಫುರನ್ಮಹಾರತ್ನಕಿರೀಟಕುಂಡಲಮ್ ॥ ೧೦ ॥**

**ಪ್ರಸನ್ನವಕ್ತ್ರಂ** ಭಕ್ತರಿಗೆ ಪ್ರಸಾದಾಭಿಮುಖವಾದ ಮುಖ ಉಳ್ಳ, **ನಲಿನಾಯತೇಕ್ಷಣಂ** ಕೆಂಪು ಕಮಲದಂತೆ ವಿಶಾಲವಾದ ಕಣ್ಣುಗಳುಳ್ಳ, **ಕದಂಬಕಿಂಜಲ್ಕಪಿಶಂಗವಾಸಸಂ** ನೀಪವೃಕ್ಷದ ಹೂಗಳಲ್ಲಿರುವ ಕೇಶರದಂತೆ ಹಳದಿಯಾದ ವಸ್ತ್ರವನ್ನು ಧರಿಸಿದ, **ಲಸನ್ಮಹಾಹಾರ- ಹಿರಣ್ಮಯಾಂಗದಂ** ಪ್ರಕಾಶಿಸುವ ಮಹಾಹಾರ ಮತ್ತು ಚಿನ್ನದ ಕಡಗಗಳುಳ್ಳ, **ಸ್ಫುರನ್ಮಹಾರತ್ನ- ಕಿರೀಟಕುಂಡಲಂ** ಕಂಗೊಳಿಸುವ ಮಹಾರತ್ನ ಖಚಿತವಾದ ಕಿರೀಟ ಮತ್ತು ಕುಂಡಲವನ್ನು ಧರಿಸಿದ, ॥೧೦॥

**ಉನ್ನಿದ್ರಹೃತ್ಪಂಕಜಕರ್ಣಿಕಾಲಯೇ ಯೋಗೇಶ್ವರಾಸ್ಥಾಪಿತಪಾದಪಲ್ಲವಮ್ ।**
**ಶ್ರೀಲಕ್ಷಣಂ ಕೌಸ್ತುಭರತ್ನಕಂಧರಂ ಅಮ್ಲಾನಲಕ್ಷ್ಮ್ಯಾ ವನಮಾಲಯಾಂಚಿತಂ ॥**

**ಉನ್ನಿದ್ರ** ವಿಕಸಿತವಾದ, **ಹೃತ್ಪಂಕಜ** ಹೃದಯಕಮಲದ, **ಕರ್ಣಿಕಾಲಯೇ** ಬೀಜಕೋಶವೆಂಬ ಮನೆಯಲ್ಲಿ, **ಯೋಗೇಶ್ವರಾಸ್ಥಾಪಿತಪಾದಪಲ್ಲವಂ** ಯೋಗಿಶ್ರೇಷ್ಠರಿಂದ ಇರಿಸಲ್ಪಟ್ಟ ಪಾದಪಲ್ಲವಗಳುಳ್ಳ, **ಶ್ರೀಲಕ್ಷಣಂ** ಲಕ್ಷ್ಮೀದೇವಿಯೇ ಚಿಹ್ನವಾಗಿ ಉಳ್ಳ, **ಕೌಸ್ತುಭರತ್ನಕಂಧರಂ** ಸಮುದ್ರದಿಂದ ಜನಿಸಿದ ಕೌಸ್ತುಭಮಣಿಯನ್ನು ಧರಿಸಿದ ಕುತ್ತಿಗೆಯುಳ್ಳ **ಅಮ್ಲಾನಲಕ್ಷ್ಮ್ಯಾ** ಒಣಗದ ಕಾಂತಿಯುಳ್ಳ **ವನಮಾಲಯಾ** ವನಮಾಲೆಯಿಂದ, **ಅಂಚಿತಂ** ಭಕ್ತರಿಂದ ಪೂಜಿತನಾದ, ।।೧೧।।

**ವಿಭೂಷಿತಂ ಮೇಖಲಯಾಂಗುಲೀಯಕೈರ್ಮಹಾಧನೈರ್ನೂಪುರಕಂಕಣಾದಿಭಿಃ ।**
**ಸ್ನಿಗ್ಧಾಮಲೈಃ ಕುಂಚಿತನೀಲಕುಂತಲೈರ್ವಿರೋಚಮಾನಾನನಹಾಸಪೇಶಲಮ್ ॥ ೧೨ ॥**

**ಮೇಖಲಯಾ** ಉಡುದಾರದಿಂದ, **ಅಂಗುಲೀಯಕೈಃ** ಉಂಗುರಗಳಿಂದ, **ಮಹಾಧನೈಃ** ಬಹಳ ಬೆಲೆ ಬಾಳುವ, **ನೂಪೂರಕಂಕಣಾದಿಭಿಃ** ಕಾಲಂದುಗೆ ಮತ್ತು ಕಡಗಗಳಿಂದ, **ವಿಭೂಷಿತಂ** ಅಲಂಕೃತನಾದ, **ಸ್ನಿಗ್ಧ**ಮೃದುವಾದ, **ಅಮಲೈಃ** ಶುದ್ಧವಾದ, **ಕುಂಚಿತ** ವಕ್ರವಾದ, (ಗುಂಗುರು) ನೀಲ ಕಪ್ಪಾದ, **ಕುಂತಲೈಃ** ಕೂದಲುಗಳಿಂದ, **ವಿರೋಚಮಾನಂ** ಶೋಭಿಸುವ, **ಆನನ** ಮುಖದಲ್ಲಿರುವ, **ಹಾಸ** ನಗೆಯಿಂದ, **ಪೇಶಲಂ** ಸುಂದರವಾದ, ।।೧೨।।

**ಅದೀನಲೀಲಾಹಸಿತೇಕ್ಷಣೋಲ್ಲಸದ್ಭ್ರೂಭಂಗಸಂಸೂಚಿತಭೂರ್ಯನುಗ್ರಹಮ್ ।**
**ಈಕ್ಷೇತ ಚಿಂತಾಮಯಮೇನಮೀಶ್ವರಂ ಯಾವನ್ಮನೋ ಧಾರಣಯಾಽವತಿಷ್ಠತೇ ॥**

**ಅದೀನ** ಉದಾರವಾದ, **ಲೀಲಾಹಸಿತೇಕ್ಷಣ** ಕ್ರೀಡಾರೂಪವಾದ ಮಂದಹಾಸದಿಂದ ಕೂಡಿದ ನೋಟ ಉಳ್ಳ, **ಉಲ್ಲಸತ್** ಕಣ್ಣುಗಳಲ್ಲಿ ಶೋಭಿಸುವ, **ಭ್ರೂಭಂಗ** ಹುಬ್ಬು ಹಾರಿಸುವುದರಿಂದ, **ಸಂಸೂಚಿತ** ಸೂಚಿಸಲ್ಪಟ್ಟ, **ಭೂರ್ಯನುಗ್ರಹಂ** ಬಹಳವಾದ ಅನುಗ್ರಹವುಳ್ಳ, **ಚಿಂತಾಮಯಂ** ಭಕ್ತನ ಹರಿವಿಷಯಕವಾದ ಚಿಂತನೆ ಮತ್ತು ವಿಷಯಾಪೇಕ್ಷೆಗೆ ಅನುಗುಣವಾಗಿ ಫಲವನ್ನು ಕೊಡುವ, **ಏನಂ ಈಶ್ವರಂ** ಈ ಶ್ರೀಹರಿಯನ್ನು **ಮನಃ** ಮನಸ್ಸು **ಧಾರಣಯಾ** ಏಕೈಕಾವಯವಯುಕ್ತವಾದ ಧ್ಯಾನದಿಂದ, **ಅವತಿಷ್ಠತೇ** ಸಮಗ್ರ ಅಂಗದಲ್ಲಿ ನಿಲ್ಲುವವರೆಗೆ, **ಈಕ್ಷೇತ** ಧ್ಯಾನಮಾಡಬೇಕು ।।೧೩।।

ಈ ಶ್ಲೋಕದಲ್ಲಿ ಚಿಂತಾಮಯ ಶಬ್ದಕ್ಕೆ ಚಿಂತಾವಿಕಾರ ಎಂದು ಅರ್ಥವು ತೋರುತ್ತದೆ. ಇದು ಪ್ರಕೃತಸಂಗತವಾಗುವುದಿಲ್ಲ. ಆದ್ದರಿಂದ ಆ ಶಬ್ದಕ್ಕೆ ಅರ್ಥವನ್ನು ತಿಳಿಸುತ್ತಾರೆ-

**ತಾತ್ಪರ್ಯ- ಚಿಂತಾಮಯಂ ಚಿಂತಾಪ್ರಧಾನಮ್ ।**

**ಯಸ್ಮಾತ್ಸಂಚಿಂತಿತೋ ವಿಷ್ಣುಃ ಚಿಂತಿತಂ ಪ್ರದದಾತ್ಯಜಃ ।**
**ತಸ್ಮಾಚ್ಚಿಂತಾಮಯಂ ದೇವಂ ವದಂತಿ ಜ್ಞಾನಚಕ್ಷುಷಃ ॥ -ಇತಿ**

'ಪರಮಾತ್ಮನ ವಿಚಾರವನ್ನು ಚೆನ್ನಾಗಿ ಮಾಡುವವರಿಗೆ ಅಭೀಷ್ಟವನ್ನು ಕೊಡುವವನು' ಎಂದು ಚಿಂತಾಮಯ ಶಬ್ದಕ್ಕೆ ಅರ್ಥ. ಚೆನ್ನಾಗಿ ಧ್ಯಾತನಾದ ಶ್ರೀವಿಷ್ಣುವು ಅಭೀಷ್ಟವನ್ನು ಕೊಡುತ್ತಾನೆ. ಆದಕಾರಣ ಶ್ರೀಹರಿಯನ್ನು ಚಿಂತಾಮಯನೆಂದು ಹೇಳುತ್ತಾರೆ. ಎಂದು ಪ್ರಮಾಣದ ಅರ್ಥ. ॥೧೩॥

**ಏಕೈಕಶೋಽಂಗಾನಿ ಧಿಯಾಽನುಭಾವಯೇತ್**
**ಪಾದಾದಿ ಯಾವದ್ಧಸಿತಂ ಗದಾಭೃತಃ ।**
**ಜಿತಂ ಜಿತಂ ಸ್ಥಾನಮಪೋಹ್ಯ ಧಾರಯೇತ್**
**ಪರಂ ಪರಂ ಶುದ್ಧ್ಯತಿ ಧೀರ್ಯಥಾ ಯಥಾ ॥ ೧೪ ॥**

**ಗದಾಭೃತಃ** ಗದಾಧಾರಿಯಾದ ಶ್ರೀಹರಿಯ, **ಪಾದಾದಿ ಯಾವದ್ಧಸಿತಂ** ಪಾದಗಳನ್ನಾರಂಭಿಸಿ ನಗುವಿನಿಂದ ಯುಕ್ತವಾದ ಮುಖಪರ್ಯಂತವಾದ, **ಏಕೈಕಶಃ ಅಂಗಾನಿ** ಒಂದೊಂದೇ ಅವಯವಗಳನ್ನು **ಜಿತಂ ಜಿತಂ** ಅನಾಯಾಸೇನ ಧ್ಯಾನವಿಷಯವಾದ, **ಸ್ಥಾನಂ** ಪಾದಗುಲ್ಫಾದಿಗಳನ್ನು, **ಅಪೋಹ್ಯ** ಬಿಟ್ಟು, **ಪರಂ ಪರಂ** ಬೇರೆ ಬೇರೆ ಜಂಘೆ-ಜಾನು ಮುಂತಾದ ಅವಯವಗಳನ್ನು **ಧೀಃ** ಮನಸ್ಸು, **ಯಥಾ ಯಥಾ ಶುದ್ಧ್ಯತಿ** ಕ್ರಮವಾಗಿ ಹೇಗೆ ಸಮಗ್ರಾಂಗವಿಷಯವಾಗುವುದೋ, **ತಥಾ ತಥಾ** ಹಾಗೆ ಹಾಗೆ, **ಧಿಯಾ** ಮನಸ್ಸಿನಿಂದ, **ಅನುಭಾವಯೇತ್** ಧ್ಯಾನಮಾಡಬೇಕು, **ಧಾರಯೇತ್** ಅಭ್ಯಾಸ ಮಾಡಬೇಕು. ॥೧೪॥

*ವೈರಾಜಧಾರಣೆಯು ಧ್ಯಾನಸಾಧ್ಯವಾಗಿದೆ ಎಂದು ಹಿಂದೆ ಹೇಳಲಾಗಿದೆ. ಆ ಧಾರಣೆಯು ಭಕ್ತಿಯೋಗಸಾಧ್ಯವೂ ಆಗಿದೆ ಎಂಬುದನ್ನು ಪ್ರಕೃತ ಹೇಳುತ್ತಿದ್ದಾರೆ-*

**ಯಾವನ್ನ ಜಾಯೇತ ಪರಾವರೇಽಸ್ಮಿನ್**
**ವಿಶ್ವೇಶ್ವರೇ ದ್ರಷ್ಟರಿ ಭಕ್ತಿಯೋಗಃ ।**
**ತಾವತ್ ಸ್ಥವೀಯಃ ಪುರುಷಸ್ಯ ರೂಪಂ**
**ಕ್ರಿಯಾವಸಾನೇ ಪ್ರಯತಃ ಸ್ಮರೇತ ॥ ೧೫ ॥**

**ಪರಾವರೇ** ಬ್ರಹ್ಮಾದಿಗಳೂ ಯಾವನಿಗಿಂತ ಚಿಕ್ಕವರೋ ಅಂತಹ, **ದ್ರಷ್ಟರಿ** ಸರ್ವಸಾಕ್ಷಿಯಾದ, **ವಿಶ್ವೇಶ್ವರೇ** ಜಗದೀಶ್ವರನಾದ, **ಅಸ್ಮಿನ್** ತನ್ನಿಂದ ಧ್ಯೇಯನಾದ ಶ್ರೀಹರಿಯಲ್ಲಿ, **ಭಕ್ತಿಯೋಗಃ** ಸರ್ವೋತ್ತಮನು ನನಗೆ ಮಹೋಪಕಾರಕನು ಆದ್ದರಿಂದ ಎಲ್ಲಕ್ಕಿಂತ ಪ್ರಿಯತಮನು ಎಂಬ ಮಾಹಾತ್ಮ್ಯಜ್ಞಾನಪೂರ್ವಕವಾದ ದೃಢವಾದ ಪ್ರೇಮ ಪ್ರವಾಹವೆಂಬ ಭಕ್ತಿರೂಪವಾದ ಉಪಾಯವು, ಅಖಂಡಧ್ಯಾನ ಪ್ರಾಪಕವಾದುದು **ಯಾವತ್ ನ ಜಾಯತೇ ತಾವತ್** ಹುಟ್ಟುವವರೆಗೆ, **ಪುರುಷಸ್ಯ** ಪೂರ್ಣಷಡ್ಗುಣನಾದ ಭಗವಂತನ, **ಸ್ಥವೀಯಃ** ಅತಿಸ್ಥೂಲವಾದ, **ರೂಪಂ** ರೂಪವನ್ನು, **ಕ್ರಿಯಾವಸಾನೇ** ಆವಶ್ಯಕ ಕರ್ಮಾನುಷ್ಠಾನಾನಂತರ, **ಪ್ರಯತಃ** ಪ್ರಯತ್ನದಿಂದ, **ಸ್ಮರೇತ** ಸ್ಮರಿಸಬೇಕು. ಇದರಿಂದ ನಿತ್ಯಕರ್ಮಗಳೂ ಸಹ ಭಕ್ತಿಯೋಗಸಾಧನವೆಂದು ಸೂಚಿತವಾಯಿತು.

ಇಲ್ಲಿ ಸ್ಥವೀಯರೂಪ ಯಾವುದೆಂದು ತಿಳಿಸುವರು-

**ತಾತ್ಪರ್ಯ- ಸ್ಥವೀಯಃ ಪಾತಾಲಮೇತಸ್ಯೇತ್ಯಾದಿ ॥**

ಎರಡನೆಯ ಸ್ಕಂಧದ ಒಂದನೇ ಅಧ್ಯಾಯದ ೧೬ನೆಯ ಶ್ಲೋಕವಾದ 'ಪಾತಲ ಮೇತಸ್ಯ...' ಎಂದಾರಂಭಿಸಿ ಹೇಳಿದ ಸಕಲಲೊಕಾತ್ಮಕವಾದುದೇ ಸ್ಥೂಲರೂಪವೆಂದು ಭಾವ ॥ ೧೫ ॥

*ಈ ರೀತಿಯಾಗಿ ಉಕ್ತವಾದ ಧ್ಯಾನವಾದ ಮೇಲೆ ಅಪರೋಕ್ಷಜ್ಞಾನವಾದವರಿಗೆ ಪ್ರಾರಬ್ಧ ಭೋಗವಾದ ನಂತರ ಯಾವಾಗ ಚರಮದೇಹ ಬಿಡಬೇಕೇನಿಸುವುದೋ ಆಗ ಅವರು ಮಾಡಬೇಕಾದುದನ್ನೂ ತಿಳಿಸುತ್ತ ಮೋಕ್ಷಪ್ರಕಾರವನ್ನು ಹೇಳುವರು-*

**ಸ್ಥಿರಂ ಸುಖಂ ಚಾಸನಮಾಸ್ಥಿತೋ ಯತಿಃ**
**ಯದಾ ಜಿಹಾಸುರಿಮಮಂಗಲೋಕಮ್ ।**
**ಕಾಲೇ ಚ ದೇಶೇ ಚ ಮನೋ ನ ಸಜ್ಜೇತ್**
**ಪ್ರಾಣಾನ್ನಿಯಚ್ಛೇನ್ಮನಸಾ ಜಿತಾಸುಃ** ॥ ೧೬ ॥

**ಯತಿಃ** ಇಂದ್ರಿಯಗಳನ್ನು ಗೆದ್ದ ಅಪರೋಕ್ಷಜ್ಞಾನಿಯು, **ಇಮಂ ಲೋಕಂ** ಈ ದೇಹವನ್ನು **ಯದಾ ಜಿಹಾಸುಃ** ಯಾವಾಗ ಬಿಡಲು ಇಚ್ಛಿಸುವನೋ, **ತದಾ** ಆಗ, **ಸುಖಂ** ಸುಖಕರವಾದ, **ಸ್ಥಿರಂ** ಅಚಲವಾದ, **ಆಸನಂ ಆಸ್ಥಿತಃ ಸನ್** ಆಸನದಲ್ಲಿ ಕುಳಿತವನಾಗಿ, **ಕಾಲೇ** ಉತ್ತರಾಯಣಾದಿಕಾಲದಲ್ಲಿ, **ದೇಶೇ** ಪುಣ್ಯಕ್ಷೇತ್ರಾದಿಗಳಲ್ಲಿ, **ಮನಃ ನ ಸಜ್ಜೇತ್**

ಮನಸ್ಸನ್ನಿಡಬಾರದು. 'ನತು ಕಾಲವಿಶೇಷೋಽಸ್ತಿ ಜ್ಞಾನಿನಾಂ ನಿಯಮಾತ್ ಫಲಮ್' ಮುಂತಾಗಿ ಜ್ಞಾನಿಗಳಿಗೆ ಮೋಕ್ಷವು ನಿಯತವಾದ್ದರಿಂದ ಕಾಲ-ದೇಶಗಳಿಂದ ವಿಶೇಷವಿಲ್ಲ ಎಂದು ಹೇಳುವ ಪ್ರಮಾಣವಿರುವುದರಿಂದ ಪುಣ್ಯಕ್ಷೇತ್ರ ಮತ್ತು ಪುಣ್ಯಕಾಲಗಳು ದೊರೆಯದಿದ್ದರೆ ಮನಃಖೇದ ಮಾಡಕೂಡದೆಂದರ್ಥ. **ಜಿತಾಸುಃ** ಪ್ರಾಣಜಯ ಉಳ್ಳವನು, **ಪ್ರಾಣಾನ್** ವಾಗಾದಿ ಇಂದ್ರಿಯದೇವತೆಗಳಾದ ಉಮಾ ಮೊದಲಾದವರನ್ನು **ಮನಸಾ** ಮನೋಽಭಿಮಾನಿಯಾದ ರುದ್ರನಿಂದ, **ಯಚ್ಛೇತ್** ನಿಯಮ್ಯರೆಂದು ತಿಳಿಯಬೇಕು.

ಇಲ್ಲಿ 'ಜಿತಾಸುಃ' ಎಂದು ದೇವೋತ್ತಮರಾದ ವಾಯುದೇವರ ಜಯವನ್ನು ಹೇಳಿದ್ದಾರೆ. ಇದು ಹೇಗೆ ಯುಕ್ತವಾಗುತ್ತದೆ ಎಂಬುದನ್ನು ಪ್ರಮಾಣಪೂರ್ವಕವಾಗಿ ತಿಳಿಸುತ್ತಾರೆ-

ತಾತ್ಪರ್ಯ- ಭಕ್ತ್ಯಾ ಪ್ರಾಣಂ ವಶಂ ನೀತ್ವಾ ಜಿತಪ್ರಾಣೊ ಭವತ್ಯುತ ॥
ಇತಿ ಷಾಡ್ಗುಣ್ಯೇ ॥

ಭಕ್ತಿಯಿಂದ ಪ್ರಾಣಾಯಾಮ ಮಾಡಿ ಮುಖ್ಯಪ್ರಾಣನನ್ನು ವಶೀಕರಿಸಿ ಮುಖ್ಯಪ್ರಾಣನ ಪ್ರಸಾದವನ್ನು ಹೊಂದಿದವನು ಜಿತಪ್ರಾಣನೆನಿಸುತ್ತಾನೆ. ಎಂದು ಷಾಡ್ಗುಣ್ಯ ಎಂಬ ಗ್ರಂಥವು ತಿಳಿಸುತ್ತದೆ. ॥೧೬॥

**ಮನಶ್ಚ ಬುದ್ಧ್ಯಾಽಮಲಯಾ ನಿಯಮ್ಯ**
**ಕ್ಷೇತ್ರಜ್ಞ ಏತಾಂ ನಿನಯೇತ್ತಮಾತ್ಮನಿ ।**
**ಆತ್ಮಾನಮಾತ್ಮನ್ಯವರುಧ್ಯ ಧೀರೋ**
**ಲಬ್ಧೋಪಶಾಂತಿರ್ವಿರಮೇತ ಕೃತ್ಯಾತ್** ॥ ೧೭ ॥

**ಮನಃ** ಮನೋಽಭಿಮಾನಿಗಳಾದ ರುದ್ರದೇವರನ್ನು, **ಅಮಲಯಾ ಬುದ್ಧ್ಯಾ** ನಿರ್ದುಷ್ಟಳಾದ, ಬುದ್ಧ್ಯಭಿಮಾನಿನಿಯರಾದ ಸರಸ್ವತೀದೇವಿಯರಿಗೆ, **ನಿಯಮ್ಯ** ಅಧೀನ- ವೆಂದು ತಿಳಿದು (ಉಮಾದೇವಿಯರ ವ್ಯಾವೃತ್ತಿಗಾಗಿ ಅಮಲಯಾ ಎಂದಿರುವರು) **ಏತಾಂ** ಸರಸ್ವತಿಯನ್ನು, **ಕ್ಷೇತ್ರಜ್ಞೇ** ಜೀವಾಂತರ್ಯಾಮಿಯಾದ ವಿಷ್ಣುವಿನಲ್ಲಿ **ನಿನಯೇತ್** ಬ್ರಹ್ಮದೇವರು ಮತ್ತು ರಮಾದೇವಿಯರ ದ್ವಾರಾ ಪರಮಾತ್ಮನಿಗೆ ಅಧೀನಳೆಂದು ತಿಳಿಯಬೇಕು. (ಆದ್ದರಿಂದಲೇ ನಿ ಎಂದು ಉಪಸರ್ಗವಿದೆ. ಸರಸ್ವತಿಗೆ ಲಯಚಿಂತಿಸುವಾಗ ಸಾಕ್ಷಾತ್ ಶ್ರೀಹರಿಯಲ್ಲಿಯೇ ಲಯ ಹೊರತು ಬ್ರಹ್ಮದೇವರ ದ್ವಾರಾ ಅಲ್ಲ, ಆದರೆ ಬ್ರಹ್ಮದೇವರಿಗೆ ಅಧೀನಳಾಗಿದ್ದಾಳೆ ಎಂದು ತಿಳಿಯಬಹುದು. ಏಕಾದಶಸ್ಕಂಧದಲ್ಲಿ ಇದು

ಸ್ಪಷ್ಟವಾಗಿದೆ) **ತಂ** ಜಿವಾಂತರ್ಯಾಮಿಯನ್ನು, **ಆತ್ಮನಿ** ದೇಹಾಂತರ್ಗತ ವಿಷ್ಣುವಿನಲ್ಲಿ **ನಿನಯೇತ್** ಅತ್ಯಂತ ಅಭಿನ್ನನೆಂದು ತಿಳಿಯಬೇಕು. **ಆತ್ಮಾನಂ** ದೇಹಾಂತರ್ಗತನನ್ನು, **ಆತ್ಮನಿ** ಸರ್ವತ್ರ ವ್ಯಾಪ್ತನಾದ ವಿಷ್ಣುವಿನಲ್ಲಿ **ಅವರುದ್ಧ್ಯ** ಏಕೀಭಾವವನ್ನು ಚಿಂತಿಸಿ, **ಲಬ್ಧೋಪಶಾಂತಿಃ** ಪರಮಾನಂದ ಹೊಂದಿದವನಾಗಿ **ಕೃತ್ಯಾತ್ ವಿರಮೇತ** ಮತ್ತೆ ಅವನಿಗಿಂತ ಉತ್ತಮನಿದ್ದಾನೆ ಎಂಬ ಚಿಂತನ ರೂಪಕೃತ್ಯದಿಂದ ವಿರಾಮ ಪಡೆಯಬೇಕು. ಅವನಿಗಿಂತ ಉತ್ತಮರು ಯಾರೂ ಇಲ್ಲವೆಂದು ಭಾವ.

ಈ ಶ್ಲೋಕಕ್ಕೆ ಶ್ರೀವಿಜಯಧ್ವಜರು ಸ್ವಲ್ಪ ಬೇರೆಯಾದ ಅರ್ಥವನ್ನು ಹೇಳಿದ್ದಾರೆ-

೧೬ನೆಯ ಶ್ಲೋಕ- **ಕಾಲೇ ದೇಶೇ** ಕಾಲದಲ್ಲಿ ದೇಶದಲ್ಲಿರುವ ವಿಷಯಗಳಲ್ಲಿ ಓಡುವ, **ಮನಃ** ಮನಸ್ಸನ್ನು, **ನ ಸಜ್ಜೇತ** ಆಸಕ್ತಮಾಡಬಾರದು. ನಂತರ, **ಮನಸಾ** ತನ್ನ ಅಧೀನವಾದ ಮನಸ್ಸಿನಿಂದ, **ಪ್ರಾಣಾನ್** ವಿಷಯಗಳ ಕಡೆಗೆ ಧಾವಿಸುವ ಇಂದ್ರಿಯಗಳನ್ನು, **ನಿಯಚ್ಛೇತ್** ಅವುಗಳಿಂದ ಹಿಂತಿರುಗಿಸಬೇಕು. ನಂತರ, ಪ್ರಾಣಾನ್ **ನಿಯಚ್ಛೇತ್** ಪ್ರಾಣಾಯಾಮ ಮಾಡಬೇಕು. ನಂತರ, ಜಿತಾಸುಃ ಭಕ್ತಿಯಿಂದ ಮುಖ್ಯಪ್ರಾಣದೇವರ ಪ್ರಸಾದವನ್ನು ಹೊಂದಿ ಇಂದ್ರಿಯಪ್ರೇರಕರಾದ ದಿಗಾದಿದೇವತೆಗಳನ್ನು ಮನೋಽಭಿಮಾನಿ ಇಂದ್ರನಲ್ಲಿ, **ನಿಯಚ್ಛೇತ್** ಅಧೀನವೆಂದು ತಿಳಿಯಬೇಕು.

೧೭. **ಮನಃ** ಮನೋಽಭಿಮಾನಿಯಾದ ಇಂದ್ರನನ್ನು **ಅಮಲಯಾ ಬುದ್ಧ್ಯಾ** ಉಮಾಧೀನನೆಂದು ತಿಳಿದು, ಉಮಾದೇವಿಯನ್ನು ಕ್ಷೇತ್ರಜ್ಞನ ಅಧೀನವೆಂದು ತಿಳಿಯಬೇಕು. ಅವನನ್ನು **ಆತ್ಮನಿ** ದೇಹಾಂತರ್ಗತನಲ್ಲಿ ಅವನನ್ನು ಸರ್ವವ್ಯಾಪ್ತನಲ್ಲಿ ಚಿಂತಿಸಿ ದೇಹದಿಂದ ಉತ್ತಮಿಸಿ **ಲಬ್ಧೋಪಶಾಂತಿಃ** ಸರ್ವಾಧಿಕ ಮಂಗಲನೆಂಬ ವಿಷ್ಣುವನ್ನು ಹೊಂದಿ, **ಧೀರಃ** ಧೀರನಾದವನು, **ಕೃತ್ಯಾತ್** ವಿಧಿ-ನಿಷೇಧರೂಪವಾದ ಕಾರ್ಯದಿಂದ, **ವಿರಮೇತ** ವಿರಮಿಸಬೇಕು. ಎಂದರ್ಥ ಹೇಳಿ ತಾತ್ಪರ್ಯದಲ್ಲಿ ಹೇಳಿದ ಪ್ರಮಾಣಾನುಸಾರ ಇದೇ ಅರ್ಥ ಸರಿಯಾದದ್ದು. ಪರಕೀಯರು ಹೇಳುವ ಜೀವೈಕ್ಯವಲ್ಲ ಎಂದು ಹೇಳಿರುವರು. ಮತ್ತು ಮನಶ್ಚ ಎಂಬಲ್ಲಿ ಚ ಶಬ್ದದಿಂದ ಮನಸ್ ಎಂಬ ಶಬ್ದದಿಂದ ವಾಚ್ಯರಾದ ರುದ್ರದೇವರನ್ನು, ಬುದ್ಧಿ ಶಬ್ದವಾಚ್ಯರಾದ ವಾಣಿ-ವಿರಿಂಚಿಯರನ್ನು ಲಕ್ಷ್ಮೀದ್ವಾರಾ ಕ್ಷೇತ್ರಜ್ಞನಲ್ಲಿ ಲಯವನ್ನು, ತತ್ತ್ವಗಳಿಗೆ ತಮ್ಮ ತಮ್ಮ ಕಾರಣಗಳಲ್ಲಿ ಲಯವನ್ನು ಹೇಳುವರೆಂದು ತಿಳಿಯಬೇಕು ಎಂದಿರುವರು. ।।೧೭।।

ಇಲ್ಲಿ ಕ್ಷೇತ್ರಜ್ಞ ಮತ್ತು ಆತ್ಮ ಎಂಬ ಎಂಬ ಶಬ್ದಗಳಿಂದ ಜೀವನು ವಾಚ್ಯನಲ್ಲ. ಕಿಂತು ಪರಮಾತ್ಮನೇ ವಾಚ್ಯ ಎಂಬುದನ್ನು ಪ್ರಮಾಣಪೂರ್ವಕವಾಗಿ ತಿಳಿಸುತ್ತಿದ್ದಾರೆ-

**ತಾತ್ಪರ್ಯ- ಜೀವಸ್ಥೋ ಭಗವಾನ್ವಿಷ್ಣುಃ ಕ್ಷೇತ್ರಜ್ಞ ಇತಿ ಗೀಯತೇ ।**
**ದೇಹಸ್ಥೋऽಪಿ ಸ ಏವಾತ್ಮಾ ವ್ಯಾಪ್ತೋವ್ಯಾತ್ಮೇತಿ ಭಣ್ಯತೇ ॥ -ಇತಿ ತತ್ತ್ವನಿರ್ಣಯೇ**

**ಹರೌ ಹರೇರ್ಭವೇನ್ನೀತಿಸ್ತದೇಕತ್ವಸ್ಯ ಚಿಂತನಮ್ ।**
**ಅನ್ಯತ್ರ ತನ್ನಿಯಮ್ಯಾದಿಚಿಂತನಂ ನೀತಿರುಚ್ಯತೇ ॥ -ಇತಿ ಪ್ರಕಾಶಸಂಹಿತಾಯಾಮ್**

ಜೀವನಿಗೆ ಅಂತರ್ಯಾಮಿಯಾಗಿರುವ ಪರಮಾತ್ಮನ ರೂಪವೇ ಕ್ಷೇತ್ರಜ್ಞನಾಮಕವಾಗಿದೆ. ದೇಹಾಂತರ್ಯಾಮಿಯಾದ ದೇವರ ರೂಪ ಆತ್ಮನಾಮಕವಾಗಿದೆ. ವ್ಯಾಪ್ತವಾದ ಪರಮಾತ್ಮನ ರೂಪವೂ ಆತ್ಮನಾಮಕವಾಗಿದೆ. ಹೀಗೆಂದು ತತ್ತ್ವನಿರ್ಣಯವು ತಿಳಿಸುತ್ತದೆ.

ಭಗವಂತನ ಒಂದು ರೂಪಕ್ಕೆ ಮತ್ತೊಂದು ರೂಪದಲ್ಲಿ ಲಯವಾಗುವುದೆಂದರೇ ಐಕ್ಯವನ್ನು ಚಿಂತಿಸುವುದೇ ಆಗಿದೆ. ಉಳಿದ ದೇವತೆಗಳಿಗೆ ಲಯವನ್ನು ಹೇಳಿದಲ್ಲಿ ಅಧೀನತ್ವಚಿಂತನವೆಂಬುದನ್ನಾಗಿ ತಿಳಿಯಬೇಕು. ಹೀಗೆ ಪ್ರಕಾಶಸಂಹಿತೆಯು ತಿಳಿಸುತ್ತದೆ.

*ಪರಮಾತ್ಮನಿಗಿಂತ ಉತ್ತಮನಿಲ್ಲ ಎಂಬ ವಿಷಯವನ್ನೇ ವಿಶದಪಡಿಸುತ್ತಾರೆ-*

**ನ ಯತ್ರ ಕಾಲೋऽನಿಮಿಷಪ್ರಭುಃ ಪ್ರಭುಃ ।**
**ಕುತೋ ನು ದೇವಾ ಜಗತಾಂ ಯ ಈಶಿರೇ ।**
**ನ ಯತ್ರ ಸತ್ತ್ವಂ ನ ರಜಸ್ತಮಶ್ಚ**
**ನ ವೈ ವಿಕಾರೋ ನ ಮಹಾನ್ ಪ್ರಧಾನಮ್ ॥ ೧೮ ॥**

**ಯತ್ರ** ಆತ್ಮಶಬ್ದವಾಚ್ಯನಾದ ವಿಷ್ಣುವಿನಲ್ಲಿ, **ಅನಿಮಿಷಾಂ ಪರಃ** ಕಾಲಶಬ್ದವಾಚ್ಯರಾದ ಶೇಷ-ಗರುಡ ಮುಂತಾದ ದೇವತೆಗಳಿಂತ ಉತ್ತಮನಾದ, **ಕಾಲಃ** ವಾಯುವು, **ನ ಪ್ರಭುಃ** ಏನು ಮಾಡಲೂ ಸಮರ್ಥನಲ್ಲ. **ತದಾ** ಆಗ, **ಜಗತಾಂ** ಪ್ರಾಣಿಗಳಿಗೆ, **ಯೇ** ಯಾರು, **ಈಶಿರೇ** ಅವರವರನ್ನು ಆಯಾ ಕಾರ್ಯಗಳಲ್ಲಿ ಪ್ರೇರಿಸುವರೋ, **ತೇ ದೇವಾಃ** ಆ ಶೇಷ-ರುದ್ರಾದಿ ಕಾಲಶಬ್ದವಾಚ್ಯರು, **ಪ್ರಭವ ಇತಿ ಕುತೋ ನು** ಸಮರ್ಥರೆಂದು ಹೇಳಲು ಹೇಗೆ ಸಾಧ್ಯ. ಸರ್ವಥಾ ಸಾಧ್ಯವಿಲ್ಲ. ಅಂದ ಮೇಲೆ ದೇವನಿಯಮ್ಯವಾದ ಜಗತ್ತು ಸಮರ್ಥವಲ್ಲವೆಂದು ಬೇರೆ ಹೇಳಬೇಕಿಲ್ಲ.

ಜಗತ್ತಿಗೆ ಕಾರಣ(ವಾದರೂ) ಗಳಾದ ಗುಣತ್ರಯಾದಿತತ್ತ್ವಗಳು ಸಮರ್ಥವಲ್ಲವೆಂದು ಹೇಳುವರು, **ಯತ್ರ** ಆತ್ಮಶಬ್ದವಾಚ್ಯನಾದ ವಿಷ್ಣುವಿನಲ್ಲಿ **ಸತ್ತ್ವಂ** ಸತ್ತ್ವಗುಣವು, **ರಜಃ** ರಜೋಗುಣವು, **ತಮಃ** ತಮೋಗುಣವು, **ವಿಕಾರಃ** ಅಹಂಕಾರತತ್ತ್ವವು, **ಮಹಾನ್** ಮಹತ್ತತ್ತ್ವವು, **ಪ್ರಧಾನಂ** ಮೂಲಪ್ರಕೃತಿಯು, **ನ ಪ್ರಭುಃ** ಸಮರ್ಥವಲ್ಲ ಎಂದು ಪ್ರತ್ಯೇಕಾನ್ವಯ.

ಇಲ್ಲಿ ಕಾಲಕ್ಕೆ ಸರ್ವದೇವೋತ್ತಮತ್ವ ಹೇಳುತ್ತಿದ್ದಾರೆ. ಅದು ಪ್ರಸಿದ್ಧವಾದ ಕಾಲಕ್ಕೆ ಉಪಪನ್ನವಾಗುವುದಿಲ್ಲ. ಆದ್ದರಿಂದ ವಿವಕ್ಷಿತವಾದ ಕಾಲಶಬ್ದಾರ್ಥ ಹೇಳುವರು-

**ತಾತ್ಪರ್ಯ- ಕಾಲೋ ವಾಯುಃ ।**

**ಹರಿಶ್ಚ ಪ್ರಕೃತಿಶ್ಚೈವ ಬ್ರಹ್ಮವಾಯೂ ತಥೈವ ಚ ।**
**ಸುಪರ್ಣಶೇಷರುದ್ರಾಶ್ಚ ಶಕ್ರಃ ಸೂರ್ಯಯಮಾವಪಿ ॥**

**ಅಗ್ನಿರ್ಯಮಾನುಜಶ್ಚೈವ ಕಾಲಶಬ್ದೇರಿತಾಃ ಕ್ರಮಾತ್ ।**
**ಪೂರ್ವೋಕ್ತಾಸ್ತ್ವಪರೋಕ್ತಾನಾಂ ಪ್ರಭವಃ ಸರ್ವತೋ ಮತಾಃ ॥**

**-ಇತ್ಯುದ್ದಾಮಸಂಹಿತಾಯಾಮ್ ॥**

ಕಾಲಃ ಎಂದರೆ ವಾಯುವು. ಶ್ರೀಹರಿ, ಪ್ರಕೃತಿ, ಬ್ರಹ್ಮ, ವಾಯು, ಗರುಡ, ಶೇಷ, ರುದ್ರ, ಇಂದ್ರ, ಸೂರ್ಯ, ಯಮ, ಅಗ್ನಿ ಮತ್ತು ಶನ್ಯೈಶ್ಚರ ಇವರೆಲ್ಲರಿಗೂ ಮುಖ್ಯಕ್ರಮದಿಂದ ಕಾಲವೆಂದು ನಾಮವಿದೆ. ಮೊದಲು ಮೊದಲು ಹೇಳಲ್ಪಟ್ಟ ಉತ್ತಮರು ನಂತರ ಹೇಳಲ್ಪಟ್ಟ ಅಧಮರಿಗೆ ಸರ್ವವಿಷಯದಲ್ಲಿಯೂ ನಿಯಾಮಕರು ಎಂದು ಉದ್ದಾಮಸಂಹಿತೆಯಲ್ಲಿ ಹೇಳಿದೆ.

ವಿಜಯಧ್ವಜರ ಪ್ರಕಾರ-

**ಯತ್ರ** ಯಾವ ಲೋಕದಲ್ಲಿ **ಅನಿಮಿಷಪ್ರಭುಃ** ರುದ್ರಾದಿದೇವತೆಗಳಿಗೆ ಯಜಮಾನರಾದ, **ಕಾಲಃ** ವಾಯುದೇವರು, **ನ ಪ್ರಭುಃ** ಸ್ವಶಕ್ತಿಯ ಉದ್ಬೋಧಕರಲ್ಲ. ಜಗತ್ಪ್ರವರ್ತಕರಾದ ರುದ್ರಾದಿಗಳು **ನ ಪ್ರಭವಂತಿ** ಸತ್ತ್ವಾದಿಗುಣಗಳ ತಮ್ಮ ಶಕ್ತಿ ತೋರಿಸುವುದಿಲ್ಲ. ಅಂಹಕಾರ ಮಹತ್ತತ್ತ್ವಗಳೂ ಪ್ರಕೃತಿಯೂ ಮುಪ್ಪು ಮೊದಲಾದ ತಮ್ಮ ಧರ್ಮ ತಂದುಕೊಡಲಾರವು. ಹೀಗೆ ವೈಕುಂಠಲೋಕದ ಪರವಾಗಿ ಅರ್ಥ ಮಾಡಿರುವರು.

(ವಿಜಯ) ಕಾಲಾದಿಗಳ ಸಂಬಂಧವೇ ಇಲ್ಲ ಎಂದರೇ ಮಲದ ಕೊಂಬಿನಂತೆಯೇ ಎಂದರೆ ಹೇಳುವರು-

(ಯಾದ) ಹಿಂದೆ ಹೇಳಿದ ವಿಷ್ಣುವಿನ ಸರ್ವೋತ್ತಮತ್ವದಲ್ಲಿ ಪ್ರಮಾಣ ತೋರಿಸುವರು-

**ಪರಂ ಪದಂ ವೈಷ್ಣವಮಾಮನಂತಿ**
**ತದ್ಯನ್ನೇತಿ ನೇತೀತ್ಯತದುತ್ಸಿಸೃಕ್ಷವಃ ।**
**ವಿಸೃಜ್ಯ ದೌರಾತ್ಮ್ಯಮನನ್ಯಸೌಹೃದಾ**
**ಹೃದೋಪಗುಹ್ಯಾಪುರಮುಂ ಪದೇ ಪದೇ** ॥ ೧೮ ॥

(ಯಾದ) **ಯೇ** ಯಾವ ವೇದಗಳು, **ದೌರಾತ್ಮ್ಯಂ** ದುಷ್ಟಸ್ವಭಾವದವರಿಗೆ, ಆಪಾತತಃ ತೋರುವ ಹಿರಣ್ಯಗರ್ಭಾದಿಗಳನ್ನು **ವಿಸೃಜ್ಯ** ಬಿಟ್ಟು **ಪದೇ ಪದೇ** ಹಿರಣ್ಯಗರ್ಭಾದಿ ಎಲ್ಲ ಪದಗಳಲ್ಲಿಯೂ, **ಅಮುಂ** ವಿಷ್ಣುವನ್ನು, **ಉಪಗುಹ್ಯ** ವಾಚ್ಯವೆಂಬ ಅಭಿಪ್ರಾಯದಿಂದ, **ಅನನ್ಯಸೌಹೃದಾಃ** ಬೇರೆಯವರಲ್ಲಿ ತಾತ್ಪರ್ಯವಿಲ್ಲದವುಗಳಾಗಿ, **ಸುಹೃದಾ** ಮಹಾತಾತ್ಪರ್ಯದಿಂದ, **ಅಮುಂ** ವಿಷ್ಣುವನ್ನೇ, **ಆಪುಃ** ಪ್ರತಿಪಾದಿಸಿದವೋ, **ತೇ** ಆ ವೇದಗಳು, **ಅತದುತ್ಸಿಸೃಕ್ಷವಃ** ಪರಮಾತ್ಮನಿಂದ ಭಿನ್ನವಾದವುಗಳನ್ನು ಸರ್ವೋತ್ತಮವಲ್ಲವೆಂದು ಬಿಡಲಿಚ್ಛಿಸುವ ವೇದಗಳು, **ಯತ್ ಪದಂ** ಯಾವ ವಿಷ್ಣುಸ್ವರೂಪವನ್ನು, **ನೇತಿ ನೇತಿ ಇತಿ** ಪರಮಾತ್ಮನು ಪ್ರಕೃತಿಯಂತಲ್ಲ, ಅದರ ಕಾರ್ಯದಂತೂ ಅಲ್ಲ, ಅಭಿಮಾನಿಗಳಂತೆಯೂ ಅಲ್ಲ ಕಿಂತು, **ಪರಂ** ಸರ್ವೋತ್ತಮನೆಂದು **ಆಮನಂತಿ** ಹೇಳುವವೋ, **ತತ್** ಆ ಆತ್ಮಶಬ್ದವಾಚ್ಯನನ್ನು ಚಿಂತಿಸಬೇಕು. ಇಲ್ಲಿ ಯೋಗಿಗಳ ಉಪಮಾನದಿಂದ ವೇದಗಳು ಹೇಳಲ್ಪಟ್ಟಿವೆ. ಯೋಗಿಗಳೂ ಕೂಡ **ಅತದುತ್ಸಿಸೃಕ್ಷವಃ** ಬ್ರಹ್ಮಭಿನ್ನವಾದ ಸಂಸಾರವನ್ನು ಬಿಡಲಿಚ್ಛಿಸಿ, **ದೌರಾತ್ಮ್ಯಂ** ದುಷ್ಟರಿಗಿರುವ ರಾಗಾದಿಗಳನ್ನೂ, **ವಿಸೃಜ್ಯ** ತೊರೆದು, **ಅನನ್ಯ ಸೌಹೃದಾಃ** ಬೆರೇಲ್ಲೂ ಸ್ನೇಹವಿಲ್ಲದೇ, **ಹೃದಾ** ಮನಸ್ಸಿನಿಂದ, **ಅಮುಂ** ಶ್ರೀಹರಿಯನ್ನು, **ಪದೇ ಪದೇ** ಕ್ಷಣಕ್ಷಣದಲ್ಲಿಯೂ, **ಉಪಗುಹ್ಯ** ಆಲಿಂಗಿಸಿ, ಧ್ಯಾನಮಾಡಿ, **ಆಪುಃ** ಹೊಂದಿದರು ಎಂದರ್ಥ.

ವಿಜಯಧ್ವಜರು - **ತತ್ ವೈಷ್ಣವಂ ಪರಂ ಪದಂ** ವಿಷ್ಣುವಿನ ಪ್ರಾಪ್ತವ್ಯೋತ್ತಮವಾದ ಲೋಕವನ್ನೂ, **ಆಮನಂತಿ** ಹೇಳುವವು. ಎಂದರ್ಥ ಮಾಡಿ ಹೇಗೆ ಕಾಲಾದಿಕೃತ ಉಪದ್ರವ ಶ್ರೀಹರಿಗೆ ಇಲ್ಲವೋ ಹಾಗೆಯೇ ಅವನ ಲೋಕಕ್ಕೂ ಇಲ್ಲ ಎಂದರ್ಥ ಮಾಡಿ ಯಾವನ ಸಂಬಂಧದಿಂದ ಈ ವಿಧ ಮಹಿಮೆ ಲೋಕಕ್ಕಿದೆಯೋ ಅಂಥ ವಿಷ್ಣು ಎಂಥವನು ಎಂದು ಅವತರಣಿಕೆಯನ್ನು ನೀಡಿದ್ದಾರೆ. ।।೧೮।।

*ಈಗ ಜ್ಞಾನಿಯ ಉತ್ಕ್ರಮಣದ ರೀತಿಯನ್ನು ಹೇಳುವರು-*

**ಇತ್ಥಂ ಮುನಿಸ್ತೂಪರಮೇದ್ವ್ಯವಸ್ಥಿತೋ**
**ವಿಜ್ಞಾನದೃಗ್ವೀರ್ಯಸುರಂಧಿತಾಶಯಃ ।**
**ಸ್ವಪಾರ್ಷ್ಣಿನಾಽಽಪೀಡ್ಯ ಗುದಂ ತತೋಽನಿಲಂ**
**ಸ್ಥಾನೇಷು ಷಟ್ಸೂನ್ನಮಯೇಜ್ಜಿತಕ್ಲಮಃ ॥ ೨೦ ॥**

**ಇತ್ಥಂ** ಹಿಂದೆ ಹೇಳಿದಂತೆ ಸುಖಾಸನಾಸೀನನಾಗಿ, **ವ್ಯವಸ್ಥಿತಃ** ದೇಹದಿಂದ ಉತ್ಕ್ರಮಿಸಲು ನಿಶ್ಚಯಿಸಿ ಶ್ರೀಹರಿಯಲ್ಲಿಯೇ ನಿಶ್ಚಿತವಾದ ಬುದ್ಧಿಯುಳ್ಳವನಾಗಿ, **ಮುನಿಃ** ಮೌನಿಯಾಗಿ, **ವಿಜ್ಞಾನದೃಗ್ವೀರ್ಯಸುರಂಧಿತಾಶಯಃ** ಆತ್ಮಯೋಗ್ಯವಾದ ಅಪರೋಕ್ಷಜ್ಞಾನದ ಸಾಮರ್ಥ್ಯದಿಂದ ದಗ್ಧವಾದ ಬಾಹ್ಯಾಂತಃಕರಣ ಉಳ್ಳವನಾಗಿ, **ಜಿತಕ್ಲಮಃ** ಗ್ಲಾನಿರಹಿತನಾಗಿ, **ಸ್ವಪಾರ್ಷ್ಣಿನಾ** ಹಿಂಬಡದಿಂದ, **ಗುದಂ** ಅಪಾನದ್ವಾರವನ್ನು, **ಆಪೀಡ್ಯ** ಒಂದು ಮಾಡಿ, **ತತಃ** ಗುದದಲ್ಲಿರುವ ಬ್ರಹ್ಮನಾಡಿಯಲ್ಲಿರುವ ಹದಿನಾಲ್ಕು ದಲದ ಮೂಲಾಧಾರಪದ್ಮದಿಂದ, **ಅನಿಲಂ** ಉದಾನವಾಯುವನ್ನು, **ಷಟ್ಸು ಸ್ಥಾನೇಷು ಉನ್ನಮಯೇತ್** ನಾಭಿ, ಹೃದಯ, ಉರ, ತಾಲುಮೂಲ, ಭ್ರೂಮಧ್ಯ, ಮೂರ್ಧಗಳೆಂಬ ಆರು ಸ್ಥಾನಗಳಲ್ಲಿ ಕ್ರಮವಾಗಿ ಮೇಲೆ ಕಳಿಸಬೇಕು. ।।೨೦।।

*ಸಂಕ್ಷೇಪವಾಗಿ ಹೇಳಿದ್ದನ್ನು ವಿಸ್ತರಿಸುವರು-*

**ನಾಭ್ಯಾಂ ಸ್ಥಿತಂ ಹೃದ್ಯವರೋಪ್ಯ ತಸ್ಮಾತ್**
**ಉದಾನಗತ್ಯೋರಸಿ ತಂ ನಯೇನ್ಮುನಿಃ ।**
**ತತೋಽನುಸಂಧಾಯ ಧಿಯಾ ಮನಸ್ವೀ**
**ಸ್ವತಾಲುಮೂಲಂ ಶನಕೈರ್ನಯೇತ ॥ ೨೧ ॥**

ಬ್ರಹ್ಮನಾಡಿಯು ಗುದದಿಂದ ತಲೆಯ ವರೆಗೆ ಋಜುವಾಗಿ ಇದೆ. ಅದರ ಮಧ್ಯದಲ್ಲಿ ಮುಂದೆ ಹೇಳುವ ಪದ್ಮಗಳಿವೆ ಅವುಗಳನ್ನೇ ಇಲ್ಲಿ ನಾಭಿಮುಂತಾದ ಪದಗಳಿಂದ ಲಕ್ಷಣಯಾ ತೆಗೆದುಕೊಳ್ಳಬೇಕು.

ನಾಭ್ಯಾಂ ಸ್ಥಿತಂ ಎಂದು ಅನುವಾದ ಮಾಡಿದ್ದರಿಂದ ಮೂಲಾಧಾರವಾದ ಹದಿನಾಲ್ಕು ದಳದ ಪದ್ಮದಿಂದ ಹೊಕ್ಕಳದಲ್ಲಿರುವ ಬ್ರಹ್ಮನಾಡಿಯಲ್ಲಿರುವ ಆರುದಳದ ಪದ್ಮಕ್ಕೆ ಒಯ್ಯಬೇಕು ಎಂದಿಟ್ಟುಕೊಳ್ಳಬೇಕು. ನಂತರ **ನಾಭ್ಯಾಂ ಸ್ಥಿತಂ** ನಾಭಿಯಲ್ಲಿಯ

ಉದಾನವಾಯುವನ್ನು, **ಹೃದಿ ಅವರೋಪ್ಯ** ಹೃದಯಪ್ರದೇಶದಲ್ಲಿರುವ ಎಂಟುದಳದ ಪದ್ಮದಲ್ಲಿ, **ಅವರೋಪ್ಯ** ಇರಿಸಿ, **ತಸ್ಮಾತ್** ಅಷ್ಟದಳದ ಪದ್ಮದಿಂದ, **ಉದಾನಗತ್ಯಾ** ಬ್ರಹ್ಮನಾಡಿಯಲ್ಲಿರುವ ಹನ್ನೆರಡು ದಲದ ಪದ್ಮದಲ್ಲಿ ಒಯ್ಯಬೇಕು. **ಮನಸ್ವೀ** ಮನಸ್ಸಮಾಧಾನವುಳ್ಳವನಾಗಿ, **ತತಃ** ಹನ್ನೆರಡು ದಲದ ಪದ್ಮದಿಂದ, **ಧಿಯಾ ಅನುಸಂಧಾಯ** ಬೆರೆನಾಡಿಗಳಿಗೆ ಹೋಗದಂತೆ ಮನಸ್ಸಿನಿಂದ ಅನುಂಧಾನಮಾಡಿ, **ಶನಕೈಃ** ನಿಧಾನವಾಗಿ, **ಸ್ವತಾಲುಮೂಲಂ** ತಾಲುಮೂಲದಲ್ಲಿರುವ ಬ್ರಹ್ಮನಾಡೀಸ್ಥದ್ವಿದಲ-ಪದ್ಮಕ್ಕೆ **ನಯೇತ** ಒಯ್ಯಬೇಕು.

(ತಾಲು ಎಂದರೇ ನಾಲಿಗಿಗೆ ಆಶ್ರಯವಾದ ಸ್ಥಾನ) (ಹೃದಯ ಷೋಡಶ ಪದ್ಮಗಳ ಮಧ್ಯಭಾಗ)

ಇಲ್ಲಿ ಉದಾನಗತ್ಯಾ ಎಂಬುದು ಉದಾನಸ್ಯ ಗತಿಃ ಎಂದು ಷಷ್ಠೀತತ್ಪುರುಷವಲ್ಲ. ಕಿಂತು ಉದಾನಸ್ಯ ಗತಿಃ ಯಸ್ಯಾಂ ಎಂದು ಬಹುವ್ರೀಹಿಸಮಾಸ ಮಾಡಬೇಕೆಂದು ತಿಳಿಸುತ್ತಾರೆ-

**ತಾತ್ಪರ್ಯ- ಉದಾನಗತ್ಯಾ ಬ್ರಹ್ಮನಾಡ್ಯಾ ।**

ಉದಾನಗತಿಗೆ ಆಧಾರವಾದ ಬ್ರಹ್ಮನಾಡಿಯಿಂದ ಎಂದರ್ಥ.

ಈ ವಿಷಯದಲ್ಲಿ ಪ್ರಮಾಣ ಹೇಳುವರು-

**'ಅಥೈಕಯೋರ್ಧ್ವ ಉದಾನಃ' ಇತಿ ಶ್ರುತಿಃ ।**

**ಪ್ರಾಣಾಪಾನಾವಿಡಾಯಾಂ ಚ ಪಿಂಗಲಾಯಾಂ ಚ ವರ್ತತಃ ।**
**ವ್ಯಾನಃ ಸಂಧಿಷು ಸರ್ವತ್ರ ಉದಾನೋ ಬ್ರಹ್ಮನಾಡಿಗಃ ।**
**ಸರ್ವತ್ರೈವ ಸಮಾನಸ್ತು ಸಮಂ ಚರತಿ ಸರ್ವಗಃ ।।ಇತಿ ಭಾರತೇ।।**

ಉದಾನನು ಬ್ರಹ್ಮನಾಡಿಯಿಂದ ಮೇಲಕ್ಕೆ ಹೋಗುತ್ತಾನೆ ಎಂದು ಶ್ರುತಿಯು ತಿಳಿಸುತ್ತದೆ. ಪ್ರಾಣನು ಇಡಾನಾಡಿಯಲ್ಲಿ, ಅಪಾನನು ಪಿಂಗಲಾನಾಡಿಯಲ್ಲಿ ಸಂಧಿಗಳಲ್ಲಿರುವ ನಾಡಿಗಳಲ್ಲಿ ವ್ಯಾನನು, ಎಲ್ಲ ನಾಡಿಗಳಲ್ಲಿ ಸಮಾನನು ಇರುತ್ತಾನೆ. ಉದಾನನು ಬ್ರಹ್ಮನಾಡಿಯಲ್ಲಿ ಇರುತ್ತಾನೆ. ಸಮಾನನು ಸರ್ವಗತನಾಗಿ ಎಲ್ಲಡೆಯಲ್ಲಿಯೂ ಸಮವಾಗಿ ಸಂಚರಿಸುವನು ಎಂದು ಭಾರತದಲ್ಲಿದೆ. ।। ೨೦ ।।

**ತಸ್ಮಾದ್ ಭ್ರುವೋರಂತರಮುನ್ನಯೇತ**
**ನಿರುದ್ಧಸಪ್ತಾಶ್ವಪಥೋಽನಪೇಕ್ಷಃ ।**
**ಸ್ಥಿತ್ವಾ ಮುಹೂರ್ತಾರ್ಧಮಕುಂಠದೃಷ್ಟಿಃ**
**ನಿರ್ಭಿದ್ಯ ಮೂರ್ಧನ್ವಿಸೃಜೇತ್ ಪರಂಗತಃ ॥ ೨೨ ॥**

**ತಸ್ಮಾತ್** ತಾಲುಮೂಲದ ದ್ವಿದಲಪದ್ಮದಿಂದ, **ಭ್ರುವೋಃ ಅಂತರಂ** ಹುಬ್ಬಿನ ಮಧ್ಯದಲ್ಲಿರುವ ಬ್ರಹ್ಮನಾಡೀಸ್ಥ ಹದಿನಾಲ್ಕು ದಲ ಪದ್ಮಕ್ಕೆ, **ನಿರುದ್ಧಸಪ್ತಾಶ್ವಪಥಃ** ಕಿವಿಗಳೆರಡು, ಕಣ್ಣುಗಳೆರಡು, ಮೂಗಿನ ಹೊರಳುಗಳೆರಡು, ಒಂದು ಬಾಯಿ ಎಂಬ ಕುದುರೆಗಳಂತಿರುವ ಏಳು ಇಂದ್ರಿಯಗಳ ಸಂಚಾರಮಾರ್ಗಗಳನ್ನು ತಡೆದವನಾಗಿ, **ಅನಪೇಕ್ಷಃ** ಬಾಹ್ಯಸುಖಾಪೇಕ್ಷೆಯಿಲ್ಲದೇ, **ಉನ್ನಯೇತ್** ಒಯ್ಯಬೇಕು, **ಮುಹೂರ್ತಾರ್ಧಂ** ಒಂದು ಘಳಿಗೆ, **ಸ್ಥಿತ್ವಾ** ನಿಂತು, **ಮನಸಾ ಪರಂ ಗತಃ** ಮನಸ್ಸಿನಿಂದ ಶ್ರೀಹರಿಯನ್ನು ಹೊಂದಿ, ಅರ್ಥಾತ್ ಚಿಂತನಮಾಡುತ್ತ, **ಅಕುಂಠದೃಷ್ಟಿಃ** ಮಾರ್ಗ ಮತ್ತು ಗಮ್ಯ ವಿಷಯ ಜ್ಞಾನವನ್ನು ಕಳೆದುಕೊಳ್ಳದೇ, **ಮೂರ್ಧನ್** ತಲೆಯಲ್ಲಿರುವ ಬ್ರಹ್ಮನಾಡೀಸ್ಥದ್ವಿದಲಪದ್ಮಕ್ಕೆ **ಉನ್ನಯೇತ** ಒಯ್ಯಬೇಕು. ನಂತರ, **ಮೂರ್ಧನ್** ಶಿರಸ್ಸಿನಲ್ಲಿ **ನಿರ್ಭಿದ್ಯ** ಸೀಳಿಕೊಂಡು, **ವಿಸೃಜೇತ** ದೇಹವನ್ನು ಬಿಡಬೇಕು.

ಈ ಪದ್ಮಗಳು ತಂತ್ರಸಾರದಲ್ಲಿ ಹೇಳಲ್ಪಟ್ಟಿವೆ.

**ಮೂಲೇ ಚ ನಾಭೌ ಹೃದಯೇಂದ್ರಯೋನಿಭ್ರೂಮಧ್ಯಮೂರ್ಧ್ನಿ ದ್ವಿಷಡಂತಕೇಷು ।**
**ಚತುಃಷಡಷ್ಟದ್ವಿಚತುರ್ದ್ವಿಷಟ್ಕದಲೇಷು ಪದ್ಮೇಷು ಸಿತಾರುಣೇಷು ॥** - ತಂತ್ರಸಾರ

ಇಲ್ಲಿ ಹೇಳದಿದ್ದರೂ ಉದರಸ್ಥಾನಗತ ಪದ್ಮವನ್ನು ಪೂರ್ವಟೀಕೆಯಲ್ಲಿ ಹೇಳಿದ್ದನ್ನು ಹೇಳಿದೆ ಎಂದು ತಿಳಿಯಬೇಕು.

ಸಾಧಕರು ಎರಡು ವಿಧರಾಗಿ ಇದ್ದಾರೆ. ಭಕ್ತ್ಯಾದಿಪ್ರಧಾನರು, ವಾಯುಜಯಾದಿ-ಯೋಗಪ್ರಧಾನರು, ಅವರಲ್ಲಿ ಯಾರು ವಾಯುಜಯಾದಿಯೋಗ ಪ್ರಧಾನರೋ ಅವರಿಗೇನೇ ಈ ವಾಯೂತ್ಕ್ರಮಣ ಪ್ರಕಾರವನ್ನು ಹೇಳಿದ್ದಾರೆ. ಎಲ್ಲ ಉತ್ಕ್ರಮಣೇಚ್ಛುಗಳಿಗೆ ಸಾಧಾರಣವಾದುದಲ್ಲ. ॥೨೨॥

ಈ ರೀತಿಯಾಗಿ ಉತ್ಕ್ರಮಣಮಾಡಿದ ಯೋಗಿಗೆ ಪ್ರಲಯದವರೆಗೆ ಇರುವ ವಾಸಸ್ಥಾನವನ್ನು ತೋರಿಸುತ್ತ ಆ ಸ್ಥಳದಲ್ಲಿ ಅವನಿಗೆ ಭೋಗಮಾಡಲು ಜಡವಾದ ಇಂದ್ರಿಯಗಳು ಜೊತೆಗೆ ಹೋಗುತ್ತವೋ ಇಲ್ಲವೋ ಎಂಬ ಜಿಜ್ಞಾಸೆಗೆ ಉತ್ತರಿಸುವರು-

**ಯದಿ ಪ್ರಯಾಸ್ಯತ್ಯಥ ಪಾರಮೇಷ್ಠ್ಯಂ**
**ವೈಹಾಯಸಾನಾಮುತ ಯದ್ವಿಹಾರಮ್ ।**
**ಅಷ್ಟಾಧಿಪತ್ಯಂ ಗುಣಸನ್ನಿವಾಯೇ**
**ಸಹೈವ ಗಚ್ಛೇನ್ಮನಸೇಂದ್ರಿಯೈಶ್ಚ** ॥ ೨೩ ॥

**ಅಥ** ಉತ್ಕ್ರಮಣಾನಂತರ, **ಪಾರಮೇಷ್ಠ್ಯಂ** ಚತುರ್ಮುಖನ ಲೋಕವಾದ ಸತ್ಯಲೋಕವನ್ನು, **ಯದಿ ಪ್ರಯಾಸ್ಯತಿ** ಯಾವಾಗ ಹೋಗುವನೋ, **ಉತ** ಅಥವಾ, **ವೈಹಾಯಸಾನಾಂ** ಆಕಾಶದಲ್ಲಿ ಸಂಚರಿಸುವ ಸಿದ್ಧರ, **ಯದ್ವಿಹಾರಂ** ಕ್ರೀಡಾಸ್ಥಾನವಾದ ಮಹರಾದಿಗಳನ್ನು ಅಥವಾ, **ಅಷ್ಟಾಧಿಪತ್ಯಂ** ಅಣಿಮಾದ್ಯಷ್ಟೈಶ್ವರ್ಯ ಉಳ್ಳ ವೈಕುಂಠವನ್ನಾಗಲಿ, **ಯದಿ ಯಾಸ್ಯತಿ** ಯಾವಾಗ ಹೋಗುವನೋ, **ತರ್ಹಿ** ಆಗ **ಗುಣಸನ್ನಿವಾಯೇ ಸತಿ** ಸತ್ತ್ವಾದಿಗುಣಗಳುಳ್ಳ ಲಿಂಗಶರೀರವಿರುವಾಗ, (ಪರಮ ಮುಕ್ತ್ಯಭಾವಕಾಲದಲ್ಲಿ) **ಮನಸಾ ಇಂದ್ರಿಯೈಶ್ಚ** ಜಡಮನಸ್ಸು ಮತ್ತು ಜಡಇಂದ್ರಿಯಗಳಿಂದ, **ಸಹೈವ ಗಚ್ಛೇತ್** ಜೊತೆಗೇನೇ ಹೋಗುವನು. ಪರಮಮುಕ್ತಿಯಲ್ಲಿಯಂತೆ ಅವುಗಳನ್ನು ಬಿಟ್ಟು ಇರುವುದಿಲ್ಲ. ಇಲ್ಲಿ ಬೇರೇ ನಾಡಿಗಳಿಂದ ಉತ್ಕ್ರಾಂತರಾದವರಿಗೇನೇ ಮಹರಾದಿಗಳು ಪ್ರಾಪ್ಯವೆಂದು ಹೇಳಿದ್ದು. ಬ್ರಹ್ಮನಾಡಿಯಿಂದ ಉತ್ಕ್ರಾಂತರಾದವರಿಗೆ ಅಲ್ಲ.

'ವಿಷ್ವಗನ್ಯಾ ಉತ್ಕ್ರಮಣೇ ಭವಂತಿ' ಎಂದು ವಚನವಿದೆ. ಇಲ್ಲಿ ಇಂದ್ರಿಯೈಃ ಎಂಬುದಕ್ಕೆ ಚಿನ್ಮಾತ್ರೇಂದ್ರಿಯಗಳಿಂದ ಎಂದರ್ಥ ಏಕಾಗಬಾರದು ಎಂಬ ಶಂಕೆಗೆ ಉತ್ತರಿಸಲು ಪ್ರಮಾಣ ಹೇಳುವರು-

ತಾತ್ಪರ್ಯ- ಚಿನ್ಮಾತ್ರಾಣೇಂದ್ರಿಯಾಣ್ಯಾಹುಃ ಮುಕ್ತಾನಾಮನ್ಯದೈವ ತು ।
ತಾನ್ಯೇವ ಜಡಯುಕ್ತಾನಿ ಹ್ಯಭಿನ್ನಾನಿ ಸ್ವರೂಪತಃ ॥ -ಇತಿ ಬ್ರಾಹ್ಮೇ

ಮುಕ್ತರ ಇಂದ್ರಿಯಗಳು ಜಡಮಿಶ್ರವಾಗದೇ ಕೇವಲ ಚಿತ್ಸ್ವರೂಪವಾಗಿರುವವು. ಅವುಗಳೇ ಸಂಸಾರದಶೆಯಲ್ಲಿ ಜಡೇಂದ್ರಿಯಮಿಶ್ರಗಳಾಗಿರುತ್ತವೆ. ಎಂದು ಬ್ರಹ್ಮಪುರಾಣದಲ್ಲಿದೆ. ॥೨೩॥

*ಮೇಲೆ ಹೇಳಿದ ಸ್ಥಾನಗಳು ಕರ್ಮಸಾಧ್ಯವಾದ ಲೋಕಕ್ಕಿಂತ ಮೇಲಿರುವುದರಿಂದ ಕರ್ಮಸಾಧ್ಯಗಳಲ್ಲ ಎಂದು ಹೇಳುತ್ತ ಅವುಗಳಲ್ಲಿ ಅವಾಂತರತಾರತಮ್ಯವನ್ನು ಅವುಗಳ ಸಾಧನವನ್ನು ಹೇಳುವರು-*

**ಯೋಗೇಶ್ವರಾಣಾಂ ಗತಿಮಾಮನಂತಿ**
**ಬಹಿಸ್ತ್ರಿಲೋಕ್ಯಾಃ ಪವನಾಂತರಾತ್ಮಾ ।**
**ನ ಕರ್ಮಭಿಸ್ತಾಂ ಗತಿಮಾಪ್ನುವಂತಿ**
**ವಿದ್ಯಾತಪೋಯೋಗಸಮಾಧಿಭಾಜಾಮ್** ॥ ೨೪ ॥

**ವಿದ್ಯಾತಪೋಯೋಗಸಮಾಧಿಭಾಜಾಂ** ವಿದ್ಯಾ-ತಪಸ್ಸು-ಯೋಗ ಎಂಬ ಶಬ್ದಗಳಿಂದ ಹೇಳಲ್ಪಡುವ ಅಪರೋಕ್ಷಜ್ಞಾನವಿಶೇಷಸಾಮಗ್ರಿಯುಳ್ಳ **ಯೋಗೇಶ್ವರಾಣಾಂ** ಯೋಗದಿಂದ ಪಡೆದ ಐಶ್ವರ್ಯವುಳ್ಳ ಅಧಿಕಾರಿಗಳಿಗೆ, **ಗತಿಂ** ಗಮ್ಯಸ್ಥಾನವನ್ನು, **ತ್ರಿಲೋಕ್ಯಾಃ ಬಹಿಃ ಆಮನಂತಿ** ಭೂಃ ಭುವಃ ಸ್ವಃ ಎಂಬ ಮೂರು ಲೋಕಗಳ ಮೇಲೆ ಇರುವುದೆಂದು ವೇದಗಳು ಹೇಳುತ್ತವೆ. **ತಾಂ** ಆ ಸ್ಥಾನವನ್ನು, ಕರ್ಮಭಿಃ **ನ ಆಪ್ನುವಂತಿ** ಕರ್ಮಗಳಿಂದ ಹೊಂದಲಾರ. ಅದರಲ್ಲಿ ಬ್ರಹ್ಮನಾಡಿಯಿಂದ ಉತ್ಕ್ರಾಂತರಾದವರಿಗೆ ವಿಶೇಷ ಹೇಳುವರು. ಬ್ರಹ್ಮನಾಡಿಯಿಂದ ಉತ್ಕ್ರಾಂತರಾದವರು ಎರಡು ವಿಧರು ಅಪ್ರತೀಕಾಲಂಬನರು ಪ್ರತೀಕಾಲಂಬನರು ಎಂದು. ಅವರಲ್ಲಿ ಅಪ್ರತೀಕಾಲಂಬನರಿಗೆ, **ಪವನಾಂತರಾತ್ಮಾ** (ಪವನಸ್ಯಅಂತರಾತ್ಮಾ) ವಾಯುದೇವರಿಗೆ ಅಂತರ್ಯಾಮಿಯಾದ ಶ್ರೀಹರಿಯು, **ಗತಿಃ** ಪ್ರಾಪ್ಯನು, ಪ್ರತೀಕಾಲಂಬನರಿಗೆ, ಪವನಾಂತರಾತ್ಮಾ (ಪವನಶ್ಚಾಸೌ ಅಂತರಾತ್ಮಾ ಚ) ಸತ್ಯಲೋಕದಲ್ಲಿರುವ ಬ್ರಹ್ಮದೇವರೇ, **ಗತಿಂ** ಪ್ರಾಪ್ಯವೆಂದು ಹೇಳುವರು. (ಬೇರೇ ನಾಡಿಗಳಿಂದ ಉತ್ಕ್ರಾಂತರಾದವರಿಗೆ ಮಹರಾದಿಗಳೇ ಗಮ್ಯವಾಗಿವೆ. ಹರಿಯಾಗಲೀ ಬ್ರಹ್ಮದೇವರಾಗಲೀ ಅಲ್ಲ. ಅವರು ಅವ್ಯಕ್ತರಾಗಿರುವರು. ಇದರಂತೆ ಹಿಂದಿನ ಶ್ಲೋಕದಲ್ಲಿಯೂ ಅಧಿಕಾರಿಭೇದದಿಂದ ಪಾರಮೇಷ್ಠ್ಯಾದಿಸ್ಥಾನಗಳನ್ನು ಹೇಳಬೇಕು. ಈ ಶ್ಲೋಕದಲ್ಲಿ ಪವನಾಂತರಾತ್ಮಾ ಎಂಬುದು ಅನನ್ವಿತವಾಗಿ ತೋರುವುದು. ಕಾರಣ ಯತ್ ಶಬ್ದವನ್ನು ಅಧ್ಯಾಹಾರ ಮಾಡಿ ಎರಡು ರೀತಿ ಯೋಜಿಸುವರು.

ತಾತ್ಪರ್ಯ- ಪವನಸ್ಯಾಪ್ಯಂತರಾತ್ಮಾ ಯಃ ತಂ । ಪವನಶ್ಚ (ಅಸೌ) ಅಂತರಾತ್ಮಾ ಚೇತಿ ವಾ ।

ಈಯುಸ್ತ್ರೀನ್ ಕರ್ಮಣಾ ಲೋಕಾನ್ ಜ್ಞಾನೇನೈವ ತದುತ್ತರಾನ್ ।
ತತ್ರ ಮುಖ್ಯಾ ಹರಿಂ ಯಾಂತಿ ತದನ್ಯೇ ವಾಯುಮೇವ ತು ।
ಅಪಕ್ವಾ ಯೇ ನ ತೇ ಯಾಂತಿ ವಾಯುಂ ವಾ ಹರಿಮೇವ ವಾ ।
ಸ್ಥಾನಮಾತ್ರಾಶ್ರಿತಾಸ್ತೇ ತು ಪುನರ್ಜನಿವಿವರ್ಜಿತಾಃ ॥ -ಇತಿ ಬ್ರಹ್ಮತರ್ಕೇ ॥

'ಪವನಾಂತರಾತ್ಮಾ' ಎಂಬುದಕ್ಕೆ ಚತುರ್ಮುಖನಿಗೆ ಅಂತರ್ಯಾಮಿಯಾದ ಶ್ರೀಹರಿಯು ಎಂದು ಮತ್ತು ಪವನರೂಪಿಯಾಗಿ ತನ್ನ ಕೆಳಗಿನವರಿಗೆ ಅಂತರ್ಯಾಮಿಯಾದ

ಸತ್ಯಲೋಕದಲ್ಲಿರುವ ಚತುರ್ಮುಖನು ಎಂದು ಎರಡು ಅರ್ಥಗಳನ್ನು ಇಟ್ಟುಕೊಳ್ಳಬೇಕು. ಭೂಃ ಭುವಃ ಸ್ವಃ ಎಂಬ ಮೂರುಲೋಕಗಳನ್ನು ಕಾಮ್ಯಕರ್ಮಗಳಿಂದ ಹೊಂದುತ್ತಾರೆ. ಅವುಗಳಿಗಿಂತ ಮೇಲೆ ಇರುವ ಜನಾದಿಲೋಕಗಳನ್ನು ಜ್ಞಾನದಿಂದಲೇ ಹೊಂದುತ್ತಾರೆ. ಮುಖ್ಯರಾದ ಅಪ್ರತೀಕಾಲಂಬನರು ಶ್ರೀಹರಿಯನ್ನು ಹೊಂದುತ್ತಾರೆ. ಪ್ರತೀಕಾಲಂಬನರು ಚತುರ್ಮುಖ ಬ್ರಹ್ಮನನ್ನು ಹೊಂದುತ್ತಾರೆ. ಅಪಕ್ವರು ಬ್ರಹ್ಮನಾಡಿಯಿಂದ ಹೊರಹೋಗದಿದ್ದವರು ಸತ್ಯಲೋಕದಲ್ಲಿ ಚತುರ್ಮುಖನನ್ನಾಗಲಿ, ವೈಕುಂಠದ ಅಮುಕ್ತಸ್ಥಾನದಲ್ಲಿರುವ ಶ್ರೀಹರಿಯನ್ನಾಗಲಿ ಹೊಂದುವುದಿಲ್ಲ. ಅವರು ಮಹರ್ಲೋಕವನ್ನು ಹೊಂದುತ್ತಾರೆ. ತಿರುಗಿ ಹುಟ್ಟುವುದಿಲ್ಲ ಎಂದು ಬ್ರಹ್ಮತರ್ಕದಲ್ಲಿದೆ. ಇದು ತಾತ್ಪರ್ಯದ ಭಾವಾರ್ಥ.

ಇನ್ನು ೨೩-೨೪ ಎರಡು ಶ್ಲೋಕಗಳ ವಿಸ್ತಾರ ಅರ್ಥ.

ಮೂಲದಲ್ಲಿ (ಭಾಗವತ) 'ತ್ರಿಲೋಕ್ಯಾಃ ಬಹಿಃ' ಎಂದು ಸಾಮಾನ್ಯವಾಗಿ ಹೇಳಿದ್ದರಿಂದ ಮಹರಾದಿಲೋಕಗಳೂ ಕೂಡ ಜ್ಞಾನಿಪ್ರಾಪ್ಯ ಎಂದು ಸೂಚಿಸಿರುವರು. 'ಕರ್ಮಭಿಃ ತಾಂ ಗತಿಂ ನಾಪ್ನುವಂತಿ' ಎಂದು ಹೇಳಿದ್ದರಿಂದ ಭೂಃ ಭುವಃ ಸ್ವಃ ಎಂಬ ಮೂರು ಲೋಕಗಳೇ ಕರ್ಮಗಳಿಂದ ಪ್ರಾಪ್ಯವಾದವುಗಳು ಎಂದೂ ಸೂಚಿತವಾಗಿವೆ. ಮಹರಾದಿಲೋಕಗಳು ಕರ್ಮಗಳಿಂದ ಸರ್ವಥಾ ಪ್ರಾಪ್ಯವಲ್ಲ. ಕಿಂತು ವಿದ್ಯಾತಪೋಯೋಗಸಮಾಧಿ ಉಳ್ಳವರೆಲ್ಲರೂ ಈ ಲೋಕಗಳನ್ನು ಪಡೆಯಬಹುದು.

ಒಂದು ಮಾತ್ರಾ ಎಂದರೆ ಒಂದಕ್ಷರ ಉಚ್ಚಾರ ಮಾಡಲು ಬೇಕಾಗುವ ಕಾಲಕ್ಕೆ ಸಮಾನಕಾಲವು.

ಇಲ್ಲಿ ವಿದ್ಯಾತಪೊಯೋಗಶಬ್ದಗಳು ಅಪರೋಕ್ಷಜ್ಞಾನವಿಶೇಷವಾಚಕಗಳಾಗಿವೆ. ಸಮಾಧಿಶಬ್ದಕ್ಕೆ ನಿತ್ಯಧ್ಯಾನ ಎಂದು ಅರ್ಥ. ವಿದ್ಯಾಶಬ್ದದಿಂದ ಉಕ್ತವಾದ ಜ್ಞಾನವು ಜ್ಞಾನ, ಮಹಾಜ್ಞಾನವೆಂದು ಎರಡು ವಿಧವಾಗಿದೆ. ಒಂದು ಮೂಹೂರ್ತ ಮಾತ್ರ ಭಗವಂತನ ರೂಪದ ಅಖಂಡಿತವಾದ ಅಪರೋಕ್ಷವಾಗಿ ದರ್ಶಮಾಡುವುದು ಜ್ಞಾನವೆನಿಸುತ್ತದೆ. ಈ ಜ್ಞಾನದಿಂದ ಬ್ರಹ್ಮಲೋಕವು ಪ್ರಾಪ್ಯವಾಗುತ್ತದೆ.

ಮುಹೂರ್ತಕ್ಕಿಂತ ಹೆಚ್ಚು ಅಖಂಡಿತವಾಗಿ ಆಗುವ ಭಗವದಪರೋಕ್ಷಜ್ಞಾನವು ಮಹಾಜ್ಞಾನವೆನಿಸುತ್ತದೆ. ಈ ಮಹಾಜ್ಞಾನದಿಂದ ವೈಕುಂಠಾದಿ ಹರಿಲೋಕವು ಪ್ರಾಪ್ಯವಾಗುತ್ತದೆ. ಆರು ಮಾತ್ರಾಕಾಲ ಅಪರೋಕ್ಷಜ್ಞಾನಸಹಿತವಾದ ಅಖಂಡಧ್ಯಾನವು

ತಪಸ್ಸು ಎನಿಸುತ್ತದೆ. ಈ ತಪಸ್ಸಿನಿಂದ ತಪೋಲೋಕವು ದೊರೆಯುತ್ತದೆ. ಇಲ್ಲಿ ಯೋಗ ಶಬ್ದದಿಂದ ಯೋಗ, ಪಾದಯೋಗ ಎಂದು ಎರಡು ವಿವಕ್ಷಿತವಾಗಿವೆ. ಅದರಲ್ಲಿ ಒಂದು ಮಾತ್ರಾಕಾಲದಲ್ಲಿ ಆಗುವ ಅಪರೋಕ್ಷಜ್ಞಾನದಿಂದ ಯುಕ್ತವಾದ ಅಖಂಡಿತವಾದ ನಿತ್ಯಧ್ಯಾನವು ಯೋಗನಾಮಕವಾಗಿದೆ. ಇದರಿಂದ ಜನಲೋಕದ ಪ್ರಾಪ್ತಿಯಾಗುತ್ತದೆ. ಒಂದುಮಾತ್ರಾದ ನಾಲ್ಕನೇ ಒಂದು ಭಾಗ ಕಾಲದಲ್ಲಿ ಆಗುವ ಅಪರೋಕ್ಷ ಜ್ಞಾನಯುತ ನಿತ್ಯಧ್ಯಾನವು ಪಾದಯೋಗವೆನಿಸುತ್ತದೆ. ಅದರಿಂದ ಮಹರ್ಲೋಕವು ಪ್ರಾಪ್ಯವಾಗುತ್ತದೆ. ಇದನ್ನೇ ಆಚಾರ್ಯರು ಏಕಾದಶಸ್ಕಂಧದಲ್ಲಿ ಹೇಳುತ್ತಾರೆ.

> **ನಿತ್ಯಶೋ ಭಗವದ್ರೂಪಸ್ಯಾಪರೋಕ್ಷೇಣ ದರ್ಶನಮ್ ।**
> **ಮೂಹೂರ್ತಮಾತ್ರಂ ಜ್ಞಾನಂ ಸ್ಯಾತ್ ಮಹಾಜ್ಞಾನಂ ತತೋಽಧಿಕಮ್ ।**
> **ಜ್ಞಾನೇನ ಬ್ರಹ್ಮಲೋಕಃ ಸ್ಯಾತ್ ಮಹಾಜ್ಞಾನಾದ್ಧರೇರ್ಗತಿಃ ॥**
>
> **ಸದೈವಾಽಖಂಡಿತಂ ಧ್ಯಾನಂ ತಪ ಇತ್ಯುಚ್ಯತೇ ಬುಧೈಃ ।**
> **ಅಪರೋಕ್ಷದೃಶಾ ಯುಕ್ತಂ ನಿತ್ಯಂ ಷಣ್ಮಾತ್ರಕಾಲಯಾ ॥**
>
> **ಅಪರೋಕ್ಷದೃಶಾ ಯುಕ್ತಂ ಏಕಮಾತ್ರಾಯುಜಾ ಯುತಮ್ ।**
> **ಯೋಗನಾಮ್ನಾ ಸಮುದ್ದಿಷ್ಟಂ ಧ್ಯಾನಂ ನಿತ್ಯಮಖಂಡಿತಮ್ ॥**
>
> **ತಚ್ಚುತುರ್ಭಾಗಯಾ ನಿತ್ಯಮಪರೋಕ್ಷದೃಶಾ ಯುತಮ್ ।**
> **ಪಾದಯೋಗಾಖ್ಯಮುದ್ದಿಷ್ಟಂ ಧ್ಯಾನಂ ನಿತ್ಯಮಖಂಡಿತಮ್ ।**
>
> **ಪಾದಯೋಗಾನ್ಮಹರ್ಲೋಕೋ ಜನೋಲೋಕಸ್ತು ಯೋಗತಃ ।**
> **ತಪಸಸ್ತು ತಪೋ ಲೋಕಃ ಪ್ರಾಪ್ಯತೇ ನಾನ್ಯತಃ ಕ್ವಚಿತ್ ॥ -ಇತಿ**

ಯದ್ಯಪಿ ನಿತ್ಯಧ್ಯಾನವನ್ನೂ ತಪೋಯೋಗ ಶಬ್ದಾರ್ಥಾಂತರ್ಗತವಾಗಿಯೇ ಈ ಪ್ರಮಾಣದಲ್ಲಿ ಹೇಳಿದೆ. ಆದರೂ ಮೂಲದಲ್ಲಿ ಸಮಾಧಿಶಬ್ದದಿಂದ ಅದನ್ನು ಪ್ರತ್ಯೇಕ ಹೇಳಿದ್ದರಿಂದ ಇಲ್ಲಿ ತಪೋ-ಯೋಗ ಶಬ್ದಗಳು ಮೇಲೆ ಹೇಳಿದ ಅಪರೋಕ್ಷಜ್ಞಾನ ವಿಶೇಷಗಳನ್ನೇ ತಿಳಿಸುವವು. ಪ್ರತ್ಯೇಕ ವಿಶೇಷಣ ಪದವಿದ್ದರೆ ಆಗ ವಿಶಿಷ್ಟ ವಾಚಕಪದಗಳಿಗೆ ವಿಶೇಷ್ಯಮಾತ್ರವಾಚಕತ್ವವು ಇರುವುದು ಎಂದು ತಿಳಿಯಬೇಕು. ಇಲ್ಲಿ ಶ್ರೀಹರಿಯು, ಪವನನು, ಮಹರಾದಿಲೋಕಗಳೂ ಪ್ರಾಪ್ಯವೆಂದು ಹೇಳಿದ್ದರಿಂದ ಮತ್ತು ತಾರತಮ್ಯೋಪೇತ ಅಪರೋಕ್ಷ ಜ್ಞಾನಗಳು ಸಾಧನ ಎಂದು ಹೇಳಿದ್ದರಿಂದ ವೈಕುಂಠಾದಿಲೋಕಗಳಲ್ಲಿ ತಾರತಮ್ಯವೂ ಸೂಚಿತ ವೆಂದು ತಿಳಿಯಬೇಕು. ಇಲ್ಲಿ ಪ್ರಾಪ್ಯವೆಂದು ಹೇಳಿದ ಮಹಾರಾದಿ ಐದು ಲೋಕಗಳು ಒಬ್ಬನೇ ಅಧಿಕಾರಿಗೆ

ವಿರುದ್ಧವು. ಕಾರಣ ಅಧಿಕಾರಿಭೇದದಿಂದ ಇದನ್ನು ಹೇಳಿದ್ದು ಎಂಬ ಅಭಿಪ್ರಾಯದಿಂದ ಪ್ರಮಾಣವನ್ನು ಆಚಾರ್ಯರು 'ಈಯುಸ್ತ್ರೀನ್...' ಮುಂತಾಗಿ ಹೇಳಿರುವರು.

ಮೂಲದಲ್ಲಿ 'ನ ಕರ್ಮಭಿಃ ತಾಂ ಗತಿಮಾಪ್ನುವಂತಿ' ಎಂದು ಮೂರುಲೋಕಗಳಿಗೆ ಕರ್ಮಸಾಧ್ಯತ್ವವು ಸೂಚಿತವಾಗಿತ್ತೋ ಅದನ್ನು 'ಈಯುಸ್ತ್ರೀನ್' ಎಂದು ತಿಳಿಸಿದಂತಾಯಿತು. 'ಜ್ಞಾನೇನೈವ ತದುತ್ತರಾನ್' ಎಂಬುದರಿಂದ 'ವಿದ್ಯಾತಪೋ-ಯೋಗಸಮಾಧಿಭಾಜಾಂ' ಎಂಬುದನ್ನು ವಿವರಿಸಿದಂತಾಯಿತು. ಇಲ್ಲಿ ಮುಖ್ಯರು ಎಂದರೆ ಅಪ್ರತೀಕಾಲಂಬನರು. ತದನ್ಯೇ ಎಂದರೆ ಪ್ರತೀಕಾಲಂಬನರು. ಇದರಿಂದ 'ಪವನಾಂತರಾತ್ಮಾ' ಎಂಬುದರ ತಾತ್ಪರ್ಯ ಹೇಳಿದಂತಾಯಿತು. ಅಪಕ್ವರು ಎಂದರೆ ಭಕ್ತ್ಯಾದಿಗಳ ಪರಿಪಾಕ ಇಲ್ಲದವರು ಬ್ರಹ್ಮನಾಡಿಯಿಂದ ಉತ್ಕ್ರಮಣ ಮಾಡದವರು ಎಂದರ್ಥ.

'ಸ್ಥಾನಮಾತ್ರಾಶ್ರಿತಾಃ' ಎಂದರೆ ಹರಿವಾಯುಗಳು ಇರುವ ಮಹರಾದಿಗಳಲ್ಲಿರುವವರು ಎಂದರ್ಥ. ಅಂದರೆ ಅವರು ವ್ಯಕ್ತರಾಗಿರುವ ಸ್ಥಾನದಲ್ಲಿ ಎಂದರ್ಥ. 'ಬಹಿಃ ತ್ರಿಲೊಕ್ಯಾಃ' ಎಂಬುದರ ಅರ್ಥ ಹೇಳಿದಂತಾಯಿತು.

ತಾತ್ಪರ್ಯದ ಭಾವಾರ್ಥ ಮೂಲದ ಪದಾರ್ಥ ಹೇಳಿ ಆಗಿದೆ.

**ವಿಜಯಧ್ವಜೀಯ-** ಇಲ್ಲಿ ಯದಿ, ಯತ್, ಅಥ, ಉತ, ಎಂಬ ಶಬ್ದಗಳನ್ನು ಮತ್ತೆ ಮತ್ತೆ ಆವೃತ್ತಿ ಮಾಡಿ ಅರ್ಥ ಹೇಳಬೇಕು.

**ಯದಿ** ಒಂದು ವೇಳೆ, ಚೆನ್ನಾಗಿ ಪಕ್ವವಾದ ಭಕ್ತ್ಯಾದಿಸಾಧನ ಉಳ್ಳವನಾದರೆ ಆಗ, **ಅಥ** ಉತ್ಕ್ರಮಣವಾದ ನಂತರವೇ, **ಪಾರಮೇಷ್ಠ್ಯಂ** ಬ್ರಹ್ಮಲೋಕವನ್ನು ಕುರಿತು ಹೋಗುವನು, **ಅಥ** ಆ ಲೋಕಕ್ಕೆ ಹೊದ ಮೇಲೇ ಮತ್ತೆ ಹುಟ್ಟಲಾರದೇ ಬ್ರಹ್ಮನ ಸಾಲೊಕ್ಯವನ್ನು ಮಾತ್ರ ಹೊಂದಿ ಇರುವನು, **ಅಥ** ಭಕ್ತ್ಯಾದಿಗಳ ಪರಿಪಾಕದಿಂದ ಉದ್ಯೋಗ ಮಾಡುತ್ತಾ ಇರುತ್ತಾನೆ. ಅನಂತರ ಬ್ರಹ್ಮಪ್ರಲಯದಲ್ಲಿ ಬ್ರಹ್ಮದೇವರ ಜೊತೆಗೆ ತನಗೆ ಯೋಗ್ಯವಾದ ಮುಕ್ತಿಯನ್ನು ಹೊಂದುವನು. **ಯತ್ ಯದಿ ತತ ಉತ** ಹಿಂದೆ ಹೇಳಿದ ಯೋಗಿಯೂ ಸಹ ಅಪರಿಪಕ್ವ ಭಕ್ತಿಯುಳ್ಳವನಾದರೆ, **ವೈಹಾಯಸಾನಾಂ ವೈಮಾನಿಕಾನಾಂ ಸಿದ್ಧಾನಾಂ ವಿಹಾರಂ** ಸಿದ್ಧರ ಕ್ರಿಡಾ ಸ್ಥಾನವಾದ ಮಹರ್ಲೋಕಾದಿಗಳಿಗೆ, **ಪ್ರಯಾಸ್ಯತಿ** ಹೋಗುವನು. **ಅಥ** ಮಹರ್ಲೋಕಾದಿಗಳಲ್ಲಿ ಅಣಿಮಾದಿ ಐಶ್ವರ್ಯವನ್ನು ಪಡೆದು ವಾಸಿಸುತ್ತಾನೆ. ಪರಿಪಕ್ವ ಭಕ್ತಿಯುಳ್ಳ ಅಪ್ರತೀಕಾಲಂಬನರು ಮುಖ್ಯಪ್ರಾಣನಿಗೆ

ಅಂತರ್ಯಾಮಿಯಾದ ಭಗವಂತನು ಎಲ್ಲಿ ಇರುತ್ತಾನೋ ಅಂತಹ ಅಮುಕ್ತಸ್ಥಾನವನ್ನು ಹೊಂದಿ ಅಲ್ಲಿ ವಾಸಿಸುತ್ತಾರೆ. ಪ್ರತೀಕಾಲಂಬನರು **ಪವನಾಂತರಾತ್ಮಾ** ವಾಯುದೇವರ ಸ್ಥಾನವಾದ ಸತ್ಯಲೋಕದಲ್ಲಿ ವಾಯು ಮತ್ತು ಬ್ರಹ್ಮನನ್ನು ಹೊಂದುತ್ತಾರೆ. ಯೋಗೇಶ್ವರರು ಭೂಮಿ-ಅಂತರಿಕ್ಷ-ಸ್ವರ್ಗ ಎಂಬ ಮೂರು ಲೋಕಗಳ ಮೇಲೆಯೇ ಇರುತ್ತಾರೆ. ಅದಕ್ಕಿಂತಲೂ ಕೆಳಗೆ ಅಲ್ಲ. ಈ ಮಹರಾದಿಲೋಕಗಳು ವಿದ್ಯಾತಪೊಯೋಗ-ಸಮಾಧಿಗಳೆಂಬ ಸಾಧನಗಳಿಂದ ಪ್ರಾಪ್ಯವಾಗುತ್ತವೆಯೇ ಹೊರತು ಕೇವಲ ಕರ್ಮಗಳಿಂದ ಸರ್ವಥಾ ಪ್ರಾಪ್ಯವಾಗುವುದಿಲ್ಲ. ಅದರಲ್ಲಿ ವಿಶೇಷ, **ಗುಣಸನ್ನಿವಾಯೀ** ಸತ್ತ್ವಾದಿಗುಣಗಳು ಇರುವ ಮಹರಾದಿ ಲೋಕಗಳಿಗೆ, ವೈಕುಂಠದಲ್ಲಿಯ ಅಮುಕ್ತಸ್ಥಾನಕ್ಕೆ ಹೋಗುವಾಗ ಬಾಹ್ಯೇಂದ್ರಿಯ-ಮನಸ್ಸುಗಳಿಂದ ಸಹಿತನಾಗಿಯೇ ಹೋಗುತ್ತಾನೆ. ಪ್ರಾರಬ್ಧಕರ್ಮ ಇರುವ ತನಕ ದಗ್ಧಪಟದಂತೆ ಅವುಗಳು ಇರುತ್ತವೆ. ನಂತರ **ಗುಣಸನ್ನಿವಾಯೀ** ಜ್ಞಾನಾದಿಗುಣಗಳಿರುವ ಮುಕ್ತಸ್ಥಾನದಲ್ಲಿ ಚಿನ್ಮಾತ್ರೇಂದ್ರಿಯ ಮನಸ್ಸುಳ್ಳವರಾಗಿ ಇರುತ್ತಾರೆ. ಎಂದು ತಾತ್ಪರ್ಯಾನುಸಾರ ವ್ಯಾಖ್ಯಾನಿಸಿರುವರು. ।।೨೩-೨೪।।

*ಉತ್ಕ್ರಾಂತರಾದವರು ಹಿಂದೆ ವಿವೃತವಾದ ಗಮ್ಯವನ್ನು ಕುರಿತು ಹೋಗಲು ತಿಳಿಯಬೇಕಾದ ಮಾರ್ಗದ ಉಪದೇಶವನ್ನು ಇಲ್ಲಿ ಸಂಕ್ಷೇಪವಾಗಿ ಹೇಳುವರು-*

**ವೈಶ್ವಾನರಂ ಯಾತಿ ವಿಹಾಯಸಾ ಗತಃ**
**ಸುಷುಮ್ನಯಾ ಬ್ರಹ್ಮಪಥೇನ ಶೋಚಿಷಾ ।**
**ವಿಧೂತಕಲ್ಕೋಽಥ ಹರೇರುದಸ್ತಾತ್**
**ಪ್ರಯಾತಿ ಚಕ್ರಂ ನೃಪ ಶೈಂಶುಮಾರಕಮ್** **।। ೨೫ ।।**

**ಹೇ ನೃಪ** ಪರೀಕ್ಷಿತನೇ, **ಶೋಚಿಷಾ** ಹೃದಯಾಗ್ರಪ್ರಜ್ವಲನದಿಂದ (ಪ್ರಕಾಶಿತವಾದ ನಾಡಿಯ ದ್ವಾರವುಳ್ಳವನು) **ಸುಷುಮ್ನಯಾ** ಬ್ರಹ್ಮನಾಡಿಯಿಂದ, **ಗತಃ** ಹೊರಬಂದು, **ವಿಹಾಯಸಾ** ಆಕಾಶದಲ್ಲಿರುವ, **ಬ್ರಹ್ಮಪಥೇನ** ಅರ್ಚಿರಾದಿಮಾರ್ಗದಿಂದ, **ವೈಶ್ವಾನರಂ ಯಾತಿ** ವೈಶ್ವಾನರಲೋಕಕ್ಕೆ ಹೋಗುವನು. **ಅಥ** ವೈಶ್ವಾನರಪ್ರಾಪ್ತಿಯ ನಂತರ, **ವಿಧೂತಕಲ್ಕಃ** ಪ್ರಾರಬ್ಧ ಪಾಪವನ್ನು ಕಳೆದುಕೊಂಡು, **ವೈಶ್ವಾನರಾದುದಸ್ತಾತ್** ವೈಶ್ವಾನರನಿಗಿಂತ ಮೇಲಿರುವ, **ಹರೇಃ ಶೈಂಶುಮಾರಂ ಚಕ್ರಂ** ಚಕ್ರದಂತೆ ತಿರುಗುವ ಸ್ವಭಾವ ಉಳ್ಳ ಶ್ರೀಹರಿಯ, **ಶೈಂಶುಮಾರಂ** ಎಂದರೆ ಧ್ರುವಲೋಕವನ್ನು, **ಪ್ರಯಾತಿ** ಹೊಂದುವನು.

ಇಲ್ಲಿ 'ಹರೇರುದಸ್ತಾತ್ ಶೈಂಶುಮಾರಂ' ಎಂದು ಇದ್ದಂತೆ ಅನ್ವಯಮಾಡಿದರೆ ಶಿಂಶುಮಾರ ಹರಿಯಲ್ಲವೆಂದಾಗುವುದು ಕಾರಣ ಅನ್ವಯ ತೋರಿಸುವರು-

**ತಾತ್ಪರ್ಯ- ಹರೇಃ ಶೈಂಶುಮಾರಂ ಚಕ್ರಂ ।**

ಹಾಗಾದರೆ ಉದಸ್ತಾತ್ ಎಂಬುದಕ್ಕೆ ಅವಧಿ ಯಾವುದು ಎಂದರೆ ಹೇಳುವರು 'ವೈಶ್ವಾನರೋದಸ್ತಾತ್' ಪ್ರಕೃತ ವೈಶ್ವಾನರನ ಅವಧಿ ಅವನಿಗಿಂತ ಮೇಲೆ ಎಂದರ್ಥ.

ವಿಧೂತಕಲ್ಕಃ ಎಂಬುದರಿಂದ ಹೇಳಿದ ಪ್ರಾರಬ್ಧಪಾಪಕ್ಷಯದ ಸ್ಥಾನಗಳನ್ನು ತಿಳಿಸುತ್ತ ಶಿಂಶುಮಾರನು ಶ್ರೀಹರಿ ಎನ್ನಲು ಪ್ರಮಾಣ ಹೇಳುವರು-

**ವೈಶ್ವಾನರೇ ದ್ಯುನದ್ಯಾಂ ವಾ ಸೂರ್ಯೇ ವಾ ದೇಹ ಏವ ವಾ ।**
**ವಿಧೂಯ ಸರ್ವಪಾಪಾನಿ ಯಾಂತಿ ಕಿಂಸ್ತುಘ್ನಕೇಶವಮ್ ॥**

ಭಾಗೀರಥಿಯಲ್ಲಿ, ಅಗ್ನಿಲೋಕದಲ್ಲಿ, ಸೂರ್ಯನಲ್ಲಿಅಥವಾ ದೇಹದಲ್ಲಿ ಪ್ರಾರಬ್ಧ ಎಲ್ಲ ಪಾಪಗಳನ್ನೂ ಬಿಟ್ಟು ಶಿಂಶುಮಾರರೂಪಿ ಶ್ರೀಹರಿಯನ್ನು ಹೊಂದುತ್ತಾರೆ. ಎಂದು ಬ್ರಹ್ಮಾಂಡ ಪುರಾಣದಲ್ಲಿದೆ. ॥೨೫॥

*ವಿಶ್ವನರ ಸಂಬಂಧಿಯಾದುದರಿಂದ ವೈಶ್ವಾನರ ಎಂದರೇ ಜಾಠರಾಗ್ನಿಯು. ಈ ಜಾಠರಾಗ್ನಿಯು ಹೇಗೆ ಜ್ಞಾನಿಪ್ರಾಪ್ಯನಾಗುತ್ತಾನೆ ಎಂದರೆ ಹೇಳುವರು-*

**ಯೋಽಂತಃ ಪಚತಿ ಭೂತಾನಾಂ ಯಸ್ತಪತ್ಯಂಡಮಧ್ಯಗಃ ।**
**ಸೋಽಗ್ನಿರ್ವೈಶ್ವಾನರೋ ಮಾರ್ಗೋ ದೇವಾನಾಂ ಪಿತೃಣಾಂ ಮುನೇ ॥೨೬॥**

**ಯಃ** ಯಾವನು, ಭೂತಾನಾಂ **ಅಂತಃ** ಪ್ರಾಣಿಗಳೊಳಗಿದ್ದು **ಪಚತಿ** ಅವರುಂಡ ಅನ್ನವನ್ನು ಪಚನ ಮಾಡುವನೋ (ಇದರಿಂದ ವಿಶ್ವನರಸಂಬಂಧಿ ಎಂಬ ಯೋಗ ತಿಳಿಸಿದಂತಾಯಿತು) **ಯ ಏವ ಅಂಡಮಧ್ಯಗಃ** ಬ್ರಹ್ಮಾಂಡದೊಳಗಿರುವ ತನ್ನ ಲೋಕದಲ್ಲಿದ್ದು **ತಪತಿ** ತಾಪಕೊಡುವನೋ, **ಸೋಽಪಿ** ಅವನೂ ಸಹ, **ಅಗ್ನಿಃ** ಜಠರಾಗ್ನಿಯಿಂದ ಅಭಿನ್ನನಾದವನು ಆದಕಾರಣ, **ವೈಶ್ವಾನರಃ** ವೈಶ್ವಾನರ ಶಬ್ದವಾಚ್ಯನು ಆದಕಾರಣ ಜ್ಞಾನಿಪ್ರಾಪ್ಯನಿಗೂ ವೈಶ್ವಾನರ ಶಬ್ದವಾಚ್ಯತ್ವವು ಯುಕ್ತವು ಎಂದು ಭಾವ. ಮಾರ್ಗಗಳೆಂದು ಪ್ರಸಿದ್ಧವಾದ ಅರ್ಚಿರಾದಿಗಳು ಇರುವಾಗ ವೈಶ್ವಾನರನನ್ನು ಮಾತ್ರ ಮಾರ್ಗ ಎಂದು ಇಲ್ಲಿ ಹೇಳಲು ಕಾರಣವೇನೆಂದರೆ ಹೇಳುವರು, **ದೇವಾನಾಂ** ದೇವಯಾನದಿಂದ ಹೋಗುವವರಿಗೆ, **ಪಿತೃಣಾಂ** ಪಿತೃಯಾನದಿಂದ ಹೋಗುವವರಿಗೂ,

**ಮುನೇಃ** ಬ್ರಹ್ಮಯಾನದಿಂದ ಹೋಗುವವರಿಗೂ **ಮಾರ್ಗಃ** ವೈಶ್ವಾನರನು ಮಾರ್ಗನು. ಅಂದರೆ ಮೇಲಿನ ಲೋಕಗಳಿಗೆ ಹೋಗುವ ಎಲ್ಲರಿಗೂ ಪ್ರಾಪ್ಯ ಎಂಬ ಮಾಹಾತ್ಮ್ಯವನ್ನು ವೈಶ್ವಾನರನಿಗೆ ತಿಳಿಸಲು ಅವನೇ ಮಾರ್ಗ ಎಂದು ಹೇಳಿದ್ದು.

ದೇವತೆಗಳಿಗೆ ಮಾತ್ರ ವೈಶ್ವಾನರಮಾರ್ಗ ಎಂಬ ಪ್ರತೀತಿವಾರಣ ಮಾಡಲು ಪ್ರಮಾಣ ಹೇಳುವರು-

**ತಾತ್ಪರ್ಯ- ಪಿತೃಯಾನಂ ದೇವಯಾನಂ ಬ್ರಹ್ಮಯಾನಮಿತಿ ತ್ರಿಧಾ ।**
**ಗಚ್ಛನ್ ವೈಶ್ವಾನರಂ ಯಾತಿ ತಸ್ಮಾನ್ಮಾರ್ಗಃ ಸ ಈರಿತಃ ॥**

ದೇವಯಾನ, ಪಿತೃಯಾನ, ಬ್ರಹ್ಮಯಾನ, ಎಂಬ ಮೂರುಮಾರ್ಗಗಳಿಂದ ಹೋಗುವವನು ವೈಶ್ವಾನರನನ್ನು ಹೊಂದುವನು. ಹೀಗೆ ಎಲ್ಲ ಮೇಲಿನ ಲೋಕಕ್ಕೆ ಹೋಗುವವರಿಗೂ ಪ್ರಾಪ್ಯನಾದುದರಿಂದ ವೈಶ್ವಾನರನು ಮಾರ್ಗ ಎಂದು ಅರ್ಚಿರಾದಿಗಳನ್ನು ಬಿಟ್ಟು ಪುರಾಣಾದಿಗಳಲ್ಲಿ ಹೇಳಿದೆ. ।।೨೬।।

*ದೇವಯಾನ-ಪಿತೃಯಾನ-ಬ್ರಹ್ಮಯಾನಗಳೆಂಬ ಮೂರೂ ಮಾರ್ಗಗಳಿಂದ ಹೋಗುವವರೆಲ್ಲರೂ ಸುಷುಮ್ನಾನಾಡಿಯಿಂದಲೇ ಉತ್ಕ್ರಾಂತರಾಗುವರೇ? ಎಂದರೆ ಇಲ್ಲ ಬೇರೆ ಬೇರೆ ನಾಡಿಗಳಿಂದ ಎಂದು ಹೇಳುವರು-*

**ದೇವಯಾನಂ ಪಿಂಗಲಾಭಿರಹಾನ್ಯೇತಿ ಶತಾಯುಷಾ ।**
**ರಾತ್ರೀರಿಡಾಭಿಃ ಪಿತೃಣಾಂ ವಿಷುವತ್ತಾ ಸುಷುಮ್ನಯಾ ॥ ೨೭ ॥**

**ಪಿಂಗಲಾಭಿಃ** ಬಲಭಾಗದಲ್ಲಿರುವ ನಾಡಿಗಳಿಂದ, **ಶತಾಯುಷಾ** ಮರಣದಿಂದ ಅಂದರೆ ಉತ್ಕ್ರಾಂತಿಯಿಂದ, **ಅಹಾನಿ** ಅಹಃ ಎಂಬ ಹೆಸರಿನ, **ದೇವಯಾನಂ** ದೇವಯಾನವನ್ನು **ಏತಿ** ಹೊಂದುವನು. **ಇಡಾಭಿಃ** ಎಡಭಾಗದ ನಾಡಿಗಳಿಂದ, **ಶತಾಯುಷಾ** ಉತ್ಕ್ರಾಂತಿ ಎಂಬ ಮರಣದಿಂದ, **ರಾತ್ರೀಃ** ರಾತ್ರಿ ಎಂಬ ಹೆಸರಿನ, **ಪಿತೃಯಾನಂ** ಪಿತೃಯಾನವನ್ನು, **ಏತಿ** ಹೊಂದುವನು. **ಸುಷುಮ್ನಯಾ** ಮಧ್ಯದಲ್ಲಿರುವ ಬ್ರಹ್ಮನಾಡಿಯಿಂದ, **ಶತಾಯುಷಾ** ಉತ್ಕ್ರಮಣಮಾಡುವುದರಿಂದ, **ವಿಷುವತ್ತಾಂ** ವಿಶಿಷ್ಟಸುಖಕೊಡುವುದರಿಂದ ವಿಷುವತ್ ಎಂಬ ಹೆಸರಿನ ಬ್ರಹ್ಮಯಾನವನ್ನು ಹೊಂದುತ್ತಾನೆ. ದೇವಯಾನ ಬ್ರಹ್ಮಯಾನ ಇವೆರಡೂ ಪುನರಾವೃತ್ತಿ ಇಲ್ಲದ ಲೋಕಗಳ ಮಾರ್ಗದ ಅವಾಂತರಭೇದವೆಂದು ತಿಳಿಯಬೇಕು.

ಈ ಶ್ಲೋಕದಲ್ಲಿಯ ಪಿಂಗಲಾ, ಇಡಾ, ಸುಷುಮ್ನಾ ಶಬ್ದವಾಚ್ಯವಾದ ನಾಡೀವಿಶೇಷಗಳನ್ನು ಪ್ರಮಾಣದಿಂದಲೇ ತಿಳಿಸುವರು-

> ತಾತ್ಪರ್ಯ- ದಕ್ಷಿಣಾಃ ಪಿಂಗಲಾಃ ಸರ್ವಾ ಇಡಾ ವಾಮಾಃ ಪ್ರಕೀರ್ತಿತಾಃ ।
> ನಾಡ್ಯೋಽಥ ಮಧ್ಯಮಾಃ ಪ್ರೋಕ್ತಾಃ ಸುಷುಮ್ನಾ ವೇದಪಾರಗೈಃ ॥-ಇತಿ ಭಾಗವತತಂತ್ರೇ
> ದೇವಯಾನಸ್ಯ ಮಾರ್ಗಸ್ಥಾಃ ಅಹಃಶಬ್ದಾಭಿಸಂಜ್ಞಿತಾಃ ।
> ಪಿತೃಯಾನಸ್ಯ ಮಾರ್ಗಸ್ಥಾಃ ರಾತ್ರಿಶಬ್ದಾಹ್ವಯಾ ಮತಾಃ ॥ - ಇತಿ ಬೃಹತ್ತಂತ್ರೇ
> ಶತಾಯುರ್ಮರಣಂ ಚೈವ ಕಾಲಿಕಂ ಪರಮಾವೃತಿಃ ॥ -ಇತ್ಯಭಿದಾನೇ

ಪಿಂಗಲಾಭಿಃ ಶತಾಯುಷಾ ಅಹಃಸಂಜ್ಞಂ ದೇವಯಾನಮೇತಿ । ಇಡಾಭೀ ರಾತ್ರಿಸಂಜ್ಞಂ ಪಿತೃಯಾನಮ್ ।

> ವಿಷುವತ್ತಾ ಬ್ರಹ್ಮಯಾನಂ ವಿಶೇಷೇಣ ಸುಖಂ ಯತಃ ।
> ಪಿಂಗಲಾ ದೇವಯಾನಂ ಸ್ಯಾತ್ ಪಿಂಗಾಖ್ಯಂ ಸುಖದಂ ಯತಃ ॥
> ಇಡಾಽನ್ನದಾನಾತ್ ಪಿತೃಣಾಮೇವಂ ಮಾರ್ಗಾಃ ಪ್ರಕೀರ್ತಿತಾಃ ॥ -ಇತಿ ಬ್ರಹ್ಮತರ್ಕೇ

ಹೃದಯದಲ್ಲಿ ೧೦೧ ನಾಡಿಗಳಿವೆ. ಬಲಭಾಗದಲ್ಲಿ ೫೦ ಎಡಭಾಗದಲ್ಲಿ ೫೦ ಮಧ್ಯದಲ್ಲಿ ೧ ಹೀಗೆ. ಅವುಗಳಲ್ಲಿ ಬಲಭಾಗದಲ್ಲಿರುವ ೫೦ ನಾಡಿಗಳಿಗೆ ಪಿಂಗಲಾ ಎಂದು ಹೆಸರು. ಎಡಭಾಗದಲ್ಲಿಯ ೫೦ ನಾಡಿಗಳಿಗೆ ಇಡಾ ಎಂದು ಹೆಸರು. ಮಧ್ಯಭಾಗದಲ್ಲಿರುವ ೧ ನಾಡಿಗೆ ಸುಷುಮ್ನಾ ಎಂದು ಹೆಸರು. ಹೀಗೆ ಭಾಗವತತಂತ್ರದಲ್ಲಿ ಹೇಳಿದೆ.

(ಪಿಂಗಲಾದಿಂದ ದೇವಯಾನವನ್ನು ಇಡಾದಿಂದ ಪಿತೃಯಾನವನ್ನು ಹೊಂದುತ್ತಾರೆ ಎಂದು ಭಾಗವತದಲ್ಲಿ ಹೇಳಿದೆ. ಇದು ಹೇಗೆ ಯುಕ್ತವಾಗುವುದು. 'ಪಿಂಗಲಾಭಿಃ ಅಹಾನಿ ಇಡಾಭಿಃ ರಾತ್ರೀಃ' ಎಂದು ಬೇರೆ ಕಡೆಯಲ್ಲಿ ಹೇಳಿದೆಯಲ್ಲ ಎಂಬ ಶಂಕೆ ಬಂದಾಗ ಅಲ್ಲಿರುವ ಅಹೋರಾತ್ರ ಶಬ್ದಗಳಿಂದಲೂ ದೇವಯಾನ-ಪಿತೃಯಾನಗಳೇ ವಿವಕ್ಷಿತವಾಗಿವೆ. ಆದ್ದರಿಂದ ವಿರೋಧವಿಲ್ಲ ಎಂಬ ಅಭಿಪ್ರಾಯದಿಂದಲೇ ಮೂಲದಲ್ಲಿ ಅಹಾನಿ ಎಂದು ದೇವಯಾನಕ್ಕೆ, ರಾತ್ರೀಃ ಎಂದು ಪಿತೃಯಾನಕ್ಕೆ ವಿಶೇಷಣ ಕೊಟ್ಟಿದ್ದಾರೆ. ಆದರೆ ಅದು ಸರಿಯಲ್ಲ. ಅಗ್ನ್ಯಾದಿರೂಪವಾದ ದೇವಯಾನಕ್ಕೆ ಮತ್ತು ಧೂಮಾದಿರೂಪ ಪಿತೃಯಾನಕ್ಕೆ ಹಗಲು ರಾತ್ರಿಗಳೆಂಬ ಕಾಲದ ಪ್ರಭೇದ ಕೂಡಲಾರದು (ಕಾಲಭೇದ ಕೂಡಲಾರದು ಎಂಬ ಶಂಕೆಯನ್ನು ಪ್ರಮಾಣದಿಂದ ಸರಿಪಡಿಸುವರು)

'ದೇವಯಾನ ಮಾರ್ಗದಲ್ಲಿರುವ ದೇವತೆಗಳಿಗೆ ಅಹಃ ಎಂದು ಹೆಸರು. ಪಿತೃಯಾನ

ಮಾರ್ಗದಲ್ಲಿರುವ ದೇವತೆಗಳಿಗೆ ರಾತ್ರಿ ಎಂದು ಹೆಸರು ಎಂದು ಬೃಹತ್ತಂತ್ರದಲ್ಲಿ ಹೇಳಿದೆ. ಅಂದರೆ ಇಲ್ಲಿ ಹಗಲು-ರಾತ್ರಿಗಳಿಂದ ದೇವಯಾನ-ಪಿತೃಯಾನದಲ್ಲಿರುವ ದೇವತೆಗಳಿಗೆ ಅಭೇದ ಹೇಳುವುದಿಲ್ಲ. ಆ ದೇವತೆಗಳನ್ನು ಅಹೋರಾತ್ರಿ ಎಂದು ಕರೆಯುವದಷ್ಟೇ. ಈ ವಿಷಯದಲ್ಲಿ ಈ ಸ್ಮೃತಿಯು ಪ್ರಮಾಣವಾಗಿದೆ. ತಾತ್ಪರ್ಯದಲ್ಲಿ 'ದೇವಯಾನಸ್ಯ ಮಾರ್ಗಸ್ಥಾಃ' ಎಂದಿದೆ. ಷಷ್ಠೀವಿಭಕ್ತಿಗೆ ತಾದಾತ್ಮ್ಯಸಂಬಂಧ ಎಂದಿಟ್ಟುಕೊಂಡು ದೇವಯಾನಾತ್ಮಕ ಮಾರ್ಗಸ್ಥರು ಎಂದರ್ಥ ಹೇಳಿ 'ದೇವಯಾನಾಖ್ಯಮಾರ್ಗಸ್ಥಾಃ' ಎಂದು ಪಾಠವಿರಬೇಕು ಎಂದು ತೋರುವುದು ಎನ್ನುತ್ತಾರೆ ಯಾದವಾರ್ಯರು. ಇದರಿಂದ ಜಡಗಳು ಪ್ರಾಪ್ಯವಲ್ಲ ಎಂದು ತಿಳಿಸಿದಂತಾಯಿತು. ಮಾರ್ಗವೆಂದು ಹೇಳಲ್ಪಡುವ ಅಗ್ನಿ-ಧೂಮಗಳ ಅಭಿಮಾನಿಗಳು ರೂಢಿಯಿಂದ ಅಹಃ ರಾತ್ರಿಃ ಎಂದು ಕರೆಸಿಕೊಳ್ಳುವರು ಎಂದು ಭಾವ.

(ಶತಾಯುಷಾ ಎಂಬಲ್ಲಿ ನೂರುವರ್ಷ ಆಯುಷ್ಯ ಎಂದರ್ಥ ಮಾಡಿದರೆ ಅದು ಮುಗಿದ ಮೇಲೆ ಉತ್ಕ್ರಾಂತಿ ಎಂದು ಹೇಳಿದಂತಾಗುವುದು. ಅದು ಸರಿಯಲ್ಲ. ಪ್ರಾರಬ್ಧಕರ್ಮ ಮುಗಿದರೆ ನೂರು ವರ್ಷಕ್ಕಿಂತ ಮೊದಲೇ ಉತ್ಕ್ರಾಂತಿ ಆಗಬಹುದು. ಆದ್ದರಿಂದ ಇಲ್ಲಿ ಅಭಿಪ್ರೇತವಾದ ಶತಾಯು ಶಬ್ದಾರ್ಥವನ್ನು ಪ್ರಮಾಣದಿಂದ ತಿಳಿಸುವರು.)

ಶತಾಯು ಮತ್ತು ಕಾಲಿಕ ಪರಮಾ ಆವೃತಿ ಶಬ್ದಗಳು ಮರಣ ಎಂಬ ಅರ್ಥವನ್ನವು ಹೇಳಿಕೊಡುತ್ತವೆ. ಹೀಗೆಂದು ಅಭಿಧಾನವಿದೆ. (ಮರಣಕ್ಕೆ ಶತಾಯು ಎಂದು ಕರೆಯಲು ಬಹುತೇಕವಾಗಿ ನೂರು ವರ್ಷಾನಂತರ ಆಗುವುದೇ ಕಾರಣವಾಗಿದೆ. ಆವೃತಿ ಎನ್ನಲು ತಾನು ಇರುವಾಗ ಜ್ಞಾನಪ್ರತಿಬಂಧಕತ್ವವೇ ಕಾರಣವಾಗಿದೆ) ಪದಗಳು ದೂರವಿರುವುದರಿಂದ ಅನ್ವಯ ತೋರಿಸುವರು.

ಪಿಂಗಲಾನಾಡೀ ದ್ವಾರಾ ಮರಣ ಹೊಂದಿದವರು ಅಹಃ ಎಂದು ಹೆಸರುಳ್ಳ ದೇವಯಾನ ಮಾರ್ಗವನ್ನು, ಇಡಾನಾಡಿಯಿಂದ ಮರಣವಾದಾಗ ರಾತ್ರಿಯೆಂದು ಹೆಸರುಳ್ಳ ಪಿತೃಯಾನಮಾರ್ಗವನ್ನು ಹೊಂದುತ್ತಾರೆ. ವಿಶೇಷವಾಗಿ ಸುಖವನ್ನು ಕೊಡುವುದರಿಂದ ಬ್ರಹ್ಮಯಾನಮಾರ್ಗವು ವಿಷುವತ್ತಾ ಎನಿಸುವುದು. ಪಿಂಗ ಎಂಬ ಸುಖವನ್ನು ಕೊಡುವುದರಿಂದ ಪಿಂಗಲಾ ಎಂಬುವುದು ದೇವಯಾನ ಮಾರ್ಗವೆನಿಸುತ್ತದೆ. ಅನ್ನವನ್ನು ಕೊಡುವುದರಿಂದ ಪಿತೃಯಾನಮಾರ್ಗವು ಇಡಾ ಎನಿಸುತ್ತದೆ. ಹೀಗೆ ಮಾರ್ಗಗಳು ಹೇಳಲ್ಪಟ್ಟವೆ. ಎಂದು ಬ್ರಹ್ಮತರ್ಕದಲ್ಲಿದೆ. ।।೨೭।।

*ಈ ರೀತಿ ಶಿಂಶುಮಾರಪರ್ಯಂತವಾಗಿ ಬಂದ ಜ್ಞಾನಿಗಳಿಗೆ ಗಮ್ಯವನ್ನು "ಬಹಿಃ ತ್ರಿಲೋಕ್ಯಾಃ ಪವನಾಂತರಾತ್ಮಾ" ಎಂಬಲ್ಲಿ ಹೇಳಿದ್ದನ್ನೇ ಜ್ಞಾಪಿಸುವರು-*

**ತದ್ವಿಶ್ವನಾಭಿಂ ತ್ವಭಿಪದ್ಯ ವಿಷ್ಣೋಃ**
**ಅಣೀಯಸಾ ವಿರಜೇನಾಽತ್ಮನೈಕಮ್ ।**
**ನಮಸ್ಕೃತಂ ಬ್ರಹ್ಮವಿದಾಮುಪೈತಿ**
**ಕಲ್ಪಾಯುಷೋ ಯದ್ವಿಬುಧಾ ರಮಂತೇ** **॥ ೨೮ ॥**

ಜ್ಞಾನಿಸಂಘವು, **ಬ್ರಹ್ಮವಿದಾಂ ನಮಸ್ಕೃತಂ** ಬ್ರಹ್ಮಜ್ಞಾನಿಗಳಿಂದ ನಮಸ್ಕರಿಸಲ್ಪಟ್ಟ **ವಿಶ್ವನಾಭಿಂ** ಜಗದಾಧಾರವಾದ, **ವಿಷ್ಣೋಃ** ಶ್ರೀಹರಿಯ, **ಏಕಂ** ಮುಖ್ಯವಾದ ಕೇವಲವಾದ, **ತತ್** ಶಿಂಶುಮಾರರೂಪವನ್ನು, **ತು** ಭಕ್ತಿಶ್ರದ್ಧಾತಿಶಯದಿಂದ, **ಅಭಿಪದ್ಯ** ಹೊಂದಿ, **ವಿರಜೇನ** ರಾಗಾದಿದೋಷಗಳಿಲ್ಲದ, **ಅಣೀಯಸಾ** ಸೂಕ್ಷ್ಮತರವಾದ, **ಆತ್ಮನಾ** ಲಿಂಗ ದೇಹದಿಂದ, **ಯತ್** ಯಾವ ಮಹರಾದಿಲೋಕಗಳಲ್ಲಿ, **ಕಲ್ಪಾಯುಷಃ** ಬ್ರಹ್ಮಕಲ್ಪದ ವರೆಗೆ ಆಯುಷ್ಯ ಉಳ್ಳ **ವಿಬುಧಾಃ** ದೇವತೆಗಳು, **ರಮಂತೇ** ಕ್ರೀಡಿಸುವರೋ, **(ತತ್)** ಆ ಲೋಕವನ್ನು **ಉಪೈತಿ** ಹೋಗುತ್ತದೆ.

ಇಲ್ಲಿ ವಿಶ್ವನಾಭಿ ಶಬ್ದಾರ್ಥಾದಿಗಳು ತಿಳಿಯದಿರುವುದರಿಂದ ವ್ಯಾಖ್ಯಾನಿಸುವರು-

**ತಾತ್ಪರ್ಯ- ಅಶೇಷಜಗದಾಧಾರಃ ಶಿಂಶುಮಾರೋ ಹರಿಃ ಪರಃ ।**
**ಸರ್ವೇ ಬ್ರಹ್ಮವಿದೋ ನತ್ವಾ ತಂ ಯಾಂತಿ ಪರಮಂ ಪದಮ್ ॥** -ಇತಿ ಬ್ರಹ್ಮಾಂಡೇ

**ತದ್ವಿಷ್ಣೋಃ ವಿಶ್ವಾಧಾರಂ ರೂಪಂ ಪ್ರತಿಪದ್ಯ ಯತ್ರ ಕಲ್ಪಾಯುಷಃ ತಂ ಮಹರ್ಲೋಕಂ ಉಪೈತಿ ।**

**ಮನ್ವಂತರಾಯುಷಃ ಸ್ವರ್ಗ್ಯಾಃ ಮಹರ್ಲೋಕೇ ತು ಕಾಲ್ಪಿಕಾಃ ।**
**ಆಬ್ರಹ್ಮಣೋ ಜನಾದ್ಯಾಸ್ತು ಮಹರ್ಲೋಕೇಽಪಿ ಯೇ ವರಾಃ ॥** -ಇತಿ ಬ್ರಾಹ್ಮೇ

ಶಿಂಶುಮಾರರೂಪಿಯಾದ ಶ್ರೀಹರಿಯು ಸರ್ವಜಗತ್ತಿಗೆ ಆಶ್ರಯನು. ಸರ್ವೋತ್ತಮನು. ಬ್ರಹ್ಮಜ್ಞಾನಿಗಳೆಲ್ಲರೂ ಆ ಶ್ರೀಹರಿಗೆ ನಮಸ್ಕರಿಸಿ ಮೋಕ್ಷವನ್ನು ಹೊಂದುತ್ತಾರೆ. ಎಂದು ಬ್ರಹ್ಮಾಂಡದಲ್ಲಿ ಹೇಳಿದೆ.

ಇಂತಹ ಶ್ರೀವಿಷ್ಣುವಿನ ಸರ್ವಜಗತ್ತಿಗೆ ಆಶ್ರಯವಾದ ಶಿಂಶುಮಾರರೂಪವನ್ನು ಜ್ಞಾನಿಗಳು ಹೊಂದಿ ಮನ್ವಂತರಪರ್ಯಂತ ಆಯುಷ್ಯವುಳ್ಳ ದೇವತೆಗಳು ಎಲ್ಲಿ ಕ್ರಿಡಿಸುತ್ತ ಇರುವರೋ ಅಂತಹ ಮಹರ್ಲೋಕವನ್ನು ಹೊಂದುತ್ತಾರೆ. ಸ್ವರ್ಗದಲ್ಲಿರುವ

ದೇವತೆಗಳು ಒಬ್ಬ ಮನು ಭೋಗಿಸುವ ಕಾಲಪರ್ಯಂತ ಆಯುಷ್ಯವುಳ್ಳವರು. ಮಹರ್ಲೋಕದಲ್ಲಿದ್ದವರು ಬ್ರಹ್ಮದೇವರ ಒಂದು ದಿನಕಲ್ಪಪರಿಮಿತ ಆಯುಷ್ಯವುಳ್ಳವರು. ಜನ ಮೊದಲಾದ ಲೋಕದಲ್ಲಿರುವವರು ಬ್ರಹ್ಮ ಪ್ರಲಯಪರ್ಯಂತ ಆಯುಷ್ಯವುಳ್ಳವರು. ಮಹರ್ಲೋಕದಲ್ಲಿರುವವರಲ್ಲಿಯೂ ಶ್ರೇಷ್ಠರಾದ ಭೃಗು ಮೊದಲಾದವರೂ ಕೂಡ ಬ್ರಹ್ಮ ಪ್ರಲಯ ಪರ್ಯಂತ ಆಯುಷ್ಯವುಳ್ಳವರು ಎಂದು ಬ್ರಾಹ್ಮಪುರಾಣದಲ್ಲಿದೆ.

ವಿಶೇಷ- ಅಪಕ್ವಸಾಧನರು, ಪಕ್ವಸಾಧನರು ಎಂದು ಜ್ಞಾನಿಗಳು ಎರಡುವಿಧರು, ಅಪಕ್ವ ಸಾಧನರು ಪಿಂಗಲಾನಾಡಿಯಿಂದ ಉತ್ಕ್ರಾಂತರಾಗುವರು. ಅವರಲ್ಲಿಯೂ ಅಪಕ್ವ-ಅಪಕ್ವತರ- ಅಪಕ್ವತಮಸಾಧನರೆಂದು ಮೂರು ವಿಧರು. ಅಪಕ್ವಸಾಧನರು ತಪೋಲೋಕಕ್ಕೂ ಅಪಕ್ವತರ ಸಾಧನರು ಜನೋಲೋಕಕ್ಕೂ ಅಪಕ್ವತಮಸಾಧನರು ಮಹರ್ಲೋಕಕ್ಕೂ ಹೋಗುವರು. ಇನ್ನು ಪಕ್ವಸಾಧನರು ಬ್ರಹ್ಮನಾಡಿಯಿಂದ ಉತ್ಕ್ರಾಂತರಾಗುವರು. ಅವರಲ್ಲಿ ಪ್ರತೀಕಾಲಂಬನರು ಸತ್ಯಲೋಕಕ್ಕೂ ಅಪ್ರತೀಕಾಲಂಬನರು ವೈಕುಂಠಲೋಕಕ್ಕೂ ಹೋಗುವರು. ।।೨೮।।

ಬ್ರಾಹ್ಮಪುರಾಣದಲ್ಲಿ 'ಕಲ್ಪಾಯುಷಃ' ಎಂಬುದಕ್ಕೆ ಬ್ರಹ್ಮದೇವರ ದಿನಕಲ್ಪ ಎಂದು ಅರ್ಥ ಹೇಳಿದ್ದಾರೆ. ಅಪಕ್ವಸಾಧನರ ದೃಷ್ಟಿಯಿಂದ ಆಬ್ರಹ್ಮಣಃ ಎಂಬುದಕ್ಕೆ ಬ್ರಹ್ಮಪ್ರಲಯಪರ್ಯಂತ ಎಂದರ್ಥ. ಇದು ಪಕ್ವಸಾಧನರ ವಿಷಯವೆಂದು ತಿಳಿಯಬೇಕು.

*ಈಗ ಸಾಂತಾನಿಕಲೋಕಗಳಲ್ಲಿ ವಿಹರಿಸುವ ಜ್ಞಾನಿಗಳಿಗೆ ಬ್ರಹ್ಮದೇವರ ಜೊತೆಗೆ ಮುಕ್ತಿಯನ್ನು ಹೇಳಲು ಸಾಂತಾನಿಕಲೋಕಗಳಿಂದ ಹೊರಗೆ ಹೋಗಲು ಕಾರಣವನ್ನು ಹೇಳುತ್ತ ಸತ್ಯಲೋಕಪ್ರಾಪ್ತಿಯನ್ನು ಹೇಳುವರು-*

**ಅಥೋ ಅನಂತಸ್ಯ ಮುಖಾನಲೇನ ದಂದಹ್ಯಮಾನಂ ಸ ನಿರೀಕ್ಷ್ಯ ವಿಶ್ವಮ್ ।**
**ನಿರ್ಯಾತಿ ಸಿದ್ಧೇಶ್ವರಜುಷ್ಟಧಿಷ್ಣ್ಯಂ ಯತ್ ದ್ವೈಪರಾರ್ಧ್ಯಂ ತದು ಪಾರಮೇಷ್ಠ್ಯಮ್।।**

**ಅಥೋ** ಸ್ಥಿತಿಕಾಲ ಮುಗಿದ ನಂತರ, **ಸಃ** ಜ್ಞಾನಿಸಂಘವು, **ಅನಂತಸ್ಯ** ಶೇಷಾಂತರ್ಗತ ಸಂಕರ್ಷಣನ, **ಮುಖಾನಲೇನ** ಮುಖದಿಂದ ಹೊರಟ ಅಗ್ನಿಯಿಂದ, **ದಂದಹ್ಯಮಾನಂ** ಪುನಃ ಪುನಃ ಅತಿಶಯವಾಗಿ ಸುಡುತ್ತಿರುವ, **ವಿಶ್ವಂ** ಪ್ರಪಂಚವನ್ನು, **ನಿರೀಕ್ಷ್ಯ** ನೋಡಿ ಮಹಾಪ್ರಲಯ ಬಂದಿತೆಂದು ತಿಳಿದು, ಯತ್ **ಸಿದ್ಧೇಶ್ವರಜುಷ್ಟಧಿಷ್ಣ್ಯಂ** ಸಿದ್ಧೇಶ್ವರರಿಂದ

ಸೇವ್ಯವಾದ ವಿಮಾನಗಳುಳ್ಳ **ಯತ್ ದ್ವೈಪರಾರ್ಧ್ಯಂ** ಯಾವುದು ಎರಡು ಪರಾರ್ಧಸಂಬಂಧಿ ಯಾದುದೋ, **ತತ್ ಆ, ಪಾರಮೇಷ್ಠ್ಯಂ** ಬ್ರಹ್ಮದೇವರಿಂದ ಅಧಿಷ್ಠಿತವಾದ ಸತ್ಯವೆಂಬ ಸ್ಥಾನವನ್ನು ಕುರಿತು, **ನಿರ್ಯಾತಿ** ಮಹರಾದಿಗಳನ್ನು ಬಿಟ್ಟು ಹೋಗುವರು, **ಉ** ಇದು ಉತ್ಕೃಷ್ಟವಾಗಿದೆ. ।।೨೯।।

*ಸತ್ಯಲೋಕವು ಇತರಲೋಕಗಳಿಗಿಂತ ವಿಲಕ್ಷಣವಾಗಿದೆ ಎಂದು ಈ ಶ್ಲೋಕದಿಂದ ತಿಳಿಸುತ್ತಿದ್ದಾರೆ-*

**ನ ಯತ್ರ ಶೋಕೋ ನ ಜರಾ ನ ಮೃತ್ಯುಃ**
**ನಾಧಿರ್ನ ಚೋದ್ವೇಗ ಋತೇ ಕುತಶ್ಚಿತ್ ।**
**ಯಚ್ಚಿತ್ತತೋದಃ ಕ್ರಿಯಾಯಾಽನಿದಂವಿದಾಂ**
**ದುರಂತದುಃಖಪ್ರಭವಾನುದರ್ಶನಾತ್** ॥ ೩೦ ॥

**ಯತ್ರ ಋತೇ** ಯಾವ ಸತ್ಯಲೋಕದಲ್ಲಿ, **ನ ಶೋಕಃ** ದುಃಖವಿಲ್ಲ, **ನ ಜರಾ** ಮುಪ್ಪು ಇಲ್ಲ, **ನ ಮೃತ್ಯುಃ** ಮರಣವಿಲ್ಲ, **ಆಧಿಃ** ಮನೋವ್ಯಥೆ ಇಲ್ಲ, **ನ ಚ ಉದ್ವೇಗಃ** ಭಯ-ಕಳವಳವಿಲ್ಲ, **ಕುತಶ್ಚಿತ್** ಯಾರಿಂದಲೂ, **ಯತ್ರ** ಎಲ್ಲಿ, **ಅನಿದಂವಿದಾಂ** ಬ್ರಹ್ಮಜ್ಞಾನಿಗಳಲ್ಲದವರಿಗೆ, **ಕ್ರಿಯಯಾ** ಕಾಮ್ಯನಿಷಿದ್ಧಕರ್ಮಗಳಿಂದ, **ದುರಂತದುಃಖ ಪ್ರಭವಾನುದರ್ಶನಾತ್** ದಾಟಲಾಗದ ಪುನಃ ಪುನಃ ದುಃಖದರ್ಶನ ಮತ್ತು ನಾನಾಯೋನಿಗಳಲ್ಲಿ ಜನನದರ್ಶನಗಳಿಂದ, **ಯಃ ಚಿತ್ತತೋದಃ** ಯಾವ ಮನಃಖೇದವೋ, **ಸೋಽಪಿ** ಅದೂ ಇಲ್ಲವೋ, ಅಂತಹ ಪಾರಮೆಷ್ಠ್ಯವೆಂದು ಅನ್ವಯ ಮಾಡಿಕೊಳ್ಳಬೇಕು.

ಈ ಶ್ಲೋಕದಲ್ಲಿ ಋತೇ ಎಂಬ ಶಬ್ದಕ್ಕೆ ವಿನಾ ಅಂದರೇ ಹೊರತುಪಡಿಸಿ ಎಂದರ್ಥ ಮಾಡಿದರೆ ಅನ್ವಯಾರ್ಥ ಹೊಂದುವುದಿಲ್ಲ, ಆದ್ದರಿಂದ ವಿವಕ್ಷಿತವಾದ ಅರ್ಥವನ್ನು ಹೇಳುವರು-

**ತಾತ್ಪರ್ಯ- ಋತೇ ಸತ್ಯಲೋಕೇ ।**

ಸತ್ಯಲೋಕದಲ್ಲಿ ಎಂದರ್ಥ. (ಋತಶಬ್ದ ಸತ್ಯಶಬ್ದಪರ್ಯಾಯವೆಂದು ಭಾವ) ಅನಿದಂವಿದಾಂ ಎಂಬುದನ್ನು ಅನುವಾದ ಮಾಡಿ ಇದಂ ಶಬ್ದ ಪರಾಮರ್ಶವನ್ನು ತಿಳಿಸುತ್ತ ವಾಖ್ಯಾನಿಸುವರು-

**ತಾತ್ಪರ್ಯ- ಅನಿದಂವಿದಾಂ ಅಬ್ರಹ್ಮವಿದಾಂ ।**

ಅತಿಸಮೀಪವಿರುವುದರಿಂದ ಇದಂಶಬ್ದದಿಂದ ಬ್ರಹ್ಮನು ಪರಾಮರ್ಶಿಸಲ್ಪಡುವನು. ಅವನನ್ನು ತಿಳಿಯದವನು ಎಂದರ್ಥ.

'ದುರಂತದುಃಖಪ್ರಭವಾನುದರ್ಶನಾತ್' ಎಂಬಲ್ಲಿ ದುಃಖಸ್ಯ ಪ್ರಭವಃ ಎಂದು ಷಷ್ಠೀತತ್ಪುರುಷ ಮಾಡಿದರೆ ದುಃಖೋತ್ಪತ್ತಿದರ್ಶನಕ್ಕೆ ಮಃನಖೇದಕಾರಣತ್ವ ಬರುವದು ಹೊರತು ದುಃಖದರ್ಶನಕ್ಕಲ್ಲ. ಆದ್ದರಿಂದ ಇಲ್ಲಿ ದ್ವಂದ್ವವೇ ವಿವಕ್ಷಿತ ಎಂದು ಹೇಳುವರು. 'ದುರಂತದುಃಖಂ ಚ ಪ್ರಭವಶ್ಚ' ದುರಂತದುಃಖ ಮತ್ತು ನಾನಾ ಯೋನಿಗಳಲ್ಲಿ ತಾನು ಜನಿಸುವುದು ಇವುಗಳನ್ನು ಮೇಲಿಂದ ಮೇಲೇ ನೋಡುವುದರಿಂದ ಎಂದರ್ಥ. ।।೩೦।।

ಏನೂ ದುಃಖವಿಲ್ಲದಿರುವುದು ಮುಕ್ತರ ಅಸಾಧಾರಣಧರ್ಮ ಎಂಬುದು ಪ್ರಸಿದ್ಧ. ಅದನ್ನು ಸತ್ಯಲೋಕದಲ್ಲಿರುವ ಅಮುಕ್ತರಿಗೆ ಹೇಳಿದ್ದು ಹೇಗೆ ಎಂದರೆ ತಾತ್ಪರ್ಯ ಹೇಳುವರು-

> ತಾತ್ಪರ್ಯ- ಸರ್ವದುಃಖವಿಹೀನಾ ಯೇ ಮುಕ್ತಾಃ ಪ್ರಾಯಸ್ತು ತಾದೃಶಾಃ ।
> ಅಮುಕ್ತಾಸ್ತು ಜನಾದ್ಯೇಷು ವಿಶೇಷೇಣ ತು ಸತ್ಯಗಾಃ ।। ಇತಿ ವಾರಾಹೇ

ಮುಕ್ತರು ಸರ್ವಾತ್ಮನಾ ದುಃಖರಹಿತರೇ. ಜನಾದಿಲೋಕಗಳಲ್ಲಿ ಇರತಕ್ಕ ಅಮುಕ್ತರು ಬಹುಶಃ ಸರ್ವದುಃಖರಹಿತರೇ. ಸತ್ಯಲೋಕದಲ್ಲಿದ್ದ ಅಮುಕ್ತರಾದರೂ ಜನಾದಿ ಲೋಕದಲ್ಲಿರತಕ್ಕ ಅಮುಕ್ತರಿಗಿಂತಲೂ ವಿಶೇಷವಾಗಿ ಸರ್ವದುಃಖವಿಲ್ಲದವರೇ. ಹೀಗೆಂದು ವರಾಹ ಪುರಾಣದಲ್ಲಿದೆ.

ಅಂದರೆ 'ನ ಯತ್ರ' ಎಂಬ ಮೂಲದಲ್ಲಿ ಸತ್ಯಲೋಕದಲ್ಲಿರುವವರಿಗೆ ಶೋಕರಾಹಿತ್ಯ ಹೇಳಿದಿಯೋ ಅದು ಸಂಪೂರ್ಣವಾಗಿ ಅಲ್ಲ. ಜನಾದಿಲೋಕದಲ್ಲಿರುವವರಿಗಿಂತ ಹೆಚ್ಚು ದುಃಖರಾಹಿತ್ಯವೆಂದು ಭಾವ. ಹಿಂದೆ 'ಪವನಾಂತರಾತ್ಮಾ' ಎಂಬಲ್ಲಿ ಅಪ್ರತೀಕಾಲಂಬನರಿಗೆ ವಿಷ್ಣುಲೋಕ ಪ್ರಾಪ್ತಿ ಹೇಳಿದೆ. ಅದು ಎಲ್ಲ ಅಪ್ರತೀಕಾಲಂಬನರಿಗೆ ಉತ್ಕ್ರಾಂತಿ- ಯಾದೊಡನೆಯೇ ಆಗುವುದೇ ಎಂಬ ಜಿಜ್ಞಾಸೆ ಬಂದರೆ ಅದೆಲ್ಲವನ್ನು ತಿಳಿಸಲು ಪುರಾಣವಾಕ್ಯವನ್ನು ಹೇಳುವರು-

> ತಾತ್ಪರ್ಯ- ವಿಷ್ಣೋರ್ಲೋಕಂ ತದೈವೈಕೇ ಯಾಂತಿ ಕಾಲಾಂತರೇ ಪರೇ ।
> ಆಜ್ಞಯೈವ ಹರೇಃ ಕೇಚಿದಾಪೂರ್ತೇಃ ಕೇಚಿದಂಜಸಾ ।
> ವಿಹೃತ್ಯೈವಾಽನ್ಯಲೋಕೇಷು ಮುಚ್ಯಂತೇ ಬ್ರಹ್ಮಣಾ ಸಹ ।। -ಇತಿ ವಾಮನೇ

**ಏಕೇ** ಶ್ರೀಹರಿಗೆ ಅತಿಪ್ರಿಯರಾದ ಅಪ್ರತೀಕಾಲಂಬನರು, **ತದೈವ** ಉತ್ಕ್ರಾಂತಿಯಾದ ಕೂಡಲೇ, **ವಿಷ್ಣೋಃ ಲೋಕಂ ಯಾಂತಿ** ವಿಷ್ಣುಲೋಕವನ್ನು ಹೊಂದುವರು, **ಪರೇ** ಅತಿಪ್ರಿಯರಾಗದ ಪ್ರತೀಕಾಲಂಬನರು, **ಕಾಲಾಂತರೇ** ಉತ್ಕ್ರಾಂತಿಯಾಗಿ ಕೆಲವು ಕಾಲ ಕಳೆದ ಮೇಲೆ ಹೊಂದುವರು. ಅವರಲ್ಲಿಯೂ ಚೆನ್ನಾಗಿ ಸಾಧನಪೂರ್ತಿಯಾದವರು ಸಾಧನಪೂರ್ತಿಯಾಗದವರು ಎಂದು ಎರಡು ವಿಧರಾಗಿದ್ದಾರೆ. ಸಾಧನಪೂರ್ತಿಯಾದವರೂ ಸಹ ಕಾಲಾಂತರದಲ್ಲಿ ವಿಷ್ಣುಲೋಕಕ್ಕೆ ಹೋಗಲು ಕಾರಣ ಹೇಳುವರು. 'ಆಜ್ಞೆಯೈವ ಹರೇಃ' ಎಂದು. 'ಇವರು ಇಷ್ಟು ದಿವಸದ ನಂತರ ನನ್ನ ಲೋಕಕ್ಕೆ ಬರಲಿ' ಎಂಬ ಶ್ರೀಹರಿಯ ಆಜ್ಞೆಯಿಂದಲೇ ತಡವಾಗುತ್ತದೆಯೇ ಹೊರತು ಸಾಧನಪೂರ್ತಿ ಆಗದೇ ಇದ್ದದ್ದರಿಂದ ಅಲ್ಲ. ಇನ್ನು ಕೆಲವರು ಚೆನ್ನಾಗಿ ಸಾಧನಪೂರ್ತಿಯಾಗದೇ ಇದ್ದದ್ದರಿಂದ ಬೇರೇ ಲೋಕಗಳಲ್ಲಿ ವಿಹಾರಮಾಡಿ ಕಾಲಾಂತರದಲ್ಲಿ ವಿಷ್ಣುಲೋಕವನ್ನು ಹೊಂದುವರು.

ತತ್ಕಾಲದಲ್ಲಿ ವಿಷ್ಣುಲೋಕಕ್ಕೆ ಹೋಗುವವರು, ಕಾಲಾಂತರದಲ್ಲಿ ಹೋಗುವವರು ಎಂಬ ಈ ವಿಭಾಗ ಅಪ್ರತೀಕಾಲಂಬನರಲ್ಲೇ ಏಕೆ ? ಅಪ್ರತೀಕಾಲಂಬನರು ತತ್ಕಾಲದಲ್ಲಿ ಮತ್ತು ಪ್ರತೀಕಾಲಂಬನರು ಕಾಲಾಂತರದಲ್ಲಿ ಎಂದು ಹೇಳಬಾರದೇಕೆ ? ಎಂದರೇ ಮಹರಾದಿ ಲೋಕಗಳಲ್ಲಿರುವ ಪ್ರತಿಕಾಲಂಬನರಿಗೆ ಪ್ರಲಯಕ್ಕಿಂತ ಮೊದಲು ವಿಷ್ಣುಲೋಕ ಪ್ರಾಪ್ತಿಯಾಗುತ್ತದೆ ಎಂಬುದು ಶಾಸ್ತ್ರವಿರುದ್ಧವಾಗಿದೆ. ಆದ್ದರಿಂದ ಈ ವಿಭಾಗ ಅಪ್ರತೀಕಾಲಂಬನರಲ್ಲಿ ಎಂದೇ ತಿಳಿಯಬೇಕು. ಭಾಗವತದಲ್ಲಿಯೇ 'ಕಾರ್ಯಬ್ರಹ್ಮ ಪ್ರಾಪ್ತಾನಾಂ ಪ್ರತೀಕಾಲಂಬನಾನಾಂ' ಎಂದಿದ್ದಾರೆ.

ಹಾಗಾದರೆ ಪರಬ್ರಹ್ಮನನ್ನು ಹೊಂದದಿದ್ದರೆ 'ಬ್ರಹ್ಮವಿದಾಪ್ನೋತಿ ಪರಂ' ಎಂಬ ಶ್ರುತಿವಿರೋಧ ಬರುವುದಲ್ಲ ಎಂಬ ಶಂಕೆಗೆ (ಸಾಮೀಪ್ಯಾತ್ತು ತದ್ವ್ಯಪದೇಶಃ) ಎಂಬ ಸೂತ್ರದಿಂದ ಉತ್ತರಿಸಿ ಯಾವಾಗ ಎಂದರೆ (ಕಾರ್ಯಾತ್ಯಯೇ ತದಧ್ಯಕ್ಷೇಣ ಸಹ ಪರಮಭಿದಾನಾತ್) ಎಂಬ ಸೂತ್ರದಲ್ಲಿ ಪ್ರಲಯಕಾಲದಲ್ಲಿ ಎಂದು ಉತ್ತರಿಸಿರುವರು. ಇದರಿಂದ ಪ್ರತೀಕಾಲಂಬನರಿಗೆ ಪ್ರಲಯಕ್ಕಿಂತ ಮೊದಲು ವಿಷ್ಣುಲೋಕಪ್ರಾಪ್ತಿ ಇಲ್ಲವೆಂದು ತಿಳಿಯುವುದು. ಸತ್ಯಲೋಕದಲ್ಲಿರುವವರಿಗೆ ಪ್ರಲಯಕ್ಕಿಂತ ಮೊದಲು ವಿಷ್ಣುಲೋಕಪ್ರಾಪ್ತಿ ಇಲ್ಲವೆಂದ ಮೇಲೆ ಮಹರಾದಿಲೋಕದಲ್ಲಿರುವವರಿಗೆ ವಿಷ್ಣುಲೋಕಪ್ರಾಪ್ತಿಯ ಆಸೆ ಎಲ್ಲಿಯದು ? ಆದ್ದರಿಂದ ನಾವು ಹೇಳಿದ ವಿಭಾಗವೇ ಯುಕ್ತವಾಗಿದೆ. ಹಾಗಾದರೆ ಅವರಿಗೂ ಮತ್ತು ಇತರರೆಲ್ಲರಿಗೂ ಮುಕ್ತಿ ಯಾವಾಗ

ಎಂದರೇ ಸರ್ವರಿಗೂ ಬ್ರಹ್ಮದೇವರೊಡನೆಯೇ ಲಿಂಗಭಂಗರೂಪವಾದ ಮುಕ್ತಿಯು ಎಂದು ವಾಮನಪುರಾಣದಲ್ಲಿದೆ. ।।೩೦।।

ಈಗ ಸತ್ಯಲೋಕದಲ್ಲಿಯೂ, ವಿಷ್ಣುಲೋಕದಲ್ಲಿಯೂ ಇರುವ ಜ್ಞಾನಿಗಳಿಗೆ ಮಹತ್ತತ್ತ್ವಾಭಿಮಾನಿಯಾದ ಬ್ರಹ್ಮದೇವರ ಜೊತೆಗೆ ಮುಕ್ತಿಯನ್ನು ಹೇಳಲು ಪೃಥಿವಿಯಿಂದಾರಂಭಿಸಿ ಗುಣತ್ರಯಗಳ ವರೆಗೆ ಇರುವ ತತ್ತ್ವಗಳಿಗೆ ಸೃಷ್ಟಿಕ್ರಮವಿಪರೀತ ಕ್ರಮದಿಂದ ಲಯವನ್ನೂ, ಅವುಗಳ ಅಭಿಮಾನಿಗಳಿಗೆ ಸ್ವೋತ್ತಮರಲ್ಲಿ ದೇಹಲಯವನ್ನೂ ಸೂಚಿಸುತ್ತ ಜ್ಞಾನಿಗಳ ಸಂಘಕ್ಕೆ ಕ್ರಮವಾಗಿ ಪೃಥಿವ್ಯಾದಿಪ್ರಾಪ್ತಿಯನ್ನು ಮೊದಲಿಗೆ ಹೇಳುವರು-

**ತತೋ ವಿಶೇಷಂ ಪ್ರತಿಪದ್ಯ ನಿರ್ಭಯ-**
**ಸ್ತೇನಾತ್ಮನಾऽಪೋऽನಲಮೂರ್ಧ್ನಿ ಚ ತ್ವರನ್ ।**
**ಜ್ಯೋತಿರ್ಮಯೋ ವಾಯುಮುಪೇತ್ಯ ಕಾಲೇ**
**ವಾಯ್ವಾತ್ಮನಾ ಖಂ ಬೃಹದಾತ್ಮಲಿಂಗಮ್** ।। ೩೧ ।।

ಮಹರ್ಲೋಕವನ್ನಾರಂಭಿಸಿ ವೈಕುಂಠಲೋಕದ ವರೆಗಿನ ಲೋಕಗಳಲ್ಲಿರುವ ಜ್ಞಾನಿಗಳ ಸಮೂಹವು ಬ್ರಹ್ಮಾದಿದೇವತೆಗಳೊಡನೆ, **ವಿಶೇಷಂ** ವಿಶೇಷವೆಂಬ ಹೆಸರಿನ ಪೃಥವಿಯ ಒಳಗಿರುವ ಅನ್ನಮಯನಾದ ಅನಿರುದ್ಧನನ್ನು, **ಪ್ರತಿಪದ್ಯ** ಹೊಂದಿ, **ನಿರ್ಭಯಃ** ಪ್ರಲಯಕಾಲನಿಮಿತ್ತವಾದ ಭಯರಹಿತನಾಗಿ, **ತೇನಾತ್ಮನಾ** ಪೃಥಿವ್ಯಂತರ್ಯಾಮಿಯಿಂದ ಸಹಿತನಾಗಿ, **ಅಪಃ** ಅಪ್ ನಾಮಕನಾದ ಅನ್ನಮಯನನ್ನೇ ಹೊಂದುವನು. **ತೇನಾತ್ಮನಾ** ಅಬಂತರ್ಗತನಾದ ಅನ್ನಮಯನ ಜೊತೆಗೆ, **ಅನಲಮೂರ್ಧ್ನಿ** ಅಗ್ನಿಗಳಲ್ಲಿ ಶ್ರೇಷ್ಠನಾದ ಅಗ್ನಿನಾಮಕನಾದ ಪ್ರಾಣಮಯನಾದ ಪ್ರದ್ಯುಮ್ನನನ್ನು, **ಪ್ರತಿಪದ್ಯ** ಹೊಂದಿ, **ತ್ವರನ್** ಮಾರ್ಗವಾದುದರಿಂದ ಗಡಿಬಿಡಿ ಮಾಡುವವನಾಗಿ, **ಜ್ಯೋತಿರ್ಮಯಃ** ಅಗ್ನ್ಯಂತರ್ಗತ ವಿಷ್ಣುವೇ ವಾಯುವನ್ನು ಹೊಂದಲು ಪ್ರಧಾನವಾಗಿ ಉಳ್ಳವನಾಗಿ, **ವಾಯುಂ** ವಾಯು ಶಬ್ದವಾಚ್ಯನಾದ ವಾಯ್ವಂತರ್ಗತ ಪ್ರಾಣಮಯನನ್ನು, **ಉಪೇತ್ಯ** ಹೊಂದಿ, **ಕಾಲೇ** ತತ್ತ್ವಗಳ ನಾಶಕ್ಕೆ ಯೋಗ್ಯವಾದ ಕಾಲದಲ್ಲಿ (ಇದನ್ನು ಹೇಳಿದ ಹೇಳುವ ಎಲ್ಲದಕ್ಕೂ ಅನ್ವಯಿಸಿಕೊಳ್ಳಬೇಕು) **ವಾಯ್ವಾತ್ಮನಾ** ವಾಯ್ವಂತರ್ಗತನಾದ ಪ್ರಾಣಮಯ-ಮನೋಮಯರಿಂದ ಕೂಡಿ, **ಆತ್ಮಲಿಂಗಂ** ಪರಮಾತ್ಮನಿಗೆ ವ್ಯಾಪ್ತತ್ವ-ನಿತ್ಯತ್ವಗಳಲ್ಲಿ ಊನ ದೃಷ್ಟಾಂತವಾದ, **ಬೃಹತ್** ಇತರಭೂತಗಳಿಗಿಂತ ಮಹತ್ತಾದ, **ಖಂ** ಖಶಬ್ದವಾಚ್ಯನಾದ ಪ್ರಾಣಮಯನನ್ನು, **ಉಪೈತಿ** ಹೊಂದುವನು,

**ವಿಜಯಧ್ವಜೀಯ**- ಪ್ರತಿಕಾಲಂಬನರು ಅಪ್ರತಿಕಾಲಂಬನರು ಎಂಬ ಜ್ಞಾನಿಗಳು ಬ್ರಹ್ಮಪ್ರಲಯದಲ್ಲಿ ತಮ್ಮ ಬಿಂಬರನ್ನು ಪ್ರವೇಶಮಾಡಿ ಗರುಡ-ಶೇಷ ಈ ಎರಡು ಮಾರ್ಗಗಳಿಂದ ವಾಣಿಯನ್ನು ಪ್ರವೇಶಮಾಡಿ ಅವಳಿಂದ ಭೌತಿಕಶರೀರ ಉಳ್ಳ ಬ್ರಹ್ಮನನ್ನು ಪ್ರವೇಶಮಾಡಿ, **ತತಃ** ನಂತರ, **ತೇನ** ಬ್ರಹ್ಮನ ಜೊತೆಗೆ ಪೃಥಿವಿಯನ್ನು ಹೊಂದಿ, ಮುಂತಾಗಿ ಮುಂದೆಲ್ಲ ಬರೆದಿದ್ದಾರೆ. ।।೩೧।।

ಈ ಶ್ಲೋಕದಲ್ಲಿ ಜ್ಞಾನಿಸಂಘವು ತಾನೇ ಹೋಗುತ್ತದೆ ಎಂದು ತೋರುವುದು. ಅದು ಮುಂದೆ ಹೇಳುವ ಪ್ರಮಾಣದಿಂದ ವಿರುದ್ಧವಾಗುತ್ತದೆ. ಆದ್ದರಿಂದ ಅಪೇಕ್ಷಿತಪೂರಣ ಮಾಡುವರು-

**ತಾತ್ಪರ್ಯ- ಬ್ರಹ್ಮಣಾ ಸಹ ವಿಶೇಷಂ ಪೃಥಿವೀಮ್ ।**

ಇಲ್ಲಿ ಬ್ರಹ್ಮಪದವು ಉಳಿದ ದೇವತೆಗಳಿಗೆ ಉಪಲಕ್ಷಕವು ಬ್ರಹ್ಮಾದಿದೇವತೆಗಳಿಂದ ಸಹಿತವಾಗಿಯೇ ಜ್ಞಾನಿಗಳ ಸಂಘ ಊರ್ಧ್ವಲೋಕಕ್ಕೆ ಹೋಗುತ್ತದೆ ಎಂದು ಭಾವ.

ಇಲ್ಲಿ ಸಂಪ್ರದಾಯವು ಹೀಗೆ ಇದೆ.

ಸಂಕರ್ಷಣಮುಖಾಗ್ನಿಯಿಂದ ಹದಿನಾಲ್ಕು ಲೋಕಗಳು ನಾಶವಾದಾಗ ಆ ಎಲ್ಲ ಲೋಕಪಾಲಕರಾದ ಬ್ರಹ್ಮಾದಿದೇವತೆಗಳ ದೇಹವನ್ನು ನರಸಿಂಹದೇವರು ನಾಶ ಮಾಡುವರು. ಈ ವಿಷಯವನ್ನು ತಿಳಿಸುವ ಪ್ರಮಾಣವಚನವಿದು-

**ಬ್ರಹ್ಮಚರ್ಮಶಿರಃಪಟ್ಟೀ ದಿಕ್ಪಾಲೋರ್ಧ್ವಾಂಗಭೂಷಣಃ ।**
**ದ್ವಾದಶಾರ್ಕಶಿರೋದಾಮಾ ರುದ್ರಶೀರ್ಷೈಕನೂಪುರಃ ।।**

ನರಸಿಂಹದೇವರು ಬ್ರಹ್ಮದೇವರ ದೇಹದ ಚರ್ಮವನ್ನು ತಲೆಗೆ ಕಟ್ಟಿಕೊಂಡು ಅಲಂಕಾರ ಮಾಡಿಕೊಂಡು, ಹನ್ನೆರಡು ಸೂರ್ಯರನ್ನು ತಲೆಗೆ ಹಗ್ಗ ಮಾಡಿಕೊಂಡು, ರುದ್ರದೇವರ ತಲೆಗಳಿಂದ ಕಾಲುಗೆಜ್ಜೆ ಮಾಡಿಕೊಂಡು ನರ್ತಿಸುವನು ಎಂದು ವಚನಾರ್ಥ.

ನಂತರ ಬ್ರಹ್ಮಾದಿ ಎಲ್ಲ ದೇವತೆಗಳು ಲಿಂಗಶರೀರಗಳಿಂದಲೇ ಬ್ರಹ್ಮಾಂಡದ ಹೊರಗಿರುವ ತಮ್ಮ ಅಂಶಿಗಳನ್ನು ಸೇರುವರು ಎಂದು ಸಂಪ್ರದಾಯ.

ಆದ್ದರಿಂದ ಉಪಲಕ್ಷಣ ಮಾಡಿ ವ್ಯಾಖ್ಯಾನಿಸಿದ್ದು ಯುಕ್ತವೇ ಆಗಿದೆ. ವಿಶೇಷಶಬ್ದಕ್ಕೆ ಅನೇಕ ಅರ್ಥಗಳಿರುವುದರಿಂದ ಈಗ ವಿವಕ್ಷಿತವಾದ ಅರ್ಥವನ್ನು ತಿಳಿಸುತ್ತಾರೆ.

**ವಿಶೇಷಂ ಪೃಥಿವೀಮ್** ಎಂದು. ಶಬ್ದ,ಸ್ಪರ್ಶ,ರೂಪ,ರಸ,ಗಂಧ ಈ ಐದು ಗುಣಗಳಿರುವುದರಿಂದ ಪೃಥಿವಿಗೆ ವಿಶೇಷವೆಂದು ಕರೆಯುವರು ಎಂದು ಮೂರನೆಯ ಸ್ಕಂಧದಲ್ಲಿ ಹೇಳಿದೆ. ಇಲ್ಲಿ ಪೃಥಿವೀಶಬ್ದದಿಂದ ೧೦೦ ಕೋಟಿ ಯೋಜನ ಪರಿಮಿತ ಬ್ರಹ್ಮಾಂಡಕಟಾಹವೇ ಹೇಳಲ್ಪಡುವುದು ಎಂದು ಕೆಲವರು ಹೇಳುತ್ತಾರೆ. ಮತ್ತೆ ಕೆಲವರು ೫೦ ಕೋಟಿ ಯೋಜನ ಪರಿಮಿತ ಬ್ರಹ್ಮಾಂಡಕಟಾಹ ಎಂದು ಹೇಳುತ್ತಾರೆ.

ಅದೂ ಸಹ ತನ್ನ ಒಳಗಿರುವ ಲೋಕಗಳ ಜೊತೆಗೆ ಸಂಕರ್ಷಣಮುಖಾಗ್ನಿಯಿಂದ ಸುಟ್ಟಿದೆ ಅದರ ದೃಢತೆಗಾಗಿ ಲೇಪಿಸಲ್ಪಟ್ಟಿರುವ ೫೦ ಕೋಟಿಯೋಜನ ಪರಿಮಿತ ಭಾಗ ಉಳಿದಿದಿಯೋ ಅದೇ ಪೃಥವೀಶಬ್ದವಾಚ್ಯವಾಗಿದೆ. (ಸೂಕ್ಷ್ಮತ್ವಾತ್ ಬ್ರಹ್ಮಣೋಽಂಡಂ ದ್ವಿಗುಣೇತಿ) ತೃತೀಯದಲ್ಲಿ ಹೇಳುವುದರಿಂದ ಎನ್ನುವರು.

'ತೇನಾತ್ಮನಾ' ಎಂಬಲ್ಲಿ ಪರಾಮರ್ಶವಿಷಯನಾದ ಆತ್ಮ ಯಾರೆಂದು ಹಿಂದೆ ಹೇಳಿಲ್ಲ ಆದ್ದರಿಂದ ಏನನ್ನು ಪರಾಮರ್ಶ ಮಾಡಬೇಕೆಂದು ತಿಳಿಯುವುದಿಲ್ಲ, ಕಾರಣ ಅನುವಾದ ಮಾಡಿ ವಾಖ್ಯಾನಿಸುವರು.

ತಾತ್ಪರ್ಯ- ತೇನಾತ್ಮನಾ ಪೃಥಿವ್ಯಾತ್ಮನಾ । ಜ್ಯೋತಿರ್ಮಯಃ ಅಗ್ನಿಪ್ರಧಾನಃ । 'ಆಕಾಶ ವತ್ಸರ್ವಗತಶ್ಚ ನಿತ್ಯಃ' ಇತಿ । ಪರಮಾತ್ಮಸದೃಶಂ ಕಿಂಚಿತ್ ।

ಜ್ಞಾನಿನಃ ಪ್ರಲಯೇ ಸರ್ವೇ ಬ್ರಹ್ಮಣಾ ಸಹ ಪಾರ್ಥಿವಮ್ ।
ಪರಮಾತ್ಮಾನಮಾವಿಶ್ಯ ವಾರಿಸ್ಥಂ ತತ್ಸಮನ್ವಿತಾಃ ॥

ಅಗ್ನಿಸ್ಥಂ ತದ್ಯುತಾಶ್ಚೈವ ತೇನ ನೀತಾಶ್ಚ ವಾಯುಗಮ್ ।
ನಭೋಗತಂ ತೇನ ನೀತಾ ಮನಃಸ್ಥಂ ತದ್ಯುತಾಸ್ತಥಾ ॥

ತತೋ ಬುದ್ಧಿಸ್ಥಮೀಶೇಶಂ ತತೋಽಹಂಕಾರಗಂ ಹರಿಮ್ ।
ತತೋ ವಿಜ್ಞಾನನಾಮಾನಂ ಮಹತ್ತತ್ತ್ವಗತಂ ಹರಿಮ್ ॥

ತತ ಆನಂದನಾಮಾನಮವ್ಯಕ್ತಸ್ಥಂ ಜನಾರ್ದನಮ್ ।
ಪ್ರಾಪ್ಯ ನಾವೃತ್ತಿಮಾಯಂತಿ ಶಾಂತಿಭೂತಾ ನಿರಾಮಯಾಃ ।

ಯೇಷಾಂ ಪದಾಂತರಾಪೇಕ್ಷಾ ವಾಯ್ವಾದೀನಾಂ ಮಹಾತ್ಮನಾಮ್ ।
ಆವೃತ್ಯ ತೇ ಪುನರ್ಯಾಂತಿ ಜ್ಞಾನಿನೋಽಪಿ ನಿರಾಮಯಾಃ ।
ಅನಾವೃತ್ತಿಮಸಂಮೂಢಾಃ ಪರಾನಂದೈಕಭಾಗಿನಃ ॥ -ಇತಿ ಬ್ರಹ್ಮತರ್ಕೇ

**ಭೂಮ್ಯಬ್ಗಮನ್ನನಾಮಾನಂ ಪ್ರಾಣಮಗ್ನ್ಯಾದಿಸಂಸ್ಥಿತಮ್ ।**
**ಮಾನಸಂ ಮನಆದಿಸ್ಥಂ ವಿಜ್ಞಾನಂ ಮಹತಿ ಸ್ಥಿತಮ್ ॥**

**ಆನಂದಮವ್ಯಕ್ತಗತಂ ಕ್ರಮಶೋ ಯಾಂತಿ ದೇವತಾಃ ।**
**ಬ್ರಹ್ಮಾದ್ಯಾಃ ಕೇಚಿದೇವಾಽತ್ರ ತದನ್ಯೇ ಕ್ರಮಶೋಽಪರಾನ್ ॥ -ಇತಿ ಬೃಹತ್ತಂತ್ರೇ**

ಇಲ್ಲಿ ಭೂತವಾಚಕವಾದ ಶಬ್ದಗಳಿಂದ ಆಯಾ ಭೂತಾಂತರ್ನಿಯಾಮಕನಾದ ಹರಿಯೇ ಮುಖ್ಯವಾಚ್ಯನೆಂದು ವಿವಕ್ಷಿತವಾಗಿದೆ. ಅಂದಮೇಲೇ ವಿಶೇಷಶಬ್ದದಿಂದ ಪೃಥಿವೀಶಬ್ದದಿಂದ ಅಂತರ್ಯಾಮಿಯೇ ಪ್ರಕೃತನಾಗಿದ್ದಾನೆ. ಕಾರಣ ಅವನನ್ನೇ ಪರಾಮರ್ಶಮಾಡುವುದು ಯುಕ್ತ ವೆಂದು ಭಾವ.

**ತೇನಾತ್ಮನಾ** ಪೃಥಿವಿಯಲ್ಲಿ ಅಂತರ್ಗತನಾದ ಅನಿರುದ್ಧನಿಂದ, **ಜೊತಿರ್ಮಯಃ** ಅಗ್ನಿ ಎಂಬ ಭೂತದಲ್ಲಿ ಅಂತರ್ಗತನಾದ ಶ್ರೀಹರಿಯು ಜ್ಞಾನಿಗಳ ಸಮುದಾಯವನ್ನು ವಾಯುವಿನ ಸಮೀಪಕ್ಕೆ ಕಳಿಸುವನು. (ಕಳಿಸಲು ಪ್ರಧಾನನು) ಶ್ರೀಹರಿಯು ಆಕಾಶದಂತೆ ಸರ್ವತ್ರ ವ್ಯಾಪ್ತನು. ನಿತ್ಯನು. ನಿತ್ಯನು ಎಂಬುದು ಬುದ್ಧಿಯಲ್ಲಿ ನಿಲ್ಲುವುದಕ್ಕಾಗಿ ಭೂತಾಕಾಶಕ್ಕೆ ಬ್ರಹ್ಮನಂತೆ ವ್ಯಾಪ್ತಿ ಇಲ್ಲದಿದ್ದರೂ ಇತರವಸ್ತುಗಳಿಗಿಂತ ಭೂತಾಕಾಶವು ವ್ಯಾಪ್ತವಾಗಿರುವುದರಿಂದ, ಬಹಳ ಕಾಲ ಇರುವುದರಿಂದಲೂ ಸ್ವಲ್ಪಸಾದೃಶ್ಯವನ್ನು ಇಟ್ಟುಕೊಂಡು ಆಕಾಶವನ್ನು ದೃಷ್ಟಾಂತವಾಗಿ ಹೇಳಿದೆ. ಭೂತಾಕಾಶವು ಊನದೃಷ್ಟಾಂತವಾಗಿದೆ.

ಮಹರ್ಲೋಕವನ್ನಾರಂಭಿಸಿ ವೈಕುಂಠಲೋಕಪರ್ಯಂತವಾದ ಲೋಕಗಳಲ್ಲಿ-ರುವವರೆಲ್ಲರೂ ಪ್ರಲಯಕಾಲದಲ್ಲಿ ಚತುರ್ಮುಖನಿಂದ ಕೂಡಿಕೊಂಡು ಪೃಥಿವಿಯಲ್ಲಿ ಅಂತರ್ಗತನಾದ ಶ್ರೀಹರಿಯನ್ನು ಪ್ರವೇಶಿಸಿ ಆ ಶ್ರೀಹರಿಯಿಂದ ಕೂಡಿದವರಾಗಿ, ನೀರಿನಲ್ಲಿ ಅಂತರ್ಗತನಾದ ಶ್ರೀಹರಿಯನ್ನು ಹೊಂದಿ ಅವನಿಂದ ಕೂಡಿಕೊಂಡು, ಅಗ್ನ್ಯಂತರ್ಗತ ಶ್ರೀಹರಿಯನ್ನು ಹೊಂದಿ ಅವನಿಂದ ವಾಯುವಿನಲ್ಲಿ ಅಂತರ್ಗತ ಪರಮಾತ್ಮನನ್ನು ಹೊಂದಿದರು. ವಾಯುವಿನಲ್ಲಿ ಅಂತರ್ಗತನಾದ ಪರಮಾತ್ಮನಿಂದ ಆಕಾಶಾಂತರ್ಗತನಾದ ಶ್ರೀಹರಿಯನ್ನು ಹೊಂದಿ ಅವನಿಂದ ಕೂಡಿ, ಮನಸ್ಸಿನಲ್ಲಿರತಕ್ಕ ಶ್ರೀಹರಿಯನ್ನು ಹೊಂದಿ ಅವನಿಂದ ಕೂಡಿಕೊಂಡು, ಬುದ್ಧಿ ತತ್ತ್ವದಲ್ಲಿರತಕ್ಕ ಶ್ರೀಹರಿಯನ್ನು, ಆಮೇಲೇ ಅಹಂಕಾರತತ್ತ್ವದಲ್ಲಿರತಕ್ಕ ಶ್ರೀಹರಿಯನ್ನು, ಆನಂತರ ಮಹತ್ತತ್ತ್ವದಲ್ಲಿರತಕ್ಕ ವಿಜ್ಞಾನನೆಂದು ಹೆಸರುಳ್ಳ ಶ್ರೀಹರಿಯನ್ನು, ಆಮೇಲೆ ಅವ್ಯಕ್ತದಲ್ಲಿರತಕ್ಕ ಆನಂದನಾಮಕ ಶ್ರೀಹರಿಯನ್ನು ಹೊಂದಿದವರು ಮತ್ತೆ ಹಿಂದಕ್ಕೆ

ತೆರಳುವುದಿಲ್ಲ. ಶ್ರೀಹರಿಯಲ್ಲಿಯೇ ಆಸಕ್ತವಾದ ಬುದ್ಧಿಯುಳ್ಳವರಾಗಿಯೂ, ದುಃಖರಹಿತರಾಗಿಯೂ ಇರುತ್ತಾರೆ. ಮಹಾನುಭಾವರಾದ ಯಾವ ವಾಯು-ಭಾರತಿ ರುದ್ರ-ಪಾರ್ವತಿಯರಿಗೆ ಬ್ರಹ್ಮ-ಸರಸ್ವತಿ ಶೇಷ-ವಾರುಣಿ ಪದಗಳ ಅಪೇಕ್ಷೆ ಇದೆಯೋ ಅವರು ನಿರ್ದುಃಖರೂ ಜ್ಞಾನಿಗಳೂ ಆದರೂ ಹಿಂತೆರಳಿ ಸಂಸಾರಕ್ಕೆ ಬರುತ್ತಾರೆ. ಮತ್ತೆ ಸಾಧನ ಪೂರ್ತಿಯಾದಮೇಲೆ ಮೋಹರಹಿತರಾಗಿ ಉತ್ಕೃಷ್ಟವಾದ ಆನಂದವನ್ನು ಮಾತ್ರ ಅನುಭವಿಸುತ್ತಾ ಮುಕ್ತಿಯಲ್ಲಿ ಹಿಂತೆರಳದೇ ಇರುತ್ತಾರೆ. ಎಂದು ಬ್ರಹ್ಮತರ್ಕದಲ್ಲಿದೆ.

ತೈತ್ತಿರಿಯೋಪನಿಷತ್ತಿನಲ್ಲಿ 'ಅಸ್ಮಾಲ್ಲೋಕಾತ್ಪ್ರೇತ್ಯ ಏತಮನ್ನಮಯಮಾತ್ಮಾನಮುಪ ಸಂಕ್ರಾಮತಿ' ಮುಂತಾಗಿ ಅನ್ನಮಯ ಮೊದಲಾದ ೫ ಭಗವದ್ರೂಪಗಳನ್ನು ಹೊಂದುತ್ತಾರೆ ಎಂದು ಹೇಳಿದೆ. ಇಲ್ಲಿ ಪೃಥಿವ್ಯಾದಿತತ್ತ್ವಗಳಲ್ಲಿರುವ ಭಗವದ್ರೂಪಗಳನ್ನು ಹೊಂದುತ್ತಾರೆಂದು ಹೇಳಿದ ಪ್ರಯುಕ್ತ ವಿರೋಧವು ಬರುತ್ತದೆ ಎಂದರೇ ದೇವತೆಗಳು ಕ್ರಮವಾಗಿ ಪೃಥಿವೀಜಲಗಳಲ್ಲಿರತಕ್ಕ ಪ್ರಾಣಮಯನಾಮಕನಾದ ಶ್ರೀಹರಿಯನ್ನು ಮನಸ್ಸು-ಅಹಂಕಾರ ತತ್ತ್ವಗಳಲ್ಲಿರತಕ್ಕ ಮನೋಮಯನನ್ನೂ ಕ್ರಮದಿಂದ ಹೊಂದುತ್ತಾರೆ. ಬ್ರಹ್ಮ-ಸರಸ್ವತಿ ವಾಯು-ಭಾರತಿಯರು ಅವ್ಯಕ್ತತತ್ತ್ವದಲ್ಲಿರತಕ್ಕ ಆನಂದಮಯನನ್ನೂ ಬೇರೆಯವರು ಕ್ರಮದಿಂದ ಪ್ರಾಣಮಯಾದಿಗಳನ್ನು ಹೊಂದುತ್ತಾರೆ ಎಂದು ಬ್ರಹ್ಮತಂತ್ರದಲ್ಲಿ ಹೇಳಿದ್ದಾರೆ. (ಅಂತು ಪೃಥಿವಿಜಲಾಭಿಮಾನಿಗಳು ಪ್ರಾಣಮಯನನ್ನೇ ಸಾಕ್ಷಾತ್ತಾಗಿ ಹೊಂದುತ್ತಾರೆ. ಅಗ್ನಿ ವಾಯ್ವಾದ್ಯಭಿಮಾನಿದೇವತೆಗಳು ಮನೋಮಯನನ್ನೇ ಹೊಂದುತ್ತಾರೆ. ಮನಆದ್ಯಭಿಮಾನಿಗಳು ವಿಜ್ಞಾನಮಯನನ್ನೇ ಹೊಂದುತ್ತಾರೆ. ಸಾಕ್ಷಾತ್ತಾಗಿ ಆನಂದಮಯನನ್ನು ಯಾರೊಬ್ಬರೂ ಹೊಂದುವುದಿಲ್ಲ) ॥೩೧॥

*ತಾಮಸಅಹಂಕಾರಕಾರ್ಯಗಳಾದ ಭೂತಸೂಕ್ಷ್ಮಗಳಿಗೆ ಮತ್ತು ತೈಜಸಅಹಂಕಾರ ಕಾರ್ಯಗಳಾದ ಇಂದ್ರಿಯಗಳಿಗೆ ಲಯವನ್ನು ತೋರಿಸುತ್ತ ಮುಕ್ತಿಪಡೆಯುವ ಜ್ಞಾನಿಸಂಘಕ್ಕೆ ಆ ಕಾಲದಲ್ಲಿ ದಿವ್ಯವಾದ ವಿಷಯಭೋಗವೂ ಇದೆ ಎಂದು ಮುಂದಿನ ಶ್ಲೋಕದಿಂದ ಹೇಳುತ್ತಾರೆ-*

**ಘ್ರಾಣೇನ ಗಂಧಂ ರಸನೇನ ವೈ ರಸಂ**
**ರೂಪಂ ತು ದೃಷ್ಟ್ಯಾ ಶ್ವಸನಂ ತ್ವಚೈವ ।**
**ಶ್ರೋತ್ರೇಣ ಚೋಪೇತ್ಯ ನಭೋಗುಣಂ ತತ್**
**ಪ್ರಾಯೇಣ ನಾವೃತ್ತಿಮುಪೈತಿ ಯೋಗೀ** ॥ ೩೨ ॥

**ಭೂಮ್ಯಬ್ಗಮನ್ನನಾಮಾನಂ ಪ್ರಾಣಮಗ್ನ್ಯಾದಿಸಂಸ್ಥಿತಮ್ ।**
**ಮಾನಸಂ ಮನಆದಿಸ್ಥಂ ವಿಜ್ಞಾನಂ ಮಹತಿ ಸ್ಥಿತಮ್ ॥**

**ಆನಂದಮವ್ಯಕ್ತಗತಂ ಕ್ರಮಶೋ ಯಾಂತಿ ದೇವತಾಃ ।**
**ಬ್ರಹ್ಮಾದ್ಯಾಃ ಕೇಚಿದೇವಾಽತ್ರ ತದನ್ಯೇ ಕ್ರಮಶೋಽಪರಾನ್ ॥ -ಇತಿ ಬೃಹತ್ತಂತ್ರೇ**

ಇಲ್ಲಿ ಭೂತವಾಚಕವಾದ ಶಬ್ದಗಳಿಂದ ಆಯಾ ಭೂತಾಂತರ್ನಿಯಾಮಕನಾದ ಹರಿಯೇ ಮುಖ್ಯವಾಚ್ಯನೆಂದು ವಿವಕ್ಷಿತವಾಗಿದೆ. ಅಂದಮೇಲೇ ವಿಶೇಷಶಬ್ದದಿಂದ ಪೃಥಿವೀಶಬ್ದದಿಂದ ಅಂತರ್ಯಾಮಿಯೇ ಪ್ರಕೃತನಾಗಿದ್ದಾನೆ. ಕಾರಣ ಅವನನ್ನೇ ಪರಾಮರ್ಶಮಾಡುವುದು ಯುಕ್ತ ವೆಂದು ಭಾವ.

**ತೇನಾತ್ಮನಾ** ಪೃಥಿವಿಯಲ್ಲಿ ಅಂತರ್ಗತನಾದ ಅನಿರುದ್ಧನಿಂದ, **ಜ್ಯೋತಿರ್ಮಯಃ** ಅಗ್ನಿ ಎಂಬ ಭೂತದಲ್ಲಿ ಅಂತರ್ಗತನಾದ ಶ್ರೀಹರಿಯು ಜ್ಞಾನಿಗಳ ಸಮುದಾಯವನ್ನು ವಾಯುವಿನ ಸಮೀಪಕ್ಕೆ ಕಳಿಸುವನು. (ಕಳಿಸಲು ಪ್ರಧಾನನು) ಶ್ರೀಹರಿಯು ಆಕಾಶದಂತೆ ಸರ್ವತ್ರ ವ್ಯಾಪ್ತನು. ನಿತ್ಯನು. ನಿತ್ಯನು ಎಂಬುದು ಬುದ್ಧಿಯಲ್ಲಿ ನಿಲ್ಲುವುದಕ್ಕಾಗಿ ಭೂತಾಕಾಶಕ್ಕೆ ಬ್ರಹ್ಮನಂತೆ ವ್ಯಾಪ್ತಿ ಇಲ್ಲದಿದ್ದರೂ ಇತರವಸ್ತುಗಳಿಗಿಂತ ಭೂತಾಕಾಶವು ವ್ಯಾಪ್ತವಾಗಿರುವುದರಿಂದ, ಬಹಳ ಕಾಲ ಇರುವುದರಿಂದಲೂ ಸ್ವಲ್ಪಸಾದೃಶ್ಯವನ್ನು ಇಟ್ಟುಕೊಂಡು ಆಕಾಶವನ್ನು ದೃಷ್ಟಾಂತವಾಗಿ ಹೇಳಿದೆ. ಭೂತಾಕಾಶವು ಊನದೃಷ್ಟಾಂತವಾಗಿದೆ.

ಮಹರ್ಲೋಕವನ್ನಾರಂಭಿಸಿ ವೈಕುಂಠಲೋಕಪರ್ಯಂತವಾದ ಲೋಕಗಳಲ್ಲಿರುವವರೆಲ್ಲರೂ ಪ್ರಲಯಕಾಲದಲ್ಲಿ ಚತುರ್ಮುಖನಿಂದ ಕೂಡಿಕೊಂಡು ಪೃಥಿವಿಯಲ್ಲಿ ಅಂತರ್ಗತನಾದ ಶ್ರೀಹರಿಯನ್ನು ಪ್ರವೇಶಿಸಿ ಆ ಶ್ರೀಹರಿಯಿಂದ ಕೂಡಿದವರಾಗಿ, ನೀರಿನಲ್ಲಿ ಅಂತರ್ಗತನಾದ ಶ್ರೀಹರಿಯನ್ನು ಹೊಂದಿ ಅವನಿಂದ ಕೂಡಿಕೊಂಡು, ಅಗ್ನ್ಯಂತರ್ಗತ ಶ್ರೀಹರಿಯನ್ನು ಹೊಂದಿ ಅವನಿಂದ ವಾಯುವಿನಲ್ಲಿ ಅಂತರ್ಗತ ಪರಮಾತ್ಮನನ್ನು ಹೊಂದಿದರು. ವಾಯುವಿನಲ್ಲಿ ಅಂತರ್ಗತನಾದ ಪರಮಾತ್ಮನಿಂದ ಆಕಾಶಾಂತರ್ಗತನಾದ ಶ್ರೀಹರಿಯನ್ನು ಹೊಂದಿ ಅವನಿಂದ ಕೂಡಿ, ಮನಸ್ಸಿನಲ್ಲಿರತಕ್ಕ ಶ್ರೀಹರಿಯನ್ನು ಹೊಂದಿ ಅವನಿಂದ ಕೂಡಿಕೊಂಡು, ಬುದ್ಧಿ ತತ್ತ್ವದಲ್ಲಿರತಕ್ಕ ಶ್ರೀಹರಿಯನ್ನು, ಆಮೇಲೇ ಅಹಂಕಾರತತ್ತ್ವದಲ್ಲಿರತಕ್ಕ ಶ್ರೀಹರಿಯನ್ನು, ಆನಂತರ ಮಹತ್ತತ್ತ್ವದಲ್ಲಿರತಕ್ಕ ವಿಜ್ಞಾನನೆಂದು ಹೆಸರುಳ್ಳ ಶ್ರೀಹರಿಯನ್ನು, ಆಮೇಲೆ ಅವ್ಯಕ್ತದಲ್ಲಿರತಕ್ಕ ಆನಂದನಾಮಕ ಶ್ರೀಹರಿಯನ್ನು ಹೊಂದಿದವರು ಮತ್ತೆ ಹಿಂದಕ್ಕೆ

ತೆರಳುವುದಿಲ್ಲ. ಶ್ರೀಹರಿಯಲ್ಲಿಯೇ ಆಸಕ್ತವಾದ ಬುದ್ಧಿಯುಳ್ಳವರಾಗಿಯೂ, ದುಃಖರಹಿತರಾಗಿಯೂ ಇರುತ್ತಾರೆ. ಮಹಾನುಭಾವರಾದ ಯಾವ ವಾಯು-ಭಾರತಿ ರುದ್ರ-ಪಾರ್ವತಿಯರಿಗೆ ಬ್ರಹ್ಮ-ಸರಸ್ವತಿ ಶೇಷ-ವಾರುಣಿ ಪದಗಳ ಅಪೇಕ್ಷೆ ಇದೆಯೋ ಅವರು ನಿರ್ದುಃಖರೂ ಜ್ಞಾನಿಗಳೂ ಆದರೂ ಹಿಂತೆರಳಿ ಸಂಸಾರಕ್ಕೆ ಬರುತ್ತಾರೆ. ಮತ್ತೆ ಸಾಧನ ಪೂರ್ತಿಯಾದಮೇಲೆ ಮೋಹರಹಿತರಾಗಿ ಉತ್ಕೃಷ್ಟವಾದ ಆನಂದವನ್ನು ಮಾತ್ರ ಅನುಭವಿಸುತ್ತಾ ಮುಕ್ತಿಯಲ್ಲಿ ಹಿಂತೆರಳದೇ ಇರುತ್ತಾರೆ. ಎಂದು ಬ್ರಹ್ಮತರ್ಕದಲ್ಲಿದೆ.

ತೈತ್ತಿರಿಯೋಪನಿಷತ್ತಿನಲ್ಲಿ 'ಅಸ್ಮಾಲ್ಲೋಕಾತ್ಪ್ರೇತ್ಯ ಏತಮನ್ನಮಯಮಾತ್ಮಾನಮುಪ ಸಂಕ್ರಾಮತಿ' ಮುಂತಾಗಿ ಅನ್ನಮಯ ಮೊದಲಾದ ೫ ಭಗವದ್ರೂಪಗಳನ್ನು ಹೊಂದುತ್ತಾರೆ ಎಂದು ಹೇಳಿದೆ. ಇಲ್ಲಿ ಪೃಥಿವ್ಯಾದಿತತ್ತ್ವಗಳಲ್ಲಿರುವ ಭಗವದ್ರೂಪಗಳನ್ನು ಹೊಂದುತ್ತಾರೆಂದು ಹೇಳಿದ ಪ್ರಯುಕ್ತ ವಿರೋಧವು ಬರುತ್ತದೆ ಎಂದರೇ ದೇವತೆಗಳು ಕ್ರಮವಾಗಿ ಪೃಥಿವೀಜಲಗಳಲ್ಲಿರತಕ್ಕ ಪ್ರಾಣಮಯನಾಮಕನಾದ ಶ್ರೀಹರಿಯನ್ನು ಮನಸ್ಸು-ಅಹಂಕಾರ ತತ್ತ್ವಗಳಲ್ಲಿರತಕ್ಕ ಮನೋಮಯನನ್ನೂ ಕ್ರಮದಿಂದ ಹೊಂದುತ್ತಾರೆ. ಬ್ರಹ್ಮ-ಸರಸ್ವತಿ ವಾಯು-ಭಾರತಿಯರು ಅವ್ಯಕ್ತತತ್ತ್ವದಲ್ಲಿರತಕ್ಕ ಆನಂದಮಯನನ್ನೂ ಬೇರೆಯವರು ಕ್ರಮದಿಂದ ಪ್ರಾಣಮಯಾದಿಗಳನ್ನು ಹೊಂದುತ್ತಾರೆ ಎಂದು ಬ್ರಹ್ಮತಂತ್ರದಲ್ಲಿ ಹೇಳಿದ್ದಾರೆ. (ಅಂತು ಪೃಥಿವಿಜಲಾಭಿಮಾನಿಗಳು ಪ್ರಾಣಮಯನನ್ನೇ ಸಾಕ್ಷಾತ್ತಾಗಿ ಹೊಂದುತ್ತಾರೆ. ಅಗ್ನಿ ವಾಯ್ವಾದ್ಯಭಿಮಾನಿದೇವತೆಗಳು ಮನೋಮಯನನ್ನೇ ಹೊಂದುತ್ತಾರೆ. ಮನಆದ್ಯಭಿಮಾನಿಗಳು ವಿಜ್ಞಾನಮಯನನ್ನೇ ಹೊಂದುತ್ತಾರೆ. ಸಾಕ್ಷಾತ್ತಾಗಿ ಆನಂದಮಯನನ್ನು ಯಾರೊಬ್ಬರೂ ಹೊಂದುವುದಿಲ್ಲ) ।।೩೦।।

*ತಾಮಸಅಹಂಕಾರಕಾರ್ಯಗಳಾದ ಭೂತಸೂಕ್ಷ್ಮಗಳಿಗೆ ಮತ್ತು ತೈಜಸಅಹಂಕಾರ ಕಾರ್ಯಗಳಾದ ಇಂದ್ರಿಯಗಳಿಗೆ ಲಯವನ್ನು ತೋರಿಸುತ್ತ ಮುಕ್ತಿಪಡೆಯುವ ಜ್ಞಾನಿಸಂಘಕ್ಕೆ ಆ ಕಾಲದಲ್ಲಿ ದಿವ್ಯವಾದ ವಿಷಯಭೋಗವೂ ಇದೆ ಎಂದು ಮುಂದಿನ ಶ್ಲೋಕದಿಂದ ಹೇಳುತ್ತಾರೆ-*

**ಘ್ರಾಣೇನ ಗಂಧಂ ರಸನೇನ ವೈ ರಸಂ**
**ರೂಪಂ ತು ದೃಷ್ಟ್ಯಾ ಸ್ಪರ್ಶಂ ತ್ವಚೈವ ।**
**ಶ್ರೋತ್ರೇಣ ಚೋಪೇತ್ಯ ನಭೋಗುಣಂ ತತ್**
**ಪ್ರಾಯೇಣ ನಾವೃತ್ತಿಮುಪೈತಿ ಯೋಗೀ ।। ೩೨ ।।**

ಈ ಶ್ಲೋಕವು ಮುಕ್ತರ ಭೋಗ ಮತ್ತು ಲಯ ಎರಡನ್ನೂ ಹೇಳುವುದು. ಲಯ ಹೇಳುವಾಗ, **ಯೋಗೀ** ಜ್ಞಾನಿಯು, ಪೃಥಿವಿಯ ನಂತರ ಗಂಧವನ್ನು, ನೀರಿನ ನಂತರ ರಸವನ್ನು, ಅಗ್ನಿಯ ನಂತರ ರೂಪವನ್ನು, ವಾಯುವಿನ ನಂತರ ಸ್ಪರ್ಶವನ್ನು, ಆಕಾಶಾನಂತರ ಶಬ್ದವನ್ನು ಕ್ರಮವಾಗಿ ಹೊಂದುವನು. ಹೀಗೆ ಯೋಜಿಸಬೇಕು.

ಈ ರೀತಿ ತಾಮಸಅಹಂಕಾರಕಾರ್ಯಗಳ ನಾಶವಾದ ಮೇಲೇ ತೈಜಸ ಅಹಂಕಾರಕಾರ್ಯ- ಗಳಾದ ಘ್ರಾಣದಿಂದ, ರಸನದಿಂದ, ಚಕ್ಷುರಿಂದ್ರಿಯದಿಂದ, ತ್ವಗಿಂದ್ರಿಯದಿಂದ, ಶ್ರೋತ್ರೇಂದ್ರಿಯದಿಂದ, ಮತ್ತು ಪಂಚ ಕರ್ಮೇಂದ್ರಿಯಗಳಿಂದ ಕೂಡಿಕೊಂಡು ಅಂದರೇ ಘ್ರಾಣೇಂದ್ರಿಯಾದಿಗಳಲ್ಲಿರುವ, ವಿರಿಂಚಿಯಲ್ಲಿರುವ ಶ್ರೀಹರಿಯಿಂದ ಗಂಧತನ್ಮಾತ್ರಾದಿಗಳಲ್ಲಿ ಇರುವ ಶ್ರೀಹರಿಯನ್ನು ಹೊಂದಿ ತೇನಾತ್ಮನಾ ಸಹ ಬುದ್ಧಿತತ್ತ್ವಸ್ಥನಾದ ಪ್ರಾಣನನ್ನು ಹೊಂದುವನು. ನಂತರ ಪ್ರಾಯಃ ತಿರುಗಿ ಬರುವುದಿಲ್ಲ. ಪ್ರಾಯಃ ಎಂಬ ಶಬ್ದಕ್ಕೆ ವಾಯ್ವಾದಿಗಳು ಮಾತ್ರ ತಿರುಗಿ ಬರುವರೆಂದರ್ಥ.

ಭೋಗವನ್ನು ಹೇಳುವ ಪಕ್ಷದಲ್ಲಿ

**ಘ್ರಾಣೇನ** ಮೂಗಿನಿಂದ, **ಗಂಧಂ** ಗಂಧವನ್ನು, **ರಸನೇನ** ನಾಲಿಗೆಯಿಂದ, **ರಸಂ** ರಸವನ್ನು, **ದೃಷ್ಟ್ಯಾ** ಕಣ್ಣಿನಿಂದ, **ರೂಪಂ** ರೂಪವನ್ನು, **ತ್ವಚಾ** ತ್ವಗಿಂದ್ರಿಯದಿಂದ, **ಸ್ಪರ್ಶಂ** ಸ್ಪರ್ಶವನ್ನು, **ಶ್ರೋತ್ರೇಣ** ಕಿವಿಯಿಂದ, **ನಭೋಗುಣಂ** ಆಕಾಶಗುಣವಾದ ಶಬ್ದವನ್ನೂ, **ಉಪೇತ್ಯ** ಅನುಭವಿಸಿ, **ಆವೃತ್ತಿಂ ನ ಉಪೈತಿ** ತಿರುಗಿ ಬರುವುದಿಲ್ಲ.

ಈ ಶ್ಲೋಕ ಮುಕ್ತರಿಗೆ ಭೋಗವನ್ನೂ ಹೇಳುವುದು ಎಂಬ ಅಭಿಪ್ರಾಯದಿಂದ ಈ ವಿಷಯದಲ್ಲಿ ಪ್ರಮಾಣ ಹೇಳುವರು-

**ತಾತ್ಪರ್ಯ- ಪಂಚೇಂದ್ರಿಯೈಃ ಯೇ ವಿಷಯಾ ಏಷ್ಟವ್ಯಾಃ ಸರ್ವತೋ ವರಾಃ ।**
**ಮಾನಸಾಂಸ್ತಾಖಿಲಾನ್ ಪ್ರಾಪ್ಯ ಮುಕ್ತಾ ಮೋದಂತಿ ದೇವತಾಃ ।**
**ತಥೋದ್ರಿಕ್ತ ನಿಜಾನಂದಾ ನಿತ್ಯಾನಂದಾ ಅಸಂವೃತಾಃ ॥ -ಇತಿ ಷಾಡ್ಗುಣ್ಯೇ**

ಐದು ಇಂದ್ರಿಯಗಳಿಂದ ಸರ್ವಶ್ರೇಷ್ಠಗಳಾದ ಯಾವ ವಿಷಯಗಳು ಇಚ್ಛಿಸಲ್ಪಡುವವೋ ಅಂತಹ ಎಲ್ಲ ಕರ್ಮೇಂದ್ರಿಯವಿಷಯಗಳು ಸಂಕಲ್ಪಮಾತ್ರದಿಂದ ಲಭಿಸುತ್ತವೆ. ಅವುಗಳನ್ನು ಹೊಂದಿ ಮೋಕ್ಷದಲ್ಲಿ ದೇವತೆಗಳು ನಿತ್ಯಾನಂದಾವಿರ್ಭಾವ ಉಳ್ಳವರಾಗಿ ಸಂತೋಷಗೊಳ್ಳುತ್ತಾರೆ. ಎಂದು ಷಾಡ್ಗುಣ್ಯದಲ್ಲಿದೆ. ॥೩೨॥

*ಜ್ಞಾನಿಯ ಗಂತವ್ಯಗಳನ್ನು ಹೇಳುವರು-*

**ಸ ಭೂತಸೂಕ್ಷ್ಮೇಂದ್ರಿಯಸನ್ನಿಕರ್ಷಾತ್**
**ಸನಾತನೋಽಸೌ ಭಗವಾನನಾದಿಃ ।**
**ಮನೋಮಯಂ ದೇವಮಯಂ ವಿಕಾರ್ಯಂ**
**ಸಂಸಾದ್ಯ ಮತ್ಯಾ ಸಹ ತೇನ ಯಾತಿ** **॥ ೩೩ ॥**

**ಸಃ** ಬುದ್ಧಿಸ್ಥಿತವಾದ ಜ್ಞಾನಿಸಂಘವು, **ಭೂತಸೂಕ್ಷ್ಮೇಂದ್ರಿಯಸನ್ನಿಕರ್ಷಾತ್** ಪಂಚಮಹಾಭೂತಗಳು, ಭೂತಸೂಕ್ಷ್ಮಗಳು, ತನ್ಮಾತ್ರಾಗಳಾದ ಗಂಧಾದಿಗಳು, ತತ್ತ್ವಾಭಿಮಾನಿ ಜೀವರು, ಇಂದ್ರಿಯಗಳು ಇವುಗಳ ಸನ್ನಿಕರ್ಷವನ್ನು ಹೊಂದಿ ಅಂದರೆ ಅವುಗಳಲ್ಲಿರುವ ಭಗವಂತನ ಸಾಮಿಪ್ಯವನ್ನು ಹೊಂದಿ, **ಯೋಽಸೌ ಸನಾತನಃ** ವೇದಾತ್ಮಕಶಬ್ದದಿಂದ ಸಹಿತನಾದ, ಪದಸಮನ್ವಯದಿಂದ ಸ್ತುತ್ಯನಾದ, **ಅನಾದಿಃ ಭಗವಾನ್** ಶ್ರೀಹರಿಯು **ವಿಕಾರ್ಯಂ** ವಿವಿಧಕಾರ್ಯಯುಕ್ತನಾದ, ವೈಕಾರಿಕ ಅಹಕಾರಕಾರ್ಯವಾದ, **ಮನೋಮಯಂ** ಮನಸ್ತತ್ವಸ್ಥಿತನಾದ ಇಂದ್ರನಲ್ಲಿರುವ ವಿರಿಂಚಗತನಾದ ಮಾನಸನಾಮಕನಾದ ಸಂಕರ್ಷಣನನ್ನು ಹೊಂದುವನು. ಇಲ್ಲಿ ಆಕಾಶಾದಿಬುದ್ಧ್ಯಂತವಾದ ತತ್ತ್ವಗಳಲ್ಲಿರುವ ಭಗವಂತನು ಭೂತಾದಿಗಳನ್ನು ಹೊಂದಿ ಮನೊಮಯನನ್ನು ಹೊಂದುವನು. ಎಂದು ಹೀಗೂ ಯೋಜನೆ ಮಾಡಬೇಕು. **ದೇವಮಯಂ** ದೇವತೆಗಳಿಗೆ ಪ್ರಾಧಾನ್ಯಪ್ರದನಾದ, ಸ್ವತಂತ್ರವಾಗಿ ಗಂತೃತ್ವವು ಅವನಿಗೇ ಇದೆ ಎಂದು ಸೂಚಿಸಲು ಪೂರ್ವಪ್ರಕೃತವಾದ ಜ್ಞಾನಿಸಂಘವನ್ನು ಬಿಟ್ಟು ಭಗವಂತನನ್ನು ಪರಾಮರ್ಶ ಮಾಡಿದ್ದಾರೆ. ಅನಂತರ, **ಮತ್ಯಾ ಸಹ** ಬುದ್ಧಿಸ್ಥನಾದವನಿಂದ ಸಹಿತನಾಗಿ, **ತೇನ ಸಂಸಾದ್ಯ** ಮನಸ್ಥನಿಂದ ಸಹಿತನಾಗಿ, **ಯಾತಿ** ವಿಜ್ಞಾನತತ್ತ್ವವನ್ನು ಹೊಂದುತ್ತಾನೆ. ॥೩೩॥

ಭೂತಸೂಕ್ಷ್ಮೇಂದ್ರಿಯಸನ್ನಿಕರ್ಷಾತ್ ಎಂಬುದಕ್ಕೆ ಭೂತಗಳಿಗೂ ಸೂಕ್ಷ್ಮೇಂದ್ರಿಯಗಳಿಗೂ ಪರಸ್ಪರ ಸನ್ನಿಕರ್ಷದಿಂದ ಎಂದರ್ಥ ತೋರುತ್ತದೆ. ಇದು ಸರಿಯಲ್ಲ ಎನ್ನುವುದಕ್ಕಾಗಿ ವ್ಯಾಖ್ಯಾನಿಸುತ್ತಾರೆ-

ತಾತ್ಪರ್ಯ- ಭೂತಸೂಕ್ಷ್ಮೇಂದ್ರಿಯೈಶ್ಚ ಸಹ ಅನಾದಿಃ ಭಗವಾನಾಕಾಶಗೋ ಮನೋಮಯಂ ಯಾತಿ । ನಾದವತ್ತ್ವಾತ್ ಸನಾತನಃ । 'ನಾದೇನ ತೇನ ಮಹತಾ ಸನಾತನ ಇತಿ ಸ್ಮೃತಃ' ಇತಿ ಮೋಕ್ಷಧರ್ಮೇ । ವಿವಿಧಕಾರ್ಯಯುಕ್ತಂ ವಿಕಾರ್ಯಮ್ । ದೇವಮಯಂ ದೇವಪ್ರಧಾನಮ್ ।

ಮನಃಸ್ಥಿತೋ ಹರಿರ್ನಿತ್ಯಂ ಸರ್ವದೇವೇಷು ಸಂಸ್ಥಿತಃ ।
ದೇವಪ್ರಧಾನಕಾನ್ ಲೋಕಾನ್ ಕರೋತ್ಯನುಗತಃ ಸದಾ ॥ -ಇತಿ ವಾರಾಹೇ

ಭೂತಸೂಕ್ಷ್ಮಾಣಿ ಪಂಚಭೂತಾನಿ ಜೀವಾಶ್ಚ

ಪಂಚಭೂತೈಶ್ಚ ಶಬ್ದಾದ್ಯೈಃ ಇಂದ್ರಿಯೈಃ ಜೀವರಾಶಿಭಿಃ ।
ಯುಕ್ತ ಆಕಾಶಗೋ ವಿಷ್ಣುಃ ಮನಃಸ್ಥಮುಪಗಚ್ಛತಿ ॥ -ಇತಿ ವಾಮನೇ

ಯೋऽಸಾವನಾದಿಃ ಮನೋಮಯಃ ತಮಿತಿ ವಾ । ವಿಪರ್ಯಯಶ್ಚ (ಶ್ಚೇತ್) ತಸ್ಯೈವ ಗಂತೃತ್ವಮಿತಿ ಜ್ಞಾಪಯಿತುಂ ಮತಿಸ್ಥೇನ ತೇನ ಮನಃಸ್ಥೇನ ಚ ಸಹ ವಿಜ್ಞಾನತತ್ತ್ವಂ ಯಾತಿ ॥

**ಅರ್ಥ-** ಪೃಥಿವ್ಯಾದಿ ಐದು ಭೂತಗಳು ಗಂಧ ಮೊದಲಾದ ಭೂತಸೂಕ್ಷ್ಮಗಳು (ತನ್ಮಾತ್ರಾಗಳು) ತತ್ತ್ವಾಭಿಮಾನಿದೇವತೆಗಳು ಇಂದ್ರಿಯಗಳು ಇವರಿಂದ ಕೂಡಿಕೊಂಡು ಅನಾದಿಯಾದ ಆಕಾಶದಲ್ಲಿರುವ ಶ್ರೀಹರಿಯು ಮನೊಮಯನನ್ನು ಹೊಂದುತ್ತಾನೆ. ಆ ಸಮಯದಲ್ಲಿ ವೇದರೂಪಶಬ್ದಗಳಿಂದ ಚೆನ್ನಾಗಿ ಸ್ತೋತ್ರಮಾಡಲ್ಪಡುವುದರಿಂದ ಸನಾತನನೆನಿಸುತ್ತಾನೆ. (ಪ್ರಮಾಣಹೇಳುತ್ತಾರೆ.) ಪದಸಮನ್ವಯರೂಪವಾದ ಸ್ತುತಿರೂಪ ವೇದದಿಂದ ಕೂಡಿದವನು ಸನಾತನನೆನಿಸುತ್ತಾನೆ. ಎಂದು ಮೋಕ್ಷಧರ್ಮದಲ್ಲಿ ಹೇಳಿದೆ. (ಅನಾದಿ-ಸನಾತನ ಶಬ್ದಗಳಿಂದ ಪೌನರುಕ್ತ್ಯವಿಲ್ಲ) ನಾನಾವಿಧ ಕಾರ್ಯದಿಂದ ಕೂಡಿದ ಅಹಂಕಾರತತ್ತ್ವವೇ ವಿಕಾರ್ಯವೆನಿಸುತ್ತದೆ. **ದೇವಮಯಂ** ವೈಕಾರಿಕ ಅಹಂಕಾರ ತತ್ತ್ವದಿಂದ ಹುಟ್ಟಿದ ದೇವತೆಗಳಿಗೆ ಪ್ರಾಧಾನ್ಯವನ್ನು ಕೊಡುವ ಮನಸ್ಸಿನಲ್ಲಿರುವ ಶ್ರೀಹರಿಯು ನಿತ್ಯದಲ್ಲಿಯೂ ಸಮಸ್ತದೇವತೆಗಳಲ್ಲಿ ನಿಯಾಮಕನಾಗಿ ಇದ್ದು ಲೋಕಗಳಲ್ಲಿ ಅಂತರ್ಗತನಾಗಿ ದೇವತೆಗಳಿಂದ ಲೋಕಗಳನ್ನು ಸೃಷ್ಟಿಮಾಡಿಸುತ್ತಾನೆ. ಎಂದು ವರಾಹಪುರಾಣದಲ್ಲಿ ಹೇಳಿದೆ. (ಭೂತಸೂಕ್ಷ್ಮೇಂದ್ರಿಯಸನ್ನಿಕರ್ಷಾತ್ ಎಂಬಲ್ಲಿಯ ಭೂತಾದಿ ಶಬ್ದಗಳ ಅರ್ಥಗಳನ್ನು ಹೇಳುತ್ತಾರೆ.)

ಪಂಚಭೂತಗಳು ಶಬ್ದಮೊದಲಾದ ಭೂತಸೂಕ್ಷ್ಮಗಳು ಜೀವರು ಕೂಡ ಭೂತಸೂಕ್ಷ್ಮ ಎಂಬ ಶಬ್ದದಿಂದ ಹೇಳಲ್ಪಡುತ್ತಾರೆ. (ಆ ವಿಷಯದಲ್ಲಿ ಪ್ರಮಾಣ ಹೇಳುತ್ತಾರೆ.)

ಪೃಥಿವ್ಯಾದಿ ಪಂಚಭೂತಗಳು, ಶಬ್ದಾದಿಗಳು, ಚಕ್ಷುರಾದಿ ಇಂದ್ರಿಯಗಳು, ಜೀವರಾಶಿಗಳೂ ಇವರಿಂದ ಕೂಡಿದ ಆಕಾಶದಲ್ಲಿರುವ ಶ್ರೀಹರಿಯು ಮನೋಮಯನಾದ ಶ್ರೀಹರಿಯನ್ನು ಹೊಂದುತ್ತಾನೆ. ಎಂದು ವಾಮನಪುರಾಣದಲ್ಲಿ ಹೇಳಿದೆ. (ಸಭೂತಸೂಕ್ಷ್ಮ ಎಂಬಲ್ಲಿದ್ದ ಸಃ ಎಂಬುವುದರಿಂದ ಆಕಾಶದಲ್ಲಿ ಶ್ರೀಹರಿಯನ್ನು ಇಟ್ಟುಕೊಳ್ಳಬೇಕು ಎಂದು ಹೇಳಿ ಈಗ ಜ್ಞಾನಿಗಳ ಸಮೂಹವನ್ನು ಇಟ್ಟುಕೊಳ್ಳಬೇಕು ಎನ್ನುತ್ತಾರೆ.)

ಭೂತಾದಿಗಳ ಸಂಬಂಧವನ್ನು ಹೊಂದಿ ಮನಸ್ಸಿನಲ್ಲಿ ಪ್ರೇರಕನಾಗಿದ್ದು ಅನಾದಿಯಾದವನು ಯಾವ ಶ್ರೀಹರಿಯೋ ಅಂತಹ ಶ್ರೀಹರಿಯನ್ನು (ಸಃ) ಜ್ಞಾನಿಗಳ ಸಮುದಾಯವು ಹೊಂದುತ್ತದೆ.

(ಹಿಂದಿನ ಪಕ್ಷದಲ್ಲಿ ಸಃ ಎಂಬ ತಚ್ಛಬ್ದದಿಂದ ತೆಗೆದುಕೊಂಡ ಜ್ಞಾನಿಗಳ ಸಮುದಾಯವನ್ನು ಬಿಟ್ಟು ಆಕಾಶದಲ್ಲಿದ್ದ ಶ್ರೀವಿಷ್ಣುವನ್ನೇ ಏಕೆ ಪರಾಮರ್ಶಮಾಡಿದ್ದೆಂದರೆ ಇಲ್ಲಿ ಜ್ಞಾನಿಗಳ ಸಮುದಾಯವನ್ನು ಕರೆದುಕೊಂಡು ಶ್ರೀಪರಮಾತ್ಮನೇ ಹೋಗುತ್ತಾನೆಂದು ಶ್ರೀಹರಿಗೆ ಸ್ವಾತಂತ್ರ್ಯವನ್ನು ತೋರಿಸುವುದಕ್ಕಾಗಿ ಕರ್ತೃ ಆಗಿ ಪ್ರಕೃತವಾದ ಜ್ಞಾನಿಗಳ ಸಮೂಹವನ್ನು ಕರ್ತಾ ಎಂದು ಹೇಳದೇ ಆಕಾಶದಲ್ಲಿದ್ದ ಶ್ರೀಹರಿಯನ್ನು ಕರ್ತಾ ಎಂದು ಹೇಳಿದ್ದಾರೆ)

(ಸಂಸಾಧ್ಯ ಮತ್ಯಾ ಸಹ ತೇನ ಯಾತಿ ಎಂಬಲ್ಲಿ ತೇನ ಮತ್ಯಾ ತೇನ ಎಂಬ ಶಬ್ದವು ಪುಲ್ಲಿಂಗವಾಗಿದೆ. ಮತ್ಯಾ ಎಂಬುದು ಸ್ತ್ರೀಲಿಂಗವಾಗಿದೆ. ಆದ್ದರಿಂದ ಅನ್ವಯವು ಕೂಡುವುದಿಲ್ಲ ಎನ್ನುವುದಕ್ಕಾಗಿ ಚ ಶಬ್ದವನ್ನು ಸೇರಿಸಿಕೊಂಡು ಅನ್ವಯ ತೋರಿಸುತ್ತಾರೆ) **ಮತ್ಯಾ** ಬುದ್ಧಿತತ್ತ್ವದಲ್ಲಿರುವ ಭಗವನ್ಮೂರ್ತಿಯಿಂದಲೂ, **ತೇನ** ಮನಸ್ತತ್ವದಲ್ಲಿರುವ ಭಗವಂತನ ಮೂರ್ತಿಯಿಂದಲೂ ಕೂಡಿಕೊಂಡು (ಜ್ಞಾನಿಸಂಘವು ವಿಜ್ಞಾನತತ್ತ್ವದ ಅಭಿಮಾನಿಯನ್ನು ಹೊಂದುತ್ತಾನೆ.

**ವಿಜ್ಞಾನತತ್ತ್ವಂ ಗುಣಸನ್ನಿರೋಧಂ ತೇನಾತ್ಮನಾತ್ಮಾನಮುಪೈತಿ ಶಾಂತಿಮ್ ।**
**ಆನಂದಮಾನಂದಮಯೋಽವಸಾನೇ ಸರ್ವಾತ್ಮಕೇ ಬ್ರಹ್ಮಣಿ ವಾಸುದೇವೇ**
**ಏತಾಂ ಗತಿಂ ಭಾಗವತೋ ಗತೋ ಯಃ ಸ ವೈ ಪುನರ್ನೇಹ ವಿಷಜ್ಜತೇಽಂಗ ॥**

**ತೇನ** ಅಹಂಕಾರಸ್ಥನಾದವನಿಂದ ಕೂಡಿಕೊಂಡು, **ವಿಜ್ಞಾನತತ್ತ್ವಂ** ವಿಜ್ಞಾನತತ್ತ್ವವೆಂಬ ವಾಣೀಗತನಾದ ವಿರಿಂಚನಲ್ಲಿರುವ ತನ್ನನ್ನು, ಮಹತ್ತತ್ತ್ವಗತ ವಿಜ್ಞಾನಮಯನಾಮಕನಾದ, **ಗುಣಸನ್ನಿರೋಧಂ** ಗುಣತ್ರಯನಾಶಕನಾದ ನಿರ್ಗುಣನಾದ ವಾಸುದೇವನನ್ನು, **ಉಪೈತಿ** ಹೊಂದುವನು. **ತೇನ ಆತ್ಮನಾ** ಮಹತ್ತತ್ತ್ವಾಂತರ್ಯಾಮಿಯಾದವನಿಂದ, **ಶಾಂತಿಂ** ಅವ್ಯಕ್ತ ಎಂಬ ಹೆಸರಿನ ಗುಣತ್ರಯಗತನಾದ, **ಆನಂದಂ** ಆನಂದಮಯನಾಮಕನಾದ, **ಆತ್ಮಾನಂ** ನಾರಾಯಣನನ್ನು, **ಉಪೈತಿ** ಹೊಂದುವನು, **ಆನಂದಮಯಃ** ಪೂರ್ಣಾನಂದನಾದ ಅವ್ಯಕ್ತಗತನಾದ ನಾರಾಯಣನು, ಬ್ರಹ್ಮಾದಿಜ್ಞಾನಿಸಂಘವನ್ನು ತೆಗೆದುಕೊಂಡು, **ಅವಸಾನೇ** ಎರಡು ಪರಾರ್ಧಗಳು ಮುಗಿದ ಮೇಲೆ, **ಸರ್ವಾತ್ಮಕೇ** ಎಲ್ಲ ಭಕ್ತರಿಗೆ ಸ್ವರೂಪಸುಖವನ್ನು ಕೊಡುವ ಮುಕ್ತಿಪ್ರದನಾದ, **ಗುಣಸನ್ನಿರೋಧಂ** ನಿರ್ಗುಣನಾದ

ಚತುರ್ವ್ಯೂಹಗತನಾದ ವಾಸುದೇವನನ್ನು **ಉಪೈತಿ** ಹೊಂದುವನು, (ವಾಸುದೇವನಾಮಾ ಬಭೂವ ನಿಜಮುಕ್ತಿಪದಪ್ರದಾತಾ) ಸರ್ವೇಷಾಂ ಆತ್ಮನಾಂ ಭಕ್ತಜೀವಾನಾಂ ಕಂ ಸ್ವರೂಪಸುಖಂ ಯಸ್ಮಾತ್ ತತ್ ಸರ್ವಾತ್ಮಕಂ ತಸ್ಮಿನ್) **ಬ್ರಹ್ಮಣಿ** ಗುಣಪೂರ್ಣನಾದ, **ವಾಸುದೇವೇ ವಿಹರತಿ** ವಿಹರಿಸುವನು. ವಿಜ್ಞಾನತತ್ತ್ವಗತನೆಂದು ಹೇಳಿದ ವಾಸುದೇವನು ಪಂಚವ್ಯೂಹಗತನೆಂದು ತಿಳಿಯಬೇಕು. ಹಿಂದೆ ಭೋಗರೂಪಮುಕ್ತಿಗೆ ಅಪುನರಾವೃತ್ತಿ ಹೇಳಿತ್ತು. ಈಗ ದುಃಖನಿವೃತ್ತಿರೂಪವಾದ ಮುಕ್ತಿಗೆ ಅಪುನರಾವೃತ್ತಿ ಹೇಳಿರುವರು. **ವಾಸುದೇವೇ** ವಾಸುದೇವನಲ್ಲಿ, **ಏತಾಂ ಗತಿಂ** ಹಿಂದೆ ಹೇಳಿದ ಸಾಯುಜ್ಯವನ್ನು, **ಯಃ ಭಾಗವತಃ** ಯಾವ ಭಕ್ತನು, **ಗತಃ** ಹೊಂದಿರುವನೋ, **ಸಃ** ಅವನು, **ಪುನಃ** ಮತ್ತೆ, **ಇಹ** ಈ ಸಂಸಾರದಲ್ಲಿ, **ನ ವಿಷಜ್ಜತೇ** ಬರಲಾರನು. ।।೩೪।।

ವಿಜ್ಞಾನತತ್ತ್ವ ಎಂದರೆ ವಾಣೀ. ಗುಣಸನ್ನಿರೊಧಂ ಎಂದರೆ ಮಹತ್ತತ್ತ್ವಾಖ್ಯ ವಿರಿಂಚಗತನಾದ ವಿಜ್ಞಾನನಾಮಕನಾದ ಶ್ರೀಹರಿಯನ್ನು ನಂತರ, **ಶಾಂತಿಂ** ಅವ್ಯಕ್ತವನ್ನು ಚಿತ್ಪ್ರಕೃತಿಸ್ಥ ಆನಂದನಾಮಕನನ್ನು ಆನಂದಮಯನು ಶ್ರೀಯಿಂದ ಕೂಡಿ ಬ್ರಹ್ಮಾಣಮಾದಾಯ ವಾಸುದೇವೇ ವಿಹರತಿ ಎಂದು ವಿಜಯಧ್ವಜರು ವ್ಯಾಖ್ಯಾನಿಸಿರುವರು.

ಗುಣಸನ್ನಿರೋಧ ಶಬ್ದಾರ್ಥ ಹೇಳುವರು-

**ತಾತ್ಪರ್ಯ- ಗುಣಸನ್ನಿರೋಧಂ ನಿರ್ಗುಣಂ ವಾಸುದೇವಮ್ ।**

ಗುಣತ್ರಯಸ್ವೀಕಾರ ಮಾಡದಿರುವವನು ಎಂದರ್ಥ.

(ಅನಿರುದ್ಧಾದಿಗಳು ಸೃಷ್ಟ್ಯಾದಿಗಳನ್ನು ಮಾಡಲು ಸತ್ತ್ವಾದಿಗುಣಗಳನ್ನು ಸ್ವೀಕಾರ ಮಾಡುತ್ತಾರೆ. ಆದರೆ ಈ ವಾಸುದೇವನು ಮಾತ್ರ ಆ ಮೂರು ಗುಣಗಳನ್ನು ಸ್ವೀಕಾರ ಮಾಡುವುದಿಲ್ಲವೆಂದು ಭಾವ)

ವಾಸುದೇವೇ ಎಂಬ ಸಪ್ತಮ್ಯಂತವಾದ ಶಬ್ದಕ್ಕೆ ಅನ್ವಯ ತೋರಿಸುವರು-

**ತಾತ್ಪರ್ಯ- 'ಏತಾಂ ಗತಿಂ ಗತೋ ನ ವಿಷಜ್ಜತೇ ।**

(ಈ ವಿಷಯದಲ್ಲಿ ಪ್ರಮಾಣ ಹೇಳುವರು-

**ತಾತ್ಪರ್ಯ- ವಾಸುದೇವಾಶ್ರಿತಾ ದೇವಾ ಬ್ರಹ್ಮಾದ್ಯಾಃ ಮುಕ್ತಬಂಧನಾಃ ।**
**ಭೇದದೃಷ್ಟ್ಯಾಭಿಮಾನೇನ ಜಾವೃತ್ತಿಂ ನೈವ ಯಾಂತಿ ತೇ ।।**

**ಭುಂಜತೇ ತು ಪೃಥಕ್ ಭೋಗಾನ್ನಾನಂದಂ ತತ್ಸ್ವರೂಪಕಮ್ ।**
**ಸ್ವರೂಪಂ ಚ ಪೃಥಕ್ ತೇಷಾಮಾವಿಷ್ಟಗ್ರಹವದ್ಭವೇತ್ ॥** -ಇತಿ ಬ್ರಹ್ಮಾಂಡೇ

ಪಂಚಭೇದಜ್ಞಾನದಿಂದಲೂ ತಮಗೆ ಯೋಗ್ಯವಾದ ಮತ್ತು ಪೂರ್ಣವಾದ ಜ್ಞಾನದಿಂದ ಸಂಸಾರಬಂಧವನ್ನು ಬಿಟ್ಟು ಮುಕ್ತರಾದ ಬ್ರಹ್ಮಾದಿದೇವತೆಗಳು ವಾಸುದೇವನನ್ನು ಆಶ್ರಯಿಸಿದವರಾಗಿ ಮತ್ತೆ ಸಂಸಾರಕ್ಕೆ ತಿರುಗಿ ಬರುವುದಿಲ್ಲ. ಮತ್ತು ಪರಮಾತ್ಮನಿಂದ ಭಿನ್ನವಾದ ತಮ್ಮ ಸ್ವರೂಪಭೂತವಾದ ಭೋಗಗಳನ್ನು ಅನುಭವಿಸುವರು.

ಯದ್ಯಪಿ ಸಾಯುಜ್ಯದಲ್ಲಿಯೂ ಮುಕ್ತರ ಸ್ವರೂಪವು ಶ್ರೀಹರಿಯಿಂದ ಬೇರೆಯೇ ಆದರೂ ಹೇಗೆ ಪಿಶಾಚವು ಒಬ್ಬ ಪುರುಷನಲ್ಲಿ ಪ್ರವೇಶ ಮಾಡಿ ಅನುಭವಿಸುವುದೊ ಹಾಗೆ ಮುಕ್ತನು ಶ್ರೀಹರಿಯಲ್ಲಿ ಪ್ರವೇಶಿಸುವನು. ತನ್ನ ಸುಖವನ್ನೇ ಅನುಭವಿಸುವನು ಶ್ರೀಹರಿಯ ಆನಂದವನ್ನಲ್ಲ. ಎಂದು ಬ್ರಹ್ಮಾಂಡಪುರಾಣದಲ್ಲಿದೆ.

ಇಲ್ಲಿ ಪೃಥಿವಿಯಿಂದ ಆರಂಭಿಸಿ ಅವ್ಯಕ್ತದ ವರೆಗಿನ ತತ್ತ್ವಗಳಿಗೆ ತಮ್ಮ ತಮ್ಮ ಕಾರಣಗಳಲ್ಲಿ ಲಯವಾಗುತ್ತದೆ. ಪೃಥಿವ್ಯಾದ್ಯಭಿಮಾನಿದೇವತೆಗಳು ತಮಗಿಂತ ಉತ್ತಮರಲ್ಲಿ ಪ್ರವೇಶ ಮಾಡುವ ಮೂಲಕ ಮಹತ್ತತ್ತ್ವಗತ ಬ್ರಹ್ಮನನ್ನು ಪ್ರವೇಶಿಸುತ್ತಾರೆ. ನಂತರ ಬ್ರಹ್ಮಜನಕನಾದ ವಾಸುದೇವನಲ್ಲಿ ಪ್ರವೇಶಿಸುತ್ತಾರೆ. ಇತರಜ್ಞಾನಿಗಳಿಗೆ ತತ್ತ್ವಾಭಿಮಾನಿಗಳು ದ್ವಾರಮಾತ್ರ ಎಂದು ತಿಳಿಯಬೇಕು.

*ಈ ರೀತಿಯಾಗಿ ಹೇಳಿದ ಎರಡುಮಾರ್ಗಗಳು ವೇದಪ್ರತಿಪಾದ್ಯವಾದದ್ದರಿಂದ ಹರಿಸಂಪ್ರದಾಯದಿಂದ ಬಂದುದರಿಂದ ಅವಿಶ್ವಾಸ ಮಾಡಲು ಯೋಗ್ಯವಲ್ಲ ಎಂದು ಸೂಚಿಸುತ್ತ ಕೇಳದೇ ಇದ್ದುದನ್ನು ಏಕೇ ಹೇಳಿದಿರಿ ಎಂಬ ಶಂಕೆಯನ್ನು ಪರಿಹರಿಸುತ್ತ ಉಪಸಂಹಾರ ಮಾಡುವರು-*

**ಏತೇ ಸೃತೀ ತೇ ನೃಪ ವೇದಗೀತೇ ತ್ವಯಾಽಭಿಪೃಷ್ಟೇಽಥ ಸನಾತನೇ ಚ ।**
**ಯದ್ವೈ ಪುರಾ ಬ್ರಹ್ಮಣ ಆಹ ಪೃಷ್ಟಃ ಆರಾಧಿತೋ ಭಗವಾನ್ ವಾಸುದೇವಃ ॥೩೫॥**

**ಹೇ ನೃಪ** ಎಲೋ ರಾಜನೇ, **ತ್ವಯಾ** ನಿನ್ನಿಂದ, **ಅಭಿಪೃಷ್ಟೇ** 'ಯಚ್ಛ್ರೋತವ್ಯಂ... ಬ್ರೂಹಿ ಯದ್ವಾ ವಿಪರ್ಯಯಂ' ಎಂದು ಕೇಳಲ್ಪಟ್ಟ **ಸನಾತನೇ** ಪ್ರತಿಕಲ್ಪದಲ್ಲಿಯೂ ಇರುವ, **ವೇದಗೀತೇ** 'ಅಶೃಣ್ವಂ ಅಥ ಯೇಽರಣ್ಯೇ ಶ್ರದ್ಧಾತಪ ಇತ್ಯುಪಾಸತೇ ತೇ ಅರ್ಚಿಷಮಭಿ ಸಂಭವಂತಿ' ಮೊದಲಾದ ವೇದಗಳಿಂದ ಪ್ರತಿಪಾದ್ಯವಾಗಿರುವ

ಮಾರ್ಗಗಳನ್ನು, **ಆರಾಧಿತಃ** ಚತುರ್ಮುಖನಿಂದ ಸಂತೋಷಪಡಿಸಲ್ಪಟ್ಟ, **ಭಗವಾನ್ ವಾಸುದೇವಃ** ಶ್ರೀಹರಿಯು, **ಪುರಾ** ಹಿಂದೆ, **ಬ್ರಹ್ಮಣೇ** ಚತುರ್ಮುಖನಿಗೆ, **ಆಹ** ಹೇಳಿದನೋ, **ಏತೇ ದ್ವೇ ಸೃತೀ** ಈ ಪುನರಾವೃತ್ತಿ ಅಪುನಾರಾವೃತ್ತಿ ಎಂಬ ಎರಡು ಮಾರ್ಗಗಳು, ಹಿಂದೆಯೇ ಉಕ್ತವಾಗಿವೆ. ।।೩೫ ।।

*'ತದಹಂ ತೇಽಭಿಧಾಸ್ಯಾಮಿ' ಎಂಬಲ್ಲಿ ಯಾವುದು ಹೇಳಬೇಕೇಂದು ಪ್ರತಿಜ್ಞೆ ಮಾಡಲ್ಪಟ್ಟಿತೋ ಯಾವುದನ್ನು ಎರಡು ಅಧ್ಯಾಯದಿಂದ ಸ್ವಲ್ಪ ಹೇಳಿದೆಯೋ ಅದೇ ಭಾಗವತವನ್ನು ಮುಂದೆಯೂ ಹೇಳಲು ಅದರಲ್ಲಿ ಅತಿಶಯಶ್ರದ್ಧೆ ಹುಟ್ಟಿಸಲು ಮೂರು ಶ್ಲೋಕಗಳಿಂದ ಸ್ತುತಿಸುವರು-*

**ನ ಹ್ಯತೋಽನ್ಯಃ ಶಿವಃ ಪಂಥಾಃ ವಿಶ್ರುತಃ ಸಂಸೃತಾವಿಹ ।**
**ವಾಸುದೇವೇ ಭಗವತಿ ಭಕ್ತಿಯೋಗೋ ಯತೋ ಭವೇತ್ ।। ೩೬।।**

**ಇಹ ಸಂಸೃತೌ** ಈ ಸಂಸಾರದಲ್ಲಿ, **ಅತಃ** ಭಾಗವತವೆಂಬ ಈ ಗ್ರಂಥಕ್ಕಿಂತ, **ಅನ್ಯಃ** ಬೇರೆಯಾದ, **ಶಿವಃ** ಮಂಗಳಕರವಾದ, **ಪಂಥಾಃ** ಮಾರ್ಗವು, **ನ ವಿಶ್ರುತಃ** ಕೇಳಲ್ಪಟ್ಟಿಲ್ಲ ಸಜ್ಜನರ ಮೇಲೆ ಕರುಣೆಯಿಂದ ಭಗವಂತನು ಹೇಳಿದ್ದರಿಂದ ಈ ಗ್ರಂಥಕ್ಕೆ ಸಮಾನವಾದುದು ಮತ್ತೊಂದಿಲ್ಲ ಭಾಗವತವು ಶ್ರೇಷ್ಠ ಎನ್ನಲು ಮತ್ತೊಂದು ಕಾರಣವನ್ನು ಹೇಳುತ್ತಾರೆ. **ಯತಃ** ಯಾವ ಭಾಗವತದ ಅಧ್ಯಯನದಿಂದ **ಭಗವತಿ ವಾಸುದೇವೇ** ಶ್ರೀಹರಿಯಲ್ಲಿ, **ಭಕ್ತಿಯೋಗಃ ಭವೇತ್** ಭಕ್ತಿರೂಪವಾದ ಮೋಕ್ಷೋಪಾಯವು ಉಂಟಾಗುವುದು.

ಇಲ್ಲಿ ಅತಃ ಎಂದು ಯಾವುದನ್ನು ಪರಾಮರ್ಶೆ ಮಾಡಬೇಕೆಂದು ತೋರಿಸುತ್ತ ಮುಂದಿನ ಶ್ಲೋಕದಲ್ಲಿ ಹೇಳುವ ಭಗವದ್‌ದೃಷ್ಟತ್ವವು ಶಿವತ್ವಕ್ಕೆ ಹೇತುವಾಗಿ ಅನ್ವಯಿಸಬೇಕೆಂದು ಹೇಳುವರು-

ತಾತ್ಪರ್ಯ- ಯದ್ಭಗವಾನಾಹ । ಅತೋ ಭಾಗವತಾಖ್ಯಾತ್ ಗ್ರಂಥಾತ್ ಶಿವಃ ಪಂಥಾ ನ ।

ಶ್ರೀಮದ್‌ವೇದವ್ಯಾಸದೇವರು ಯಾವ ಭಾಗವತವನ್ನು ಶುಕಾಚಾರ್ಯರಿಗೆ ಉಪದೇಶಿಸಿರುವರೋ, ಆ ಭಾಗವತಪುರಾಣವನ್ನು ಅತ್ಯಾಪ್ತರಾದ ವ್ಯಾಸರು ಶೀಘ್ರದಲ್ಲಿ ಮೋಕ್ಷೋಪಾಯವನ್ನು ಸಾಧಿಸಿಕೊಡುವುದಕ್ಕಾಗಿಯೇ ಮಾಡಿರುವುದರಿಂದ ಭಾಗವತಕ್ಕಿಂತ ಬೇರೆ ಯಾವುದೂ ಶೀಘ್ರಮೋಕ್ಷಪ್ರದ ಗ್ರಂಥವಿಲ್ಲವೆಂದು ಭಾವ.

ತಾತ್ಪರ್ಯದಲ್ಲಿ ಭಾಗವತಾಖ್ಯಾತ್ ಎಂದದ್ದರಿಂದ 'ಇದಂ ಭಾಗವತಂ ನಾಮ ಪುರಾಣಂ' ಎಂದು ಹಿಂದೇ ಭಾಗವತ ಪ್ರಸ್ತುತವಾಗಿದೆ. ಅದನ್ನೇ 'ಅತಃ' ಎಂಬ ಶಬ್ದದಿಂದ ಪರಾಮರ್ಶಿಸಬೇಕು ಎಂದು ಸೂಚಿಸಿದ್ದಾರೆ. 'ಅನ್ಯಃ ಶಿವಃ' ಎಂಬ ಪುಲ್ಲಿಂಗ ಉಪಪಾದಿಸಲು 'ಗ್ರಂಥಾತ್' ಎಂದಿದ್ದಾರೆ. 'ಯತ್' ಎಂದು ಅಧ್ಯಾಹಾರ ಮಾಡಿಕೊಳ್ಳಬೇಕು. 'ಅತಃ' ಎಂಬುದನ್ನು ಆವೃತ್ತಿ ಮಾಡಿಕೊಳ್ಳಬೇಕು ಎಂಬ ಅಭಿಪ್ರಾಯದಿಂದ 'ಯದ್ಭಗವಾನಾಹ' ಎಂಬುದಾಗಿ ಯೋಜಿಸಿರುವರು. **ಯತ್** ಯಾವ ಕಾರಣ, **ಭಗವಾನ್** ವ್ಯಾಸರು, **ಆಹ** ಹೇಳಿದರೋ, **ಅತಃ** ಆದ್ದರಿಂದ ಅಂದರೆ ಆಪ್ತರಾದ ವ್ಯಾಸರಿಂದ ರಚಿತವಾದದ್ದರಿಂದ, **ಅತಃ** ಭಾಗವತವನ್ನು ಬಿಟ್ಟು ಬೇರೇ ಒಳ್ಳೆಯ ಮಾರ್ಗವಿಲ್ಲ, ಈ ಭಾಗವತವೇ ಶ್ರೇಷ್ಠವಾದ ಮಾರ್ಗ ಎಂದು ಅರ್ಥ. ||೩೬||

**ಭಗವಾನ್ ಬ್ರಹ್ಮ ಕಾರ್ತ್ಸ್ನ್ಯೇನ ತ್ರಿರನ್ವೀಕ್ಷ್ಯ ಮನೀಷಯಾ ।**
**ತದ್ಧಿ ಹ್ಯಪಶ್ಯತ್ ಕೂಟಸ್ಥೇ ರತಿರಾತ್ಮನ್ಯತೋ ಭವೇತ್ || ೩೭ ||**

**ಯತಃ** ಯಾವ ಭಾಗವತದಿಂದ, (ಶ್ರದ್ಧೆಯಿಂದ ಕೇಳಲ್ಪಟ್ಟ) **ಕೂಟಸ್ಥೇ** ನಿರ್ವಿಕಾರನಾದ **ಆತ್ಮನಿ** ಪರಮಾತ್ಮನಲ್ಲಿ, **ರತಿಃ ಭವೇತ್** ಪರಮಾತ್ಮವಿಷಯಕದರ್ಶನಾದಿಗಳಿಂದ ಉಂಟಾದ ಸುಖವಾಗುವುದೋ, (ಇದು ಕೂಡ ಭಾಗವತ ಶಿವ ಎನ್ನಲು ಕಾರಣ) **ತತ್** ಆ ಭಾಗವತವನ್ನು, **ಭಗವಾನ್** ವ್ಯಾಸರು, ಬ್ರಹ್ಮ ವೇದವನ್ನು, **ಕಾರ್ತ್ಸ್ನ್ಯೇನ** ಸಂಪೂರ್ಣವಾಗಿ **ತ್ರಿಃ** ಮೂರು ಬಾರಿ, **ಮನೀಷಯಾ** ನಿತ್ಯವಾದ ಬುದ್ಧಿಯಿಂದ, **ಅನ್ವೀಕ್ಷ್ಯ** ಉಪಮಾದಿಗಳಿಗೆ ಅನುಸಾರವಾಗಿ ಲೀಲೆಯಿಂದ ವಿಚಾರಮಾಡಿ, **ಅಪಶ್ಯತ್** ಹೇಳಿರುವರು, ಆದ್ದರಿಂದ ಶ್ರೇಷ್ಠವೆಂದು ಭಾವ. **ಹಿ** ಇದು ಪ್ರಸಿದ್ಧ. ಇಲ್ಲಿ 'ತದಧ್ಯಪಶ್ಯತ್' ಎಂದು ಪಾಠ ಯಾದವಾರ್ಯರದು ಎಂದು ತೋರುತ್ತದೆ. **ತತ್** ಭಾಗವತಂ ಪುರಾಣಂ ಇತರ ಪುರಾಣಾ ಪೇಕ್ಷಯಾ **ಅಧಿ** ಅಧಿಕಂ **ಅಪಶ್ಯತ್** ಆಹ ಕೃತವಾನ್ ಎಂದು ವ್ಯಾಖ್ಯಾನಿಸಿರುವರು. ಇಲ್ಲಿ ಭಗವಂತನ ಜ್ಞಾನ ವಿಚಾರಸಾಧ್ಯವೆಂದು ತೋರುವುದು. ಆದ್ದರಿಂದ ಅದನ್ನು ಪ್ರಮಾಣದಿಂದ ನಿರಾಕರಿಸುವರು. ಮತ್ತು 'ತದಧ್ಯಪಶ್ಯತ್' ಎಂಬಲ್ಲಿ ತತ್ ಶಬ್ದದಿಂದ ಪರಾಮೃಶ್ಯವಾದುದು ಯಾವುದೆಂದು ತಿಳಿಸುವರು-

**ತಾತ್ಪರ್ಯ- ತತ್ ಭಾಗವತಂ ಪುರಾಣಂ ಅಪಶ್ಯತ್ ।**
**ನಿತ್ಯಜ್ಞಾನೇನ ಸಿದ್ಧಂ ಚ ಪುನಃ ಪುನರವೇಕ್ಷತೇ ।**
**ಲೀಲಯೈವ ಹರಿರ್ದೇವೋ ದುಷ್ಟಾನಾಂ ಮೋಹನಾಯ ಚ ॥ -ಇತಿ ಬ್ರಹ್ಮತರ್ಕೇ**

ಭಾಗವತಪುರಾಣವನ್ನು ಇತರಪುರಾಣಗಳಿಗಿಂತ ಶ್ರೇಷ್ಠವನ್ನಾಗಿ ಮಾಡಿದರು. ಶ್ರೀವೇದವ್ಯಾಸದೇವರು ಎಲ್ಲವನ್ನೂ ನಿತ್ಯದಲ್ಲಿ ತಿಳಿದವರಾದರೂ ಲೀಲೆಗಾಗಿ, ದುಷ್ಟಜನರನ್ನು ಮೋಹಗೊಳಿಸುವುದಕ್ಕಾಗಿ ಪುನಃ ಪುನಃ ತಿಳಿದರು ಎಂಬುದಾಗಿ ಹೇಳುತ್ತಾರೆ. ಈ ವಿಷಯವು ಬ್ರಹ್ಮತರ್ಕದಲ್ಲಿದೆ.

**ಭಗವಾನ್ ಸರ್ವಭೂತೇಷು ಲಕ್ಷಿತಶ್ಚಾತ್ಮನಾ ಹರಿಃ ।**
**ದೃಶ್ಯೈಃ ಬುದ್ಧ್ಯಾದಿಭಿಃ ದ್ರಷ್ಟಾ ಲಕ್ಷಣೈರನುಮಾಪಕೈಃ ॥ ೩೮ ॥**

**ಭಗವಾನ್ ಹರಿಃ** ಷಡ್ಗುಣೈಶ್ವರ್ಯಶಾಲಿಯಾದ ಶ್ರೀಹರಿಯು, **ಆತ್ಮನಾ** ತನ್ನ ಸ್ವರೂಪವೇ ಆದ ವ್ಯಾಸರೂಪದಿಂದ, **ಸರ್ವಭೂತೇಷು** ಎಲ್ಲ ಪ್ರಾಣಿಗಳ ದೇಹಗಳಲ್ಲಿ **ದೃಶ್ಯೈಃ** ತನ್ನ ಅಧೀನವಲ್ಲವೆಂದು ಸಾಕ್ಷಿಸಿದ್ಧವಾದ, **ಬುದ್ಧ್ಯಾದಿಭಿಃ ಅನುಮಾಪಕೈಃ** ಜ್ಞಾನ ಮುಂತಾದ ಲಿಂಗಗಳಿಂದ, **ದ್ರಷ್ಟಾ** ತನ್ನಿಂದ ಭಿನ್ನನಾದ ನಿಯಾಮಕನು ಇದ್ದಾನೆ ಎಂದು ಮತ್ತು, **ಲಕ್ಷಣೈಃ** ಜಗಜ್ಜನ್ಮಾದಿಕಾರಣತ್ವರೂಪಲಕ್ಷಣಗಳಿಂದಲೂ, **ಲಕ್ಷಿತಃ** ಈ ಪುರಾಣದಲ್ಲಿ ಪ್ರತಿಪಾದಿತ- ನಾಗಿದ್ದಾನೆ. ಈ ಕಾರಣದಿಂದಲೂ ಈ ಭಾಗವತವೇ **ಶಿವಃ ಪಂಥಾಃ** ಮಂಗಲಮಾರ್ಗವೆಂದು ಭಾವ.

ಲಕ್ಷಣ ಮತ್ತು ಪ್ರಮಾಣಗಳಿಂದ ಪರಮಾತ್ಮನ ಜ್ಞಾನವನ್ನು ಹುಟ್ಟಿಸುವುದರಿಂದಲೂ ಭಾಗವತವನ್ನು ಬಿಟ್ಟು ಬೇರೇ ಮೋಕ್ಷಮಾರ್ಗವಿಲ್ಲ ಎಂಬ ಅಭಿಪ್ರಾಯದಿಂದ 'ಭಗವಾನ್ ಸರ್ವಭೂತೇಷು' ಎಂಬ ಮೂಲ ಪ್ರವೃತ್ತವಾಗಿದೆ. ಆದರೆ ಈ ವಿಷಯವು ಇಲ್ಲಿ ಸ್ಪಷ್ಟವಾಗಿ ತೋರುವುದಿಲ್ಲ ಆದ್ದರಿಂದ ಅಪೇಕ್ಷಿತವಾದುದನ್ನು ಅಧ್ಯಾಹಾರ ಮಾಡಿ ಯೋಜಿಸುವರು-

ತಾತ್ಪರ್ಯ- ಲಕ್ಷಿತಶ್ಚ ಅಸ್ಮಿನ್ ಪುರಾಣೇ ಬುದ್ಧ್ಯಾದೀನಾಂ ಪಾರವಶ್ಯದರ್ಶನಾದನ್ಯೋ ನಿಯಂತಾಽಸ್ತೀತಿ ।

ಸಮಾಧಾವಸಮಾಧೌ ಚ ನಿಃಸ್ವತಂತ್ರಸ್ಯ ದೇಹಿನಃ ।
ಅನ್ಯೋ ನಿಯಂತಾ ಭಗವಾನ್ ವಾಸುದೇವಃ ಪರಃ ಪ್ರಭುಃ ॥ -ಇತಿ ಬ್ರಹ್ಮತರ್ಕೇ

ಜ್ಞಾನ-ಅಜ್ಞಾನ, ಸುಖ-ದುಃಖ ಮೊದಲಾದವುಗಳು ಪರಾಧೀನಗಳೆಂದು ಕಂಡು ಬರುವುದರಿಂದ ಅವುಗಳಿಗೆ ನಿಯಾಮಕನಾಗಿ ಶ್ರೀಹರಿಯು ಜೀವರಿಂದ ಭಿನ್ನನಾದವನು ಇದ್ದಾನೆಂದು ಈ ಭಾಗವತಪುರಾಣದಲ್ಲಿ ಹೇಳಲ್ಪಟ್ಟಿದೆ. ಶ್ರೀಹರಿ ಮುಂತಾದ ವಿಷಯದಲ್ಲಿ ಮನಸ್ಸಿಡಲು ಇಡದಿರಲೂ ಸ್ವತಃ ಅಸಮರ್ಥನಾದ ಜೀವನಿಗೆ ಭಿನ್ನನಾದ, ಸರ್ವೋತ್ತಮನಾದ, ಸಮರ್ಥನಾದ ಭಗವಾನ್ ವಾಸುದೇವನು ನಿಯಾಮಕನಾಗಿದ್ದಾನೆ. ಎಂದು ಬ್ರಹ್ಮತರ್ಕದಲ್ಲಿ ಹೇಳಿದೆ.

ಇಲ್ಲಿ ಅಭಿಪ್ರೇತವಾದ ಅನುಮಾನವು ಈ ರೀತಿಯಾಗಿರುತ್ತದೆ.

ವಿಮತಾಃ ಚೇತನಾಃ ಅನ್ಯೇನ ಬುದ್ಧ್ಯಾದಿನಿಯಂತ್ರಾ ಯುಕ್ತಾಃ, ಸ್ವತಃ ಕಸ್ಯಚಿದರ್ಥಸ್ಯ ಜ್ಞಾನೇ ಅಜ್ಞಾನೇ ಸುಖೇ ದುಃಖೇ ತತ್ಪರಿಹಾರೇ ಚ ಅಸಮರ್ಥತ್ವಾತ್ । ಯೋ ಯತ್ಕರಣೇ ಸ್ವತೋ ಅಸಮರ್ಥ ಸಃ ತತ್ಕರಣೇ ಅನ್ಯನಿಯಂತ್ರ್ಯಯುಕ್ತಃ । ಯಥಾ ಸಂಪ್ರತಿಪನ್ನಃ ।

ಯಾವನು ಯಾವುದನ್ನು ಮಾಡಲು ಸ್ವಯಂ ಸಮರ್ಥನಲ್ಲವೋ ಅವನು ಅದನ್ನು ಮಾಡಲು ಇನ್ನೊಬ್ಬನನ್ನು ಅಪೇಕ್ಷಿಸುವನು. ಆದಕಾರಣ ಯಾವುದರಲ್ಲಿಯೂ ಸ್ವತಃ ಸಮರ್ಥರಲ್ಲದ ಜೀವರು ಸಮರ್ಥನಾದ ಶ್ರೀಹರಿಯ ನಿಯಮನಕ್ಕೆ ಒಳಪಟ್ಟವರು.

*ಭಗವಂತನೇ ಶ್ರೋತವ್ಯ ಜಪ್ಯವೆನ್ನಲು ಕಾರಣಾಂತರ ಹೇಳುವರು-*

**ತಸ್ಮಾತ್ಸರ್ವಾತ್ಮನಾ ರಾಜನ್ ಹರಿಃ ಸರ್ವತ್ರ ಸರ್ವದಾ ।**
**ಶ್ರೋತವ್ಯೋ ಕೀರ್ತಿತವ್ಯಶ್ಚ ಸ್ಮರ್ತವ್ಯೋ ಭಗವಾನ್ನೃಣಾಮ್ ॥ ೩೬ ॥**

**ಹೇ ರಾಜನ್** ಪರೀಕ್ಷಿತನೇ, **ತಸ್ಮಾತ್** ಯಾವಕಾರಣ ಭಗವಾನ್ ವ್ಯಾಸರು ಶ್ರೀಹರಿಯನ್ನೇ ಭಾಗವತದಲ್ಲಿ ಹೇಳಿರುವರೋ ಆ ಕಾರಣ, **ಹರಿಃ** ಶ್ರೀಹರಿಯು, **ಸರ್ವತ್ರ** ಎಲ್ಲ ಕಡೆಗಳಲ್ಲಿ, **ಸರ್ವದಾ** ಎಲ್ಲ ಕಾಲದಲ್ಲಿ, **ಸರ್ವಾತ್ಮನಾ** ಎಲ್ಲ ರೀತಿಯಿಂದ, **ನೃಣಾಂ** ಜನರಿಗೆ, **ಶ್ರೋತವ್ಯಃ** ಶ್ರವಣ ಮಾಡಲ್ಪಡುವವನು, **ಕೀರ್ತಿತವ್ಯಃ** ಕೀರ್ತನ ಮಾಡಲು ಯೋಗ್ಯನು, **ಸ್ಮರ್ತವ್ಯಃ** ಸ್ಮರಣಯೋಗ್ಯನು.

ಇಲ್ಲಿ ತಸ್ಮಾತ್ ಎಂದು ಹಿಂದೆ ಹೇಳಿದ ಯಾವ ಕಾರಣವನ್ನು ಪರಾಮರ್ಶ ಮಾಡುವರು ಎಂದು ತಿಳಿಯುವುದಿಲ್ಲ ಆದ್ದರಿಂದ ಅದನ್ನು ತಿಳಿಸುತ್ತ ಯೋಜಿಸುವರು-

ತಾತ್ಪರ್ಯ- ಯಸ್ಮಾದ್ಭಗವತಾ ಏಷ ಏವ ಉಕ್ತಃ ತಸ್ಮಾತ್ ಸ ಏವ ಶ್ರೋತವ್ಯಾದಿಃ ॥

ಯಾವ ಕಾರಣ ವೇದವ್ಯಾಸದೇವರಿಂದ ಶ್ರೀಹರಿಯೇ ಭಾಗವತದಲ್ಲಿ ಹೇಳಲ್ಪಟ್ಟಿರುವನೋ ಆದಕಾರಣ ಆ ಶ್ರೀಹರಿಯೇ ಕೇಳಲು ಹೇಳಲು ಸ್ಮರಿಸಲು ಅರ್ಹನು ಎಂದು ಭಾವ.

ಶ್ರೀಹರಿಯು ಶ್ರೋತವ್ಯಾದಿರೂಪನಾಗದಿದ್ದರೆ ಪರಮಾಪ್ತರಾದ ವ್ಯಾಸರು ಭಾಗವತದಲ್ಲಿ ಹೇಳುತ್ತಿರಲಿಲ್ಲವೆಂದು ಭಾವ. ।।೩೯।।

*ಶ್ರೀಹರಿಯ ಸ್ಮರಣೆಯಿಂದಾಗುವ ಫಲವನ್ನು ಹೇಳುವರು-*

**ಪಿಬಂತಿ ಯೇ ಭಗವತ ಆತ್ಮನಃ ಸತಾಂ**
**ಕಥಾಮೃತಂ ಶ್ರವಣಪುಟೇಷು ಸಂಭೃತಮ್ ।**
**ಪುನಂತಿ ತೇ ವಿಷಯವಿದೂಷಿತಾಶಯಂ**
**ವ್ರಜಂತಿ ತಚ್ಚರಣಸರೋರುಹಾಂತಿಕಮ್ ॥ ೪೦ ॥**

**ಯೇ** ಯಾರು, **ಸತಾಂ ಸಕಾಶಾತ್** ಸಜ್ಜನರಿಂದ, **ಶ್ರವಣಪುಟೇಷು** ಕಿವಿಗಳಲ್ಲಿ **ಸಂಭೃತಂ** ಚೆನ್ನಾಗಿ ತುಂಬಲ್ಪಟ್ಟ (ಸಜ್ಜನರಿಂದ ಶ್ರದ್ಧೆಯಿಂದ ಕೇಳಿದ ಎಂದರ್ಥ) **ಆತ್ಮನಃ** ಆದಾನಾದಿಕರ್ತೃವಾದ, **ಭಗವತಃ** ಶ್ರೀಹರಿಯ, **ಕಥಾಮೃತಂ** ಕಥೆ ಎಂಬ ಅಮೃತವನ್ನು **ಪಿಬಂತಿ** ಪಾನಮಾಡುವರೋ, **ತೇ** ಅವರು, ವಿಷಯವಿದೂಷಿತಾಶಯಂ **ಪುನಂತಿ** ವಿಷಯಗಳಿಂದ ವಿಶೇಷವಾಗಿ ಮಲಿನವಾದ ಅಂತಃಕರಣವನ್ನು ಪವಿತ್ರಗೊಳಿಸುವರು. **ತಚ್ಚರಣಸರೋರುಹಾಂತಿಕಂ ವ್ರಜಂತಿ** ಪರಮಾತ್ಮನ ಪಾದಕಮಲವನ್ನು ಹೊಂದುವರು.

**॥ ಇಲ್ಲಿಗೆ ಎರಡನೆಯ ಅಧ್ಯಾಯವು ಸಮಾಪ್ತವಾಯಿತು ॥**

# ಅಥ ತೃತೀಯೋಽಧ್ಯಾಯಃ

**ಮೂರನೆಯ ಅಧ್ಯಾಯ ಸಾರಾಂಶ**

ಆಸನ್ನಮರಣನು ಏನು ಮಾಡಬೇಕೆಂಬುದನ್ನು ಇಲ್ಲಿಯ ತನಕ ತಿಳಿಸಿದರು. ಪ್ರಸ್ತುತ ಯಾವುದನ್ನು ಮಾಡಬಾರದೆಂಬುದನ್ನು ತಿಳಿಸುತ್ತಾರೆ.

ಬ್ರಹ್ಮವರ್ಚಸ್ಸನ್ನು ಅಪೇಕ್ಷಿಸುವವನು ಬೃಹಸ್ಪತಿಯನ್ನು, ಇಂದ್ರಿಯಪಾಟವವನ್ನು ಬಯಸುವವನು ಇಂದ್ರನನ್ನು, ಮಕ್ಕಳನ್ನು ಅಪೇಕ್ಷಿಸುವವನು ಪ್ರಜಾಪತಿಗಳನ್ನು, ಧನವನ್ನು ಬಯಸುವವನು ಲಕ್ಷ್ಮೀದೇವಿಯನ್ನು, ತೇಜಸ್ಕಾಮನಾದವನು ಸೂರ್ಯನನ್ನು, ಹಣವನ್ನು ಬಯಸುವವನು ವಸುಗಳನ್ನು, ವೀರ್ಯಕಾಮನಾದವನು ರುದ್ರರನ್ನು, ಅನ್ನಾದಿಗಳನ್ನು ಬಯಸುವವನು ದೇವಮಾತೆಯಾದ ಅದಿತಿಯನ್ನು, ಸ್ವರ್ಗಕಾಮನು ದೇವತೆಗಳನ್ನು, ರಾಜ್ಯವನ್ನು ಬಯಸುವವನು, ವಿಶ್ವೇದೇವತೆಗಳನ್ನು, ಆಯುಷ್ಕಾಮ-ರಾದವರು ಅಶ್ವಿನೀದೇವತೆಗಳನ್ನು ಹೀಗೆ ಆಯಾ ಕಾಮನೆಗಳಿಂದ ಆಯಾದೇವತೆಗಳನ್ನು ಜನರು ಆರಾಧಿಸುತ್ತಾರೆ. ಈ ಕಾಮನೆಗಳು ಮೋಕ್ಷವಿರೋಧಿಗಳಾಗಿವೆ. ಮೋಕ್ಷ-ಪ್ರತಿಬಂಧಕಗಳಾಗಿವೆ. ಆದ್ದರಿಂದ ಈ ಕಾಮನೆಗಳಿದ್ದವನು ಇತರ ದೇವತೆಗಳನ್ನು ಆರಾಧಿಸಬಾರದು.

ಈ ಎಲ್ಲ ಕಾಮನೆಗಳಿದ್ದವನು ಶ್ರೀಹರಿಯನ್ನೇ ಆರಾಧಿಸಬೇಕು. ಈ ಕಾಮನೆಯಿಂದ ಶ್ರೀಹರಿಯನ್ನು ಆರಾಧಿಸುವುದು ಮೋಕ್ಷವಿರೋಧಿಯಲ್ಲ. ಈ ಕಾಮನೆಗಳಿಂದ ಅನ್ಯದೇವತೆಗಳ ಯಜನ ಮಾಡುವವರು ಕೂಡಾ ಮುಕ್ತಿಯೋಗ್ಯರಾಗಿದ್ದಲ್ಲಿ ಹರಿಭಕ್ತರ ಸಂಗತಿಯಿಂದ ಶ್ರೀಹರಿಯಲ್ಲಿ ಅಚಲವಾದ ಭಕ್ತಿಯ ಉದಯವಾಗುತ್ತದೆ. ನಂತರವೇ ಅವರಿಗೆ ಮೋಕ್ಷವು ಸಿದ್ಧಿಸುತ್ತದೆ. ಆದ್ದರಿಂದ ಶ್ರೀಹರಿಭಕ್ತಿಯೇ ಶ್ರೇಯಃಸಾಧನವಾಗಿದೆ. ಇತರವೆಲ್ಲವೂ ವ್ಯರ್ಥವೆಂದು ತಿಳಿಯಬೇಕು.

ಪರೀಕ್ಷಿತ ಶುಕಾಚಾರ್ಯರನ್ನು ಕುರಿತು ಮತ್ತೇನು ಪ್ರಶ್ನಿಸಿದ ಎಂದು ಶೌನಕರು ಕೇಳುತ್ತಾರೆ. ಕೇಳುವಾಗ ಶ್ರೀಹರಿಯ ಮಹಿಮೆಯನ್ನು ಮನತುಂಬಿ ಕೊಂಡಾಡುತ್ತಾರೆ. ಸೂರ್ಯ ಉದಯಿಸುತ್ತಾ ಅಸ್ತಂಗತನಾಗುತ್ತಾ ಜೀವರಾಶಿಗಳ ಆಯುಷ್ಯವನ್ನು ಹರಣಮಾಡುತ್ತಾನೆ. ಶ್ರೀಹರಿಯ ಸೇವೆಯಲ್ಲಿ ಯಾರು ಕ್ಷಣಕ್ಷಣಗಳನ್ನು ಕಳೆಯುವುದಿಲ್ಲವೋ ಆ ಕ್ಷಣಲವಾದಿಕಾಲವು ವ್ಯರ್ಥವೇ. ಆ ಕ್ಷಣವನ್ನು ಹರಿಸ್ಮರಣಯುಕ್ತವಾಗುವಂತೆ ಮಾಡಲು ಸರ್ವಥಾ ಸಾಧ್ಯವಿಲ್ಲ. ಬದುಕುವುದು ಮನುಷ್ಯನ ಸಾರ್ಥಕವಾದ ಕಾರ್ಯವಲ್ಲ. ವೃಕ್ಷಾದಿಗಳೂ ಬದುಕುತ್ತವೆ. ಕಮ್ಮಾರನ ತಿದಿಯೂ ಶ್ವಾಸೋಚ್ಛ್ವಾಸ ಮಾಡುತ್ತದೆ. ಆಹಾರ-ನಿದ್ರಾ-ಭಯ-ಮೈಥುನ ಇವೆಲ್ಲವೂ ಮನುಷ್ಯರಂತೆ ಪಶುಗಳಿಗೂ ಸಮಾನ. ಯಾವ ಮನುಷ್ಯ ಶ್ರೀಹರಿಯನ್ನು ಚಿಂತಿಸುತ್ತಾನೋ ಅವನೇ ವಿಶಿಷ್ಟನಾಗುತ್ತಾನೆ. ಇದುವೇ ಮನುಷ್ಯರು ಮಾಡಬೇಕಾದ ಕಾರ್ಯ. ಶ್ರೀಹರಿಯ ಮಹಿಮೆಯನ್ನು ಕೇಳದ ಕಿವಿಗಳು ಬಿಲಗಳಿಗೆ ಸಮಾನ. ಶ್ರೀಹರಿಯ ನಾಮಗಳನ್ನು ಉಚ್ಚರಿಸದ ನಾಲಿಗೆ ಕಪ್ಪೆಗಳ ನಾಲಿಗೆಯಂತೆ. ಅವನ ಯಾವ ಅವಯವವೂ ಪ್ರಯೋಜಕವಲ್ಲ. ಅಪ್ರಯೋಜಕ. ಆದ್ದರಿಂದ ಎಲ್ಲ ಅವಯವಗಳಿಂದ ಶ್ರೀಹರಿಯ ಕಾರ್ಯಗಳಾಗುವಂತೆ ಮನುಷ್ಯನು ಅಭ್ಯಾಸ ಮಾಡಬೇಕು. ಆದ್ದರಿಂದ ಹೇ ಸೂತಾಚಾರ್ಯರೇ ! ಪರೀಕ್ಷಿತಮಹಾರಾಜ ಶುಕಾಚಾರ್ಯರಿಗೆ ಮತ್ತೇನನ್ನು ಕೇಳಿದ. ಅದನ್ನು ಹೇಳಿರಿ. ಎಂದು ಶೌನಕಾದಿಗಳು ಪ್ರಶ್ನಿಸಿದರು.

ಶ್ರೀ ಶುಕ ಉವಾಚ-

**ಏವಮೇತನ್ನಿಗದಿತಂ ಪೃಷ್ಟವಾನ್ ಯದ್ಭವಾನ್ಮಮ ।**
**ನೃಣಾಂ ಯತ್ಮ್ರಿಯಮಾಣಾನಾಂ ಮನುಷ್ಯೇಷು ಮನೀಷಿಣಾಮ್ ॥೧॥**

**ಭವಾನ್** ನೀನು, **ಮಮ** ನನ್ನನ್ನು, **ಮನುಷ್ಯೇಷು** ಮನುಷ್ಯರ ಮಧ್ಯದಲ್ಲಿ, **ಮನೀಷಿಣಾಂ** ಬುದ್ಧಿವಂತರಾದವರ ಮಧ್ಯದಲ್ಲಿ, ಮ್ರಿಯಮಾಣಾನಾಂ **ನೃಣಾಂ** ಸಾಯಲು ಹೊರಟ ಜನರ, **ಯತ್ ಪೃಷ್ಟವಾನ್** ಕರ್ತವ್ಯ ಏನೆಂದು ಪ್ರಶ್ನಿಸಿದ್ದಿಯೋ **ಏತತ್** ಅದಕ್ಕೆ ಉತ್ತರವನ್ನು, **ಏವಂ** ಹಿಂದೆ ಹೇಳಿದಂತೆ, **ನಿಗದಿತಂ** ನನ್ನಿಂದ ಹೇಳಲ್ಪಟ್ಟಿತು.

*ಈಗ 'ಬ್ರೂಹಿ ಯದ್ವಾ ವಿಪರ್ಯಯಂ' ಎಂದು ಯಾವುದನ್ನು ಮುಮುಕ್ಷುವಾದವನು ಮೋಕ್ಷವಿರೋಧಿಯಾದ್ದರಿಂದ ಬಿಡಬೇಕೋ ಯಾವುದು ತುಚ್ಛಫಲಕವೋ ರಾಜನು ಕೇಳಿದ ಅಂತಹ ಶ್ರೋತವ್ಯಾದಿಗಳನ್ನು ತಿಳಿಸುವರು-*

**ಬ್ರಹ್ಮವರ್ಚಸಕಾಮಸ್ತು ಯಜೇತ ಬ್ರಹ್ಮಣಸ್ಪತಿಮ್ ।**
**ಇಂದ್ರಮಿಂದ್ರಿಯಕಾಮಸ್ತು ಪ್ರಜಾಕಾಮಃ ಪ್ರಜಾಪತೀನ್ ॥ ೨ ॥**

**ಬ್ರಹ್ಮವರ್ಚಸಕಾಮಃ ತು** ವೇದಾಧ್ಯಯನದಿಂದ ಉಂಟಾಗುವ ವಿಶೇಷವಾದ ವರ್ಚಸ್ಸನ್ನು ಇಚ್ಛಿಸುವವನು, **ಬ್ರಹ್ಮಣಸ್ಪತಿಂ** ವೇದಪತಿಗಳಾದ ವಾಯುದೇವರನ್ನು **ಯಜೇತ** ಆ ತಂತ್ರದಲ್ಲಿ ಹೇಳಿದ ದ್ರವ್ಯಗಳಿಂದ ಪೂಜಿಸಬೇಕು. **ಇಂದ್ರಿಯಕಾಮಃ** ಚಕ್ಷುರಾದಿಇಂದ್ರಿಯಗಳ ಸಾಮರ್ಥ್ಯವನ್ನಿಚ್ಛಿಸುವವನು, ಅಥವಾ ಶುಕ್ರಸ್ತಂಭನವನ್ನು ಇಚ್ಛಿಸುವವನು, **ಇಂದ್ರಂ** ಇಂದ್ರನನ್ನು **ಪ್ರಜಾಕಾಮಃ** ಮಕ್ಕಳನ್ನಿಚ್ಛಿಸುವವನು, **ಪ್ರಜಾಪತೀನ್** ದಕ್ಷ-ಕಶ್ಯಪ ಮೊದಲಾದವರನ್ನು **ಯಜೇತ** ಪೂಜಿಸಬೇಕು. (ವಿಜಯಧ್ವಜರು ಇಲ್ಲಿ ಬ್ರಹ್ಮಣಸ್ಪತಿ ಎಂದರೇ ಬೃಹಸ್ಪತಿ ಎಂದು ಅರ್ಥ ಹೇಳಿದ್ದಾರೆ.) ॥೨॥

**ದೇವೀಂ ಮಾಯಾಂ ತು ಶ್ರೀಕಾಮಸ್ತೇಜಸ್ಕಾಮೋ ವಿಭಾವಸುಮ್ ।**
**ವಸುಕಾಮೋ ವಸೂನ್ ರುದ್ರಾನ್ ವೀರ್ಯಕಾಮಸ್ತು ವೀರ್ಯದಾನ್ ॥ ೩ ॥**

**ಶ್ರೀಕಾಮಃ** ಸಂಪತ್ತನ್ನು ಅಪೇಕ್ಷಿಸುವವನು, **ದೇವೀಂ ಮಾಯಾಂ** ಲಕ್ಷ್ಮೀದೇವಿಯನ್ನು **ತೇಜಸ್ಕಾಮಃ** ಶರೀರಕಾಂತಿಯನ್ನು ಅಪೇಕ್ಷಿಸುವವನು, **ವಿಭಾವಸುಂ** ಅಗ್ನಿಯನ್ನು **ವಸುಕಾಮಃ** ಧನಾಪೇಕ್ಷಿಯು, **ವಸೂನ್** ವಸುಗಳನ್ನು, **ವೀರ್ಯಕಾಮಃ** ಪರಾಕ್ರಮಾಪೇಕ್ಷಿಯು, **ವೀರ್ಯದಾನ್ ರುದ್ರಾನ್** ಪರಾಕ್ರಮವನ್ನು ಕೊಡುವ ರುದ್ರರನ್ನು **ಯಜೇತ** ಪೂಜಿಸಬೇಕು.

ಹೀಗೆ ಬೇರೇ ಬೇರೇ ಉದ್ದೇಶದಿಂದ ದೇವತೆಗಳನ್ನು ಪೂಜಿಸುವಾಗಲೂ ಬ್ರಹ್ಮಾರ್ಪಣಬುದ್ಧಿ ಇರಬೇಕೆಂದು ತು ಶಬ್ದದಿಂದ ಸೂಚಿಸುವರು. ॥ ೩ ॥

**ಅನ್ನಾದ್ಯಕಾಮಸ್ತ್ವದಿತಿಂ ಸ್ವರ್ಗಕಾಮೋಽದಿತೇಃ ಸುತಾನ್ ।**
**ವಿಶ್ವಾನ್ ದೇವಾನ್ ರಾಷ್ಟ್ರಕಾಮಃ ಸಾಧ್ಯಾನ್ ಸಂಸಾಧಕೋ ವಿಶಾಮ್ ॥೪॥**

**ಅನ್ನಾದ್ಯಕಾಮಃ** ಭಕ್ಷ್ಯಭೋಜ್ಯಾಪೇಕ್ಷಿಯು, **ಅದಿತಿಂ** ದೇವತೆಗಳ ತಾಯಿಯಾದ ಅದಿತಿದೇವಿಯನ್ನು **ಸ್ವರ್ಗಕಾಮಃ** ಸ್ವರ್ಗಾಪೇಕ್ಷಿಯು **ಅದಿತೇಃ ಸುತಾನ್** ಆದಿತ್ಯರನ್ನು **ರಾಷ್ಟ್ರಕಾಮಃ** ರಾಷ್ಟ್ರಾಪೇಕ್ಷಿಯು, **ವಿಶ್ವಾನ್ ದೇವಾನ್** ವಿಶ್ವೇದೇವತೆಗಳನ್ನು **ವಿಶಾಂ ಸಂಸಾಧಕಃ** ದೇಶದಲ್ಲಿಯ ಪ್ರಜರನ್ನು ಸ್ವಾಧೀನಮಾಡಿಕೊಳ್ಳಲಪೇಕ್ಷಿಸುವವನು, **ಸಾಧ್ಯಾನ್** ಸಾಧ್ಯರನ್ನು **ಯಜೇತ** ಪೂಜಿಸಬೇಕು ॥೪॥

**ಆಯುಷ್ಕಾಮೋಽಶ್ವಿನೌ ದೇವೌ ಪುಷ್ಟಿಕಾಮ ಇಲಾಂ ಯಜೇತ್ ।**
**ಪ್ರತಿಷ್ಠಾಕಾಮಃ ಪುರುಷೋ ರೋದಸೀ ಲೋಕಮಾತರೌ ॥೫॥**

**ಆಯುಷ್ಕಾಮಃ** ಆಯುಷ್ಯಾಪೇಕ್ಷಿಯು, **ಅಶ್ವಿನೌ** ಅಶ್ವಿನೀದೇವತೆಗಳನ್ನು, **ಪುಷ್ಟಿಕಾಮಃ** ಸಮೃದ್ಧಿಯನ್ನು ಅಪೇಕ್ಷಿಸುವವನು, **ಇಲಾಂ** ಭೂಮಿಯನ್ನು, **ಪ್ರತಿಷ್ಠಾಕಾಮಃ** ಸ್ಥಾನ ಪಲ್ಲಟವಾಗಬಾರದೆಂದು ಇಚ್ಛಿಸುವವನು, **ಲೋಕಮಾತರೌ** ಜಗತ್ತಿನ ತಂದೆ ತಾಯಿ ಎನಿಸಿದ, **ರೋದಸೀ** ದ್ಯಾವಾ-ಪೃಥಿವಿಗಳನ್ನು **ಯಜೇತ** ಪೂಜಿಸಬೇಕು. ಪೃಥಿವೀ ಎಂದರೇ ತಾಯಿ ಎಂದು ದ್ಯೌ ಎಂದರೇ ತಂದೆ ಎಂದು ಅರ್ಥವನ್ನು ತಿಳಿಯಬೇಕು. ।।೫।।

**ರೂಪಾಽಭಿಕಾಮೋ ಗಂಧರ್ವಾನ್ ಸ್ತ್ರೀಕಾಮೋಽಪ್ಸರ ಉರ್ವಶೀಮ್ ।**
**ಆಧಿಪತ್ಯಕಾಮಃ ಸರ್ವೇಷಾಂ ಯಜೇತ ಪರಮೇಷ್ಠಿನಮ್ ।। ೬ ।।**

**ರೂಪಾಭಿಕಾಮಃ** ಸೌಂದರ್ಯಾಪೇಕ್ಷಿಯು, **ಗಂಧರ್ವಾನ್** ಗಂಧರ್ವರನ್ನು, **ಸ್ತ್ರೀಕಾಮಃ** ಹೆಂಡತಿಯನ್ನು ಅಪೇಕ್ಷಿಸುವವನು, **ಅಪ್ಸರ ಊರ್ವಶೀಂ** ಅಪ್ಸರೆಯಾದ ಊರ್ವಶಿಯನ್ನು, ಸರ್ವೇಷಾಂ **ಆಧಿಪತ್ಯಕಾಮಃ** ಎಲ್ಲರಿಗೆ ಅಧಿಪತಿಯಾಗಬೇಕೆಂದು ಅಪೇಕ್ಷಿಸುವವನು, **ಪರಮೇಷ್ಠಿನಂ** ಚತುರ್ಮುಖನನ್ನು **ಯಜೇತ** ಪೂಜಿಸಬೇಕು. ।।೬।।

**ಯಜ್ಞಂ ಯಜೇದ್ಯಶಸ್ಕಾಮಃ ಕೋಶಕಾಮಃ ಪ್ರಚೇತಸಮ್ ।**
**ವಿದ್ಯಾಕಾಮಸ್ತು ಗಿರಿಶಂ ದಾಂಪತ್ಯಾರ್ಥ ಉಮಾಂ ಸತೀಂ ।।೭।।**

**ಯಶಸ್ಕಾಮಃ** ಕೀರ್ತಿಯ ಅಪೇಕ್ಷಿಯು, **ಯಜ್ಞಂ** ಯಜ್ಞಾಭಿಮಾನಿಯಾದ ಇಂದ್ರನ ಮಗನಾದ ಜಯಂತನನ್ನು, **ಕೋಶಕಾಮಃ** ನಿಧಿಯನ್ನು ಅಪೇಕ್ಷಿಸುವವನು, **ಪ್ರಚೇತಸಂ** ವರುಣನನ್ನು, **ವಿದ್ಯಾಕಾಮಃ** ಜ್ಞಾನಾಪೇಕ್ಷಿಯು, **ಗಿರಿಶಂ** ದಕ್ಷಿಣಾಮೂರ್ತಿಯನ್ನು, (ರುದ್ರದೇವರನ್ನು) 'ನಿತ್ಯಶೋ ದಕ್ಷಿಣಾಮೂರ್ತಿಂ ಧ್ಯಾಯೇತ್ ಸಾಧಕಸತ್ತಮಃ । ಶಾಸ್ತ್ರವ್ಯಾಖ್ಯಾನಸಾಮರ್ಥ್ಯಂ ಲಭತೇ ವತ್ಸರಾಂತರೇ' **ದಾಂಪತ್ಯಾರ್ಥೇ** ಅಖಂಡಿತ ದಾಂಪತ್ಯಕ್ಕಾಗಿ, **ಸತೀಂ ಉಮಾಂ** ಸಾಧ್ವಿಯಾದ ಪಾರ್ವತಿಯನ್ನು, **ಯಜೇತ್** ಪೂಜಿಸಬೇಕು. ।।೭।।

**ಧರ್ಮಾರ್ಥಮುತ್ತಮಶ್ಲೋಕಂ ತಂತುಂ ತನ್ವನ್ ಪಿತೃನ್ ಯಜೇತ್ ।**
**ರಕ್ಷಾಕಾಮಃ ಪುಣ್ಯಜನಾನೋಜಸ್ಕಾಮೋ ಮರುದ್ಗಣಾನ್ ।। ೮ ।।**

**ಧರ್ಮಾರ್ಥಂ** ಇಷ್ಟಾಪೂರ್ತ ಮುಂತಾದ ಪ್ರವೃತ್ತಧರ್ಮ ಮಾಡುವುದಕ್ಕಾಗಿ (ಇಷ್ಟ ಯಜ್ಞ, ಪೂರ್ತ ಅರವಟ್ಟಿಗೆ ಬೇಸಿಗೆಯಲ್ಲಿ ಮಾರ್ಗದಲ್ಲಿ ನೀರು-ಮಜ್ಜಿಗೆ

ಮುಂತಾದವನ್ನು ಕೊಡುವುದು) **ಉತ್ತಮಶ್ಲೋಕಂ** ಧರ್ಮವಿಷಯದಲ್ಲಿ ಉತ್ತಮರಿಂದ ಹೇಳಲ್ಪಡುವ ಯಮಧರ್ಮನನ್ನು, **ತಂತುಂ ತನ್ವನ್** ಸಂತಾನಾಭಿವೃದ್ಧಿಯನ್ನು ಬಯಸುವವನು, **ಪಿತೄನ್** ಪಿತೃದೇವತೆಗಳನ್ನು, **ರಕ್ಷಾಕಾಮಃ** ರಕ್ಷೆಯನ್ನಿಚ್ಛಿಸುವವನು, **ಪುಣ್ಯಜನಾನ್** ಮಣಿಭದ್ರ ಮುಂತಾದ ಯಕ್ಷರನ್ನು, **ಓಜಸ್ಕಾಮಃ** ಬಲಾಪೇಕ್ಷಿಯು, **ಮರುದ್ಗಣಾನ್** ಮರುತ್ತಗಳನ್ನು **ಯಜೇತ್** ಪೂಜಿಸಬೇಕು. ॥ ೮ ॥

**ರಾಜ್ಯಕಾಮೋ ಮನೂನ್ ದೇವಾನ್ ನಿಋತಿಂ ತ್ವಭಿಚರನ್ಯಜೇತ್ ।**
**ಗ್ರಾಮಕಾಮಃ ಯಜೇತ್ಸೋಮಮಕಾಮಃ ಪುರುಷಂ ಪುಮಾನ್** ॥ ೯ ॥

**ರಾಜ್ಯಕಾಮಃ** ರಾಜ್ಯಾಪೇಕ್ಷಿಯು, **ಮನೂನ್ ದೇವಾನ್** ಮನುಗಳನ್ನು ದೇವತೆಗಳನ್ನು **ಅಭಿಚರನ್** ಶತ್ರುಸಂಹಾರಾಪೇಕ್ಷಿಯು, **ನಿಋತಿಂ** ನಿಋತಿ ಎಂಬ ವಿದಿಕ್ಕಿಗೆ ಪಾಲಕನಾದವನನ್ನು, **ಗ್ರಾಮಕಾಮಃ** ಗ್ರಾಮಾಪೇಕ್ಷಿಯು, **ಸೋಮಂ** ಚಂದ್ರನನ್ನು, **ಅಕಾಮಃ ಪುಮಾನ್** (ಇಲ್ಲಿ ನಞಗೆ ಅನ್ಯ ಮತ್ತು ವಿರುದ್ಧ ಎಂದು ಅರ್ಥವಿದ್ದದ್ದರಿಂದ) ಪೂರ್ವೋಕ್ತವಾದ ಕಾಮನೆಗಳಿಂದ ಭಿನ್ನವಾದ ಮೋಕ್ಷವಿರೋಧಿಯಾದ ಜಯ ಮೊದಲಾದವುಗಳನ್ನು ಅಪೇಕ್ಷಿಸುವವನು, **ಪುರುಷಂ** ಬ್ರಹ್ಮನನ್ನು ಅಥವಾ ರುದ್ರನನ್ನು ಭಜಿಸಬೇಕು ಎಂದರ್ಥ.

ಹಿಂದಿನ ಶ್ಲೋಕದಲ್ಲಿ ಉತ್ತಮಶ್ಲೋಕ ಎಂಬ ಶಬ್ದವಾಗಲಿ ಇಲ್ಲಿ ಪುರುಷ ಎಂಬ ಶಬ್ದವಾಗಲಿ ಮುಂದಿನ ಸ್ಕಾಂದವಚನದಂತೆ ವಿಷ್ಣುಪರ ಏಕಲ್ಲ ಎಂದು ಶಂಕಿಸಬಾರದು. ಕಾಮ್ಯವಾದ ಅನ್ಯದೇವತಾಯಜನವನ್ನು ಹೇಳುವ ಪ್ರಕರಣದ ವಿರೋಧ ಬರುವುದು. ಪ್ರಮಾಣದಲ್ಲಿಯ ಅಕಾಮಧರ್ಮ ಶಬ್ದಾರ್ಥವೇ ಬೇರೆ ಇವೆ. ಇಲ್ಲಿ ಆ ಅರ್ಥ ಅಲ್ಲ.

ತುಚ್ಛವಾದ ಒಂದೊಂದೇ ಫಲಕೊಡುವ ಅನ್ಯದೇವತೆಗಳ ಯಜನವು ಹೇಯವಾಗಿದೆ ಎನ್ನುವುದನ್ನು ತಿಳಿಸಲು ಆ ಯಜನಗಳನ್ನು ತಿಳಿಸಿ, ಪ್ರಕೃತ ಎಲ್ಲ ಪುರುಷಾರ್ಥಗಳನ್ನು ನೀಡುವುದರಿಂದ ಶ್ರೀಹರಿಯನ್ನೇ ಎಲ್ಲರೂ ಯಜಿಸಬೇಕು ಎಂದು ಹೇಳುವರು-

**ಅಕಾಮಃ ಸರ್ವಕಾಮೋ ವಾ ಮೋಕ್ಷಕಾಮ ಉದಾರಧೀಃ ।**
**ತೀವ್ರೇಣ ಭಕ್ತಿಯೋಗೇನ ಯಜೇತ ಪುರುಷಂ ಪರಮ್** ॥ ೧೦ ॥

**ಅಕಾಮಃ** ಅಕಾರವಾಚ್ಯ ಪರಮಾತ್ಮನನ್ನು ಮಾತ್ರ ಇಚ್ಛಿಸುವ ಏಕಾಂತ ಭಕ್ತನು, (**ಧರ್ಮಕಾಮಃ** ನಿವೃತ್ತಧರ್ಮಾನುಷ್ಠಾನಾಪೇಕ್ಷಿಯು) **ಸರ್ವಕಾಮಃ** ಹಿಂದೆ ಹೇಳಿದ ಹೇಳದ

ಎಲ್ಲ ಫಲಾಪೇಕ್ಷೆಯು, **ಪರಂ ಪುರುಷಂ** ಸರ್ವೋತ್ತಮನಾದ ಶ್ರೀಹರಿಯನ್ನು **ತೀವ್ರೇಣ ಭಕ್ತಿಯೋಗೇನ** ಅನನ್ಯಸಾಧಾರಣವಾದ ಭಕ್ತಿರೂಪ ಜ್ಞಾನೋಪಾಯದಿಂದ **ಯಜೇತ** ಪೂಜಿಸಬೇಕು.

ಈ ಶ್ಲೋಕದಲ್ಲಿ ಹೇಳಿದ ಪುರುಷ ಯಾರೆಂದು ಸಮಾಖ್ಯಾಸ್ಮೃತಿಯಿಂದಲೇ ವ್ಯಾಖ್ಯಾನಿಸುವರು-

**ತಾತ್ಪರ್ಯ- ಅಕಾಮೋ ಧರ್ಮಕಾಮೋ ವಾ ಮೋಕ್ಷಕಾಮೋऽಪಿ ಯೋ ಭವೇತ್ ।**
**ಅಥವಾ ಸರ್ವಕಾಮೋ ಯಃ ಸ ಎಷ್ಣುಂ ಪುರುಷಂ ಯಜೇತ್ ॥ -ಇತಿ ಸ್ಕಾಂದೇ**

ಶ್ರೀಹರಿಯನ್ನು ಮಾತ್ರ ಇಚ್ಛಿಸುವ ಏಕಾಂತಭಕ್ತನು ನಿವೃತ್ತಧರ್ಮಗಳನ್ನು ಇಚ್ಛಿಸುವವನೂ ಮೋಕ್ಷವನ್ನು ಇಚ್ಛಿಸುವವನು ಅಥವಾ ಸರ್ವಾಭೀಷ್ಟಗಳನ್ನು ಇಚ್ಛಿಸುವವನು ಗುಣ ಪೂರ್ಣನಾದ ಕಾರಣಪುರುಷನೆನಿಸಿದ ವಿಷ್ಣುವನ್ನು ಪೂಜಿಸಬೇಕು ಎಂದು ಸ್ಕಾಂದದಲ್ಲಿದೆ.

*ಅನ್ಯದೇವತೆಗಳನ್ನು ಆರಾಧಿಸುವ ತ್ರೈವಿದ್ಯರು ಮೋಕ್ಷಯೋಗ್ಯರಾಗಿದ್ದರೇ ಭಗವದ್ಭಕ್ತರ ಸಂಗದಿಂದ ಅವರನ್ನು ಬಿಟ್ಟು ಪರಮಾತ್ಮನನ್ನು ಭಜಿಸಿದಾಗಲೇ ಮೋಕ್ಷವಾಗುವುದು ಎಂದು ಹೇಳುವರು-*

**ಏತಾವಾನೇವ ಯಜತಾಮಿಹ ನಿಃಶ್ರೇಯಸೋದಯಃ ।**
**ಭಗವತ್ಯಚಲೋ ಭಾವೋ ಯದ್ಭಾಗವತಸಂಗತಃ ॥ ೧೧ ॥**

**ಇಹ** ಈ ಕರ್ಮಭೂಮಿಯಲ್ಲಿ **ಯಜತಾಂ** ಕಾಮ್ಯಕರ್ಮಾನುಷ್ಠಾನ ಮಾಡುವ ತ್ರೈವಿದ್ಯರಿಗೆ, **ಭಾಗವತಸಂಗತಃ** ಭಗವದ್ಭಕ್ತರಿಂದ ಹೇಳಲ್ಪಟ್ಟ ಹರಿಕಥಾರೂಪವಾದ ಸಂಗದಿಂದ, **ಭಗವತಿ** ಶ್ರೀಹರಿಯಲ್ಲಿ **ಅಚಲೋ ಭಾವಃ ಭವತಿ** ನಿಶ್ಚಲವಾದ ಭಕ್ತಿಯು ಉಂಟಾಗುವುದು ಎಂಬುದು, **ಯತ್** ಏನಿದೆಯೋ, **ಏತಾವಾನೇವ** ಅದೇ, **ನಿಃಶ್ರೇಯಸೋದಯಃ** ಪರಮಪುರುಷಾರ್ಥದ ಲಾಭವು. ಉಳಿದುದೆಲ್ಲ ತುಚ್ಛ ಎಂದರ್ಥ. ॥೧೧॥

*ಹೇಳಿದ ಭಾಗವತಸಂಗವು ಅಚಲವಾದ ಭಕ್ತಿಗೆ ಪರಂಪರಯಾ ಜನಕವೆಂದು ತಿಳಿಸುತ್ತ ಭಾಗವತಸಂಗಪದದಿಂದ ಸೂಚಿತವಾದ ಹರಿಕಥಾರತಿಯನ್ನು ಸ್ತುತಿಸುವರು-*

**ಜ್ಞಾನಂ ಯದಾऽऽಪ್ರತಿನಿವೃತ್ತಗುಣೋರ್ಮಿಚಕ್ರ-**
**ಮಾತ್ಮಪ್ರಸಾದ ಉಭಯತ್ರ ಗುಣೇಷ್ವಸಂಗಃ ।**
**ಕೈವಲ್ಯಸಂಭೃತಪಥಸ್ತ್ವಥ ಭಕ್ತಿಯೋಗಃ**
**ಕೋ ನಿರ್ವೃತೋ ಹರಿಕಥಾಸು ರತಿಂ ನ ಕುರ್ಯಾತ್ ॥ ೧೨ ॥**

**ಯತ್** ಯಾವ ಕಥೆಗಳನ್ನು ಕೇಳುವುದರಿಂದ, **ಆಪ್ರತಿನಿವೃತ್ತಗುಣೋರ್ಮಿಚಕ್ರಂ** ಎಲ್ಲಕಡೆಯಿಂದ ಉಪರತವಾದ ಸತ್ತ್ವಾದಿಗುಣಗಳೆಂಬ ತರಂಗಗಳ ಸಮೂಹವುಳ್ಳ (ಸತ್ತ್ವಾದಿಗುಣನಾಶಕವಾದ) **ಜ್ಞಾನಂ** ಜ್ಞಾನವಾಗುವುದು ನಂತರ, **ಆತ್ಮಪ್ರಸಾದಃ** ಮನಸ್ಸಿಗೆ ನೈರ್ಮಲ್ಯ ಉಂಟಾಗುವುದು ನಂತರ, **ಉಭಯತ್ರ** ಇಹ-ಪರಗಳಲ್ಲಿ ಇರುವ, **ಗುಣೇಷು** ವಿಷಯಗಳಲ್ಲಿ, **ಅಸಂಗಃ** ವೈರಾಗ್ಯವು ಉಂಟಾಗುವುದು, **ಅಥ** ನಂತರ, **ಕೈವಲ್ಯ ಸಂಭೃತಪಥಃ** ಮೋಕ್ಷಕ್ಕಾಗಿ ಸಂಪಾದಿತವಾದ ಅಪರೋಕ್ಷ ಜ್ಞಾನವೆಂಬ ಮಾರ್ಗಜನಕವಾದ, **ಭಕ್ತಿಯೋಗಃ** ಭಕ್ತಿ ಎಂಬ ಉಪಾಯವು ಉಂಟಾಗುವುದು, **ನಿರ್ವೃತಃ** ಹರಿಕಥಾಶ್ರವಣದ ಸುಖವನ್ನು ತಿಳಿದವನು ಅಥವಾ **(ಅನಿರ್ವೃತಃ)** ವಿಷಯಗಳಲ್ಲಿ ಸುಖಪಡೆಯದ, **ಕಃ ರತಿಂ ನ ಕುರ್ಯಾತ್** ಯಾವನು ತಾನೇ, **ಹರಿಕಥಾಸು** ಅಂಥ ಹರಿಕಥೆಯಲ್ಲಿ ಮನಸು ಮಾಡಲಾರ. ಎಲ್ಲರೂ ಮಾಡುವರೇ. ॥೧೨॥

**ಶೌನಕ ಉವಾಚ-**

**ಇತ್ಯಭಿವ್ಯಾಹೃತಂ ರಾಜಾ ನಿಶಮ್ಯ ಭರತರ್ಷಭಃ ।**
**ಕಿಮನ್ಯತ್ಪೃಷ್ಟವಾನ್ ಭೂಯೋ ವೈಯಾಸಕಿಮೃಷಿಂ ಕವಿಮ್ ॥ ೧೩ ॥**

**ರಾಜಾ** ಪರೀಕ್ಷಿತನು, **ಇತಿ ಅಭಿವ್ಯಾಹೃತಂ** ಈ ರೀತಿ ಹೇಳಿದ್ದನ್ನು, **ನಿಶಮ್ಯ** ಕೇಳಿ, **ಭರತರ್ಷಭಃ** ಭರತಕುಲಶ್ರೇಷ್ಠನು, **ಭೂಯಃ** ಮತ್ತೆ, **ಋಷಿಂ** ಬ್ರಹ್ಮಜ್ಞಾನಿಯಾದ, **ಕವಿಂ** ವೇದಜ್ಞನಾದ, **ವೈಯಾಸಕಿಂ** ವ್ಯಾಸಪುತ್ರರಾದ ಶುಕಾಚಾರ್ಯರನ್ನು, **ಕಿಂ ಅನ್ಯತ್ ಪೃಷ್ಟವಾನ್** ಬೇರೇ ಏನನ್ನು ಕೇಳಿದನು. ॥೧೩॥

**ಏತಚ್ಛುಶ್ರೂಷತಾಂ ವಿದ್ವನ್ ಸೂತ ನೋऽರ್ಹಸಿ ಭಾಷಿತುಮ್ ।**
**ಕಥಾ ಹರಿಗುಣೋದಾರಾಃ ಸತಾಂ ಸ್ಯುಃ ಸದಸಿ ಧ್ರುವಮ್ ॥ ೧೪ ॥**

**ಹೇ ವಿದ್ವನ್ ಸೂತ** ಜ್ಞಾನಿಯಾದ ಸೂತಾಚಾರ್ಯನೇ, **ಏತತ್** ಶ್ರೀಹರಿಕಥಾವನ್ನು, **ಶುಶ್ರೂಷತಾಂ** ಕೇಳಲಿಚ್ಛಿಸುವ, **ನಃ** ನಮಗೆ, **ಭಾಷಿತುಂ** ಶುಕ-ಪರೀಕ್ಷಿತರ

ಪ್ರಶ್ನೋತ್ತರಗಳನ್ನು ಹೇಳಲು, **ಅರ್ಹಸಿ** ಯೋಗ್ಯನಾಗಿರುವಿ. **ಸತಾಂ ಸದಸಿ** ಸಜ್ಜನರ ಸಭೆಯಲ್ಲಿ, **ಧ್ರುವಂ** ನಿಶ್ಚಯವಾಗಿ **ಹರಿಗುಣೋದಾರಾಃ ಕಥಾಃ ಸ್ಯುಃ** ಶ್ರೀಹರಿಯ ಗುಣಗಳಿಂದ ಉತ್ಕೃಷ್ಟವಾದ ಕಥೆಗಳು ಇರುವವು. ।।೧೪।।

*ಇಬ್ಬರಲ್ಲಿ ಯಾರಾದರೂ ಒಬ್ಬರು ಅಸಜ್ಜನನಾದರೆ ನಿಯಮಭಂಗವಾಗುವುದಲ್ಲ ಆದರೇ ಪ್ರಕೃತ ಹಾಗಿಲ್ಲವೆಂದು ಹೇಳುವರು-*

**ಸ ವೈ ಭಾಗವತೋ ರಾಜಾ ಪಾಂಡವೇಯೋ ಮಹಾರಥಃ ।**
**ಬಾಲಃ ಕ್ರೀಡನಕೈಃ ಕ್ರೀಡನ್ ಕೃಷ್ಣಕ್ರಿಡಾಂ ಯ ಆದದೇ ।। ೧೫ ।।**

**ಮಹಾರಥಃ** ಮಹಾರಥಿಕನಾದ, **ಪಾಂಡವೇಯಃ** ಪಾಂಡವರ ಮೊಮ್ಮಗನಾದ, **ಸಃ ರಾಜಾ** ಪರೀಕ್ಷಿತನು, **ಭಾಗವತಃ** ಭಗವದ್ಭಕ್ತನು, **ಬಾಲಃ** ಚಿಕ್ಕವನಾಗಿದ್ದಾಗ, **ಕ್ರೀಡನಕೈಃ ಕ್ರೀಡನ್** ಆಟಿಗೆಗಳಿಂದ ಆಡುವಾಗ, **ಕೃಷ್ಣಕ್ರೀಡಾಂ** ಶ್ರೀಕೃಷ್ಣನ ಪೂಜಾರೂಪವಾದ ಆಟವನ್ನೇ, **ಯಃ** ಯಾವನು **ಆದದೇ** ಸ್ವೀಕರಿಸಿದನು. ।।೧೫।।

**ವೈಯಾಸಕಿಶ್ಚ ಭಗವಾನ್ ವಾಸುದೇವಪರಾಯಣಃ ।**
**ಉರುಗಾಯಗುಣೋದಾರಾಃ ಸತಾಂ ಸ್ಯುರ್ಹಿ ಸಮಾಗಮೇ ।। ೧೬ ।।**

**ಭಗವಾನ್ ವೈಯಾಸಕಿಶ್ಚ** ಪೂಜ್ಯರಾದ ಶುಕಾಚಾರ್ಯರೂ ಸಹ, **ವಾಸುದೇವಪರಾಯಣಃ** ಶ್ರೀಹರಿಯಲ್ಲಿಯೇ ಆಸಕ್ತರಾದವರು, **ಸತಾಂ ಸಮಾಗಮೇ** ಇಬ್ಬರು ಸಜ್ಜನರು ಸೇರಿದಾಗ, **ಉರುಗಾಯಗುಣೋದಾರಾಃ ಕಥಾಃ ಸ್ಯುಃ ಹಿ** ಬ್ರಹ್ಮಾದಿಗಳಿಂದ ಗಾನಮಾಡಲ್ಪಡುವ ಶ್ರೀಹರಿಯ ಗುಣಪ್ರತಿಪಾದಕವಾದ ಉತ್ಕೃಷ್ಟವಾದ ಕಥೆಗಳು ನಡೆದೇ ನಡೆಯುತ್ತವಷ್ಟೇ. ।।೧೬।।

*ವ್ಯರ್ಥವಾಗಿ ಕ್ಷೀಣವಾಗುವ ಆಯುಷ್ಯವನ್ನು ಹರಿಕಥಾ ಕೇಳಿ ಸಫಲ ಮಾಡಿಕೋ ಎಂದು ಹೇಳುವರು-*

**ಆಯುರ್ಹರತಿ ವೈ ಪುಂಸಾಂ ಉದ್ಯನ್ನಸ್ತಂ ಚ ಯನ್ನಸೌ ।**
**ತಸ್ಯರ್ತೇ ಯಃ ಕ್ಷಣೋ ನೀತಃ ಉತ್ತಮಶ್ಲೋಕವಾರ್ತಯಾ ।। ೧೭ ।।**

**ಅಸೌ** ಸೂರ್ಯನು, **ಉದ್ಯನ್** ಉದಯಿಸುತ್ತ, **ಅಸ್ತಂ ಯನ್** ಅದರ್ಶನವನ್ನು ಹೊಂದುತ್ತ, **ಪುಂಸಾಂ** ಜನರ, **ಆಯುಃ** ಆಯುಷ್ಯವನ್ನು, **ಹರತಿ** ಕಳೆಯುವನು

(ಅಪಹರಿಸುವನು) **ತಸ್ಯ** ಆ ಆಯುಷ್ಯದ, **ಯಃ ಕ್ಷಣಃ** ಯಾವ ಕ್ಷಣವು, **ಉತ್ತಮಶ್ಲೋಕವಾರ್ತಯಾ ಋತೇ** ಶ್ರೀಹರಿಯ ಕಥೆ ಇಲ್ಲದೇ, **ನೀತಃ** ಕಳೆಯಲ್ಪಟ್ಟಿತೋ ಅದು ವ್ಯರ್ಥವೇ.

ಇಲ್ಲಿ ತಸ್ಯ ಎಂಬ ಶಬ್ದದಿಂದ ಪ್ರಕೃತನಾದ ಸೂರ್ಯನ ಪರಾಮರ್ಶಮಾಡಿಕೊಳ್ಳಬೇಕು ಎಂದು ತೋರುತ್ತದೆ. ಇದನ್ನು ನಿವಾರಿಸಲು ವ್ಯಾಖ್ಯಾನಿಸುತ್ತಾರೆ. 'ತಸ್ಯ ಆಯುಷಃ' ತಸ್ಯ ಎಂದರೆ ಆಯುಷ್ಯದ ಎಂದರ್ಥ. (ಸೂರ್ಯನು ಕ್ಷಣರೂಪ ಏಕದೇಶನಲ್ಲ. ಆದ್ದರಿಂದ ಅವನನ್ನು ಸ್ವೀಕರಿಸಲಾಗದು) ಅಲ್ಲದೇ ಆಯುಷ್ಯವೂ ಪ್ರಕೃತವಾಗಿದೆ. ಆದ್ದರಿಂದ ಅದನ್ನೇ ಸ್ವೀಕರಿಸಬೇಕೆಂದು ಭಾವ. ಅಪೇಕ್ಷಿತ ಅಧ್ಯಾಹಾರ ಮಾಡಿ ಮೂಲ ಯೋಜಿಸುವರು 'ಉತ್ತಮ ಶ್ಲೋಕವಾರ್ತಯಾ ಋತೇ ಯಃ ಕ್ಷಣಃ ಸಃ ನೀತ ಏವ ವೃಥಾ' ಭಗವಂತನ ವಾರ್ತೆಯಿಲ್ಲದೇ ಕಳೆದ ಕ್ಷಣ ಕಳದದ್ದೇ ಅಂದರೆ ವ್ಯರ್ಥವೆಂದು ಭಾವ. ||೧೭||

*ಬದುಕುವುದೇ ಆಯುಷ್ಯದ ಸಫಲತೆಯಾಗುವುದು ಎಂದರೆ ಹೇಳುವರು-*

**ತರವಃ ಕಿಂ ನ ಜೀವಂತಿ ಭಸ್ತ್ರಾಃ ಕಿಂ ನ ಶ್ವಸಂತ್ಯುತ ।**
**ನ ಖಾದಂತಿ ನ ಮೇಹಂತಿ ಕಿಂ ಗ್ರಾಮ್ಯಾಃ ಪಶವೋಽಪರೇ ॥ ೧೮ ॥**

**ತರವಃ** ಗಿಡಗಳು, **ನ ಜೀವಂತಿ ಕಿಂ** ಬದುಕುವುದಿಲ್ಲವೇ? **ಭಸ್ತ್ರಾಃ** ತಿದಿಯು (ಕಮ್ಮಾರನ ಕುಲುಮೆಯಲ್ಲಿ ಕಬ್ಬಿಣ ಕಾಸಲು ಗಾಳಿಹಾಕುವ ಚರ್ಮದ ಚೀಲ) **ನ ಶ್ವಸಂತಿ ಕಿಂ** ಶ್ವಾಸೋಚ್ಛ್ವಾಸ ಮಾಡುವದಿಲ್ಲವೇ ? **ಅಪರೇ** ಬೇರೇ, **ಗ್ರಾಮ್ಯಾಃ** ಗ್ರಾಮದಲ್ಲಿರುವ, **ಪಶವಃ** ಪಶುಗಳು, **ನ ಖಾದಂತಿ ಕಿಂ ನ ಮೇಹಂತಿ ಕಿಂ** ತಿನ್ನುವುದಿಲ್ಲವೇ ಮಲ-ಮೂತ್ರ ವಿಸರ್ಜಿಸುವುದಿಲ್ಲವೇ ? ಅದರಂತೆ ನೀನೊಬ್ಬನಾಗುವಿ ಎಂದರ್ಥ. || ೧೮ ||

*ಅದನ್ನೇ ಸ್ಪಷ್ಟವಾಗಿ ಹೇಳುವರು-*

**ಶ್ವವಿಡ್ವರಾಹೋಷ್ಟ್ರಖರೈಃ ಸ ತುಲ್ಯಃ ಪುರುಷಃ ಪಶುಃ ।**
**ನ ಯತ್ಕರ್ಣಪಥೋಪೇತೋ ಜಾತು ನಾಮ ಗದಾಗ್ರಜಃ ॥ ೧೯ ॥**

**ಗದಾಗ್ರಜಃ ಯತ್ಕರ್ಣಪಥೋಪೇತಃ ಜಾತು ನ ನಾಮ** ಗದನ ಅಣ್ಣನಾದ ಶ್ರೀಹರಿಯ ನಾಮವು ಯಾವನ ಕಿವಿಗಳಲ್ಲಿ ಒಮ್ಮೆಯೂ ಬಿದ್ದಿಲ್ಲವೋ ಅಂಥವನು, **ಶ್ವಾ** ನಾಯಿ, **ವಿಡ್ವರಾಹ** ಮಲತಿನ್ನುವ ಹಂದಿ, **ಉಷ್ಟ್ರ** ಒಂಟೆ, **ಖರೈಃ** ಕತ್ತೆ ಇವುಗಳಿಂದ, **ತುಲ್ಯಃ**

ಸಮಾನನಾದವನು. **ಸಃ ಪುರುಷಃ ಪಶುಃ** ಅವನು ಪುರುಷನ ಆಕಾರದಲ್ಲಿರುವ ಪಶುವೇ ಆಗಿದ್ದಾನೆ.

ಹೊಲಸಾದ ವಿಷಯಗಳಲ್ಲಿ ಆಸಕ್ತನಾದ್ದರಿಂದ ನಾಯಿಯ ಮತ್ತು ಹಂದಿಯ ಸಾಮ್ಯವನ್ನು ಹೇಳಿದ್ದಾರೆ. ಮುಳ್ಳಿನಂತೆ ದುಃಖಪ್ರದವಾದ ವಿಷಯಗಳಲ್ಲಿ ಆಸಕ್ತನಾದ್ದರಿಂದ ಮುಳ್ಳು ತಿನ್ನುವ ಒಂಟೆಗೆ ಸಾಮ್ಯವನ್ನು ಹೇಳಿದ್ದಾರೆ. ಕುಟುಂಬದ ಭಾರ ಹೊರುವುದರಿಂದ ಕತ್ತೆಯ ಸಾಮ್ಯ ಹೇಳಿದ್ದಾರೆ ಎಂದು ತಿಳಿಯಬೇಕು ||೧೯||

*ಅಂಥವನ ಅವಯವಗಳು ವ್ಯರ್ಥವೆಂದು ಹೇಳುವರು-*

**ಬಿಲೇ ಬತೋರುಕ್ರಮವಿಕ್ರಮಾನ್ಯೇ ನ ಶೃಣ್ವತಃ ಕರ್ಣಪುಟೇ ನರಸ್ಯ ।**
**ಜಿಹ್ವಾಽಸತೀ ದಾರ್ದುರಿಕೇವ ಸೂತ ನ ಚೇತ್ಪ್ರಗಾಯತ್ಯುರುಗಾಯಗಾಥಾಮ್ ॥**

**ಯೇ** ಯಾವ, **ನರಸ್ಯ ಕರ್ಣಪುಟೇ** ಮನುಷ್ಯನ ಕಿವಿಗಳು, **ಉರುಕ್ರಮವಿಕ್ರಮಾನ್ ನ ಶೃಣ್ವತಃ** ಶ್ರೀಹರಿಯ ಪರಾಕ್ರಮಗಳನ್ನು ಕೇಳುವುದಿಲ್ಲವೋ, **ತೇ** ಅವು, **ಬಿಲೇ** ಪರ್ವತದ ರಂಧ್ರಗಳಿದ್ದಂತೆ, **ಜಿಹ್ವಾ** ನಾಲಿಗೆಯು, **ಉರುಗಾಯಗಾಥಾಂ ನ ಪ್ರಗಾಯತಿ ಚೇತ್** ಶ್ರೀಹರಿಯ ಮಹಿಮೆಯನ್ನು ಗಾನಮಾಡದಿದ್ದರೆ, **ದಾರ್ದುರಿಕೇವ** ಕಪ್ಪೆಯ ನಾಲಿಗೆಯಂತೆ, **ಅಸತೀ** ದುಷ್ಟವಾದುದು, **ಬತ** ಇದು ಖೇದದ ಸಂಗತಿಯಾಗಿದೆ. ||೨೦||

**ಭಾರಃ ಪರಂ ಪಟ್ಟಕಿರೀಟಜುಷ್ಟಮಪ್ಯುತ್ತಮಾಂಗಂ ನ ನಮೇನ್ಮುಕುಂದಮ್ ।**
**ಶಾವೌ ಕರೌ ನೋ ಕುರುತಃ ಸಪರ್ಯಾಂ ಹರೇಃ ಲಸತ್ಕಾಂಚನಕಂಕಣೌ ವಾ॥ ೨೧ ॥**

**ಮುಕುಂದಂ** ಶ್ರೀಹರಿಯನ್ನು, **ನ ನಮೇತ್ ಚೇತ್** ನಮಸ್ಕಾರ ಮಾಡದಿದ್ದಲ್ಲಿ, **ಪಟ್ಟ ಕಿರೀಟಜುಷ್ಟಂ ಅಪಿ** ರೇಷ್ಮೆಯ ಮುಂಡಾಸನ್ನೋ, ಕಿರೀಟವನ್ನೋ ಹಾಕಿಕೊಂಡಿದ್ದರೂ **ಉತ್ತಮಾಂಗಂ** ತಲೆಯು, **ಪರಂ ಭಾರಃ** ಏವ ಕೇವಲ ಭಾರವಷ್ಟೇ, **ಲಸತ್ಕಾಂಚನಕಂಕಣೌ** ಚಿನ್ನದ ಕಂಕಣದಿಂದ ಶೋಭಿಸಿದರೂ, **ಸಪರ್ಯಾಂ** ಸೇವೆಯನ್ನು **ನೋ ಕುರುತಃ** ಮಾಡದಿರುವ, **ಕರೌ** ಕೈಗಳು, **ಶಾವೌ** ಹೆಣದ ಕೈಗಳಿದ್ದಂತೆ. ||೨೧||

**ಬರ್ಹಾಯಿತೇ ತೇ ನಯನೇ ನರಾಣಾಂ**
**ಲಿಂಗಾನಿ ವಿಷ್ಣೋಃ ನ ನಿರೀಕ್ಷತೋ ಯೇ ।**

**ಪಾದೌ ನೃಣಾಂ ತೌ ದ್ರುಮಜನ್ಮಭಾಜೌ**
**ಕ್ಷೇತ್ರಾಣಿ ನಾऽನುವ್ರಜತೋ ಹರೇಃ ಯೌ** ॥ ೨೨ ॥

**ಯೇ** ಯಾವನ, **ನಯನೇ** ಕಣ್ಣುಗಳು, **ವಿಷ್ಣೋಃ** ಶ್ರೀಹರಿಯ, **ಲಿಂಗಾನಿ** ಪ್ರತಿಮೆಗಳನ್ನು, **ನ ನಿರೀಕ್ಷತಃ** ನೋಡುವುದಿಲ್ಲವೋ, **ತೇ ನಯನೇ** ಆ ಕಣ್ಣುಗಳು **ಬರ್ಹಾಯಿತೇ** ನವಿಲುಗರಿಯ ಕಣ್ಣಿನಂತೆ ನಿಷ್ಫಲವಾದವುಗಳು. **ಯೌ** ಯಾವ ಕಾಲುಗಳು, **ಹರೇಃ** ಶ್ರೀಹರಿಯ, **ಕ್ಷೇತ್ರಾಣಿ** ಪುಣ್ಯಸ್ಥಲಗಳಿಗೆ, **ನ ಅನುವ್ರಜತಃ** ಹೋಗುವುದಿಲ್ಲವೋ, **ತೌ ನೃಣಾಂ ಪಾದೌ** ಮನುಷ್ಯರ ಆ ಕಾಲುಗಳು, **ದ್ರುಮಜನ್ಮಭಾಜೌ** ಗಿಡದಂತೆ (ಕಟ್ಟಿಗೆಯಂತೆ) ಎಂದು ಭಾವ. ॥೨೨॥

**ಜೀವಚ್ಛವೋ ಭಾಗವಾತಾಂಘ್ರಿರೇಣುಂ ನ ಜಾತು ಮರ್ತ್ಯೋऽಭಿಲಷೇತ ಯಸ್ತು ।**
**ಶ್ರೀವಿಷ್ಣುಪದ್ಯಾ ಮನುಜಸ್ತುಲಸ್ಯಾಃ ಶ್ವಸಚ್ಛವೋ ಯಸ್ತು ನ ವೇದ ಗಂಧಮ್ ॥ ೨೩ ॥**

**ಯಸ್ತು** ಯಾವನು, **ಭಾಗವತಾಂಘ್ರಿರೇಣುಂ** ಭಗವದ್ಭಕ್ತರ ಪಾದಧೂಳಿಯನ್ನು **ಜಾತು** ಒಮ್ಮೆಯಾದರೂ, **ನ ಅಭಿಲಷೇತ** ಇಚ್ಛಿಸುವುದಿಲ್ಲವೋ, **ಸಃ ಮರ್ತ್ಯಃ** ಆ ಮನುಷ್ಯನು, **ಜೀವಚ್ಛವಃ** ಬದುಕಿಯೂ ಸತ್ತಂತೆ. **ಯಸ್ತು** ಯಾವನು, **ಶ್ರೀವಿಷ್ಣುಪದ್ಯಾಃ** ಭಗವಂತನ ಪಾದ ಸಂಬದ್ಧವಾದ, **ತುಲಸ್ಯಾಃ** ತುಳಸಿಯ, **ಗಂಧಂ ನ ವೇದ** ವಾಸನೆ ನೋಡಿ ಆನಂದಿಸುವುದಿಲ್ಲವೋ, **ಸಃ ಮನುಜಃ** ಆ ಮನುಷ್ಯನು, **ಶ್ವಸತ್ ಶವಃ** ಶ್ವಾಸೋಚ್ಛ್ವಾಸಮಾಡುವ ಹೆಣವಿದ್ದಂತೆ. ॥೨೩॥

**ತದಶ್ಮಸಾರಂ ಹೃದಯಂ ಬತೇದಂ**
**ಯದ್ ಗೃಹ್ಯಮಾಣೈಃ ಹರಿನಾಮಧೇಯೈಃ ।**
**ನ ವಿಕ್ರಿಯೇತಾऽಥ ಮುಖೇ ವಿಕಾರೋ**
**ನೇತ್ರೇ ಜಲಂ ಗಾತ್ರರುಹೇಷು ಹರ್ಷಃ** ॥ ೨೪ ॥

**ಯತ್** ಯಾರ ಹೃದಯವು, ಗೃಹ್ಯಮಾಣೈಃ **ಹರಿನಾಮಧೇಯೈಃ** ಕಥಾರೂಪದಿಂದ ಕೇಳಲ್ಪಡುವ ಶ್ರೀಹರಿಯ ನಾಮಗಳಿಂದ, **ನ ವಿಕ್ರಿಯೇತ** ಕರಗುವುದಿಲ್ಲವೋ, **ಅಥ** ಕರಗಿದ ನಂತರ, **ಗಾತ್ರರುಹೇಷು ಹರ್ಷಃ** ನ ರೋಮಾಂಚನವಾಗುವುದಿಲ್ಲವೋ, ಮತ್ತು, **ಮುಖೇ** ಮುಖದಲ್ಲಿ **(ವಿಕಾರಃ) ವಿಕಾಸಃ ನ** ಅರಳುವಿಕೆ ಆಗುವಂತೆ ವಿಕಾರಹೊಂದುವುದಿಲ್ಲವೋ, **ತತ್ ಹೃದಯಂ** ಆ ಹೃದಯವು, **ಅಶ್ಮಸಾರಂ** ಕಲ್ಲಿನಂತೆ ಕಠಿಣವಾದದ್ದು ಎಂದು ಭಾವ .

**ಅಥಾಽಭಿದೇಹ್ಯಂಗ ಮನೋಽನುಕೂಲಂ ಪ್ರಭಾಷಸೇ ಭಾಗವತಪ್ರಧಾನಃ ।**
**ಯದಾಹ ವೈಯಾಸಕಿರಾತ್ಮವಿದ್ಯಾವಿಶಾರದೋ ನೃಪತಿಂ ಸಾಧು ಪೃಷ್ಟಃ ॥ ೨೫ ॥**

**ಹೇ ಅಂಗ** ಹೇ ಸೂತರೇ, **ಅಥ** ಹರಿಕಥಾಶ್ರವಣಾದಿಗಳಿಲ್ಲದಿದ್ದರೇ ಆಯುಷ್ಯಾದಿಗಳು ವ್ಯರ್ಥವಾಗುತ್ತವೆ ಆದ್ದರಿಂದ, **ಭಾಗವತಪ್ರಧಾನಃ** ಭಗವದ್ಭಕ್ತಶ್ರೇಷ್ಠನಾಗಿರುವ ನೀವು, **ಮನೋಽನುಕೂಲಂ ಪ್ರಭಾಷಸೇ** ಮನಸ್ಸಿಗೆ ಸಂತೋಷವಾಗುವಂತೆ ಮಾತನಾಡುವಿರಿ. **ಆತ್ಮವಿದ್ಯಾವಿಶಾರದಃ** ಪರಮಾತ್ಮವಿದ್ಯೆಯಲ್ಲಿ ಕುಶಲರಾದ, **ವೈಯಾಸಕಿಃ** ಶುಕಾಚಾರ್ಯರು, **ಸಾಧು ಪೃಷ್ಟಃ ಸನ್** ಚೆನ್ನಾಗಿ ಪ್ರಶ್ನಿಸಲ್ಪಟ್ಟವರಾಗಿ, **ನೃಪತಿಂ** ಪರೀಕ್ಷಿತನನ್ನು ಕುರಿತು, **ಯದಾಹ** ಏನು ಹೇಳಿದರೋ ಅದನ್ನು **ಅಭಿಧೇಹಿ** ಹೇಳು. ॥೨೫॥

॥ ಇತಿ ಶ್ರೀಮದ್ಭಾಗವತೇ ದ್ವಿತೀಯಸ್ಕಂಧೇ ತೃತೀಯೋಽಧ್ಯಾಯಃ ॥

# ಅಥ ಚತುರ್ಥೋಽಧ್ಯಾಯಃ

**ಸಾರಾಂಶ**

ಶೌನಕಾದಿಗಳ ಮಾತನ್ನು ಆಲಿಸಿ ಸೂತಾಚಾರ್ಯರು ಹೇಳುತ್ತಾರೆ.

ಶುಕಾಚಾರ್ಯರ ಮಾತುಗಳನ್ನು ಶ್ರದ್ಧೆಯಿಂದ ಆಲಿಸಿದ ಪರೀಕ್ಷಿತ. ತನ್ನ ಮರಣವನ್ನು ತಿಳಿದವನಾಗಿದ್ದ. ಈ ಜನನ-ಮರಣಗಳ ಸಂಕೊಲೆಯಿಂದ ಪಾರಾಗಬೇಕೆಂದುಕೊಂಡ. ಶ್ರೀಹರಿಯಲ್ಲಿ ಮನಸ್ಸು ನಿಶ್ಚಲವಾಗುವಂತೆ ಮಾಡಿದ. ಧನ-ಕನಕ-ವನಿತಾ- ರಾಜ್ಯಾದಿಗಳಲ್ಲಿಯೇ ಆಸಕ್ತವಾಗುವ ಸ್ವಭಾವ ಉಳ್ಳ ಮನಸ್ಸನ್ನು ವಿರಕ್ತವಾಗುವಂತೆ ಮಾಡಿಕೊಂಡ. ಈ ರೀತಿಯಾಗಿ ಪ್ರಶ್ನಿಸಿದ.

ಹೇ ಶುಕಾಚಾರ್ಯರೇ ನಿಮ್ಮ ಉಪದೇಶ ನಮ್ಮ ಅಜ್ಞಾನವನ್ನು ಸಮೂಲವಾಗಿ ನಾಶಪಡಿಸುತ್ತದೆ. ನನ್ನ ಈ ಪ್ರಶ್ನೆಯನ್ನು ಪರಿಹರಿಸಿರಿ.

ಶ್ರೀಹರಿ ಷಡ್ಗುಣೈಶ್ವರ್ಯಸಂಪನ್ನ. ಜಡಪ್ರಕೃತಿ ಎಲ್ಲವೂ ಅವನ ಅಧೀನವಾಗಿದೆ. ಈ ಚರಾಚರಾತ್ಮಕವಾದ ಪ್ರಪಂಚದ ಸೃಷ್ಟಿ ಯಾರಿಂದಲೂ ಸಾಧ್ಯವಿಲ್ಲ. ಇಂತಹ ಚರಾಚರಾತ್ಮಕವಾದ ಪ್ರಪಂಚವನ್ನು ಪರಮಾತ್ಮ ಸೃಷ್ಟಿಮಾಡಿದ. ಈ ಸೃಷ್ಟಿಯನ್ನು ದೇವರು ಹೇಗೆ ಮಾಡಿದ? ಹೇಗೆ ಈ ಪ್ರಪಂಚವನ್ನು ಸಂರಕ್ಷಿಸುತ್ತಾನೆ? ಮತ್ತು ಹೇಗೆ ಸಂಹರಿಸುತ್ತಾನೆ? ಭಗವಂತನ ಈ ಚೇಷ್ಟೆಗಳನ್ನು ತಿಳಿಯುವ ತವಕ ನನಗಿದೆ. ಅತಿವಿಚಿತ್ರವಾದ ದೇವರ ಈ ವ್ಯಾಪಾರಗಳನ್ನು ಮುಕ್ತರಾದವರು ಕೂಡಾ ಪೂರ್ಣವಾಗಿ ತಿಳಿಯಲು ಸಾಧ್ಯವಿಲ್ಲ. ಹೀಗಿರುವಾಗ ಅಜ್ಞಾನಿಗಳಿಗೆ ದೇವರ ಮಹಿಮೆಯು ಹೇಗೆ ಗೋಚರವಾದೀತು? ಈ ಮಹಿಮೆಯನ್ನು ನಾನು ತಿಳಿಯಲು ಬಯಸಿದ್ದೇನೆ ಉಪದೇಶ ನೀಡಿರಿ. ಎಂದು ಪರೀಕ್ಷಿತ ಕೇಳಿದ.

ಶ್ರೀಮದ್ಭಾಗವತದಲ್ಲಿ ಈ ಎಲ್ಲ ಪ್ರಶ್ನೆಗಳಿಗೆ ಉತ್ತರವಿದೆ. ಆದ್ದರಿಂದ ಭಾಗವತಶ್ರವಣದಿಂದ ಈ ಪ್ರಶ್ನೆಗಳಿಗೆಲ್ಲ ಉತ್ತರವು ದೊರಕುತ್ತದೆ. ಪರೀಕ್ಷಿತನ ಮಾತಿಗೆ ಉತ್ತರ ನೀಡಲು ಶ್ರೀಶುಕಾಚಾರ್ಯರು ಭಾಗವತವನ್ನು ಉಪದೇಶಿಸಲು ಪ್ರಾರಂಭಿಸಿದರು.

ಈ ಉಪದೇಶ ನಿರ್ವಿಘ್ನವಾಗಿ ಸಾಗಲೆಂದು ದೇವರ ಅತಿವಿಚಿತ್ರವಾದ ಮಹಿಮೆಗಳನ್ನು ಮಂಗಳಾಚರಣರೂಪದಲ್ಲಿ ಶ್ರೀಶುಕಾಚಾರ್ಯರು ಕೊಂಡಾಡುತ್ತಾರೆ.

ಭಗವಂತ ಸರ್ವಸಮರ್ಥ. ಪಂಚಮಹಾಭೂತಗಳಿಂದ ಜೀವರ ದೇಹಗಳನ್ನು ನಿರ್ಮಿಸುತ್ತಾನೆ. ಆ ದೇಹಗಳಲ್ಲಿ ಆತ್ಮಾದಿರೂಪಗಳಿಂದ ವಾಸಮಾಡುತ್ತಾನೆ. ದೇಹಗತನಾದರೂ ದುಃಖಾದಿಗಳಿಂದ ಲಿಪ್ತನಾಗುವುದಿಲ್ಲ. ಯಾವುದೇ ರೀತಿಯಾದ ವಿಕಾರಕ್ಕೆ ಒಳಗಾಗುವುದಿಲ್ಲ. ಇಂತಹ ಪರಮಾತ್ಮ ನನ್ನ ಉಪದೇಶ ಶ್ರೋತೃಗಳಿಗೆ ರುಚಿಸುವಂತೆ ಅನುಗ್ರಹಮಾಡಲಿ. ಎಂದು ದೇವರನ್ನು ಪ್ರಾರ್ಥಿಸುತ್ತಾ ಬ್ರಹ್ಮ-ನಾರದರ ಸಂವಾದದ ಮೂಲಕ ಶ್ರೀಮದ್ಭಾಗವತವನ್ನು ಉಪದೇಶಿಸಲು ರಾಜನ ಪ್ರಶ್ನೆಗಳಿಗೆ ಉತ್ತರ ನೀಡಲು ಪ್ರಾರಂಭಿಸುತ್ತಾರೆ.

ಶ್ರೀಹರಿಯ ಚರಿತ್ರೆಯನ್ನು ಸಂಕ್ಷೇಪವಾಗಿ ಕೇಳಿದ್ದರಿಂದ ಅವನಲ್ಲೇ ಆಸಕ್ತವಾದ ಮನಸ್ಸುಳ್ಳ ಪರೀಕ್ಷಿತನು ಅತಿಶಯವಾದ ಭಕ್ತಿಯಿಂದ ಮತ್ತೆ ವಿಶೇಷವಾಗಿ ಕೇಳಲಿಚ್ಛಿಸಿ ಶ್ರೀಹರಿ ಹಾಗೂ ಸಜ್ಜನರ ಲೀಲೆಗಳನ್ನು ಕೇಳುವ ರೀತಿಯನ್ನು, ಶ್ರೀಶುಕಾಚಾರ್ಯರು ಗುರುದೇವತೆಗಳಿಗೆ ನಮಸ್ಕರಿಸಿ ಉತ್ತರ ಹೇಳುವ ಪ್ರತಿಜ್ಞೆಯ ರೀತಿಯನ್ನು ಈ ಅಧ್ಯಾಯದಲ್ಲಿ ಹೇಳುತ್ತಾರೆ.

*ಮೊದಲಿಗೆ ರಾಜನಿಗೆ ಪ್ರಶ್ನೆ ಕೇಳುವ ಅಧಿಕಾರ ಅತಿಶಯವಾಗಿದೆ ಎಂದು ತಿಳಿಸಲು ಶುಕಾಚಾರ್ಯರ ಉಪದೇಶದಿಂದ ಅವನಿಗೆ ಉಂಟಾದ ವಿಜ್ಞಾನ-ವಿರಕ್ತಿಗಳನ್ನು ಎರಡು ಶ್ಲೋಕಗಳಿಂದ ತಿಳಿಸುವರು-*

**ವೈಯಾಸಕೇರಿತಿ ವಚಸ್ತತ್ತ್ವನಿಶ್ಚಯಮಾತ್ಮನಃ ।**
**ಉಪಧಾರ್ಯ ಮತಿಂ ಕೃಷ್ಣೇ ಔತ್ತರೇಯಃ ಸತೀಂ ವ್ಯಧಾತ್ ॥ ೧ ॥**

**ಆತ್ಮಜಾಯಾಸುತಾಗಾರಪಶುದ್ರವಿಣಬಂಧುಷು ।**
**ರಾಜ್ಯೇ ಚಾವಿಕಲೇ ನಿತ್ಯನಿರೂಢಾಂ ಮಮತಾಂ ಜಹೌ ॥ ೨ ॥**

**ಔತ್ತರೇಯಃ** ಉತ್ತಾರಾಕುಮಾರನಾದ ಪರೀಕ್ಷಿತನು, **ಇತಿ** ಈ ರೀತಿಯಾದ, **ಆತ್ಮನಃ** ಪರಮಾತ್ಮನ, **ತತ್ತ್ವನಿಶ್ಚಯಂ** ನಿಜವಾದ ಸ್ವರೂಪವನ್ನು ನಿಶ್ಚಯ ಮಾಡಿಕೊಡುವ, **ವೈಯಾಸಕೇಃ** ಶುಕಾಚಾರ್ಯರ, **ವಚಃ** ಮಾತನ್ನು, **ಉಪಧಾರ್ಯ** ಮನಸಿನಲ್ಲಿ ಇರಿಸಿಕೊಂಡು, **ಕೃಷ್ಣೇ** ಶ್ರೀಕೃಷ್ಣನಲ್ಲಿ, **ಸತೀಂ ಮತಿಂ ವ್ಯಧಾತ್** ರಾಗಾದಿ ದೋಷರಹಿತವಾದ ಭಕ್ತಿ ಪರಿಪ್ಲುತವಾದ ಬುದ್ಧಿಯನ್ನು ಇಟ್ಟನು. ।।೧।।

**ಆತ್ಮಾ** ದೇಹ, **ಜಾಯಾ** ಹೆಂಡತಿ, **ಸುತ** ಮಗ, **ಆಗಾರ** ಮನೆ, **ಪಶು** ಗೋ ಮುಂತಾದವು, **ದ್ರವಿಣ** ಹಣ, **ಬಂಧುಷು** ಬಂಧು ಇವುಗಳಲ್ಲಿ **ಅವಿಕಲೇ ರಾಜ್ಯೇ** ಸಪ್ತಕಲಾಪೂರ್ಣವಾದ ರಾಜ್ಯದಲ್ಲಿ **ನಿತ್ಯನಿರೂಢಾಂ** ಬೇರೆಯವರಿಗೆ ಬೇರೂರಿದ, **ಮಮತಾಂ ಜಹೌ** ಆವಾಗ ವಿಶೇಷವಾಗಿ ನನ್ನದೆಂಬ ಭಾವನೆಯನ್ನು ಬಿಟ್ಟನು. ।।೨।।

**ಸ್ವಾಮ್ಯಮಾತ್ಯೌ ಪುರಂ ರಾಷ್ಟ್ರಂ ಕೋಶದಂಡೌ ತಥಾ ಸುಹೃತ್ ।**
**ಸಪ್ತೈತಾನಿ ಸಮಸ್ತಾನಿ ಲೋಕೇಽಸ್ಮಿನ್ ರಾಜ್ಯಮುಚ್ಯತೇ ।।**

ಎಂದು ಮನುವಚನವಿರುವುದರಿಂದ ರಾಜ, ಮಂತ್ರಿ, ಪುರ, ರಾಷ್ಟ್ರ, ಕೋಶ, ದಂಡ, ಗೆಳೆಯ ಹೀಗೆ ರಾಜ್ಯಕ್ಕೆ ಏಳು ಕಲೆಗಳು ಎಂದು ತಿಳಿಯಬೇಕು.

ಅಪರೋಕ್ಷಜ್ಞಾನಿಯಾದ, ಚರಮದೇಹದಲ್ಲಿರುವ ರಾಜನಿಗೆ ಮಮತೆಯು ಅಸಂಭಾವಿತವಾದ್ದರಿಂದ ಮಮತೆಗೆ ನಿತ್ಯನಿರೂಢತೆ ಹೇಳಿದ್ದು ಹೇಗೆ ಎಂದರೆ ಅಭಿಪ್ರಾಯ ತಿಳಿಸುವರು-

**ತಾತ್ಪರ್ಯ - ಅನ್ಯೇಷಾಂ ನಿತ್ಯಂ ನಿರೂಢಾ । ತದಾ ವಿಶೇಷತೋ ಜಹೌ ।**

(ಇಲ್ಲಿ ಪರೀಕ್ಷಿದ್ ರಾಜನು ತನಗಿರುವ (ನಿತ್ಯನಿರೂಢವಾದ ಮಮತೆಯನ್ನು ಬಿಟ್ಟನೆಂದು ಹೇಳುವುದಿಲ್ಲ) ಶ್ರೀಹರಿಯು ಸರ್ವಸ್ವತಂತ್ರನೆಂದು ತಿಳಿಯದವರಿಗೆ ನಿತ್ಯದಲ್ಲಿಯೂ ದೇಹಾದಿಗಳಲ್ಲಿ ಅಭಿವೃದ್ಧವಾಗಿ ಬಿಡಲಾಗದ ಯಾವ ಮಮತೆ ಇದೆಯೋ ಅದನ್ನು ಮೊದಲೇ ಪರೀಕ್ಷಿತನು ಬಿಟ್ಟಿದ್ದರೂ ಪ್ರಾರಬ್ಧಕರ್ಮಾನುಸಾರ ಸ್ವಲ್ಪವಿದ್ದುದನ್ನೂ ಆಗ ವಿಶೇಷವಾಗಿ ಬಿಟ್ಟನೆಂದರ್ಥವು. ।।೨।।

*ಮತ್ತೆ ಏನನ್ನು ಕೇಳಿದನೆಂಬ ಪ್ರಶ್ನೆಗೆ ಉತ್ತರಿಸುವರು —*

**ಪಪ್ರಚ್ಛ ಚೇಮಮೇವಾರ್ಥಂ ಯನ್ಮಾಂ ಪೃಚ್ಛಥ ಸತ್ತಮಾಃ ।**
**ಕೃಷ್ಣಾನುಭಾವಶ್ರವಣೇ ಶ್ರದ್ದಧಾನೋ ಮಹಾಯಶಾಃ ।। ೩ ।।**

**ಹೇ ಸತ್ತಮಾಃ** ಶೌನಕಾದಿಗಳೇ, **ಯನ್ಮಾಂ ಪೃಚ್ಛಥ** ನೀವು ನನ್ನನ್ನು ಕುರಿತು ಏನು ಕೇಳಿರುವಿರೊ, **ಇಮಮೇವ** ಇದನ್ನೇ, **ಕೃಷ್ಣಾನುಭಾವಶ್ರವಣೇ** ಶ್ರೀಕೃಷ್ಣನ ಮಾಹಾತ್ಮ್ಯವನ್ನು ಕೇಳುವುದರಲ್ಲಿ **ಶ್ರದ್ದಧಾನಃ** ಶ್ರದ್ಧೆಯುಳ್ಳ **ಮಹಾಯಶಾಃ** ಮಹಾಕೀರ್ತಿವಂತನಾದವನು **ಪಪ್ರಚ್ಛ** ಕೇಳಿದನು. ।। ೩ ।।

**ಸಂಸ್ಥಾಂ ವಿಜ್ಞಾಯ ಸನ್ನ್ಯಸ್ಯ ಕರ್ಮ ತ್ರೈವರ್ಗಿಕಂ ಚ ಯತ್ ।**
**ವಾಸುದೇವೇ ಭಗವತಿ ಸ್ವಾತ್ಮಭಾವಂ ದೃಢಂ ಗತಃ ।। ೪ ।।**

**ಸಂಸ್ಥಾಂ** ತನ್ನ ಮರಣವನ್ನು, **ವಿಜ್ಞಾಯ** ತಿಳಿದು, **ತ್ರೈವರ್ಗಿಕಂ** ಧರ್ಮಾರ್ಥಕಾಮ ಸಾಧನವಾದ, **ಯತ್ ಕರ್ಮ** ಯಾವ ಕರ್ಮವಿದೆಯೋ, **ತತ್** ಅದನ್ನು **ಸನ್ನ್ಯಸ್ಯ** ತೊರೆದು, **ವಾಸುದೇವೇ ಭಗವತಿ** ಶ್ರೀಹರಿಯ ವಿಷಯದಲ್ಲಿ **ಸ್ವಾತ್ಮಭಾವಂ** ತನಗೆ ಸ್ವಾಮೀ ಎಂದೂ ಗುಣಪೂರ್ಣನಾದ್ದರಿಂದ ಆತ್ಮಶಬ್ದವಾಚ್ಯನೆಂದು ಉಪಾಸನೆಯನ್ನು **ದೃಢಂ ಗತಃ** ದೃಢವಾಗುವಂತೆ ಮಾಡಿದನು. ನಿತ್ಯದಲ್ಲಿ ಮಾಡುತ್ತ, **ಆತ್ಮಭಾವಂ** ತನ್ನ ಸ್ವರೂಪಾನಂದವನ್ನೂ **ಗತಃ** ಹೊಂದಿದವನಾಗಿ ಪ್ರಶ್ನಿಸಿದನು. ।।೪।।

ಇಲ್ಲಿ ಆತ್ಮಭಾವಂ ಎಂದರೆ ತನ್ನತನವನ್ನು ಎಂದು ಅರ್ಥ ಆಗದಿರಲಿ ಎಂದು ಪ್ರಮಾಣದಿಂದ ವ್ಯಾಖ್ಯಾನಿಸುವರು.

ತಾತ್ಪರ್ಯ- ಆಪ್ತೇಃ ಸರ್ವಗುಣಾನಾಂ ಯ ಆತ್ಮನಾಮತಯಾ ಹರಿಮ್ ।
ಉಪಾಸ್ತೇ ನಿತ್ಯಶೋ ವಿದ್ವಾನಾಪ್ತಕಾಮಸ್ತದಾ ಭವೇತ್ ।। -ಇತಿ ವಾಮನೇ

ಯಾವ ಜ್ಞಾನಿಯು ಸರ್ವಗುಣಪೂರ್ಣನಾದುದರಿಂದ ಶ್ರೀಹರಿಯನ್ನು ಆತ್ಮ ಶಬ್ದವಾಚ್ಯನೆಂದು ನಿತ್ಯದಲ್ಲಿಯೂ ಉಪಸನೆ ಮಾಡುತ್ತಾನೆಯೋ ಆತನು ತನ್ನ ಸ್ವರೂಪವಾದ ಪರಮಾನಂದ ಉಳ್ಳವನಾಗುತ್ತಾನೆ ಎಂದು ವಾಮನಪುರಾಣದಲ್ಲಿ ಹೇಳಿದೆ. ।।೪।।

*ತನ್ನ ಅಭೀಷ್ಟವನ್ನು ಕೇಳಲು ಶುಕಾಚಾರ್ಯರ ಮಾತನ್ನು ಹೊಗಳುವನು-*

ರಾಜೋವಾಚ-

**ಸಮೀಚೀನಂ ವಚೋ ಬ್ರಹ್ಮನ್ ಸರ್ವಜ್ಞಸ್ಯ ತವಾಽನಘ ।**
**ತಮೋ ವಿಶೀರ್ಯತೇ ಮಹ್ಯಂ ಹರೇಃ ಕಥಯತಃ ಕಥಾಃ ।। ೫ ।।**

**ಹೇ ಅನಘ** ಪಾಪರಹಿತರಾದ ಶುಕಾಚಾರ್ಯರೇ, **ಬ್ರಹ್ಮನ್** ಬ್ರಹ್ಮಜ್ಞಾನಿಗಳೇ, **ಸರ್ವಜ್ಞಸ್ಯ** ಸರ್ವಜ್ಞನಾದ, **ಹರೇಃ** ಶ್ರೀಹರಿಯ, **ಕಥಾಃ** ಕಥೆಗಳನ್ನು **ತವ ಕಥಯತಃ ಸತಃ** ನೀವು ಹೇಳುತ್ತಿರಲು, **ಮಹ್ಯಂ** ನನ್ನ **ತಮಃ** ಅಜ್ಞಾನವು, **ವಿಶೀರ್ಯತೇ** ನಾಶವಾಗುವುದು. **ಅತಃ** ಆದ್ದರಿಂದ. **ತವ ವಚಃ** ನಿಮ್ಮ ಮಾತು, **ಸಮೀಚೀನಂ** ಶ್ರೇಷ್ಠವಾದುದು. ।। ೫ ।।

**ಭೂಯ ಏವ ವಿವಿತ್ಸಾಮಿ ಭಗವಾನಾತ್ಮಮಾಯಯಾ ।**
**ಯಥೇದಂ ಸೃಜತೇ ವಿಶ್ವಂ ದುರ್ವಿಭಾವ್ಯಮಧೀಶ್ವರೈಃ ।।**
**ಯಥಾ ಗೋಪಾಯತಿ ವಿಭುಃ ಯಥಾ ಸಂಯಚ್ಛತೇ ಪುನಃ ।। ೬ ।।**

**ಭಗವಾನ್** ಶ್ರೀಹರಿಯು, **ಆತ್ಮಮಾಯಯಾ** ತನ್ನ ಇಚ್ಛೆಯಿಂದ ತನ್ನ ಅಧೀನವಾದ ಪ್ರಕೃತಿಯಿಂದಲೂ, **ಅಧೀಶ್ವರೈಃ** ಉಳಿದ ಬ್ರಹ್ಮಾದಿಗಳಿಂದ, **ದುರ್ವಿಭಾವ್ಯಂ** ಹುಟ್ಟಿಸಲಾಗದ, **ಇದಂ ವಿಶ್ವಂ** ಈ ಜಗತ್ತನ್ನು **ಯಥಾ ಸೃಜತೇ** ಯಾವ ರೀತಿಯಾಗಿ ಸೃಷ್ಟಿಸುವನು **ಯಥಾ ಗೋಪಾಯತಿ** ಹೇಗೆ ರಕ್ಷಿಸುವನು, **ಪುನಃ** ಮತ್ತೆ, **ವಿಭುಃ** ಸಮರ್ಥನಾದ ಹರಿಯು, **ಯಥಾ ಸಂಯಚ್ಛತೇ** ಹೇಗೆ ಸಂಹರಿಸುವನು, **ತಂ ಪ್ರಕಾರಂ** ಆ ರೀತಿಯನ್ನು **ಭೂಯಃ** ಏವ ಮತ್ತೊಮ್ಮೆ, **ವಿವಿತ್ಸಾಮಿ** ಕೇಳಲಿಚ್ಛಿಸುವೆನು. ।।೬।।

**ಯಾಂ ಯಾಂ ಶಕ್ತಿಮುಪಾಶ್ರಿತ್ಯ ಪುರುಶಕ್ತಿಃ ಪರಃ ಪುಮಾನ್ ।**
**ಆತ್ಮಾನಂ ಕ್ರೀಡಯನ್ ಕ್ರೀಡನ್ ಕರೋತಿ ವಿಕರೋತಿ ಚ ।। ೭ ।।**

**ಪುರುಶಕ್ತಿಃ** ಅನಂತಶಕ್ತಿಯುಳ್ಳ **ಪರಃ ಪುಮಾನ್** ಸರ್ವೋತ್ತಮನಾದ ಶ್ರೀಹರಿಯು, **ಆತ್ಮಾನಂ** ಜೀವನನ್ನು **ಕ್ರೀಡಯನ್** ಸಂಸಾರದಲ್ಲಿ ಆಡಿಸುತ್ತ, **ಕ್ರೀಡನ್** ಸ್ವಯಂ ಅವತಾರಗಳಿಂದ ಕ್ರಿಡಿಸುತ್ತ, **ಯಾಂ ಯಾಂ ಶಕ್ತಿಂ** ಸತ್ತ್ವಾದ್ಯಭಿಮಾನಿಗಳಾದ ಶ್ರೀ-ಭೂ-ದುರ್ಗಾ ಇವರುಗಳ ಮಧ್ಯದಲ್ಲಿ ಪರಮಾತ್ಮನ ಶಕ್ತಿವಿಷಯರಾದ್ದರಿಂದ ಶಕ್ತಿಶಬ್ದವಾಚ್ಯರಾದ ಯಾರಾರನ್ನು **ಉಪಾಶ್ರಿತ್ಯ** ಆಶ್ರಯಿಸಿ, (ಸ್ವೀಕರಿಸಿ) **ಕರೋತಿ** ಮಾಡುತ್ತಾನೆ. **ವಿಕರೋತಿ** ವಿವಿಧವಾಗಿ ಮಾಡುತ್ತಾನೆ. ಅದನ್ನು ಕೂಡ, **ವಿವಿತ್ಸಾಮಿ** ತಿಳಿಯಲಿಚ್ಛಿಸುವೆನು. ।। ೭ ।।

**ನೂನಂ ಭಗವತೋ ಬ್ರಹ್ಮನ್ ಹರೇರದ್ಭುತಕರ್ಮಣಃ ।**
**ದುರ್ವಿಭಾವ್ಯಮಿವಾಭಾತಿ ಕವಿಭಿಶ್ಚ ವಿಚೇಷ್ಟಿತಮ್ ।। ೮ ।।**

**ಬ್ರಹ್ಮನ್** ಶುಕ್ರಚಾರ್ಯರೇ, **ಅದ್ಭುತಕರ್ಮಣಃ** ಆಶ್ಚರ್ಯಕರವಾದ ಕಾರ್ಯಗಳುಳ್ಳ **ಭಗವತಃ ಹರೇಃ** ಐಶ್ವರ್ಯಶಾಲಿಯಾದ ಶ್ರೀಹರಿಯ, **ವಿಚೇಷ್ಟಿತಂ** ವ್ಯಾಪಾರವು, **ಕವಿಭಿಃ** ಜ್ಞಾನಿಗಳಿಂದ ತಿಳಿಯಲ್ಪಟ್ಟರೂ, **ದುರ್ವಿಭಾವ್ಯಮಿವ ಆಭಾತಿ** ಚನ್ನಾಗಿ ತಿಳಿಯಲು ಅಶಕ್ಯವೆಂದು ತೋರುವುದು. ಕಾರಣ ಪ್ರಶ್ನಿಸುವೆನು. ಜ್ಞಾನಿಗಳಿಗೇ ಸಾಕಲ್ಯೇನ ತಿಳಿಯಲಾಗದೇ ಇರುವಾಗ ಅಜ್ಞರಿಗೆ ತಿಳಿಯುವುದಿಲ್ಲವೆಂದೇನು ಹೇಳುವುದು. ಅಜ್ಞರಿಗೆ ಸರ್ವಥಾ ದೇವರು ಗೋಚರನಾಗುವುದಿಲ್ಲ. ॥ ೮ ॥

**ಯಥಾ ಗುಣಾಂಸ್ತು ಪ್ರಕೃತೇರ್ಯುಗಪತ್ ಕ್ರಮಶೋಽಪಿ ವಾ ।**
**ಬಿಭರ್ತಿ ಭೂರಿಶಸ್ತ್ವೇಕಃ ಕುರ್ವನ್ ಕರ್ಮಾಣಿ ಜನ್ಮಭಿಃ ॥ ೯ ॥**

**ಏಕಃ ಹರಿಃ** ಒಬ್ಬನೇ ಶ್ರೀಹರಿಯು, **ಜನ್ಮಭಿಃ** ತನ್ನ ಅವತಾರಗಳಿಂದ, **ಭೂರಿಶಃ** ಅತ್ಯಂತ ಬಹಳವಾಗಿ, **ಕರ್ಮಾಣಿ ಕುರ್ವನ್** ಸೃಷ್ಟ್ಯಾದಿಕಾರ್ಯಗಳನ್ನು ಮಾಡುವವನಾಗಿ, **ಪ್ರಕೃತೇಃ ಗುಣಾನ್** ಸತ್ತ್ವಾದಿಗಳನ್ನು, **ಯಥಾ ಬಿಭರ್ತಿ** ಕಾರಣಗಳನ್ನಾಗಿ ಹೇಗೆ ಸ್ವೀಕರಿಸುವನೋ, **ಕಿಂ ಯುಗಪತ್ ಏವ ಕ್ರಮಶ ಏವ ಯುಗಪತ್ ಕ್ರಮಶೋಽಪಿ ವಾ** ಏಕಕಾಲಕ್ಕೇನೇ ಸ್ವೀಕರಿಸುವನೋ, ಕ್ರಮವಾಗಿಯೇ ಸ್ವೀಕರಿಸುವನೋ, ಏಕಕಾಲದಲ್ಲಿ ಕ್ರಮವಾಗಿಯೂ ಸ್ವೀಕರಿಸುವನೋ ಎಂದು ಪ್ರಶ್ನಾರ್ಥ. ॥ ೯ ॥

**ವಿಚಿಕಿತ್ಸಿತಮೇತನ್ಮೇ ಬ್ರವೀತು ಭಗವಾನ್ಯಥಾ ।**
**ಶಬ್ದಬ್ರಹ್ಮಣಿ ನಿಷ್ಣಾತಃ ಪರಸ್ಮಿಂಶ್ಚ ಭವಾನ್ ಖಲು ॥ ೧೦ ॥**

**ಏತತ್** ಇದು, **ಮೇ** ನನಗೆ, **ವಿಚಿಕಿತ್ಸಿತಂ** ಸಂದಿಗ್ಧವಾಗಿದೆ. **ಭಗವಾನ್** ಪೂಜ್ಯರಾದ ನೀವು, **ಯಥಾ ಬ್ರವೀತು** ಯಥಾವತ್ತಾಗಿ ಹೇಳಿರಿ. **ಭವಾನ್** ತಾವು, **ಶಬ್ದಬ್ರಹ್ಮಣಿ** ವೇದಗಳಲ್ಲಿ, **ಪರಸ್ಮಿಂಶ್ಚ ಬ್ರಹ್ಮಣಿ ನಿಷ್ಣಾತಃ ಖಲು** ಪರಮಾತ್ಮನ ವಿಷಯದಲ್ಲಿಯೂ ವಿಚಾರ ಮಾಡಿ ಎರಡರ ನಿಶ್ಚಯವುಳ್ಳವರಾಗಿದ್ದೀರಿ. ॥೧೦॥

*ಪರೀಕ್ಷಿತನಿಂದ ಪ್ರಶ್ನಿಸಲ್ಪಟ್ಟ ಶುಕಾಚಾರ್ಯರು ಏನು ಮಾಡಿದರು ಎಂಬ ಶೌನಕರ ಮಾನಸಿಕ ಶಂಕೆಯನ್ನು ಸೂತರು ಪರಿಹರಿಸುತ್ತಾರೆ-*

**ಸೂತ ಉವಾಚ-**

**ಇತ್ಯುಪಾಮಂತ್ರಿತೋ ರಾಜ್ಞಾ ಗುಣಾನುಕಥನೇ ವಿಭೋಃ ।**
**ಹೃಷಿಕೇಶಮನುಸ್ಮೃತ್ಯ ಪ್ರತಿವಕ್ತುಂ ಪ್ರಚಕ್ರಮೇ ॥ ೧೧ ॥**

**ಇತಿ** ಈರೀತಿಯಾಗಿ, **ರಾಜ್ಞಾ** ಪರೀಕ್ಷಿತನಿಂದ, **ಗುಣಾನುಕಥನೇ** ಶ್ರೀಹರಿಯ ಗುಣಗಳನ್ನು ವರ್ಣಿಸಲು, **ಉಪಾಮಂತ್ರಿತಃ** ಪ್ರಾರ್ಥಿತರಾಗಿ, **ಹೃಷೀಕೇಶಂ** ಇಂದ್ರಿಯಪ್ರೇರಕನಾದ ಶ್ರೀಹರಿಯನ್ನು, **ಅನುಸ್ಮೃತ್ಯ** ಸ್ಮರಿಸಿ, **ಪ್ರತಿವಕ್ತುಂ** ಉತ್ತರಿಸಲು, **ಪ್ರಚಕ್ರಮೇ** ದೇವತಾಗುರುನಮಸ್ಕಾರರೂಪವಾದ ಉಪಕ್ರಮ ಮಾಡಿದರು ಎಂದರ್ಥ. ||೧೧||

ಶ್ರೀಶುಕ ಉವಾಚ-

**ನಮಃ ಪರಸ್ಮೈ ಪುರುಷಾಯ ಭೂಯಸೇ ಸದುದ್ಭವಸ್ಥಾನನಿರೋಧಲೀಲಯಾ ।**
**ಗೃಹಿತಶಕ್ತಿತ್ರಿತಯಾಯ ದೇಹಿನಾಮಂತರ್ಧ್ರುವಾಯಾಽನುಪಲಭ್ಯವರ್ತ್ಮನೇ ||೧೨||**

**ದೇಹಿನಾಂ ಅಂತಃ ಧ್ರುವಾಯ** ಜೀವರ ಒಳಗೆಯೇ ಇರುವ ಆದರೂ, **ದೇಹಿನಾಂ** ಜನರಿಂದ, **ಅನುಪಲಭ್ಯವರ್ತ್ಮನೇ** ತಿಳಿಯಲಾಗದ ತನ್ನ ಮಾರ್ಗವುಳ್ಳ (ಅವನ ಮಾರ್ಗವೇ ದುರ್ಜ್ಞೇಯವೆಂದಮೇಲೆ ಅವನು ದುರ್ಜ್ಞೇಯ ಎಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲವೆಂದು ಸೂಚಿಸಲು ಹೀಗೆ ಹೇಳಿರುವರು)

**ಸತಃ** ಸತ್ಯವಾದ ಜಗತ್ತಿನ, **ಉದ್ಭವ** ಉತ್ಪತ್ತಿ, **ಸ್ಥಾನ** ಸ್ಥಿತಿ, **ನಿರೋಧ** ಸಂಹಾರ ಇವುಗಳಿಗೆ ಕಾರಣವಾದ, **ಲೀಲಯಾ** ಕ್ರೀಡೆಯಿಂದ (ನಿತ್ಯಂ) **ಸರ್ವದಾ** ಯಾವಾಗಲೂ, **ಗೃಹಿತ** ಸ್ವೀಕರಿಸಲ್ಪಟ್ಟ, **ಶಕ್ತಿತ್ರಿತಯಾಯ** ಜ್ಞಾನ-ಇಚ್ಛಾ-ಕ್ರಿಯಾ ಎಂಬ ಮೂರು ಶಕ್ತಿಗಳುಳ್ಳ, **ಭೂಯಸೇ** ಪೂರ್ಣಗುಣನಾದ, **ಪರಸ್ಮೈ ಪುರುಷಾಯ** ಸರ್ವೋತ್ತಮನಾದ ಪುರುಷನಿಗೆ, (ಶ್ರೀಹರಿಗೆ) **ನಮಃ** ನಮಸ್ಕಾರವು.

ಇಲ್ಲಿ ಶಕ್ತಿತ್ರಿತಯ ಎಂದರೆ ಸತ್ತ್ವರಜಸ್ತಮೋಗುಣಗಳು ಅವುಗಳನ್ನು ಸ್ವೀಕರಿಸುವುದು ಯಾವಾಗಲೊ ಒಮ್ಮೆ ತಾತ್ಕಾಲಿಕ ಎಂದು ತೋರುವುದು ಕಾರಣ ಆ ಪದವನ್ನು ಪ್ರಮಾಣದಿಂದಲೇ ವ್ಯಾಖ್ಯಾನಿಸುವರು-

ತಾತ್ಪರ್ಯ- ಗೃಹಿತಶಕ್ತಿತ್ರಿತಯಾಯೇತಿ ।

ಇಚ್ಛಾ ಜ್ಞಾನಂ ಕ್ರಿಯಾ ಚೇತಿ ನಿತ್ಯಾಃ ಶಕ್ತಯ ಈಶಿತುಃ ।
ಸ್ವರೂಪಭೂತಾ ಅಪಿ ತು ಭೇದವದ್ವ್ಯಾವಹಾರಿಕಾಃ ॥
ಇತಿ ಪ್ರಕಾಶಸಂಹಿತಾವಚನಾನ್ನಿತ್ಯಗೃಹೀತಶಕ್ತಿತ್ವಮೇವ ॥

'ಗೃಹೀತಶಕ್ತಿತ್ರಿತಯಾಯ' ಎಂಬಲ್ಲಿ ಶ್ರೀಹರಿಯ ಶಕ್ತಿಗಳು ಇಚ್ಛಾಶಕ್ತಿ, ಜ್ಞಾನಶಕ್ತಿ, ಕ್ರಿಯಾ ಶಕ್ತಿ ಎಂದು ಮೂರು ವಿಧವಾಗಿವೆ. ಅವುಗಳು ನಿತ್ಯವಾಗಿವೆ. ಮತ್ತು ಶ್ರೀಹರಿಯ

ಸ್ವರೂಪಗಳಾಗಿವೆ. ಆದರೂ ವಿಶೇಷಶಕ್ತಿಯಿಂದ ಇಚ್ಛಿಸುತ್ತಾನೆ, ತಿಳಿಯುತ್ತಾನೆ ಮುಂತಾದ ಭೇದವ್ಯವಹಾರಕ್ಕೆ ವಿಷಯಗಳಾಗುತ್ತವೆ ಎಂದು ಪ್ರಕಾಶಸಂಹಿತಾವಚನವು ತಿಳಿಸುತ್ತದೆ. ಆದ್ದರಿಂದ ಸದಾ ಸ್ವರೂಪಭೂತವಾದ ಶಕ್ತಿಯನ್ನೇ ಪರಮಾತ್ಮನು ಸ್ವೀಕರಿಸುತ್ತಾನೆ ಎಂಬ ಅರ್ಥವು ಪ್ರಕೃತ ವಿವಕ್ಷಿತವಾಗಿದೆ. ||೧೨||

*ಭಕ್ತಿಪೂರ್ವಕವಾಗಿ ಭಗವಂತನನ್ನು ಪುನಃ ಪುನಃ ನಮಸ್ಕರಿಸುವುದೇ ಅವನ ಪ್ರೀತಿಗೆ ಕಾರಣವಾಗಿದೆ ಎಂಬುದನ್ನು ತಿಳಿಸಲು ಮತ್ತೆ ಮತ್ತೆ ದೇವರಿಗೆ ನಮಸ್ಕರಿಸುತ್ತಾರೆ-*

**ಭೂಯೋ ನಮಃ ಸದ್ವೃಜಿನಚ್ಛಿದೇಽ-**
**ಸತಾಮಸಂಭಯಾಽಖಿಲಸತ್ತ್ವಮೂರ್ತಯೇ ।**
**ಪುಸಾಂ ಪುನಃ ಪಾರಮಹಂಸ್ಯ ಆಶ್ರಮೇ**
**ವ್ಯವಸ್ಥಿತಾನಾಮನುಮೃಗ್ಯ ದಾಶುಷೇ** || ೧೩ ||

**ಸದ್ವೃಜಿನಚ್ಛಿದೇ** ಸಜ್ಜನರ ಪಾಪವನ್ನು ಮತ್ತು ದುಃಖವನ್ನು ಕಳೆಯುವ, **ಅಸತಾಂ ಅಸಂಭವಾಯ** ಪಾಪಪ್ರೇರಕರಾದ ಅಸುರರನ್ನು ಹುಟ್ಟದಂತೆ ಮಾಡುವ ಅರ್ಥಾತ್ ನಿರ್ಮೂಲನ ಮಾಡುವ, **ಅಖಿಲಸತ್ತ್ವಮೂರ್ತಯೇ** ಪೂರ್ಣಸಾಧುಸ್ವರೂಪನಾದ, **ಪುಂಸಾಂ ಪಾರಮಹಂಸ್ಯ ಆಶ್ರಮೇ ವ್ಯವಸ್ಥಿತಾನಾಂ** ಪರಮಹಂಸ ಎಂದರೆ ಪರಮಾತ್ಮ ಅವನ ಸಂಬಂಧಿಯಾದ ಆಶ್ರಮದಲ್ಲಿ **ವ್ಯವಸ್ಥಿತಾನಾಂ** ಇರುವ ಅಂದರೆ ಶ್ರೀಹರಿಯನ್ನುದ್ದೇಶಿಸಿ ತಾವು ಮಾಡುವ ತಮ್ಮ ತಮ್ಮ ಆಶ್ರಮಧರ್ಮವುಳ್ಳ ಜನರಿಗೆ, **ಅನುಮೃಗ್ಯ** ಯೋಗ್ಯತಾನುಸಾರವಾಗಿ ವಿಚಾರ್ಯವಾದ ಯಾವ ಸ್ವರೂಪ ಉಂಟೋ ಅದನ್ನೇ, **ದಾಶುಷೇ** ಕೊಡುವ ಸಾಯುಜ್ಯವನ್ನು ಕೊಡುವ ಶ್ರೀಹರಿಗೆ, **ಭೂಯಃ ನಮಃ** ಮತ್ತೆ ನಮಸ್ಕಾರವು.

ಇಲ್ಲಿ 'ಅಖಿಲಸತ್ತ್ವಮೂರ್ತಯೇ' ಎಂಬ ಪದಕ್ಕೆ ಎಲ್ಲ ಸತ್ತ್ವಗುಣವೇ ದೇಹವಾಗಿ ಉಳ್ಳ ಎಂಬ ವ್ಯಾಖ್ಯಾನವನ್ನು ನಿರಾಕರಿಸಲು ಅನುವಾದ ಮಾಡಿ ಸಪ್ರಮಾಣವಾಗಿ ವ್ಯಾಖ್ಯಾನಿಸುವರು-

ತಾತ್ಪರ್ಯ- ಅಖಿಲಸತ್ತ್ವಮೂರ್ತಯೇ ಪೂರ್ಣಸಾಧುಭಾವಸ್ವರೂಪಾಯ । 'ನಿಃಶೇಷ-ಗುಣಪೂರ್ಣತ್ವಾತ್ ಸತ್ತ್ವ ಇತ್ಯೇವ ತಂ ವಿದುಃ' ಇತಿ ಮಹಾಸಂಹಿತಾಯಾಮ್ ||೧೩||

ಅಖಿಲಸತ್ತ್ವಮೂರ್ತಯೇ ಎಂಬುದಕ್ಕೆ ಪೂರ್ಣಶುಭಧರ್ಮಗಳೇ ಸ್ವರೂಪವಾಗಿ ಉಳ್ಳವನೆಂದರ್ಥ.

ನಿಃಶೇಷಗುಣಗಳಿಂದ ಪೂರ್ಣನಾದುದರಿಂದಲೇ ಶ್ರೀಹರಿಯನ್ನು ಸತ್ತ್ವ ಎನ್ನುತ್ತಾರೆ. ಎಂದು ಮಹಾಸಂಹಿತೆಯಲ್ಲಿದೆ.

ಈ ಪ್ರಮಾಣದಲ್ಲಿ ಅಖಿಲ ಎಂಬ ಅರ್ಥ ಕೊಡುವ ವಿಶೇಷತ್ವವು ಸತ್ತ್ವ ಶಬ್ದಾರ್ಥದಲ್ಲಿ ಸೇರಿಯೇ ಹೇಳಲ್ಪಟ್ಟಿದೆ ಕಾರಣ ಅಖಿಲ ಪದ ಯದ್ಯಪಿ ಮೂಲದಲ್ಲಿ ಬೇಕಿಲ್ಲ ಆದರೂ ಪ್ರತ್ಯೇಕ ಹೇಳಿದ್ದರಿಂದ ಸತ್ತ್ವ ಶಬ್ದಕ್ಕೆ ಸಾಧುಭಾವವಷ್ಟೇ ಸ್ವೀಕೃತವಾಗಿದೆ ಎಂದು ತಿಳಿಯಬೇಕು. ।।೧೩।।

*ಈ ವಿಧವಾದ ಪುರುಷಾರ್ಥವನ್ನು ಶ್ರೀಹರಿಯು ಎಲ್ಲರಿಗೂ ಏಕೆ ಕೊಡುವುದಿಲ್ಲ ಎಂಬ ಶಂಕೆಯನ್ನು ಪರಿಹರಿಸುತ್ತ ಮತ್ತೆ ನಮಸ್ಕರಿಸುವರು-*

**ನಮೋ ನಮಸ್ತೇಽಸ್ತು ಋಷಭಾಯ ಸಾತ್ವತಾಂ**
**ವಿದೂರಕಾಷ್ಠಾಯ ಮುಹುಃ ಕುಯೋಗಿನಾಮ್ ।**
**ನಿರಸ್ತಸೌಮ್ಯಾತಿಶಯೇನ ರಾಧಸಾ**
**ಸ್ವಧಾಮನಿ ಬ್ರಹ್ಮಣಿ ರಂಸ್ಯತೇ ನಮಃ** ।। ೧೪ ।।

**ಸಾತ್ವತಾಂ ಋಷಭಾಯ** ಪಂಚರಾತ್ರದಲ್ಲಿ ಹೇಳಿದಂತೆ ಶ್ರೀಹರಿಯನ್ನು ಪೂಜಿಸುವವರು ಸಾತ್ವತರು ಅವರಿಗೆ ಶ್ರೇಷ್ಠನಾದ, **ಕುಯೋಗಿನಾಂ** ಪಂಚರಾತ್ರಕ್ಕೆ ಅಸಮ್ಮತವಾದ ಮೋಕ್ಷೋಪಾಯವುಳ್ಳ ಕುಯೋಗಿಗಳಿಗೆ, **ವಿದೂರಕಾಷ್ಠಾಯ** ತಾನಿರುವ ದಿಕ್ಕನ್ನೂ ತೋರಿಸದ, **ನಿರಸ್ತಸಾಮ್ಯತಿಶಯೇನ ರಾಧಸಾ** ತನ್ನ ಸಮಾನ ಹಾಗು ಅಧಿಕವಿಲ್ಲದ ಸಂಸಿದ್ಧಿಯಿಂದ ಸರ್ವಾಭೀಷ್ಟದಿಂದ, **ಸ್ವಧಾಮನಿ** ತನ್ನ ಸ್ವರೂಪದಲ್ಲಿ, **ಬ್ರಹ್ಮಣಿ** ದೇಶ-ಕಾಲ-ಗುಣಗಳಿಂದ ಪೂರ್ಣನಾದ ತನ್ನಲ್ಲಿ, **ರಂಸ್ಯತೇ** ರಮಮಾಣನಾದ ಪರಮಾತ್ಮನಿಗೆ, **ನಮೋ ನಮಃ ಅಸ್ತು** ನಮಸ್ಕಾರವಿರಲಿ. ।।೧೪।।

ಅಗ್ನಿಯು ಧೂಮದಿಂದ ಆವರಿಸಿದಂತೆ ಎಲ್ಲ ಕಾರ್ಯಗಳೂ ದೋಷ ಪೂರಿತಗಳಾಗಿವೆ. ಆದ್ದರಿಂದ ಸಾತ್ವತರಾದರೂ ಶುದ್ಧವಾದ ಧರ್ಮಗಳನ್ನು ಅನುಷ್ಠಾನ ಮಾಡಲು ಹೇಗೆ ಸಾಧ್ಯ ಎಂಬ ಶಂಕೆಯನ್ನು ಪರಿಹರಿಸುತ್ತ ಮತ್ತೆ ನಮಸ್ಕರಿಸುವರು-

**ಯತ್ಕೀರ್ತನಂ ಯಚ್ಛ್ರವಣಂ ಯದೀಕ್ಷಣಂ**
**ಯದ್ವಂದನಂ ಯತ್ಸ್ಮರಣಂ ಯದರ್ಹಣಮ್ ।**
**ಲೋಕಸ್ಯ ಸದ್ಯೋ ವಿಧುನೋತಿ ಕಲ್ಮಷಂ**
**ತಸ್ಮೈ ಸುಭದ್ರಶ್ರವಸೇ ನಮೋ ನಮಃ** ।। ೧೫ ।।

**ಯತ್ಕೀರ್ತನಂ** ಯಾವನ ಕಥೆಯನ್ನು ಹೇಳುವುದು, **ಯಚ್ಛ್ರವಣಂ** ಯಾವನ ಕಥೆಯನ್ನು ಕೇಳುವುದು, **ಯದೀಕ್ಷಣಂ** ಯಾವನನ್ನು ನೋಡುವುದು, **ಯದ್ವಂದನಂ** ಯಾವನನ್ನು ನಮಸ್ಕರಿಸುವುದು, **ಯತ್ಸ್ಮರಣಂ** ಯಾವನನ್ನು ಸ್ಮರಿಸುವುದು, **ಯದರ್ಹಣಂ** ಯಾವನ ಪೂಜೆಯು, **ಲೋಕಸ್ಯ** ಸಜ್ಜನರ, **ಕಲ್ಮಷಂ** ಕರ್ಮಾನುಷ್ಠಾನ ಮಾಡುವಾಗ ಬಂದ ಪಾಪವನ್ನು ದೋಷವನ್ನು, **ಸದ್ಯಃ** ಶೀಘ್ರದಲ್ಲಿಯೇ, **ವಿಧುನೋತಿ** ನಾಶಮಾಡುವುದೋ, **ತಸ್ಮೈ** ಅಂತಹ **ಸುಭದ್ರಶ್ರವಸೇ** ಪರಮಮಂಗಲವಾದ ಕೀರ್ತಿಯುಳ್ಳ ಶ್ರೀಹರಿಗೆ, **ನಮೋ ನಮಃ** ನಮಸ್ಕಾರವು. ಇಲ್ಲಿ ಹಿಂದೆ ಮುಂದೆ ಪ್ರತಿ ವಿಶೇಷಣಕ್ಕೂ ನಮಃ ಎಂಬುದನ್ನು ಅನ್ವಯಿಸಬೇಕೆಂದು ತಿಳಿಸಲು ಎರಡು ಮೂರಾವರ್ತಿ ನಮಃ ಎಂಬ ಶಬ್ದವನ್ನು ಪ್ರಯೋಗಿಸಿದ್ದಾರೆ. ಮಂಗಳಕೀರ್ತಿಯ ಕೀರ್ತನ ಪಾಪಪರಿಹಾರಕವೆಂಬುದು ಪ್ರಸಿದ್ಧವಾಗಿದೆ. ।।೧೫।।

*ಈ ರೀತಿ ಹರಿಕೀರ್ತನಾದಿಗಳಿಂದ ಶುದ್ಧ ಕರ್ಮ ಮಾಡುವವರಿಗೆ ಏನು ಫಲ ಎಂಬ ಶಂಕೆಯನ್ನು ಪರಿಹರಿಸುತ್ತ ನಮಿಸುವರು-*

**ವಿಚಕ್ಷಣಾ ಯಚ್ಚರಣೋಪಸಾದನಾತ್**
**ಸಂಗಂ ವ್ಯುದಸ್ಯೋಭಯತೋಽಂತರಾತ್ಮನಃ ।**
**ವಿಂದಂತಿ ಹಿ ಬ್ರಹ್ಮಗತಿಂ ಗತಕ್ಲಮಾಃ**
**ತಸ್ಮೈ ಸುಭದ್ರಶ್ರವಸೇ ನಮೋ ನಮಃ** ।। ೧೬ ।।

**ವಿಚಕ್ಷಣಾಃ** ವಿವೇಕಿಗಳು, **ಯಚ್ಚರಣೋಪಸಾದನಾತ್** ಯಾವನ ಪಾದಗಳ ಉಪಸತ್ತಿಯಿಂದ ಭಜನದಿಂದ ಎಂದರ್ಥ, **ಅಂತರಾತ್ಮನಃ** ಅಂತಃಕರಣದ, **ಉಭಯತಃ** ಐಹಿಕ-ಆಮುಷ್ಮಿಕವಿಷಯಗಳಲ್ಲಿ **ಸಂಗಂ** ಸ್ನೇಹವನ್ನು **ವ್ಯುದಸ್ಯ** ತೊರೆದು, **ಗತಕ್ಲಮಾಃ** ಪ್ರಯಾಸವಿಲ್ಲದೇ, **ಬ್ರಹ್ಮಗತಿಂ** ಬ್ರಹ್ಮಜ್ಞಾನವನ್ನು ಅದರಿಂದ ಬ್ರಹ್ಮರೂಪಗತಿಯನ್ನು ಗಮ್ಯವನ್ನು **ವಿಂದಂತಿ** ಹೊಂದುವರೋ, **ತಸ್ಮೈ ಸುಭದ್ರಶವಸೇ** ಆ ಮಂಗಲಕೀರ್ತಿಗೆ, **ನಮೋ ನಮಃ** ನಮಸ್ಕಾರ. ।। ೧೬ ।।

*ಕರ್ಮಮಾಡುವಾಗ ಹೀಗೆ ಮಾಡಬೇಕೆಂದು ಹೇಳುತ್ತಾ ನಮಸ್ಕರಿಸುವರು-*

**ತಪಸ್ವಿನೋ ದಾನಪರಾ ಯಶಸ್ವಿನೋ**
**ಮನಸ್ವಿನೋ ಮಂತ್ರವಿದಃ ಸುಮಂಗಲಾಃ ।**

**ಕ್ಷೇಮಂ ನ ವಿಂದಂತಿ ವಿನಾ ಯದರ್ಪಣಂ**
**ತಸ್ಮೈ ಸುಭದ್ರಶ್ರವಸೇ ನಮೋ ನಮಃ** ॥ ೧೭ ॥

**ತಪಸ್ವಿನಃ** ತಪಸ್ಸು ಮಾಡುವವರು, **ದಾನಪರಾಃ** ದಾನಾಸಕ್ತರು, **ಯಶಸ್ವಿನಃ** ಕೀರ್ತಿಶಾಲಿಗಳು, **ಮನಸ್ವಿನಃ** ಮನೋಯೋಗವುಳ್ಳವರು, **ಮಂತ್ರವಿದಃ** ಮಂತ್ರಜ್ಞಾನಿಗಳು, **ಸುಮಂಗಲಾಃ** ಸದಾಚಾರ ಉಳ್ಳವರು, **ಯದರ್ಪಣಂ ವಿನಾ** ಯಾವನಲ್ಲಿ ಸಮರ್ಪಣ ಮಾಡದೇ (ನಾಹಂ ಕರ್ತಾ ಹರಿಃ ಕರ್ತಾ ಮುಂತಾದ ಭಾವದಿಂದ), **ಕ್ಷೇಮಂ ನ ವಿಂದಂತಿ** ಕರ್ಮಫಲವಾದ ಜ್ಞಾನಾದಿಗಳನ್ನು ಹೊಂದುವುದಿಲ್ಲವೋ, **ತಸ್ಮೈ** ಅಂತಹ, **ಸುಭದ್ರಶ್ರವಸೇ** ಮಂಗಲಕೀರ್ತಿಗೆ, **ನಮೋ ನಮಃ** ನಮಸ್ಕಾರವು.

ಶ್ರೀಹರಿಯ ಕೀರ್ತಿಯನ್ನು ಶ್ರವಣಮಾಡುವುದು ಆವಶ್ಯಕವೆಂದು ತಿಳಿಸಲು ಸುಭದ್ರಶ್ರವಸೇ ಎಂಬುದನ್ನು ಅನೇಕ ಸಲ ಹೇಳಿದ್ದಾರೆ ।।೧೭।।

*ಶ್ರೀಹರಿಕೀರ್ತನೆಯು ಶುದ್ಧಕರ ಎಂದು ಹೇಳಿದ್ದನ್ನು ಕೈಮುತ್ಯದಿಂದ ಉಪಪಾದಿಸುವರು-*

**ಕಿರಾತಹೂಣಾಂಧ್ರಪುಲಿಂದಪುಲ್ಕಸಾ**
**ಆಭೀರಕಂಕಾ ಯವನಾಃ ಶಕಾದಯಃ ।**
**ಯೇಽನ್ಯೇ ಚ ಪಾಪಾ ಯದಪಾಶ್ರಯಾತ್**
**ಶುಧ್ಯ್ಯಂತಿ ತಸ್ಮೈ ಪ್ರಭವಿಷ್ಣವೇ ನಮಃ** ॥ ೧೮ ॥

**ಕಿರಾತ** ಬೇಡರ ಜಾತಿ, **ಹೂಣ ಆಂಧ್ರ** ತೆಲಗುದೇಶದವರು, **ಪುಲಿಂದ** ಮ್ಲೇಚ್ಛರ ಅವಾಂತರಜಾತಿ (ಪರದೇಶದವರು) **ಪುಲ್ಕಸಾಃ** ಬ್ರಾಹ್ಮಣನಿಂದ ಕ್ಷತ್ರಿಯಸ್ತ್ರೀಯಲ್ಲಿ ಜನಿಸಿದ ಜಾತಿ, **ಆಭೀರ** ಗೊಲ್ಲಜಾತಿ, **ಕಂಕಾಃ** ಬ್ರಾಹ್ಮಣವೇಷಧಾರಿಗಳು, **ಯವನಾಃ** ಮಹಮ್ಮದೀಯರು (ಕ್ಷತ್ರಿಯನಿಂದ ವೈಶ್ಯಸ್ತ್ರೀಯಲ್ಲಿ ಜನಿಸಿದವರು) **ಶಕಾದಯಃ** ಶಕಜಾತಿವಿಶೇಷ ಇವರೇ ಮೊದಲಾದವರು, **ಯೇ ಅನ್ಯೇ** ಇನ್ನು ಬೇರೇ, **ಪಾಪಾಃ** ಬ್ರಹ್ಮಹತ್ಯಾದಿಗಳನ್ನು ಮಾಡಿದವರು, **ಯದಪಾಶ್ರಯಾಶ್ರಯಾತ್** ಭಾಗವತರ ಸೇವೆಯಿಂದ, **ಶುಧ್ಯ್ಯಂತಿ** ಪವಿತ್ರರಾಗುವರೋ, **ತಸ್ಮೈ** ಅಂತಹ, **ಪ್ರಭವಿಷ್ಣವೇ** ಮಹಾಮಾಹಾತ್ಮ್ಯ ಉಳ್ಳ ಶ್ರೀಹರಿಗೆ, **ನಮೋ ನಮಃ** ನಮಸ್ಕಾರವು. ।।೧೮।।

ಈ ರೀತಿ ನಮಸ್ಕಾರ ಮಾಡಿ ಅದರಿಂದಾಗುವ ಶ್ರೀಹರಿಪ್ರಸಾದವನ್ನು ನಾಲ್ಕು ಶ್ಲೋಕಗಳಿಂದ ಪ್ರಾರ್ಥಿಸುವರು-

**ಸ ಏಷ ಆತ್ಮಾತ್ಮವತಾಮಧೀಶ್ವರಸ್ತ್ರಯೀ-**
**ಮಯೋ ಧರ್ಮಮಯಸ್ತಪೋಮಯಃ ।**
**ಗತವ್ಯಲೀಕೈರಜಶಂಕರಾದಿಭಿರ್ವಿತರ್ಕ್ಯ-**
**ಲಿಂಗೋ ಭಗವಾನ್ ಪ್ರಸೀದತಾಮ್** ॥೧೯॥

**ಆತ್ಮವತಾಂ** ಸಮಸ್ತದೇಹಿಗಳಿಗೆ (ಜೀವರಿಗೆ) **ಅಧೀಶ್ವರಃ** ಅಧಿಕವಾಗಿ ನಿಯಾಮಕನಾದ, **ತ್ರಯೀಮಯಃ** ವೇದಗಳನ್ನು ಅನುಸರಿಸುವ ಜನರಿಗೆ ವಶನಾದ, **ಧರ್ಮಮಯಃ** ಧರ್ಮಮಾಡುವವರಿಗೆ ವಶನಾದ, **ತಪೋಮಯಃ** ತಪಸ್ವಿಗಳಿಗೆ ವಶನಾದ, **ಗತವ್ಯಲೀಕೈಃ** ನಿಷ್ಕಪಟಿಗಳಾದ, **ಅಜಶಂಕರಾದಿಭಿಃ** ಬ್ರಹ್ಮರುದ್ರಾದಿಗಳಿಂದ, **ವಿತರ್ಕ್ಯಲಿಂಗಃ** ವಿಚಾರ್ಯವಾದ ಸ್ವರೂಪ ಉಳ್ಳ **ಸಃ** ಪೂರ್ವದಲ್ಲಿ ನಮಸ್ಕೃತನಾದ, **ಏಷಃ** ಈ ವಿಧವಾದ ಮಾಹಾತ್ಮ್ಯ ಉಳ್ಳವನೆಂದು ವೇದದಲ್ಲಿ ಪ್ರಸಿದ್ಧನಾದ, **ಆತ್ಮಾ ಭಗವಾನ್** ಪರಮಾತ್ಮನಾದ ಶ್ರೀಹರಿಯು, **ಪ್ರಸೀದತಾಂ** ಸಂತುಷ್ಟನಾಗಲಿ.

ಇಲ್ಲಿ 'ತ್ರಯೀಮಯಃ' ಎಂದು ವೇದವಿದ್ಯೆಯಿಂದ ಅಭೇದ ಹೇಳಿದಂತೆ ತೋರುವುದು. ಅದನ್ನು ನಿರಾಕರಿಸಲು ಪ್ರಮಾಣದಿಂದ ವ್ಯಾಖ್ಯಾನಿಸುವರು-

ತಾತ್ಪರ್ಯ-ವೇದಾನುಸಾರಿವಶಗಃ ಸ್ವೇಚ್ಛಯಾ ತು ಹರಿರ್ಯತಃ ।
ಅತಃ ಸ್ವತಂತ್ರಮಪ್ಯಾಹುಃ ಪ್ರಾಜ್ಞಾ ವೇದಮಯೇತಿ ಹ ॥ -ಇತ್ಯಧ್ಯಾತ್ಮೇ

ಶ್ರೀಹರಿಯು ಸರ್ವಸ್ವತಂತ್ರನಾದರೂ ಸ್ವೇಚ್ಛೆಯಿಂದಲೇ, ಭಕ್ತರಲ್ಲಿ ವಾತ್ಸಲ್ಯದಿಂದಲೇ ವೇದಳನ್ನು ಅನುಸರಿಸಿ ಇರುವ ಪುರುಷರಿಗೆ ಅಧೀನನಾದ್ದರಿಂದ ಪ್ರಾಜ್ಞರು ಶ್ರೀಹರಿಯನ್ನು ವೇದಮಯ ಎಂದು ಹೇಳುವರು. ಈ ವಿಷಯವನ್ನು ಅಧ್ಯಾತ್ಮ ಎಂಬ ಗ್ರಂಥವು ತಿಳಿಸುತ್ತದೆ. ಇದರಿಂದ ಮೂಲದಲ್ಲಿ ತ್ರಯೀಶಬ್ದಕ್ಕೆ ತದನುಸಾರಿ ಎಂದರ್ಥ ಹೇಳಿದಂತೆ ಆಗುತ್ತದೆ. ಮಯಟ್ ಪ್ರತ್ಯಯಕ್ಕೆ ಪ್ರಧಾನವೆಂದರ್ಥ. ಅಂತು ವೇದಾನುಸಾರಿಗಳೇ ಪ್ರಧಾನರಾಗಿ ಉಳ್ಳವನು ಅರ್ಥಾತ್ ಅವರ ಅಧೀನ ಎಂದರ್ಥ ಬರುವುದು. ಇದರಂತೆ ಧರ್ಮಮಯ ತಪೋಮಯ ಶಬ್ದಕ್ಕೂ ಅರ್ಥ ತಿಳಿಯಬೇಕೆಂದು ಭಾವ. ॥೧೯॥

*ಅಧಿಕೃತನಾದುದರಿಂದಲೂ ಅವನ ಪ್ರೀತಿಯು ಅಪೇಕ್ಷಣೀಯ ಎಂಬ ಅಭಿಪ್ರಾಯದಿಂದ ಈ ಗ್ರಂಥಪ್ರತಿಪಾದ್ಯನಾದ ಶ್ರೀಕೃಷ್ಣನ ಪ್ರೀತಿಯನ್ನು ಪ್ರಾರ್ಥಿಸುವರು-*

**ಶ್ರಿಯಃ ಪತಿರ್ಯಜ್ಞಪತಿಃ ಪ್ರಜಾಪತಿಃ**
**ಧಿಯಾಂ ಪತಿರ್ಲೋಕಪತಿರ್ಧರಾಪತಿಃ ।**
**ಪತಿರ್ಗತಿಶ್ಚಾಂಧಕವೃಷ್ಣಿಸಾತ್ತ್ವತಾಂ**
**ಪ್ರಸೀದತಾಂ ಮೇ ಭಗವಾನ್ ಸತಾಂ ಪತಿಃ** ॥ ೨೦ ॥

**ಶ್ರಿಯಃ ಪತಿಃ** ಲಕ್ಷ್ಮೀಪತಿಯು, **ಯಜ್ಞಪತಿಃ** ಯಜ್ಞಗಳಿಗೆ ಫಲ ಕೊಡುವ ಮೂಲಕ ಯಜ್ಞನಿಯಾಮಕನು, **ಪ್ರಜಾಪತಿಃ** ಸಂತತಿ ಮತ್ತು ಜನರ ಪ್ರಾಣರಕ್ಷಕನಾದ್ದರಿಂದ ಪ್ರಜಾಪತಿನಾಮಕನಾದ, **ಧಿಯಾಂ ಪತಿಃ** ಲೋಕಗಳ ಮುಖ್ಯಪತಿಯು, **ಧರಾಪತಿಃ** ಎಲ್ಲ ಜನರಿಗೆ ಆಶ್ರಯವಾದ ಕ್ಷಮಾಶೀಲಳಾದ ಭೂಮಿಗೂ ಪತಿಯು, **ಅಂಧಕವೃಷ್ಣಿಸಾತ್ತ್ವತಾಂ** ಅಂಧಕ-ವೃಷ್ಣಿ-ಸಾತ್ವತರೆಂಬ ಯಾದವರಿಗೆ, **ಪತಿಃ ಗತಿಃ** ನಿಯಾಮಕನು ಆಶ್ರಯನು, **ಸತಾಂ** ಸಜ್ಜನರಿಗೆ, **ಪತಿಃ** ಸ್ವಾಮಿಯಾದ, **ಭಗವಾನ್** ಶ್ರೀಹರಿಯು, **ಮೇ** ನನಗೆ, **ಪ್ರಸೀದತಾಂ** ಪ್ರಸನ್ನನಾಗಲಿ.

ಇಲ್ಲಿ ಶ್ರಿಯಃ ಪತಿಃ ಎಂದು ಹೇಳಿದ್ದರಿಂದ ವಾಗ್ದೇವತೆಯಾದ ರಮೆಯ ಪ್ರೀತಿಯನ್ನೂ ಪ್ರಾರ್ಥಿಸಿದಂತಾಯಿತು. ಭಾಗವತದಲ್ಲಿ ರುಕ್ಮಿಣೀಸತ್ಯಭಾಮಾಪತಿತ್ವ ಹೇಳಿದ್ದರಿಂದ 'ಶ್ರೀರ್ಯತ್ರ ರೂಪಿಣ್ಯುರುಗಾಯಪಾದಯೋಃ ಕರೋತಿ ಮಾನಂ ಬಹುಧಾ ವಿಭೂತಿಭಿಃ' ಮುಂದೆಯೂ ಶ್ರೀಧರಾಪತಿತ್ವವು ಉಕ್ತವಾಗಿದೆ. ದಕ್ಷಾಧ್ವರರಕ್ಷಣೆಯಿಂದ ಯಜ್ಞಪತಿತ್ವ ತಾಪಸಾದಿ ಮನುರೂಪದಿಂದ ಪ್ರಜಾಪತಿತ್ವ ಅನಿರುದ್ಧಾದಿರೂಪದಿಂದ ಶ್ರೀಪದೋಪಲಕ್ಷಿತ ಎಲ್ಲ ತತ್ತ್ವಪತಿತ್ವವನ್ನು ಹೇಳಿದ್ದಾರೆ. ವಚನವ್ಯಾಪಾರವು ಬುದ್ಧಿಯಿಂದ ಸಾಧ್ಯವಾದದ್ದರಿಂದ ಧೀಪತಿತ್ವವು ಪ್ರತ್ಯೇಕವಾಗಿ ಹೇಳಿದೆ. ಯಜ್ಞೋಪೇಂದ್ರಾದಿ ರೂಪದಿಂದ ಲೋಕಪತಿತ್ವವು, ಕೃಷ್ಣರೂಪದಿಂದ ಅಂಧಕವೃಷ್ಣಿಪತಿತ್ವವು ಮತ್ತು ಗತಿತ್ವವು ಅಂದರೆ ಸರ್ವಾಪತ್ತುಗಳಲ್ಲಿ ರಕ್ಷಕತ್ವವು, ದತ್ತ-ಕಪಿಲ-ವ್ಯಾಸಾದಿರೂಪದಿಂದ ಸಾಕ್ಷಾತ್ ಕೃಷ್ಣರೂಪದಿಂದಲೂ ಸಜ್ಜನಪಾಲಕತ್ವವು ಉಕ್ತವಾಗಿದೆ. ॥೨೦॥

*ಹಿಂದೆ 'ವಿಂದಂತಿ ಹಿ ಬ್ರಹ್ಮಗತಿಂ' ಎಂಬಲ್ಲಿ ಕರ್ಮಸಾಧ್ಯವೆಂದು ಹೇಳಿದ ಸ್ವಯೋಗ್ಯ ಜ್ಞಾನವು ಪರೋಕ್ಷ-ಅಪರೋಕ್ಷ ಎರಡು ವಿಧವಾದುದು ಅಭಿಪ್ರೇತವಾಗಿದೆ. ಆದರಲ್ಲಿ ಕರ್ಮವು ಎರಡಕ್ಕೂ ಸಾಕ್ಷಾತ್ ಜನಕವಲ್ಲ, ಕರ್ಮಮಾಡಿದರೂ ಜ್ಞಾನ ಬರುವುದಿಲ್ಲ, ಆದ್ದರಿಂದ ಅವಾಂತರಕಾರಣ ಯಾವುದು ಎಂದು ತಿಳಿಸುತ್ತ ಮತ್ತೆ ಪ್ರೀತಿಯನ್ನು ಪ್ರಾರ್ಥಿಸುವರು-*

**ಯದಂಘ್ರ್ಯಭಿಧ್ಯಾನಸಮಾಧಿಧೌತಯಾ**
**ಧಿಯಾಽನುಪಶ್ಯಂತಿ ಹಿ ತತ್ತ್ವಮಾತ್ಮನಃ ।**
**ವದಂತಿ ಚೈತತ್ಕವಯೋ ಯಥಾರುಚಿ**
**ಸ ಮೇ ಮುಕುಂದೋ ಭಗವಾನ್ ಪ್ರಸೀದತಾಮ್** ॥ ೨೧ ॥

**ಯತ್** ಯಾವ ಪರಮಾತ್ಮನ, **ಅಂಘ್ರಿ** ಪಾದಗಳ, **ಅಭಿಧ್ಯಾನ** ಪ್ರತ್ಯಾಹಾರ ಮುಂತಾದ ಪ್ರಯತ್ನದಿಂದ ಸಂತತ ಚಿಂತಿಸುವುದು, **ಸಮಾಧಿ** ಪ್ರಯತ್ನವಿಲ್ಲದೇ ಚಿಂತಿಸುವುದು ಇವುಗಳಿಂದ, **ಧೌತಯಾ** ವಿಶುದ್ಧವಾದ, **ಧಿಯಾ** ಅಂತಃಕರಣ-ವಿಶೇಷದಿಂದ, **ಆತ್ಮನಃ** ಪರಮಾತ್ಮನ, **ತತ್ತ್ವಂ** ಸ್ವಯೋಗ್ಯಸ್ವರೂಪವನ್ನು, **ಪಶ್ಯಂತಿ** ತಿಳಿಯುವರೋ, **ಕವಯಃ** ಜ್ಞಾನಿಗಳು, **ಏತತ್** ತಾವು ಕಂಡ ಈ ಪರಮಾತ್ಮತತ್ತ್ವವನ್ನು **ಯಥಾರುಚಿ** ಕೇಳುವವರ ಅಭಿರುಚಿಗೆ ಅನುಸಾರವಾಗಿ, **ವದಂತಿ** ಉಪದೇಶಿಸುವರೋ, **ಸಃ** ಅಂತಹ, **ಮುಕುಂದಃ** ಮೋಕ್ಷಪ್ರದನಾದ ಪರಮಾತ್ಮನು, **ಮೇ ಪ್ರಸೀದತಾಮ್** ನನಗೆ ಪ್ರಸನ್ನನಾಗಲಿ.

ಇದರಿಂದ ಅಪರೋಕ್ಷಜ್ಞಾನವಾಗಲು, ಕರ್ಮಮಾಡಿದ ನಂತರ ಶುದ್ಧಾಂತಃಕರಣನಿಗೆ ಸಮಾಧಿಯು ಅವಾಂತರಕಾರಣವೆಂದು, ಮತ್ತು ಸ್ವಯೋಗ್ಯವಾದ ಅಪರೋಕ್ಷಜ್ಞಾನಕ್ಕೆ ಪರಮಾತ್ಮನನ್ನು ಕಂಡವರ ಉಪದೇಶ ಕಾರಣವೆಂದು ಹೇಳಿದಂತಾಯಿತು. ಯಾರು ಪರಮಾತ್ಮನನ್ನು ಕಾಣುವರೋ ಅವರಿಗೂ ಮೊದಲಿಗೆ ಪರಮಾತ್ಮನನ್ನು ಕಂಡವರ ಉಪದೇಶ ಆಗಿಯೇ ಇರುವದು. (ಮುಕುಂದ ಎಂದು ಪರಮಸಾಧ್ಯಪ್ರದರ್ಶಕವಾದ ಪದದಿಂದ ಹಿಂದೆ ಬ್ರಹ್ಮರೂಪಾಂ ಗತಿಂ ಎಂದು ವಾಖ್ಯಾನ ಮಾಡಿದ್ದನ್ನು ವಿವರಿಸದಂತಾಯಿತು. ॥೨೧॥

*ಈಗ ತಮಗೆ ಗುರುಗಳಾದ ವ್ಯಾಸರೂಪಿಯಾದ ಭಗವಂತನ ಪ್ರೀತಿಯನ್ನು ಪ್ರಾರ್ಥಿಸುವರು-*

**ಪ್ರಚೋದಿತಾ ಯೇನ ಪುರಾ ಸರಸ್ವತೀ**
**ವಿತನ್ವತಾಽಜಸ್ಯ ಸತೀಂ ಸ್ಮೃತಿಂ ಹೃದಿ ।**
**ಸ್ವಲಕ್ಷಣಾ ಪ್ರಾದುರಭೂತ್ ಕಿಲಾಸ್ಯತಃ**
**ಸ ಮೇ ಋಷೀಣಾಮೃಷಭಃ ಪ್ರಸೀದತು** ॥ ೨೨ ॥

**ಪುರಾ** ಆದಿಸೃಷ್ಟಿಯಲ್ಲಿ **ಅಜಸ್ಯ** ಉತ್ಪತ್ತಿಶೂನ್ಯನಾದ ಸೃಷ್ಟಿಕರ್ತೃವಾದ ನಾರಾಯಣನ, **ಹೃದಿ** ಅಂತಃಕರಣದಲ್ಲಿ **ಸತೀಂ** ಇರುವ ವೇದವಾಕ್ಯಗಳ, **ಸ್ಥಿತಿಂ** ಕಾಲಬಲದಿಂದ ನಶಿಸಿದ ಶಿಕ್ಷಾದಿಗಳಲ್ಲಿ ಹೇಳಿದ ಸ್ವರವರ್ಣಕ್ರಮಾದಿರೂಪವಾದ ಸ್ಥಿತಿಯನ್ನು **ವಿತನ್ವತಾ** ವಿಸ್ತಾರ ಮಾಡುವ, (ಯಾವ ಸ್ವರವರ್ಣಗಳಿಂದ ಕೂಡಿದ ವೇದವು ಆದಿಸೃಷ್ಟಿಯಲ್ಲಿ ನಾರಾಯಣನ ಅಂತಃಕರಣದಲ್ಲಿ ಇತ್ತೋ ಅದೇ ರೀತಿ ವೇದೊದ್ಧಾರ ಮಾಡುವ ಅಪೇಕ್ಷೆಯಿಂದ ಎಂದರ್ಥ) **ಯೇನ** ಯಾವ ವೇದವ್ಯಾಸರಿಂದ, **ಪ್ರಚೋದಿತಾ** ಪ್ರೇರಿತವಾದ, **ಸರಸ್ವತೀ** ವೇದವಾಣಿಯು, **ಸ್ವಲಕ್ಷಣಾ** ತನ್ನ ಲಕ್ಷಣಗಳಿಂದ ಸಹಿತವಾಗಿ, **ಯಸ್ಯ ಆಸ್ಯತಃ** ಯಾರ ಮುಖದಿಂದ, **ಪ್ರಾದುರಭೂತ್** ವ್ಯಕ್ತವಾಯಿತೋ, **ಸಃ** ಅಂತಹ, **ಋಷೀಣಾಂ ಋಷಭಃ** ಜ್ಞಾನಿಶ್ರೇಷ್ಠರಾದ ವೇದವ್ಯಾಸದೇವರು, **ಮೇ ಪ್ರಸೀದತಾಂ** ನನಗೆ ಪ್ರಸನ್ನರಾಗಲಿ. ॥೨೨॥

*ವೇದವ್ಯಾಸರ ವಚನಗಳು ಸಾಹಿತ್ಯಶಾಸ್ತ್ರದಲ್ಲಿ ಪ್ರಸಿದ್ಧವಾದ ಅಲಂಕಾರಪ್ರದವೆಂದು ಹೇಳುತ್ತಾ ದೇಹಾಂತರ್ಗತನಾದ ಸರ್ವೇಂದ್ರಿಯಪ್ರೇರಕನಾದ ಶ್ರೀಹರಿಯನ್ನು ಪ್ರಾರ್ಥಿಸುವರು-*

**ಭೂತೈರ್ಮಹದ್ಭಿರ್ಯ ಇಮಾಃ ಪುರೋ ವಿಭುಃ**
**ನಿರ್ಮಾಯ ಶೇತೇ ಯದಮೂಷು ಪೂರುಷಃ ।**
**ಭುಂಕ್ತೇ ಗುಣಾನ್ ಷೋಡಶ ಷೋಡಶಾತ್ಮಕಃ**
**ಸೋಽಲಂಕೃಷೀಷ್ಟ ಭಗವಾನ್ ವಚಾಂಸಿ ಮೇ ॥ ೨೩ ॥**

**ಯಃ ವಿಭುಃ** ವ್ಯಾಪ್ತನಾದ ಸಮರ್ಥನಾದ ಶ್ರೀಹರಿಯು, **ಮಹದ್ಭಿಃ ಭೂತೈಃ** ಪೃಥಿವ್ಯಾದಿ ಪಂಚಮಹಾಭೂತಗಳಿಂದ **ಪುರಃ** ಶರೀರಗಳನ್ನು, **ನಿರ್ಮಾಯ** ಸೃಷ್ಟಿಸಿ, **ಅಮೂಷು** ಈ ಶರೀರಗಳಲ್ಲಿ **ಶೇತೇ ಇತಿ ಯತ್** ಇರುವನು ಆದ್ದರಿಂದ, **ಪುರುಷಃ** ಪುರುಷನಾಮಕನಾಗಿ, **ಷೋಡಶಾತ್ಮಕಃ** ಐದು ಜ್ಞಾನೇಂದ್ರಿಯ, ಐದು ಕರ್ಮೇಂದ್ರಿಯ, ಮನಸ್ಸು, ಬುದ್ಧಿ, ಅಹಂಕಾರ, ಚಿತ್ತ, ಚೇತನ ಎಂಬ ಐದುವಿಧವಾದ ಮನಸ್ಸು, ಒಂದು ಸಾಕ್ಷಿ ಹೀಗೆ ಹದಿನಾರು ಇಂದ್ರಿಯಗಳನ್ನು ವ್ಯಾಪಿಸಿದವನಾಗಿ, **ಷೋಡಶಗುಣಾನ್** ಆಯಾ ಇಂದ್ರಿಯವಿಷಯಗಳನ್ನು, **ಭುಂಕ್ತೇ** ಶಬ್ದಾದಿಗಳನ್ನು ಅನುಭವಿಸುವನು ಉಳಿದವುಗಳನ್ನು ಪ್ರೇರಿಸುವನು ಎಂದರ್ಥ, **ಸಃ** ಅಂತಹ, **ಭಗವಾನ್** ಶ್ರೀಹರಿಯು, **ಮೇ** ನನ್ನ **ವಚಾಂಸಿ** ಮಾತುಗಳನ್ನು, **ಅಲಂಕೃಷೀಷ್ಟ** ಸಾಹಿತ್ಯಶಾಸ್ತ್ರದಲ್ಲಿ ಪ್ರಸಿದ್ಧವಾದ

ಅಲಂಕಾರಗಳಿಂದ ಯುಕ್ತವಾಗುವಂತೆ ಮಾಡಲಿ. ಅಲಂಕಾರಿಕವಾದ ಮಾತುಗಳೇ ಶ್ರೋತೃಗಳಿಗೆ ಆಹ್ಲಾದಜನಕವಾಗಿವೆ. ಆದ್ದರಿಂದ ಈ ರೀತಿಯಾದ ಪ್ರಾರ್ಥನೆಯನ್ನು ಮಾಡಿರುವರು. ।। ೨೩ ।।

*ಈಗ ಭಕ್ತ್ಯತಿಶಯದಿಂದ ಶ್ರೀಕೃಷ್ಣನನ್ನು ನಮಸ್ಕರಿಸುವರು-*

**ನಮಸ್ತಸ್ಮೈ ಭಗವತೇ ವಾಸುದೇವಾಯ ವೇಧಸೇ ।**
**ಪಪುರ್ಜ್ಞಾನಮಯಂ ಸೌಮ್ಯಾಃ ಯನ್ಮುಖಾಂಬುರುಹಾಸವಮ್ ।। ೨೪ ।।**

**ಸೌಮ್ಯಾಃ** ಜ್ಞಾನರೂಪವಾದ ಸೊಮರಸವನ್ನು ಪಾನಮಾಡಲು ಅರ್ಹರಾದ ಉದ್ಧವಾದಿಗಳು, **ಜ್ಞಾನಮಯಮ್** ಜ್ಞಾನರೂಪವಾದ, **ಯನ್ಮುಖಾಂಬುರುಹಾಸವಮ್** ಯಾವ ಶ್ರೀಕೃಷ್ಣನ ಮುಖಕಮಲದಲ್ಲಿರುವ ಮಕರಂದವನ್ನು, **ಪಪುಃ** ಪಾನಮಾಡಿದರೊ, **ತಸ್ಮೈ** ಅಂತಹ, **ವಾಸುದೇವಾಯ** ವಸುದೇವಪುತ್ರನಾದ, **ವೇಧಸೇ** ಭಕ್ತರ ಅಭೀಷ್ಟಗಳನ್ನು ಪೂರ್ಣಮಾಡುವ, **ಭಗವತೇ** ಶ್ರೀಹರಿಗೆ, **ನಮಃ** ನಮಸ್ಕಾರಗಳು. ।। ೨೪ ।।

*ಈಗ ರಾಜ ಮಾಡಿದ ಪ್ರಶ್ನಕ್ಕೆ ಉತ್ತರವಾಗಿ ಬ್ರಹ್ಮ-ನಾರದರ ಸಂವಾದವನ್ನು ಸ್ತುತಿಸುವರು-*

**ಏತದೇವಾತ್ಮಭೂ ರಾಜನ್ನಾರದಾಯೇತಿ ಪೃಚ್ಛತೇ ।**
**ವೇದಗರ್ಭೋಽಭ್ಯಧಾತ್ ಸರ್ವಂ ಯದಾಹ ಹರಿರಾತ್ಮನಃ ।। ೨೫ ।।**

**ಹೇ ರಾಜನ್** ಪರೀಕ್ಷಿತನೇ, **ಪೃಚ್ಛತೇ ನಾರದಾಯ** ಪ್ರಶ್ನೆ ಮಾಡಿದ ನಾರದನಿಗೆ, **ಆತ್ಮಭೂಃ** ಪರಮಾತ್ಮನ ಪುತ್ರನಾದ, **ವೇದಗರ್ಭಃ** ಅನಾದಿಕಾಲದಿಂದಲೂ ವೇದಗಳನ್ನು ಉದರದಲ್ಲಿ ಧರಿಸಿದ ಬ್ರಹ್ಮದೇವರು, **ಆತ್ಮನಃ** ತನಗೆ, **ಹರಿಃ** ಶ್ರೀಹರಿಯು, **ಯದಾಹ** ಏನನ್ನು ಹೇಳಿದನೋ, **ತತ್** ಅದು, **ಏತದೇವ** ಈ ಭಾಗವತವೇ ಆಗಿದೆ, **ಇತಿ** ಆದಕಾರಣ, **ಸರ್ವಂ ಅಭ್ಯಧಾತ್** ಎಲ್ಲವನ್ನೂ ಹೇಳಿದನು. ಆದ್ದರಿಂದ ಈ ಭಾಗವತವನ್ನು ನಿನಗೆ ಉಪದೇಶಿಸಿದರೆ ನಿನ್ನ ಪ್ರಶ್ನೆಗೆ ಉತ್ತರವಾಗುತ್ತದೆ ಎಂದು ಭಾವ. ಏವ ಶಬ್ದವು ಅರ್ಥವ್ಯತ್ಯಾಸವಿಲ್ಲದೇ ಹೇಳಿದರೆಂಬುದನ್ನು ತಿಳಿಸುತ್ತದೆ. ।। ೨೫ ।।

**।।।। ಇಲ್ಲಿಗೆ ನಾಲ್ಕನೆಯ ಅಧ್ಯಾಯವು ಸಮಾಪ್ತವಾಯಿತು ।। ।।**

# ಅಥ ಪಂಚಮೋऽಧ್ಯಾಯಃ

**ಸಾರಾಂಶ**

ನಾರದರು ತಮ್ಮ ತಂದೆಯಾದ, ಜಗದ್ಗುರುವಾದ ಬ್ರಹ್ಮದೇವರ ಸನಿಹ ಬರುತ್ತಾರೆ. ಅವರನ್ನು ಸ್ತುತಿಸುತ್ತಾರೆ. ರುದ್ರಾದಿದೇವತೆಗಳಿಗಿಂತಲೂ ಉತ್ತಮರಾದವರು ನೀವು. ಎಲ್ಲ ಜೀವರಾಶಿಗಳನ್ನು ಸೃಷ್ಟಿಮಾಡುವವರು ನೀವು. ನಿಮ್ಮಲ್ಲಿ ನನ್ನದೊಂದು ವಿಜ್ಞಾಪನೆ.

ಸೃಷ್ಟವಾದ ಈ ಲೋಕಗಳೆಲ್ಲ ಯಾವ ಪರಮಾತ್ಮನ ಪ್ರತಿಮಾಸ್ಥಾನೀಯವಾಗಿದೆಯೋ, ಯಾವ ಪರಮಾತ್ಮನನ್ನು ಆಶ್ರಯಿಸಿಕೊಂಡಿದೆಯೋ, ಯಾವನು ಈ ಪ್ರಪಂಚದ ಸೃಷ್ಟಿ-ಸ್ಥಿತಿ-ಸಂಹಾರಗಳನ್ನು ಮಾಡುವನೋ ಅಂತಹ ಪರಮಾತ್ಮನ ಯಥಾರ್ಥಜ್ಞಾನವನ್ನು ನನಗೆ ಮಾಡಿಸಿಕೊಡಿರಿ. ಈ ಎಲ್ಲವನ್ನೂ ನೀವು ಯಥಾರ್ಥವಾಗಿಯೇ ತಿಳಿದಿರುವಿರಿ. ಕರತಲಾಮಲಕದಂತೆ ಈ ಜ್ಞಾನ ನಿಮಗೆ ಸಿದ್ಧವಾಗಿದೆ. ನಿಮ್ಮ ಅರಿವು ಸಾಮಾನ್ಯವಾದುದಲ್ಲ. ನಿಮಗಿಂತಲೂ ಉತ್ತಮರಾದವರು ಮತ್ತಾರೂ ಇಲ್ಲವೆಂದು ನನಗೆ ತೋರುತ್ತಿದೆ. ನಿಮಗೆ ಸಮರಾದವರೂ ಜಗದಲ್ಲಿ ಇಲ್ಲವೆಂದು ನನಗೆ ತೋರುತ್ತದೆ. ಈ ಸಾಮರ್ಥ್ಯ ನಿಮಗಿದ್ದರೂ ಇಷ್ಟು ಶ್ರದ್ಧೆಯಿಂದ ಯಾರನ್ನು ಕುರಿತು ಚಿಂತಿಸುತ್ತಿರುವಿರಿ. ನಿಮ್ಮ ಈ ಚಿಂತನೆಯನ್ನು ಕಂಡ ನನಗೆ ನಿಮಗಿಂತಲೂ ಉತ್ತಮರು ಮತ್ತೊಬ್ಬರು ಇರುವರೆಂಬ ಸಂದೇಹ ಬರುತ್ತಿದೆ. ನನ್ನ ಈ ಸಂಶಯವನ್ನು ಪರಿಹರಿಸಿರಿ ಎಂದು ನಾರದರು ಬ್ರಹ್ಮದೇವರನ್ನು ಕುರಿತು ಪ್ರಶ್ನಿಸಿದರು. ನಾರದರ ಈ ವಾದವು ಪೂರ್ವಪಕ್ಷವಾಗಿದ್ದಿತು. ಇದು ಬ್ರಹ್ಮದೇವರಿಗೆ ಗೊತ್ತು. ಆದರೂ ತನಗೆ ಸಮಾನ ಉತ್ತಮ ಮತ್ತೊಬ್ಬರಿಲ್ಲ ಎಂಬ ಅಸದ್ವಾದವನ್ನು ಶ್ರವಣಮಾಡುವ ಮೂಲಕ ಬರಬಹುದಾದ ಪಾಪವು ಬರಬಾರದು ಎಂಬ ಉದ್ದೇಶದಿಂದ ಶ್ರೀಹರಿಯನ್ನು ಸ್ತುತಿಸುತ್ತಾರೆ. ವಾಸುದೇವದ್ವಾದಶಾಕ್ಷರವನ್ನು ಚಿಂತಿಸುತ್ತಾರೆ. ಹೇಳುತ್ತಾರೆ. ಹೇ ನಾರದ!

ನೀನು ಹೇಳಿದ ಮಾತು ತಪ್ಪು. ನಾನು ಜಗದ್ಗುರು ಅಲ್ಲ. ಭಗವಂತನ ಮಾಯೆಯಿಂದ ಭ್ರಾಂತರಾಗಿರುವ ಜನರ ಹೇಳಿಕೆಯದು. ಹುರುಳಿಲ್ಲದ ಹೇಳಿಕೆ. ಸ್ವಯಂ ನಿತ್ಯಮುಕ್ತಳಾದ ರಮಾದೇವಿಯು ಕೂಡಾ ದೇವರ ಮುಂದೆ ಹೋಗಲು ನಾಚುತ್ತಾಳೆ. ಅಂತಹ ಲಕ್ಷ್ಮೀದೇವಿಯಿಂದ ಅಭಿಮನ್ಯವಾದ ಶೈವಲೀ ಮಾಯಾದಿಂದ ಮೋಹಿತರಾದ ಜನರು ಅಹಂಮಮತೆಗಳಿಂದ ಬದ್ಧರಾಗುತ್ತಾರೆ. ಆದರೇ ಎಲ್ಲದಕ್ಕೂ ಸ್ವತಂತ್ರಕರ್ತಾ ಭಗವಂತನೇ ಆಗಿದ್ದಾನೆ.

ದ್ರವ್ಯ-ಕರ್ಮ-ಕಾಲ-ಸ್ವಭಾವ-ಜೀವ ಎಲ್ಲವೂ ದೇವರ ಅಧೀನವಾಗಿದೆ. ದೇವರಿಲ್ಲದೇ ಇವುಗಳಿಗೆ ಅಸ್ತಿತ್ವವೇ ಇರುವುದಿಲ್ಲ. ವೇದಗಳು, ದೇವತೆಗಳು, ಯಜ್ಞ-ಯಾಗಾದಿಗಳು, ಲೋಕಗಳು, ಅಷ್ಟಾಂಗಯೋಗಗಳು, ಚಾಂದ್ರಾಯಣಾದಿ ವ್ರತಗಳು ಎಲ್ಲವೂ ಭಗವತ್ಪರವಾಗಿವೆ. ಎಲ್ಲರಿಗೂ ಪ್ರಾಪ್ಯನಾದವನು ಶ್ರೀವಿಷ್ಣುವೇ ಆಗಿದ್ದಾನೆ.

ನಾರದನೇ ಕೇಳು. ಈ ಪ್ರಪಂಚವನ್ನು ಸೃಷ್ಟಿಸಿದವನು ನಾನಲ್ಲ. ನನ್ನನ್ನೇ ದೇವರು ಸೃಷ್ಟಿಸಿದ್ದಾನೆ. ಆ ಭಗವಂತನ ಕರುಣಾಕಟಾಕ್ಷದಿಂದಲೇ ಅವನ ಸಂಕಲ್ಪಕ್ಕೆ ಅನುಗುಣವಾಗಿ ದೇವರ ಸೇವಾರೂಪವಾಗಿ ಅವನಿತ್ತ ಶಕ್ತಿಯಿಂದ ಈ ಪ್ರಪಂಚವನ್ನು ಸೃಷ್ಟಿಮಾಡಿದ್ದೇನೆ. ನನ್ನಲ್ಲಿ ಬ್ರಹ್ಮರೂಪನಾಗಿ ನಿಂತು ಈ ಶಕ್ತಿಯನ್ನು ನನಗೆ ನೀಡುತ್ತಾನೆ ಪರಮಾತ್ಮ. ಎಲ್ಲದಕ್ಕೂ ಶ್ರೀಹರಿಯೇ ಮುಖ್ಯಕರ್ತೃವಾಗಿದ್ದಾನೆ. ಸರ್ವಸಮರ್ಥ-ನಾಗಿದ್ದರೂ ಪರಮಾತ್ಮ ಪ್ರಕೃತಿಯನ್ನು ಉಪಾದಾನ ಮಾಡಿ ಜಗತ್ತನ್ನು ಸೃಷ್ಟಿಸುತ್ತಾನೆ. ಈ ಗುಣಗಳಿಂದಲೇ ಪರಮಾತ್ಮನು ಜೀವನನ್ನು ಬಂಧಿಸುತ್ತಾನೆ. ಸ್ವಯಂ ಗುಣಗಳು ಅಚೇತನವಾಗಿದ್ದರೂ ಭಗವಂತನ ಇಚ್ಛೆಯಿಂದಲೇ ಬಂಧಕವಾಗುತ್ತವೆ. ಈ ಗುಣಗಳಿಂದಲೇ ಜೀವರನ್ನು ಮುಕ್ತಗೊಳಿಸುತ್ತಾನೆ. ಸೃಷ್ಟ್ಯಾದಿಕಾರ್ಯಗಳಲ್ಲಿ ಈ ಗುಣಗಳನ್ನು ಪರಮಾತ್ಮ ಸ್ವೀಕರಿಸುತ್ತಾನೆ. ಇವುಗಳಿಲ್ಲದೆಯೂ ಸೃಷ್ಟಿಸುವ ಸಾಮರ್ಥ್ಯ ಪರಮಾತ್ಮನಿಗೆ ಇದೆ. ಮಹದಾದಿತತ್ತ್ವಗಳನ್ನು ಅವುಗಳ ಅಭಿಮಾನಿಗಳನ್ನು ಸೃಷ್ಟಿಸಿ ಬ್ರಹ್ಮಾಂಡವನ್ನೂ ಪರಮಾತ್ಮ ಸೃಷ್ಟಿಸುತ್ತಾನೆ. ತನ್ನ ಅವಯವಗಳಿಂದಲೇ ಈ ಎಲ್ಲ ಜಗತ್ತನ್ನು ಪರಮಾತ್ಮ ಸೃಷ್ಟಿಸುತ್ತಾನೆ. ಪರಮಾತ್ಮನ ಪ್ರತಿಮಾರೂಪವಾದ ಈ ಬ್ರಹ್ಮಾಂಡದಲ್ಲಿ ಚತುರ್ದಶಲೋಕಗಳು ಶ್ರೀಹರಿಯ ಅವಯವಗಳೆಂದು ಸಾಧಕರು ಉಪಾಸನೆ ಮಾಡುತ್ತಾರೆ.

ಈ ಅಧ್ಯಾಯದಲ್ಲಿ ಬ್ರಹ್ಮ-ನಾರದರ ಆಖ್ಯಾಯಿಕೆಯನ್ನು ಹೇಳುವ ಮುಖಾಂತರ ಗ್ರಂಥದ ಆದಿಯಲ್ಲಿ ಪ್ರತಿಜ್ಞಾತವಾದ ಜಗಜ್ಜನ್ಮಾದಿಕಾರಣತ್ವರೂಪವಾದ ಲಕ್ಷಣವನ್ನು ವಿವರವಾಗಿ ಪ್ರತಿ ಪಾದಿಸುವರು. ಮೊದಲಿಗೆ ನಾರದರು ನಮಸ್ಕಾರಪೂರ್ವಕವಾಗಿ ಬ್ರಹ್ಮದೇವರನ್ನು ಪ್ರವಚನ ಮಾಡಲು ಪ್ರಾರ್ಥಿಸುವರು ಎಂದು ಹೇಳುವರು-

**ನಾರದ ಉವಾಚ-**

**ದೇವ ದೇವ ನಮಸ್ತೇಽಸ್ತು ಭೂತಭಾವನ ಪೂರ್ವಜ ।**
**ತದ್ವಿಜಾನೀಹಿ ಯಜ್ಜ್ಞಾನಮಾತ್ಮತತ್ತ್ವನಿದರ್ಶಮ್ ॥೧॥**

**ಹೇ ಭೂತಭಾವನ** ಎಲ್ಲ ಪ್ರಾಣಿಗಳನ್ನು ಹುಟ್ಟಿಸುವವನೇ, (ಆದ್ದರಿಂದಲೇ) **ಪೂರ್ವಜ** ಎಲ್ಲರಿಗಿಂತ ಮೊದಲು ಜನಿಸಿದವನೇ, **ದೇವದೇವ** ದೇವತೆಗಳಿಗೂ ದೇವತೆಯಾದವನೇ, **ತೇ** ನಿನಗೆ, **ನಮಃ ಅಸ್ತು** ನಮಸ್ಕಾರವಿರಲಿ, **ಯತ್** ಯಾವುದು, **ಆತ್ಮತತ್ತ್ವನಿದರ್ಶನಮ್** ಪರಮಾತ್ಮನ ಸ್ವರೂಪವನ್ನು ಚನ್ನಾಗಿ ತಿಳಿಸಿಕೊಡುವುದೋ, **ಜ್ಞಾನಮ್** ಅಂತಹ ಜ್ಞಾನಸಾಧನವಾದ ಪುರಾಣವನ್ನು **ವಿಜಾನೀಹಿ** ತಿಳಿಸಿಕೊಡು.

ಇಲ್ಲಿ ನಾರದರು ತಮಗೆ ಬ್ರಹ್ಮಾಭೇದ ಇರುವುದರಿಂದ 'ವಿಜಾನೀಹಿ ತಿಳಿದುಕೋ' ಎಂದು ಹೇಳಿದಂತೆ ತೋರುವುದು ಕಾರಣ ಅನುವಾದ ಮಾಡಿ ಪ್ರಕೃತಸಂಗತವಾಗುವಂತೆ ವ್ಯಾಖ್ಯಾನಿಸುವರು-

**ತಾತ್ಪರ್ಯ- ವಿಜಾನೀಹಿ ವಿಜ್ಞಾಪಯ**

(ವ್ಯತ್ಯಾಸವಾಗಿ ಹೇಳಲು ಪ್ರಯೋಜನವನ್ನು ಮಹಾವ್ಯಾಕರಣಸೂತ್ರದಿಂದ ತಿಳಿಸುವರು)

**'ವ್ಯತ್ಯಯೋ ಭೇದಸ್ವಾತಂತ್ರ್ಯಕರಣೇಷು' ಇತಿ ವಚನಾತ್॥**

ಇಲ್ಲಿ ವಿಜಾನೀಹಿ ಎಂದರೆ ತಿಳಿಸಿರಿ ಎಂದರ್ಥವೇ ಹೊರತು ತಿಳಿಯಿರಿ ಎಂದಲ್ಲ. ಭೇದ ಸ್ವಾತಂತ್ರ್ಯ, ಕರಣತ್ವ ಇವುಗಳನ್ನು ಹೇಳುವಾಗ ಸುಪ್-ತಿಙ್-ವಿಕರಣ-ಲಿಂಗ-ಪುರುಷ ಇವುಗಳಲ್ಲಿ ವ್ಯತ್ಯಾಸ ಮಾಡುವುದು ವಿಹಿತವೇ ಆಗಿದೆ ಎಂದು ಈ ಸೂತ್ರವು ತಿಳಿಸುತ್ತದೆ. ಆದ್ದರಿಂದ ಪ್ರಕೃತ ಚತುರ್ಮುಖನು ತಿಳಿದುಕೊಳ್ಳುವ ನಾರದನಿಂದ ಭಿನ್ನನಾಗಿದ್ದಾನೆ. ಉಪದೇಶಕನಾದ ಚತುರ್ಮುಖನಿಗೆ ಪ್ರಯೋಜಕಕರ್ತೃತ್ವರೂಪವಾದ ಸ್ವಾತಂತ್ರ್ಯವಿದೆ. ನಾರದರ ಚಿತ್ತಕ್ಕೆ ಅಭಿಮಾನಿಯಾಗಿರುವುದರಿಂದ ಕರಣತ್ವವೂ ಇದೆ. ಆದಕಾರಣ ಇವುಗಳನ್ನು ತಿಳಿಸಿಕೊಡುವುದೇ 'ವಿಜ್ಞಾಪಯ' ಎಂಬುದರ ಬದಲಾಗಿ

'ವಿಜಾನೀಹಿ' ಎಂದು ವ್ಯತ್ಯಾಸವಾಗಿ ಹೇಳುವುದಕ್ಕೆ ಕಾರಣವಾಗಿದೆ.

ನೀನೇ ನನ್ನ ಚಿತ್ತವನ್ನು ಪ್ರೇರಿಸಿ ಪುರಾಣವನ್ನು ನಾನು ಚೆನ್ನಾಗಿ ತಿಳಿಯುವಂತೆ ಮಾಡು ಎಂದು ಭಾವ. ॥ ೧ ॥

*ನಾರದರು ಸಾಮಾನ್ಯವಾಗಿ ತಾವು ತಿಳಿದ ಭಗವನ್ಮಾಹಾತ್ಮ್ಯವನ್ನು ಅನುವಾದ ಮಾಡಿ ವಿಶೇಷವಾಗಿ ಹೇಳೆಂದು ಕೇಳುವರು-*

**ಯದ್ರೂಪಂ ಯದಧಿಷ್ಠಾನಂ ಯತಃ ಸೃಷ್ಟಮಿದಂ ವಿಭೋ ।**
**ಯತ್ಸಂಸ್ಥಂ ಯತ್ಪರಂ ಯಚ್ಚ ತತ್ತತ್ತ್ವಂ ವದ ತತ್ತ್ವತಃ ॥ ೨ ॥**

**ಇದಂ** ಈ ಪ್ರಪಂಚವು, **ಯದ್ರೂಪಮ್** ಅವನ ಅಧೀನವಾದ್ದರಿಂದ ಯಾವ ಶ್ರೀಹರಿಯ ರೂಪವಿದ್ದಂತೆಯೋ, **ಯದಧಿಷ್ಠಾನಮ್** ಯಾವ ಶ್ರೀಹರಿಯೇ ಮನೆಯಂತೆ ಮೂಲಾಧಾರವಾಗಿ ಉಳ್ಳದ್ದೋ, **ಯತಃ ಸೃಷ್ಟಂ** ಯಾವನಿಂದ ಜನಿಸಿದೆಯೋ, **ಯತ್ಸಂಸ್ಥಂ** ಮನೆಯಲ್ಲಿರುವ ಮಣೆಯ ಮೇಲೆ ಕುಳಿತಂತೆ ಸಾಕ್ಷಾತ್ತಾಗಿ ಯಾವನಲ್ಲಿದೆಯೋ, **ಯತ್ಪರಂ** ಯಾವನು ಉತ್ತಮನಾಗಿ ಉಳ್ಳದ್ದೋ, **ಯಚ್ಚ** ಯಾವನ ಅಧೀನವೋ, **ತತ್ ತತ್ತ್ವಮ್** ಆ ಹರಿಯ ಸರ್ವೋತ್ತಮತ್ವಮಹಿಮೆಯನ್ನು **ತತ್ತ್ವತಃ ವದ** ನಿಜವಾಗಿ ಹೇಳು.

ಇಲ್ಲಿ 'ಯದ್ರೂಪಂ' ಎಂಬುದಕ್ಕೆ ಯಾವನ ಸ್ವರೂಪ ಎಂದು ಅರ್ಥ ಆಗಬಾರದೆಂದು ಪ್ರಮಾಣದಿಂದ ವ್ಯಾಖ್ಯಾನಿಸುವರು-

**ತಾತ್ಪರ್ಯ- ತದ್ವಶತ್ವಾದಿದಂ ರೂಪಂ ಹರೇರ್ನೈವ ಸ್ವರೂಪತಃ ।**
**ಇತಿ ಮಾನಸಂಹಿತಾಯಾಮ್ ।**

ಭಗವಂತನ ಅಧೀನವಾದುದರಿಂದ ಈ ಜಗತ್ತು ಭಗವಂತನ ರೂಪವೆಂದು ಕರೆಯಲ್ಪಡುವುದೇ ಹೊರತು ಮತ್ಸ್ಯಾದಿಗಳಂತೆ ಸ್ವರೂಪವಾದದ್ದರಿಂದಲ್ಲ. ಹೀಗೆಂದು ಮಾನಸಂಹಿತೆಯಲ್ಲಿ ಹೇಳಿದೆ.

'ಯದಧಿಷ್ಠಾನಂ' 'ಯತ್ಸಂಸ್ಥಂ' ಎಂಬ ಪದಗಳಿಗೆ ಪುನರುಕ್ತಿ ದೋಷಬರದಿರಲೆಂದು ಪ್ರಮಾಣದಿಂದ ಅರ್ಥಭೇದವನ್ನು ತಿಳಿಸುವರು-

ಅಧಿಷ್ಠಾನಮಿತಿ ಪ್ರೋಕ್ತಂ ಮೂಲಾಧಾರಂ ವಿಚಕ್ಷಣೈಃ ।
ಯತ್‌ಸ್ಥಿತಂ ದೃಶ್ಯತೇ ವಸ್ತು ಸಂಸ್ಥಾನಂ ತದುದೀರಿತಮ್ ॥
ಉಭಯಂ ಹರಿರೇವಾಸ್ಯ ಜಗತೋ ಮುನಿಪುಂಗವ ॥ -ಇತಿ ವಾಮನೇ

ಒಂದು ಮನೆಯಲ್ಲಿ ಮಣೆಯ ಮೇಲೆ ಒಂದು ಪುಸ್ತಕವಿದೆ. ಪುಸ್ತಕಕ್ಕೆ ಸಾಕ್ಷಾತ್ ಆಧಾರವಾಗಿದೆ ಮಣೆ. ಸಾಕ್ಷಾತ್ ಆಧಾರವಾದ ಮಣೆಯು ಸಂಸ್ಥಾನವೆನಿಸುತ್ತದೆ. ಪುಸ್ತಕಕ್ಕೆ ಆಧಾರವಾದ ಆ ಮಣೆಗೆ ಆಧಾರವಾದ ಮನೆಯು ಅಧಿಷ್ಠಾನವೆನಿಸುತ್ತದೆ. ಇದರಂತೆ ಜಗತ್ತಿಗೆ ರೂಪಭೇದದಿಂದ ಮೂಲಾಧರನು ಅವಾಂತರ ಅಧಿಷ್ಠಾನನೂ ಎರಡೂ ಶ್ರೀಹರಿಯೇ ಆಗಿದ್ದಾನೆ. ಈ ಜಗತ್ತಿಗೆ ಮಣೆಯಂತೆ ಸಾಕ್ಷಾತ್ ಆಧಾರನೂ, ಮನೆಯಂತೆ ಆಧಾರನೂ ಶ್ರೀಹರಿಯೇ ಆಗಿದ್ದಾನೆ ಎಂದು ಅರ್ಥ. ಈ ವಿಷಯವನ್ನು ವಾಮನಪುರಾಣವು ತಿಳಿಸುತ್ತದೆ.

'ಯತ್ಪರಂ' ಎಂಬುದಕ್ಕೆ 'ಯಸ್ಮಾತ್ ಪರಃ' ಯಾವನಿಗಿಂತ ಉತ್ತಮ ಎಂಬ ಅರ್ಥವಾಗದಿರಲೆಂದು ಪ್ರಮಾಣದಿಂದ ವ್ಯಾಖ್ಯಾನಿಸುವರು. ಮತ್ತು 'ಯಚ್ಚ' ಎಂಬುದಕ್ಕೆ ಅಭೇದವೆಂದರ್ಥವಾಗದಿರಲೂ ಪ್ರಮಾಣದಿಂದ ವ್ಯಾಖ್ಯಾನಿಸುವರು-

**ತಾತ್ಪರ್ಯ- ಹರಿಃ ಪರೋಽಸ್ಯ ಜಗತೋ ಹ್ಯವ್ಯಕ್ತಾದೇಶ್ಚ ಕೃತ್ಸ್ನಶಃ ।**
**ಅತಸ್ತತ್ಪರಮೇವೇದಂ ವದಂತಿ ಮುನಯೋಽಮಲಾಃ ॥**
**-ಇತಿ ಸಾತ್ತ್ವತಸಂಹಿತಾಯಾಮ್ ॥**

**ಯದಧೀನಾ ಯಸ್ಯ ಸತ್ತಾ ತತ್ತದಿತ್ಯೇವ ಭಣ್ಯತೇ ।**
**ವಿದ್ಯಮಾನೇ ವಿಭೇದೇಽಪಿ ಮಿಥೋಽನಿತ್ಯಂ ಸ್ವರೂಪತಃ ॥ -ಇತಿ ಭವಿಷ್ಯತ್ಪರ್ವಣಿ**

ಅವ್ಯಕ್ತ ಮೊದಲಾದ ಎಲ್ಲ ಜಗತ್ತಿಗಿಂತ ಶ್ರೀಹರಿಯು ಉತ್ತಮನಾಗಿರುವನು. ಆದಕಾರಣ ಜಗತ್ತನ್ನು ತತ್ಪರ ಎಂದರೆ ಶ್ರೀಹರಿಯೇ ಪರವಾಗಿ ಉಳ್ಳದ್ದೆಂದು ಮುನಿಗಳು ಹೇಳುವರು. ಹೀಗೆಂದು ಸಾತ್ತ್ವತಸಂಹಿತೆಯಲ್ಲಿ ಹೇಳಿದೆ.

ಯಾವ ವಸ್ತುವಿನ ಸ್ಥಿತಿಯು ಯಾರ ಅಧೀನವೋ ಅದು ನಿತ್ಯದಲ್ಲಿಯೂ ಸ್ವರೂಪತಃ ಭೇದವಿದ್ದರೂ ಅವನೇ ಎಂದು ಹೇಳಲ್ಪಡುತ್ತದೆ. ಎಂದು ಭವಿಷ್ಯತ್ಪರ್ವದಲ್ಲಿದೆ. ॥೨॥

*ನನ್ನ ಪ್ರಶ್ನೆಗಳಿಗೆ ಉತ್ತರಿಸುವ ತತ್ತ್ವಜ್ಞಾನ ನಿಮಗಿದೆ ಆದ್ದರಿಂದ ನನಗೆ ತಿಳಿಯದು ಎಂದು ಹೇಳಬೇಡಿರಿ ಎಂಬ ಅಭಿಪ್ರಾಯದಿಂದ ಹೇಳುವರು-*

**ಸರ್ವಂ ಹ್ಯೇತದ್ಭವಾನ್ ವೇದ ಭೂತಭವ್ಯಭವತ್ಪ್ರಭುಃ ।**
**ಕರಾಮಲಕವದ್ವಿಶ್ವಂ ವಿಜ್ಞಾನಾವಸಿತಂ ತವ ॥ ೩ ॥**

**ಭೂತಭವ್ಯಭವತ್ಪ್ರಭುಃ** ಹಿಂದೆ ಹುಟ್ಟಿದ, ಮುಂದೆ ಹುಟ್ಟುವ, ಈಗಿರುವ ಎಲ್ಲ ವಸ್ತುಗಳಿಗೆ ಒಡೆಯನು ಆದ್ದರಿಂದ, **ತವ** ನಿಮಗೆ, **ವಿಶ್ವಂ** ಎಲ್ಲ ಶಾಸ್ತ್ರವೇದ್ಯವಾದ

ಪರಾಪರತತ್ವವು **ಕರಾಮಲಕವತ್** ಕೈಯಲ್ಲಿಯ ನೆಲ್ಲಿಕಾಯಿಯಂತೆ, ಅಥವಾ ಕೈಯಲ್ಲಿಯ **ಅಮಲ** ಶುದ್ಧವಾದ **ಕ** ಶುದ್ಧವಾದ ನೀರಿನಂತೆ **ವಿಜ್ಞಾನಾವಸಿತಂ** ವಿಶಿಷ್ಟಜ್ಞಾನದಿಂದ ನಿಶ್ಚಿತವಾಗಿದೆ ಆದ್ದರಿಂದ, **ಸರ್ವಂ ಏತತ್** ನನಗೆ ಹೇಳಬೇಕಾದುದನ್ನೆಲ್ಲ, **ಭವಾನ್** ತಾವು, **ವೇದ** ತಿಳಿದಿರುವಿರಿ. ।। ೩ ।।

*ಈ ವರೆಗೆ ಜಗದಾಧಾರನಾದ ಶ್ರೀಹರಿಯ ವಿಷಯದಲ್ಲಿ ಪ್ರಶ್ನಿಸಿ ಈಗ ನಿನಗೆ ಜ್ಞಾನಾದಿ ಪ್ರದನು ಯಾರು ಎಂದು ಪ್ರಶ್ನಿಸುತ್ತಿದ್ದಾರೆ-*

**ಯದ್ವಿಜ್ಞಾನೋ ಯದಾಧಾರೋ ಯತ್ಪರಸ್ತ್ವಂ ಯದಾತ್ಮಕಃ ।**
**ಏಕಃ ಸೃಜಸಿ ಭೂತಾನಿ ಭೂತೈರೇವಾತ್ಮಮಾಯಯಾ** ।। ೪ ।।

**ಯದ್ವಿಜ್ಞಾನಃ** ನೀವು ಯಾರಿಂದ ಜ್ಞಾನವನ್ನು ಪಡೆದಿರುವಿರಿ, **ಯದಾಧಾರಃ** ನಿಮಗೆ ಆಧಾರ ಯಾರು, **ಯತ್ಪರಃ** ನಿಮಗಿಂತಲೂ ಉತ್ತಮರು ಯಾರು, ಮತ್ತು, **ತ್ವಂ** ನೀವು, **ಯದಾತ್ಮಕಃ** ಯಾವನು ಸ್ವಾಮಿಯಾಗಿ ಉಳ್ಳವರು, **ತತ್** ಅದನ್ನು, **ವದ** ಹೇಳಿರಿ ಎಂದು ಹಿಂದಿನ ಶ್ಲೋಕದಿಂದ ಅನ್ವಯಮಾಡಿಕೊಳ್ಳಬೇಕು.

**ಆತ್ಮಮಾಯಯಾ** ಸ್ವೇಚ್ಛೆಯಿಂದ ಅಥವಾ ನಿಮ್ಮ ಅಧೀನವಾದ ಪ್ರಕೃತಿಯಿಂದ, **ಭೂತಾನಿ** ಚರಾಚರಪ್ರಪಂಚವನ್ನು, **ಭೂತೈಃ** ಪಂಚಮಹಾಭೂತಗಳಿಂದ, **ಏಕಃ ಏವ** ಅಸಹಾಯರಾಗಿ, **ಸೃಜಸಿ** ಸೃಷ್ಟಿಸುವಿರಿ? (ಎಂದು ನಾರದರು ಪೂರ್ವಪಕ್ಷ ಮಾಡಿದರು.)

ಇಲ್ಲಿ ನಾರದರು ತಮ್ಮ ಮಾತಿಗೆ ವಿರುದ್ಧವಾಗಿ ಚತುರ್ಮುಖನಿಗೇನೇ ಸರ್ವೋತ್ತಮತ್ವವನ್ನು ಹೇಳುವರು ಎಂದು ತೋರುತ್ತದೆ. ಆದ್ದರಿಂದ ತಾತ್ಪರ್ಯವನ್ನು ಹೇಳುತ್ತಾರೆ-

ತಾತ್ಪರ್ಯ- ತದಧಿಕಂ ಜ್ಞಾತುಂ ಪೂರ್ವಪಕ್ಷಂ ದರ್ಶಯತಿ । ಏಕಃ ಸೃಜಸೀತ್ಯಾದಿನಾ ।। ೪ ।।

*ಬ್ರಹ್ಮದೇವರಿಗಿಂತ ಉತ್ತಮರು ಯಾರೆಂದು ಬ್ರಹ್ಮದೇವರ ಮುಖದಿಂದಲೇ ತಿಳಿಯಲು ಪೂರ್ವಪಕ್ಷರೂಪವಾಗಿ ನಾರದರು 'ನೀನೊಬ್ಬನೇ ಸೃಷ್ಟಿಸುವಿ' ಎಂದು ಹೇಳಿರುವರು. ಕಾರಣ ವಿರೋಧವಿಲ್ಲ.*

**ಆತ್ಮನ್ ಭಾವಯಸೇ ತಾನಿ ನ ಪರಾಭಾವಯೇಃ ಸ್ವಯಮ್ ।**
**ಆತ್ಮಶಕ್ತಿಮವಷ್ಟಭ್ಯ ಸೂತ್ರನಾಭಿರಿವಾऽಕ್ಲಮಃ** ।। ೫ ।।

**ತಾನಿ** ಸೃಷ್ಟಿಸಿದ ಚರಾಚರಗಳನ್ನು, **ಆತ್ಮನ್** ನಿನ್ನಲ್ಲಿ **ಭಾವಯಸೇ** ರಕ್ಷಿಸುವಿ, **ಪರಾಕ್** ನಿನ್ನಿಂದ ಹೊರಗೆ, **ನ ಭಾವಯೇಃ** ಪಾಲಿಸುವುದಿಲ್ಲ ಹೇಗೆಂದರೆ, **ಆತ್ಮಶಕ್ತಿಂ ಅವಷ್ಟಭ್ಯ** ತನ್ನ ಸಾಮರ್ಥ್ಯವನ್ನಾಶ್ರಯಿಸಿ, **ಅಕ್ಲಮಃ** ಶ್ರಮವಿಲ್ಲದೇ, **ಸೂತ್ರನಾಭಿಃ ಇವ** ಜೇಡರ ಹುಳದಂತೆ. (ಅದು ತಾನು ಸೃಷ್ಟಿಸಿದ ತಂತುವನ್ನು ತಾನೇ ಭಕ್ಷಿಸುವುದು)

*ಈವರೆಗೆ ಬ್ರಹ್ಮನಿಗೆ ಕಾರಣತ್ವವನ್ನು ಉಪಪಾದಿಸಿ ಬೇರೆಯವರಿಗೆ ಕಾರಣತ್ವವನ್ನು ದೂಷಿಸುವರು-*

**ನಾಽಹಂ ವೇದ ಪರಂ ತ್ವಸ್ಮಾನ್ನಾಽವರಂ ನ ಸಮಂ ವಿಭೋ ।**
**ನಾಮರೂಪಗುಣೈರ್ಭಾವ್ಯಂ ಸದಸತ್ ಕಿಂಚಿದನ್ಯತಃ ॥ ೬ ॥**

**ನಾಮರೂಪಗುಣೈಃ** ಮನುಷ್ಯ-ತಿರ್ಯಕ್ ಮುಂತಾದ ನಾಮಗಳಿಂದ, ಎರಡು ಕಾಲು, ನಾಲ್ಕು ಕಾಲು ಮುಂತಾದ ರೂಪಗಳಿಂದ, ಬಿಳಿ-ಕಪ್ಪು ಮುಂತಾದ ಗುಣಗಳಿಂದ ಕೂಡಿಕೊಂಡು **ಸದಸತ್** ಸ್ಥೂಲ-ಸೂಕ್ಷ್ಮವಾದ, **ಕಿಂಚಿತ್** ಎಲ್ಲ ಜಗತ್ತು, **ಅನ್ಯತಃ** ಯಾವ ಬೇರೆಯದರಿಂದ **ಭಾವ್ಯಂ** ಹುಟ್ಟುವುದೋ, **ತತ್** ಆ ವಸ್ತುವು, **ಅಸ್ಮಾತ್** ನಿಮ್ಮಿಂದ, **ಪರಮ್** ಉತ್ತಮವಾದುದು, **ಅವರಮ್** ನೀಚವಾದುದು, **ಸಮಮ್** ಸದೃಶವಾದುದು ಇವುಗಳನ್ನು **ಅಹಂ ನ ವೇದ** ತಿಳಿದಿಲ್ಲ. ಅಂದರೆ ಜಗದುತ್ಪಾದಕನಾದವನು ನಿನ್ನಿಂದ ಬೇರೆ ಯಾವುದೂ ಇಲ್ಲವೆಂದು ಭಾವ. ॥ ೬ ॥

*ಸರಿ ಹಾಗಾದರೆ ಈರೀತಿ ತಿಳಿದ ನೀನು ಪ್ರಶ್ನೆ ಏಕೆ ಮಾಡುವಿ? ಅದಕ್ಕೆ ಮೂಲವಾದ ಸಂಶಯವೇ ಇಲ್ಲವಲ್ಲ ಎಂದರೆ ಸಂಶಯಕಾರಣವನ್ನು ತಿಳಿಸುವರು-*

**ಸ ಭವಾನಚರದ್ ಘೋರಂ ಯತ್ತಪಃ ಸುಸಮಾಹಿತಃ ।**
**ತೇನ ಖೇದಯಸೇ ನಸ್ತ್ವಂ ಪರಾಂ ಶಂಕಾಂ ಚ ಯಚ್ಛಸಿ ॥ ೭ ॥**

**ಸಃ ಭವಾನ್** ಇಂತಹ ನೀನು, **ಸುಸಮಾಹಿತಃ** ಅತ್ಯಂತ ಏಕಾಗ್ರಚಿತ್ತದಿಂದ, **ಘೋರಂ** ಕಠಿಣವಾದ, **ಯತ್ ತಪಃ ಅಚರತ್** ತಪಸ್ಸನ್ನೇನು ಮಾಡಿರುವೆಯೋ, **ತೇನ** ಅದರಿಂದ, **ನಃ ಖೇದಯಸೇ** ನಿಮ್ಮ ವಿಷಯದಲ್ಲಿ ಅಲಂ ಬುದ್ಧಿಯನ್ನು ಹುಟ್ಟಿಸಲಾರಿರಿ, **ಪರಾಂ ಶಂಕಾಂ ಚ ಯಚ್ಛಸಿ** ಬೇರೆ ಕರ್ತೃಗಳಿದ್ದಾರೆ ಎಂಬ ಶಂಕೆಯನ್ನು ಹುಟ್ಟಿಸುವಿರಿ ಎಂದರ್ಥ. ॥ ೭ ॥

**ಏತನ್ಮೇ ಪೃಚ್ಛತಃ ಸರ್ವಂ ಸರ್ವಜ್ಞ ಸಕಲೇಶ್ವರ ।**
**ವಿಜಾನೀಹಿ ಯಥೈವೇದಮಹಂ ಬುಧ್ಯೇಽನುಶಾಸಿತಃ ॥ ೮ ॥**

**ಸರ್ವಜ್ಞ** ಎಲ್ಲವನ್ನೂ ತಿಳಿದವನೇ, **ಸಕಲೇಶ್ವರ** ಎಲ್ಲದಕ್ಕೂ ಒಡೆಯನೇ, **ಪೃಚ್ಛತಃ** ಪ್ರಶ್ನಿಸುತ್ತಿರುವ, **ಮೇ** ನನಗೆ, **ಅನುಶಾಸಿತಃ** ಉಪದಿಷ್ಟನಾದ, **ಅಹಂ** ನಾನು, **ಯಥಾ ಬುಧ್ಯೇ** ಹೇಗೆ ತಿಳಿಯುವೆನೋ, **ತಥಾ** ಹಾಗೆ, **ಸರ್ವಮ್** ಎಲ್ಲವನ್ನು **ವಿಜಾನೀಹಿ** ತಿಳಿಸು.

ನಾರದರು ಪೂರ್ವಪಕ್ಷವನ್ನೇ ಮಾಡಿದ್ದಾರೆ ಎಂಬುದನ್ನು ಉಪಪಾದಿಸಲು ಪ್ರಮಾಣ ಹೇಳುವರು-

**ತಾತ್ಪರ್ಯ- ತ್ವದಧೀನಾ ಯತಃ ಸತ್ತಾ ಅವರಸ್ಯಾಽಪಿ ಕೇಶವ ।**
**ಅತಃ ಸ್ವರೂಪತಃ ಸಮ್ಯಕ್ ಸತಿ ಭೇದೇಽಪಿ ತದ್ಭವಾನ್ ॥ -ಇತಿ ಮಾತ್ಸ್ಯೇ**

ಎಲೋ ಶ್ರೀಹರಿಯೇ ! ಅಧಮ-ಮಧ್ಯಮ-ಉತ್ತಮ ಎಲ್ಲ ವಸ್ತುಗಳ ಸ್ಥಿತಿಯು ನಿನ್ನ ಅಧೀನವಾಗಿರುವುದರಿಂದ ಆ ವಸ್ತುಗಳಿಗೂ ನಿನಗೂ ಸ್ವಾಭಾವಿಕವಾಗಿ ಭೇದವಿದ್ದರೂ ಆ ವಸ್ತುವೇ ನೀನು ಎಂದು ಅಮುಖ್ಯವ್ಯವಹಾರ ಮಾಡುವರು ಎಂದರ್ಥ. ಈ ರೀತಿಯಾಗಿ ಮತ್ಸ್ಯ ಪುರಾಣದಲ್ಲಿದೆ.

ಇದರಂತೆಯೇ ಇಲ್ಲಿಯೂ ನಿನ್ನ ಹೊರತು ಬೇರೆ ಇಲ್ಲ ಎಂಬುದಕ್ಕೂ ಬ್ರಹ್ಮನ ಅಧೀನ ಎಂದೇ ಅರ್ಥ. ದೀಪಿಕಾವ್ಯಾಖ್ಯಾನದ ಪ್ರಕಾರ ಈ ರೀತಿಯಾಗಿ ಅರ್ಥವನ್ನು ತಿಳಿಯಬೇಕು. ಪ್ರಬೋಧಿನೀ ಪ್ರಕಾರ 'ಕೇಶಾದ್ವೋಽನ್ಯತರಸ್ಯಾಂ' ಎಂದು ಪಾಣಿನೀಸೂತ್ರವಿರುವುದರಿಂದ ಕೇಶಾಃ ಸಂತಿ ಅಸ್ಮಿನ್ ಇತಿ ಕೇಶವಃ ಜಟಾ ಉಳ್ಳ ಬ್ರಹ್ಮದೇವರನ್ನೇ ಮತ್ಸ್ಯಪುರಾಣದ ಪ್ರಮಾಣದಲ್ಲಿ ಸಂಬೋಧಿಸಲಾಗಿದೆ.

ಪ್ರಕೃತ ಶ್ಲೋಕದಲ್ಲಿ ಬ್ರಹ್ಮದೇವರನ್ನು ಸಕಲೇಶ್ವರ ಎಂದು ಸಂಬೋಧಿಸುತ್ತಿದ್ದಾರೆ ನಾರದರು. ಆದ್ದರಿಂದ ಏಕಃ ಸೃಜಸಿ ಎಂಬಲ್ಲಿಯೂ ನೀನೇ ಈಶ್ವರ ಎಂದು ಹೇಳಿದ್ದಾರೆಂದು ತಿಳಿದುಬರುತ್ತದೆ. ಸಿದ್ಧಾಂತದಲ್ಲಿ ಜೀವೇಶ್ವರರಿಗೆ ಅಭೇದವನ್ನು ಹೇಳುವ ವಚನಕ್ಕೆ ಈ ಮತ್ಸ್ಯಪುರಾಣದ ವಚನದ ಬಲದಿಂದ ತದದೀನಸತ್ತಾಕತ್ವವನ್ನೇ ಅರ್ಥತಃ ಹೇಳಬೇಕು. ನಾರದರು ಇಲ್ಲಿ ಈ ರೀತಿಯಾಗಿ ಹೇಳಿಲ್ಲ. ನಾಽಹಂ ವೇದ ಪರಂ ತ್ವಸ್ಮಾತ್ ಎಂದು ಹೇಳಿದ್ದರಿಂದ.

ಶ್ರೀಯಾದವಾರ್ಯರ ಪ್ರಕಾರ ನಾರದರು ಬ್ರಹ್ಮನನ್ನು ಕುರಿತು 'ಸಕಲೇಶ್ವರ' ಎಂದು ಸಂಬೋಧಿಸುತ್ತಿದ್ದುದರಿಂದ ಬ್ರಹ್ಮದೇವರೇ ಈಶ್ವರ ಎಂದು ಹೇಳಿದಂತೆ ಆಯಿತು. ಆದರೆ ಸಿದ್ಧಾಂತದಲ್ಲಿ ಜೀವೇಶ್ವರರಿಗೆ ಅಭೇದ ಹೇಳುವ ವಚನಗಳಿಗೆ ಈ ಪ್ರಮಾಣಾನುಸಾರ ಶ್ರೀಹರಿಯ ಅಧೀನವಾದ ಸತ್ತಾ ಉಳ್ಳದ್ದೆಂದೆ ಅರ್ಥ ಹೇಳಬೇಕು. ಆದರೆ ನಾರದರು ಹಾಗೆ ಹೇಳಲಿಲ್ಲ (ನಾऽಹಂ ವೇದ ಪರಂ ತ್ವಸ್ಮಾತ್) ಎಂದಿದ್ದಾರೆ. ಬ್ರಹ್ಮದೇವರೂ ಸಹ ವಿಜ್ಞಾಯ ಪರಂ ಮತ್ತಃ ಎಂದು ಹೇಳುವವರಿದ್ದಾರೆ. ಆದ್ದರಿಂದ ಇದು ಪೂರ್ವಪಕ್ಷವಾಕ್ಯವೆಂದು ತಿಳಿಯುವುದು ಎಂದು ಭಾವ. (ಅಂತು ಇಲ್ಲಿ ಬ್ರಹ್ಮದೇವರಿಗೆ ಸರ್ವೇಶ್ವರನಿಂದ ಅಭೇದ ಹೇಳಿದ್ದೂ ಸಹ ಶ್ರೀಹರಿಯ ಅಧೀನ ಬ್ರಹ್ಮದೇವರು ಎಂದು ಅವರ ಬಾಯಿಂದಲೇ ಸಿದ್ಧಾಂತವನ್ನು ಹೇಳಿಸುವುದಕ್ಕಾಗಿ ಎಂದು ಭಾವ. ॥ ೮ ॥

*ನಾರದರ ಪ್ರಶ್ನೆಗೆ ಉತ್ತರಿಸಲು ಮೊದಲಿಗೆ ಪ್ರಶ್ನೆಯನ್ನು ಸ್ತುತಿಸುವರು-*

ಬ್ರಹ್ಮೋವಾಚ-

**ಸಮ್ಯಕ್ಕಾರುಣಿಕಸ್ಯೇದಂ ವತ್ಸ ತೇ ವಿಚಿಕಿತ್ಸಿತಮ್ ।**
**ಯದಹಂ ಚೋದಿತಃ ಸೌಮ್ಯ ಭಗವದ್ವೀರ್ಯದರ್ಶನೇ ॥ ೯ ॥**

**ಹೇ ವತ್ಸ** ನಾರದನೇ, **ಯತ್** ಯಾವ ಕಾರಣ, **ಅಹಂ** ನಾನು, **ಭಗವದ್ವೀರ್ಯದರ್ಶನೇ** ಪರಮಧರ್ಮನಾದ ಶ್ರೀಹರಿಯ ಪರಾಕ್ರಮಗಳನ್ನು ತಿಳಿಸಲು, **ಚೋದಿತಃ** ಪ್ರೇರಿಸಲ್ಪಟ್ಟಿರುವೆನೋ, **ತತ್** ಆ ಕಾರಣ, **ಸೌಮ್ಯ** ನಾರದನೇ, **ಕಾರುಣಿಕಸ್ಯ ತೇ** ಕರುಣಾಳು ಆದ ನಿನ್ನ, **ವಿಚಿಕಿತ್ಸಿತಮ್** ಪ್ರಶ್ನೆಯು (ಸಂದೇಹಮೂಲಕವಾದ ಪ್ರಶ್ನೆಯು) **ಸಮ್ಯಕ್** ಸಮೀಚೀನವಾದುದು.

ಕಾರುಣಿಕಸ್ಯ ಎಂಬ ಮಾತಿನಿಂದ ಲೋಕೋಪಕಾರಕ್ಕಾಗಿ ನಿನ್ನ ಪ್ರಶ್ನೆ ಎಂದು ಸೂಚಿಸುವರು. ॥ ೯ ॥

*ಮೊದಲಿಗೆ ಪೂರ್ವಪಕ್ಷಾಂಶವನ್ನು ಆಕ್ಷೇಪಿಸುವರು-*

**ನಾऽನೃತಂ ಬತ ತಚ್ಚಾಪಿ ಯಥಾ ಮಾಂ ಪ್ರಬ್ರವೀಷಿ ಭೋಃ ।**
**ಅವಿಜ್ಞಾಯ ಪರಂ ಮತ್ತ ಏತಾವತ್ತ್ವಂ ಯತೋ ಹಿ ಮೇ ॥ ೧೦ ॥**

**ಭೋಃ** ನಾರದನೇ, **ಯಥಾ ಮಾಂ ಪ್ರಬ್ರವೀಷಿ** ನೀನು ನನನ್ನು ಕುರಿತು 'ಏಕಃ ಸೃಜಸಿ' ಮುಂತಾಗಿ ಏನು ಹೇಳಿದೆಯೋ, **ತತ್** ಅದು, **ಅನೃತಂ ನ ಕಿಮ್** ಸುಳ್ಳಲ್ಲವೇನು?

ಸುಳ್ಳೇ ಎಂದು ಭಾವ. **ಯಚ್ಚ** ಏನು, **ಮತ್ತಃ ಪರಂ** ನನಗಿಂತ ಉತ್ತಮನು ಇದ್ದಾನೆಂಬುದನ್ನು **ಅವಿಜ್ಞಾಯ** ತಿಳಿಯದೇ, 'ನಾಹಂ ವೇದ ಪರಂ ತ್ವಸ್ಮಾತ್' ಎಂದು **ಆತ್ಥ** ಹೇಳಿರುವೆಯೋ, **ತಚ್ಚ** ಅದೂ ಸಹ, **ಅನೃತಂ ನ ಕಿಮ್** ಸುಳ್ಳಲ್ಲವೇ? ಸುಳ್ಳೇ ಆಗಿದೆ, ಏಕೆಂದರೆ, **ಅಪಿ** ನಿಂದಿತವಾದುದು, ನಿಂದಿತವೇಕೆಂದರೆ, **ಏತಾವತ್ತ್ವಂ ಯತೋ ಹಿ ಮೇ** ಯಾವ ಕಾರಣ ನನಗೆ ಅವನ ಅಧೀನಮಾಹಾತ್ಮ್ಯವಿದೆ ಎಂದು, **ಹಿ** ಶ್ರುತಿಪ್ರಸಿದ್ಧವಾಗಿದೆ. ಕಾರಣ ನಿಂದಿತವು ಎಂದು ಭಾವ.

ಸಿದ್ಧಾಂತ ಹೇಳಲು ಹೊರಟ 'ನಾಽನೃತಂ ಬತ' ಎಂಬ ಶ್ಲೋಕದಲ್ಲಿ ನೀನೇನು ಹೇಳಿದೆಯೋ ಅದು ಸುಳ್ಳಲ್ಲ ಸತ್ಯ ಎಂದು ನಾರದನ ಪ್ರಶ್ನೆಯನ್ನು ಹೊಗಳಿದಂತಾಗುವುದು ಅದು ಸರಿಯಲ್ಲ, ಹಿಂದೆ ಮುಂದೆ ಹೇಳಿದ್ದರ ವಿರೋಧ ಬರುವುದು. ಕಾರಣ ಅದರ ಅಭಿಪ್ರಾಯ ಹೇಳುವರು-

**ತಾತ್ಪರ್ಯ- ನಾನೃತಮಿತ್ಯಾಕ್ಷೇಪಃ**

ಇಲ್ಲಿ 'ನಾಽನೃತಮ್' ಎಂಬುದು ನಿರಾಕರಣವೇ ಹೊರತು ವಿಧಾನವಲ್ಲ. ಕಾಕುಸ್ವರದಿಂದ ಅನೃತಂ ನ ಕಿಂ ಎಂದು ಯೋಜಿಸಬೇಕೆಂದರ್ಥ. ॥ ೧೦ ॥

*ಹಿಂದೆ ಹೇಳಿದ್ದನ್ನೇ ವಿವರಿಸುವರು-*

**ಯೇನ ಸ್ವರೋಚಿಷಾ ವಿಶ್ವಂ ರೋಚಿತಂ ರಚಯಾಮ್ಯಹಮ್ ।**
**ಯಥಾರ್ಕೋಽಗ್ನಿರ್ಯಥಾ ಸೋಮೋ ಯಥಾರ್ಕ್ಷಗ್ರಹತಾರಕಾಃ ॥ ೧೧ ॥**

**ಯಥಾ** ಹೇಗೆ, **ಅರ್ಕಃ** ಸೂರ್ಯನು, **ಅಗ್ನಿಃ** ಅಗ್ನಿಯು, **ಸೋಮಃ** ಚಂದ್ರನು, **ಋಕ್ಷ** ಅಶ್ವಿನೀ ಮುಂತಾದವು, **ಗ್ರಹ** ಮಂಗಲ ಮುಂತಾದವು, (ಸೂರ್ಯ-ಚಂದ್ರರನ್ನು ಪ್ರತ್ಯೇಕ ಹೇಳಿದೆ) **ತಾರಕಾಃ** ಇತರ ನಕ್ಷತ್ರಗಳು ಶ್ರೀಹರಿಯಿಂದಲೇ ಪ್ರಕಾಶ ಪಡೆದು ಪ್ರಕಾಶಿಸುವವೋ, ಹಾಗೆ, **ಅಹಂ** ನಾನು, **ಯೇನ** ಯಾವ ಶ್ರೀಹರಿಯಿಂದ, **ಸ್ವರೋಚಿಷಾ** ತನ್ನ ಪ್ರಕಾಶದಿಂದ, **ರೋಚಿತಂ** ಪ್ರಕಾಶಿತವಾದುದನ್ನು, **ರೋಚಯಾಮಿ** ಪ್ರಕಾಶಗೊಳಿಸುವೆನು. 'ತಮೇವ ಭಾಂತಮನುಭಾತಿ ಸರ್ವಂ' 'ಯದಾದಿತ್ಯಗತಂ ತೇಜೊ ಜಗದ್ಭಾಸಯತೇಽಖಿಲಮ್' 'ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಮ್' ಎಂದಿದೆ. ॥೧೧॥

*ದುರ್ಮತಶ್ರವಣದಿಂದುಂಟಾದ ಪಾಪಪರಿಹಾರಕ್ಕಾಗಿ ವಾಸುದೇವದ್ವಾದಶಾಕ್ಷರ-ವಿದ್ಯೆಯನ್ನೂ ವಿಷ್ಣುಗಾಯತ್ರಿಯನ್ನೂ ಸ್ಮರಿಸಿ ನಮಸ್ಕರಿಸುವರು-*

**ನಮಸ್ತಸ್ಮೈ ಭಗವತೇ ವಾಸುದೇವಾಯ ಧೀಮಹಿ ।**
**ಯನ್ಮಾಯಯಾ ದುರ್ಜಯಯಾ ಮಾಂ ವದಂತಿ ಜಗದ್ಗುರುಮ್ ॥ ೧೨ ॥**

ಇದರಿಂದ ಶ್ರೀಹರಿಮಾಹಾತ್ಮ್ಯ ಹೇಳಲು ಮೊದಲಿಗೆ ನಮಸ್ಕಾರ ರೂಪವಾದ ಮಂಗಲ ಮಾಡಿದಂತಾಯಿತು ಎಂದು ತಿಳಿಯಬೇಕು.

**ತಸ್ಮೈ** ಪ್ರಸಿದ್ಧನಾದ, **ಭಗವತೇ** ಐಶ್ವರ್ಯಶಾಲಿಯಾದ, **ವಾಸುದೇವಾಯ** ಶ್ರೀಕೃಷ್ಣನಿಗೆ, **ನಮಃ** ನಮಸ್ಕಾರವು. **ವಯಂ ತಂ ಧೀಮಹಿ** ನಾವು ಅವನನ್ನು ಧ್ಯಾನ ಮಾಡುವೆವು. ಇದರಿಂದ 'ಓಂ ನಮೋ ಭಗವತೇ ವಾಸುದೇವಾಯ' ಎಂಬ ದ್ವಾದಶಾಕ್ಷರ ಹಾಗೂ 'ನಾರಾಯಣಾಯ ವಿದ್ಮಹೇ ವಾಸುದೇವಾಯ ಧೀಮಹಿ । ತನ್ನೋ ವಿಷ್ಣುಃ ಪ್ರಚೋದಯಾತ್' ಎಂಬ ಇಪ್ಪತ್ನಾಲ್ಕು ಅಕ್ಷರದ ವಿಷ್ಣುಗಾಯತ್ರಿಯನ್ನು ಸೂಚಿಸಿರುವರು. ಇವೆರಡನ್ನೂ ಬ್ರಹ್ಮದೇವರು ನಿತ್ಯ ಉಪಾಸಿಸುವರು ಎಂದೂ ತಿಳಿಸಿದಂತಾಯಿತು. ಹಾಗಾದರೆ ಜಗತ್ತಿನಲ್ಲಿ ನೀನೇ ಕರ್ತಾ ಎಂದು ಪ್ರಸಿದ್ಧಿ ಬರಲು ಕಾರಣವೇನು ಎಂದರೆ ಹೇಳುವರು-

**ದುರ್ಜಯಯಾ** ಹರಿಭಜನ ಮಾಡದವರಿಂದ ಗೆಲ್ಲಲಾಗದ, **ಯನ್ಮಾಯಯಾ** ಶ್ರೀಹರಿಯ ಯಾವ ಬಂಧಕಶಕ್ತಿಯಿಂದ ಪ್ರಕೃತಿಯಿಂದ ಸ್ವಗುಣಾಚ್ಛಾದಕ ಪ್ರಕೃತಿಯಿಂದಲೂ ಮೋಹಿತರಾಗಿ, **ಮಾಂ** ನನ್ನನ್ನು, **ಜಗದ್ಗುರುಮ್** ಜಗತ್ತಿಗೆ ಜನಕನೆಂದು, **ವದಂತಿ** ಹೇಳುವರು ಎಂದರ್ಥ. ॥ ೧೨ ॥

ಇಲ್ಲಿ ಅನಿರ್ವಾಚ್ಯವಾದ ಅವಿದ್ಯೆಯೇ ಮಾಯಾಶಬ್ದವಾಚ್ಯ ಎಂಬ ಅನ್ಯಥಾ-ಪ್ರತೀತಿಯನ್ನು ನಿವಾರಿಸಲು ಪ್ರಮಾಣದಿಂದ ವಿವಕ್ಷಿತವಾದ ಮಾಯವನ್ನು ತಿಳಿಸುವರು-

ತಾತ್ಪರ್ಯ- ಮುಖ್ಯಾ ಮಾಯಾ ಹರೇಃ ಶಕ್ತಿರಮುಖ್ಯಾ ಪ್ರಕೃತಿರ್ಮತಾ ।
ಅಥಾಽಮುಖ್ಯತಮಾ ಚೈವ ಮಾಯಾ ದೀನಾ ಪ್ರಕೀರ್ತಿತಾ ॥ ೧೨-೧೩ ॥

ಶ್ರೀಹರಿಯ ಶಕ್ತಿಯೇ ಮುಖ್ಯವಾಗಿ ಮಾಯಾಶಬ್ದವಾಚ್ಯವಾಗಿದೆ. ಚೇತನಪ್ರಕೃತಿಯು ಅಮುಖ್ಯಮಾಯೆಯಾಗಿದೆ. ದುಃಖಿತವಾದ ಸ್ವಗುಣಾಚ್ಛಾದಕವಾದ ಮಾಯೆಯು ಅತಿ ಅಮುಖ್ಯವಾಗಿದೆ. ಹೀಗೆ ಮಾಯೆಯು ಮೂರುವಿಧವಾಗಿದೆ ಎಂದು ಹೇಳಲ್ಪಟ್ಟಿದೆ. ಇಲ್ಲಿ ಮೂರೂ ವಿವಕ್ಷಿತವಾಗಿವೆ. ಅನಿರ್ವಾಚ್ಯವಾದ ಅವಿದ್ಯಾ ಅಲ್ಲವೆಂದು ಭಾವ.

*ದೀನಮಾಯಾದ ಬಗ್ಗೆ ಹೇಳುವರು-*

**ವಿಲಜ್ಜಮಾನಯಾ ಯಸ್ಯ ಸ್ಥಾತುಮೀಕ್ಷಾಪಥೇಽಮುಯಾ ।**
**ವಿಮೋಹಿತಾ ವಿಕತ್ಥಂತೇ ಮಮಾಽಹಮಿತಿ ದುರ್ಧಿಯಃ** ॥ ೧೩ ॥

**ಯಸ್ಯ** ಯಾವ ಶ್ರೀಹರಿಯ, **ಈಕ್ಷಾಪಥೇ** ಕೃಪಾಕಟಾಕ್ಷಕ್ಕೆ ವಿಷಯನಾದ ವ್ಯಕ್ತಿಯಲ್ಲಿ, ಅಂದರೆ ಶ್ರೀಹರಿಯು ಯಾರನ್ನು ಉದ್ಧಾರ ಮಾಡಬೇಕೆಂದು ಕೃಪಾಕಟಾಕ್ಷದಿಂದ ನೋಡುತ್ತಾನೋ ಆ ವ್ಯಕ್ತಿಯಲ್ಲಿ **ಸ್ಥಾತುಂ** ಇರಲು, **ವಿಲಜ್ಜಮಾನಯಾ** ನಾಚುವ ಅವರಲ್ಲಿ (ತನ್ನ ಕಾರ್ಯ ಮಾಡದ ಎಂದರ್ಥ) **ಅಮುಯಾ** ಸ್ವಗುಣಾಚ್ಛಾದಕವಾದ ಮಾಯೆಯಿಂದ, **ಮೋಹಿತಾಃ** ಮೋಹಗೊಂಡು, **ಮಮ ಅಹಂ ಇತಿ ದುರ್ಧಿಯಃ** ನಾನು-ನನ್ನದು ಎಂಬ ದುರಭಿಮಾನದಿಂದ ಕೂಡಿದವರಾಗಿ, **ವಿಕತ್ಥಂತೇ** ಎಲ್ಲ ಪ್ರಮಾಣಗಳಿಗೆ ವಿರುದ್ಧವಾಗಿ ನನ್ನನ್ನು ಸರ್ವೋತ್ತಮನೆಂದು ಹೇಳುವರು. ಯಾರು ಈ ರೀತಿ ಹೇಳುವರೋ ಅವರು ಶ್ರೀಹರಿಯ ಕೃಪಾಕಟಾಕ್ಷ ವಿಷಯರಲ್ಲ ಎಂದು ಭಾವ. **ತಮ್** ಅಂತಹ ಪರಮಾತ್ಮನನ್ನು, **ಧೀಮಹಿ** ಧ್ಯಾನ ಮಾಡುವೆನು. ॥ ೧೩ ॥

*ನೀವು ಭಗವಂತನ ಅಧೀನರಾದ್ದರಿಂದ ಅವನಿಗಿಂತ ಉತ್ತಮ ಅಥವಾ ಸಮರಾಗದಿದ್ದರೂ, ಸಾಂಖ್ಯಾದಿಗಳು ಹೇಳುವಂತೆ ಪ್ರಕೃತಿ-ಕರ್ಮ ಮೊದಲಾದವುಗಳು ಭಗವಂತನಿಗಿಂತಲೂ ಉತ್ತಮ, ಸಮ, ಆಗಬಹುದೇ ಎಂದರೆ ಹೇಳುವರು-*

**ದ್ರವ್ಯಂ ಕರ್ಮ ಚ ಕಾಲಶ್ಚ ಸ್ವಭಾವೋ ಜೀವ ಏವ ಚ ।**
**ವಾಸುದೇವಾತ್ಪರೋ ಬ್ರಹ್ಮನ್ನ ಚಾಽನ್ಯಾರ್ಥೋಽಸ್ತಿ ತಾತ್ತ್ವತಃ** ॥ ೧೪ ॥

**ದ್ರವ್ಯಂ** ಪ್ರಕೃತಿಯು, **ಕರ್ಮ** ಪುಣ್ಯ-ಪಾಪಗಳು, **ಕಾಲಃ** ವಸಂತಾದಿಕಾಲವು, **ಸ್ವಭಾವಃ** ಆಯಾ ವಸ್ತುವಿನ ಪರಿಣಾಮಾದಿ ಸ್ವಭಾವವು, **ಜೀವಃ** ದೇವದತ್ತಾದಿ ಜೀವರು, ('ಜೀವಾದ್ಭವಂತಿ ಭೂತಾನಿ' ಎಂಬ ಶ್ರುತಿ ಪ್ರಕಾರ) **ಅನ್ಯಃ** ಹೇಳಿದವರಿಂದ ಭಿನ್ನರಾದ ಶಿವ-ಶಕ್ತ್ಯಾದಿಗಳು, **ವಾಸುದೇವಾತ್ ಪರಃ** ಶ್ರೀಹರಿಗಿಂತ ಉತ್ತಮರು, **ನೈವ** ಸರ್ವಥಾ ಇಲ್ಲ, **ತಾತ್ತ್ವತಃ** ಅವನಂತೆ ಇರುವವರು, ಅವನ ಸಮರು, **ನೈವ** ಇಲ್ಲವೇ ಇಲ್ಲ ॥ ೧೪ ॥

ಇಲ್ಲಿ ಪರಶಬ್ದಕ್ಕೆ ಅನ್ಯ ಎಂಬ ಅರ್ಥ ಹೇಳಿದರೆ ಅನ್ಯ ಎಂಬ ಪದ ವ್ಯರ್ಥವಾಗುವುದು ಕಾರಣ ಅದನ್ನು ಅನುವಾದಮಾಡಿ ವ್ಯಾಖ್ಯಾನಿಸುವರು-

**ತಾತ್ಪರ್ಯ- ಪರಃ ಅಧಿಕಃ ।**

ತಾತ್ತ್ವತ ಎಂಬ ಶಬ್ದದ ಅರ್ಥವು ಆಗದಿರುವುದರಿಂದ ಪ್ರಮಾಣದಿಂದ ವ್ಯಾಖ್ಯಾನಿಸುವರು-

**ತದ್ವದೇವ ಸ್ಥಿತಂ ಯತ್ತು ತಾತ್ತ್ವತಂ ತತ್ ಪ್ರಚಕ್ಷತೇ ॥ -ಇತಿ ಕೌರ್ಮೇ**

'ವಾಸುದೇವಾತ್ಪರಃ' ಎಂಬಲ್ಲಿಯ ಪರಶಬ್ದಕ್ಕೆ ಉತ್ತಮ ಎಂದರ್ಥ. ಅದರಂತೆ ಇರುವ ವಸ್ತುವಿಗೆ ತಾತ್ತ್ವತ ಎನ್ನುವರು ಅವನ ಸದೃಶ ಸಮ ಎಂದು ಅರ್ಥ.

ಪ್ರಕೃತ್ಯಾದಿಗಳು ಅಚೇತನವಾದ್ದರಿಂದ ಅಸ್ವತಂತ್ರವಾಗಿವೆ. ಹಿತಾಕರಣ-ಅಹಿತಕರಣಗಳಿಂದ ಜೀವನಿಗೂ ಸಹ ಅಸ್ವಾತಂತ್ರ್ಯವು ಅನುಭವ ಸಿದ್ಧವಾಗಿದೆ. ಶಿವಾದಿಗಳು ಅಸ್ವತಂತ್ರರೆಂದು ಶ್ರುತಿ ಸಿದ್ಧವಾಗಿದೆ. ಕಾರಣ ಯಾರೂ ಶ್ರೀಹರಿಗೆ ಸದೃಶರಲ್ಲ ॥ ೧೪ ॥

ಹಾಗಾದರೆ 'ಹಿರಣ್ಯಗರ್ಭಃ ಸಮವರ್ತತಾಽಗ್ರೇ' ಮುಂತಾದ ಶ್ರುತಿವಿರೋಧ ಬರುವುದು. ಅವುಗಳಲ್ಲಿ ಬ್ರಹ್ಮ-ಶಿವಾದಿಗಳಿಗೆ ಉತ್ತಮತ್ವ ಹೇಳಿದೆ ಎಂದರೆ ಹೇಳುವರು-

**ನಾರಾಯಣಪರಾ ವೇದಾ ದೇವಾ ನಾರಾಯಣಾಂಗಜಾಃ ।**
**ನಾರಾಯಣಪರಾ ಲೋಕಾ ನಾರಾಯಣಪರಾ ಮಖಾಃ ॥ ೧೫ ॥**

**ವೇದಾಃ** 'ಹಿರಣ್ಯಗರ್ಭಃ...' ಮುಂತಾದ ವೇದಗಳು, **ನಾರಾಯಣಪರಾಃ** ನಾರಾಯಣನನ್ನೇ ಮುಖ್ಯವಾಗಿ ಪ್ರತಿಪಾದಿಸುತ್ತವೆ ಆದ್ದರಿಂದ ವಿರೋಧವಿಲ್ಲ. ಅಮುಖ್ಯವಾಗಿ ಇತರರನ್ನೂ ಪ್ರತಿಪಾದಿಸುವುದರಿಂದ ದೇವತೆಗಳು ಮೊದಲಾದವರು ಸಿದ್ಧರಾಗುವುದಿಲ್ಲವೆಂದಾಗುವುದಿಲ್ಲ. **ದೇವಾಃ** ವೇದಪ್ರತಿಪಾದ್ಯರಾದ ದೇವತೆಗಳು, **ನಾರಾಯಣಾಂಗಜಾಃ** ನಾರಾಯಣನ ಅವಯವಗಳಿಂದ ಜನಿಸಿದ್ದಾರೆ ಆದ್ದರಿಂದ ಅಮುಖ್ಯರು, **ಲೋಕಾಃ** ವೇದಪ್ರತಿಪಾದ್ಯವಾದ ಭೂರಾದಿಲೋಕಗಳೂ ಕೂಡಾ **ನಾರಾಯಣಪರಾಃ** ನಾರಾಯಣನಿಗಿಂತ ಅಮುಖ್ಯವಾದವುಗಳು, ಅವುಗಳೂ ನಾರಾಯಣನ ಅಂಗದಿಂದ ಜನಿಸಿದವುಗಳೇ, **ಮಖಾಃ** ಯಜ್ಞಗಳೂ ಕೂಡ, **ನಾರಾಯಣಪರಾಃ** ನಾರಾಯಣನೇ ಮುಖ್ಯ ಪೂಜ್ಯನಾಗಿ ಉಳ್ಳವುಗಳು.

ವೇದಗಳಿಂದ ದೇವತೆಗಳ ಸಿದ್ಧಿಯಾಗದೇ ಹೋಗಲಿ ಎಂಬ ಶಂಕೆಯನ್ನು ಪರಿಹರಿಸುತ್ತಾ ಈ ವಿಷಯದಲ್ಲಿ ಪ್ರಮಾಣ ಹೇಳುವರು-

**ತಾತ್ಪರ್ಯ- ವೇದಪ್ರತಿಪಾದ್ಯೇಷು ಸ ಪರಃ ಇತ್ಯಾದಿ ।**
**ಗಮ್ಯೇಽಜ್ಞೇಯವಾಚ್ಯೇಷು ಯೋಜ್ಯೇಷು ಚ ಪರೋ ಹರಿಃ ।**
**ತಪಸಾ ಯುಜ್ಯಮಾನಾನಾಂ ಸರ್ವಲೋಕೇಭ್ಯ ಏವ ಚ ॥ -ಇತಿ ವಾರಾಹೇ**

ವೇದಗಳಲ್ಲಿ ಪ್ರತಿಪಾದ್ಯರಾದ ದೇವತೆಗಳಲ್ಲಿ ಶ್ರೀನಾರಾಯಣನೇ ಸರ್ವೋತ್ತಮನು. ವೇದಗಳಿಗೆ ಶ್ರೀನಾರಾಯಣನಲ್ಲಿಯೇ ಮಹಾತಾತ್ಪರ್ಯವಿದೆ. ಬೇರೆ ದೇವತೆಗಳಲ್ಲಿ ಅಮುಖ್ಯತಾತ್ಪರ್ಯವಿದೆ. ಹೊಂದಲ್ಪಡುವವರು, ಹೇಳಲ್ಪಡುವವರು, ಪೂಜಿಸಲ್ಪಡುವವರು ಇವರಲ್ಲಿ ಶ್ರೀಹರಿಯೇ ಸರ್ವೋತ್ತಮನಾಗಿದ್ದಾನೆ. ಮತ್ತು ತಪಸ್ಸು ಮಾಡುವವರಿಗೆ ಮುಖ್ಯಪೂಜ್ಯನಾಗಿದ್ದಾನೆ. ಎಲ್ಲ ಲೋಕಗಳಲ್ಲಿರುವ ದೇವಾದಿಗಳಿಗಿಂತಲೂ ಶ್ರೇಷ್ಠನಾಗಿದ್ದಾನೆ ಎಂದು ವರಾಹಪುರಾಣದಲ್ಲಿದೆ. ॥ ೧೫-೧೬ ॥

**ನಾರಾಯಣಪರೋ ಯೋಗೋ ನಾರಾಯಣಪರಂ ತಪಃ ।**
**ನಾರಾಯಣಪರಂ ಜ್ಞಾನಂ ನಾರಾಯಣಪರಾ ಗತಿಃ ॥ ೧೬॥**

**ಯೋಗಃ** ಅಷ್ಟಾಂಗಯೋಗವು, **ನಾರಾಯಣಪರಃ** ಮುಖ್ಯವಾಗಿ ಪ್ರಾಪ್ಯನಾದ ನಾರಾಯಣಪರವಾಗಿದೆ. **ನಾರಾಯಣಪರಂ ತಪಃ** ತಪಸ್ಸು ನಾರಾಯಣನೇ ಮುಖ್ಯಪೂಜ್ಯವಾಗಿ ಉಳ್ಳದ್ದು. **ನಾರಾಣಪರಂ ಜ್ಞಾನವ್** ನಾರಾಯಣನೇ ಮುಖ್ಯಜ್ಞೇಯವಾಗಿ ಉಳ್ಳದ್ದಾಗಿದೆ ಜ್ಞಾನ. **ನಾರಾಯಣಪರಾ ಗತಿಃ** ನಾರಾಯಣನೇ ಮುಖ್ಯವಾಗಿ ಉಳ್ಳದ್ದು ಗಮ್ಯವು. ॥ ೧೬ ॥

*ನಿಮಗೆ ಕರ್ತೃತ್ವವಿಲ್ಲವಾದರೆ ಬ್ರಹ್ಮನೇ ಕರ್ತಾ ಎಂಬ ಪೌರಾಣಿಕವಾದ ಪ್ರಸಿದ್ಧಿಯು ಹೇಗೆ ಎಂಬ ಪ್ರಶ್ನೆಗೆ ಉತ್ತರಿಸುವರು-*

**ತಸ್ಯಾಽಪಿ ದ್ರಷ್ಟುರೀಶಸ್ಯ ಕೂಟಸ್ಥಸ್ಯಾಽಖಿಲಾತ್ಮನಃ ।**
**ಸೃಜ್ಯಂ ಸೃಜಾಮಿ ಸೃಷ್ಟೋಽಹಮೀಕ್ಷಯೈವಾಭಿಚೋದಿತಃ ॥ ೧೭ ॥**

**ತಸ್ಯಾಪಿ** ಎಲ್ಲ ಕಾಮನೆಗಳನ್ನೂ ಹೊಂದಿದವನಾದ್ದರಿಂದ ತನ್ನ ಪ್ರಯೋಜನ-ವಿಲ್ಲದವನಾಗಿದ್ದರೂ, **ದ್ರಷ್ಟುಃ** ಕಾರ್ಯ-ಕಾರಣಗಳನ್ನು ನೋಡುವ, **ಈಶಸ್ಯ** ಆಯಾ ವಸ್ತುಗಳಿಗೆ ಪ್ರೇರಕನಾದ ಆದರೂ, **ಕೂಟಸ್ಥಸ್ಯ** ನಿರ್ವಿಕಾರನಾದ, **ಅಖಿಲಾತ್ಮನಃ** ಎಲ್ಲರ ಅಂತರ್ಯಾಮಿಯಾದ ಶ್ರೀಹರಿಯಿಂದ, **ಸೃಜ್ಯಂ ಏವ** ಸೃಷ್ಟಿಗೆ ಯೋಗ್ಯವಾಗಿ ಮಾಡಲ್ಪಟ್ಟಿದ್ದನ್ನೇ, **ಸೃಷ್ಟಃ** ಅವನಿಂದ ಸೃಷ್ಟನಾದ ನಾನು, **ಈಕ್ಷಯಾ** ಶ್ರೀಹರಿಯ

ಕೃಪಾಕಟಾಕ್ಷದಿಂದ, **ಅಭಿಚೋದಿತಃ ಏವ** ಪ್ರೇರಿತನಾಗಿಯೇ, **ಸೃಜಾಮಿ** ಸೃಷ್ಟಿಸುವೆನು. ಕಾರ್ಯ-ಕಾರಣಗಳನ್ನು ಸೃಷ್ಟಿಸಿ ಅವುಗಳಲ್ಲಿ ಪ್ರವೇಶಿಸಿ ತಾನು ವಿಕಾರ ಹೊಂದದೇ ಅವುಗಳ ಪರಿಣಾಮಾದಿ ಶಕ್ತಿಗಳನ್ನು ಪ್ರೇರಿಸಿ ಯಾವುದನ್ನು ಸೃಷ್ಟಿಸಲು ಯೋಗ್ಯವನ್ನಾಗಿ ಮಾಡುವನೋ ಅವನ್ನೇ ಶ್ರೀಹರಿಯಿಂದ ಒಳಗೂ ಹೊರಗೂ ಪ್ರೇರಿತನಾಗಿ ನಾನು ಸೃಷ್ಟಿ ಮಾಡುವೆನು. ಆದ್ದರಿಂದ ಪುರಾಣಗಳಲ್ಲಿ ನಾನು ಕರ್ತಾ ಎಂದು ಪ್ರಸಿದ್ಧನಾಗಿರುವೆನು ಎಂದು ಭಾವ. ।। ೧೭ ।।

ಈ ರೀತಿಯಾಗಿ ನಾರದರಿಂದ ಆಕ್ಷಿಪ್ತವಾದ ತಮ್ಮ ಕರ್ತೃತ್ವವನ್ನು ನಿರಾಕರಿಸಿ ಭಗವಂತನಿಗೇ ಕರ್ತೃತ್ವವನ್ನು ಉಪಪಾದಿಸಿದರು. ಈಗ 'ಸತ್ತ್ವಂ ರಜಃ..' ಎಂಬ ಶ್ಲೋಕದಲ್ಲಿ ಅಸಂಗತವಾಗಿ ಏನು ಹೇಳುವರು ಎಂಬ ಶಂಕೆ ಬಂದಾಗ ಅದಕ್ಕೆ ಸಂಗತಿಯನ್ನು ಆಚಾರ್ಯರು ತಿಳಿಸುವರು-

**ತಾತ್ಪರ್ಯ- 'ಯುಗಪತ್ ಕ್ರಮಶೋಽಪಿ ವಾ' ಇತ್ಯಸ್ಯ ಪರಿಹಾರಃ 'ಸತ್ವಂ ರಜಸ್ತಮ' ಇತಿ ।**

ಸೃಷ್ಟ್ಯಾದಿಕರ್ಮಗಳನ್ನು ಮಾಡುವುದಕ್ಕಾಗಿ ಶ್ರೀಹರಿಯು ಸತ್ವಾದಿಗುಣಗಳನ್ನು ಯುಗಪತ್ ಸ್ವೀಕರಿಸುತ್ತಾನೋ, ಕ್ರಮವಾಗಿ ಸ್ವೀಕರಿಸುತ್ತಾನೋ ಎಂದು ನಾಲ್ಕನೆಯ ಅಧ್ಯಾಯದ ಒಂಭತ್ತನೇಶ್ಲೋಕದಲ್ಲಿ ಪ್ರಶ್ನಿಸಿದ್ದಾರೆ. ಈ ಪ್ರಶ್ನೆ ಪರಿಹಾರವಾಗುವ ಹಾಗೆ ಸತ್ತ್ವಂ ರಜಸ್ತಮಃ ಎಂಬಲ್ಲಿ ಶ್ರೀಹರಿಗೆ ಹೇಳಿದ ಕರ್ತೃತ್ವವನ್ನೇ ಪ್ರಕೃತ ವಿಶದಪಡಿಸುತ್ತಿದ್ದಾರೆ ಎಂದು ಭಾವ. ಈ ಪ್ರಶ್ನೆ ಕೇಳಿದವನು ರಾಜನೇ ಹೊರತು ನಾರದರಲ್ಲ ಎಂದು ಶಂಕಿಸಬಾರದು. 'ನಾರದಾಯೇತಿ ಪೃಚ್ಛತೇ' (೪-೨೫) ರಾಜ ಮಾಡಿದ ಪ್ರಶ್ನೆಯನ್ನೇ ನಾರದರೂ ಮಾಡಿದ್ದರು ಎಂದು ಸೂಚಿತವಾಗಿದೆ.

ಪ್ರಶ್ನ-ಪರಿಹಾರ ಪ್ರಕಾರವನ್ನು ಪ್ರಮಾಣದಿಂದ ತಿಳಿಸುವರು-

**ನಿತ್ಯಂ ಗೃಹಿತಾಃ ಸತ್ತ್ವಾದ್ಯಾಃ ಸ್ಥಿತ್ಯಾದಿಷು ವಿಶೇಷತಃ ।**
**ಯುಗಪತ್ ಕ್ರಮಶಶ್ಚೈವ ಗೃಹ್ಣಾತಿ ಭಗವಾನ್ ಸ್ವಯಮ್ ।। -ಇತಿ ಬ್ರಹ್ಮ ವೈವರ್ತೇ**

ಯದ್ಯಪಿ ಸತ್ತ್ವಾದಿಗುಣಗಳು ಸದಾ ಸ್ವೀಕರಿಸಲ್ಪಟ್ಟಿವೆ. ಆದರೂ ಶ್ರೀಹರಿಯು ಸ್ಥಿತಿ-ಸೃಷ್ಟಿ- ಸಂಹಾರಗಳಿಗಾಗಿ ತಮ್ಮ ತಮ್ಮ ಕಾರ್ಯ ಮಾಡಲು ಸಮರ್ಥವಾಗುವಂತೆ ತಾನೇ ಏಕಕಾಲದಲ್ಲಿಯೂ, ಕ್ರಮದಿಂದಲೂ ತೆಗೆದುಕೊಳ್ಳುತ್ತಾನೆ. ಎಂದು ಬ್ರಹ್ಮವೈವರ್ತದಲ್ಲಿದೆ.

ಈಗ (ಸ್ಥಿತಿಸಮಯದಲ್ಲೇ) ಏಕಕಾಲದಲ್ಲಿ ಕೆಲವರನ್ನು ಸೃಷ್ಟಿಸುವಾಗಲೇ ಮತ್ತೆ ಕೆಲವರಿಗೆ ಸ್ಥಿತಿ ಹಲವರಿಗೆ ಲಯವು ಕಂಡು ಬರುವುದರಿಂದ, ಏಕಕಾಲದಲ್ಲಿಯೂ ಆದಿಸೃಷ್ಟಿ ಮಹಾಪ್ರಲಯ ಅವುಗಳ ಮಧ್ಯದಲ್ಲಿ ಸ್ಥಿತಿಗಳನ್ನು ವಿವಕ್ಷಿಸಿ ಕ್ರಮವಾಗಿ ಎಂದು ಹೇಳಿದೆ. 'ಸ್ವಯಮೇವ' ಎಂಬ ಮಾತಿನಿಂದ ಬ್ರಹ್ಮ-ರುದ್ರರಿಗೆ ರಜೋಗುಣ-ತಮೋಗುಣಗಳ ಸ್ವೀಕಾರವಿಲ್ಲವೆಂದು ಸೂಚಿಸುವರು.

**ಸತ್ತ್ವಂ ರಜಸ್ತಮ ಇತಿ ನಿರ್ಗುಣಸ್ಯ ಗುಣಾಸ್ತ್ರಯಃ ।**
**ಸ್ಥಿತಿಸರ್ಗನಿರೋಧೇಷು ಗೃಹಿತಾ ಮಾಯಯಾ ವಿಭೋಃ ॥ ೧೮ ॥**

**ನಿರ್ಗುಣಸ್ಯ** ಸತ್ತ್ವಾದಿಗುಣಗಳಿಂದಾಗುವ ವಿಕಾರಶೂನ್ಯನಾದ ಶ್ರೀಹರಿಯಿಂದ, (ಷಷ್ಠೀ ತೃತಿಯಾರ್ಥೇ) **ಮಾಯಯಾ** ಸ್ವೇಚ್ಛೆಯಿಂದ ನಿತ್ಯದಲ್ಲಿಯೂ ಗೃಹೀತವಾಗಿದ್ದರೂ, **ಸ್ಥಿತಿಸರ್ಗ-ನಿರೋಧೇಷು** ಸ್ಥಿತಿ-ಸೃಷ್ಟಿ-ಸಂಹಾರಕ್ಕಾಗಿ, **ಸತ್ತ್ವಂ ರಜಃ ತಮ ಇತಿ** ಸತ್ತ್ವ-ರಜಸ್ಸು-ತಮಸ್ಸು ಎಂಬ ಗುಣಗಳು, **ತ್ರಯಃ** ಮೂರೂ ವಿಶೇಷವಾಗಿ, **ವಿಭೋಃ** ಶ್ರೀಹರಿಯಿಂದ ಕ್ರಮವಾಗಿಯೂ, **ಗೃಹೀತಾಃ** ಸ್ವಿಕರಿಸಲ್ಪಟ್ಟಿವೆ. ॥ ೧೮ ॥

*ಈಶ್ವರನೇ ಸತ್ತ್ವಾದಿಗುಣನಿಮಿತ್ತಕವಾಗಿ ಜೀವನಾಗುತ್ತಾನೆ. ಜೀವೇಶ್ವರರಿಗೆ ಭೇದವಿದೆ ಎನ್ನಲು ಪ್ರಮಾಣವಿಲ್ಲ. ಆದಕಾರಣ 'ನಿರ್ಗುಣಸ್ಯ' ಎಂದು ಹೇಳಿದ್ದು ಹೇಗೆ ಎಂಬ ಶಂಕೆ ಬಂದಾಗ ಈಶ್ವರನಿಗೆ ಜೀವಭೇಧವನ್ನು ಸಾಧನ ಮಾಡಲು ಮೊದಲಿಗೆ ಗುಣಗಳಿಂದ ಜೀವಬಂಧಕತ್ವ ಮಹಿಮೆಯನ್ನು ಹೇಳುವರು-*

**ಕಾರ್ಯಕಾರಣಕರ್ತೃತ್ವೇ ದ್ರವ್ಯಜ್ಞಾನಕ್ರಿಯಾಶ್ರಯಾಃ ।**
**ಬಧ್ನಂತಿ ನಿತ್ಯದಾ ಮುಕ್ತಂ ಮಾಯಿನಂ ಪುರುಷಂ ಗುಣಾಃ ॥ ೧೯ ॥**

**ಗುಣಾಃ** ಶ್ರೀಹರಿಯಿಂದ ಪ್ರೇರಿತವಾದ ಸತ್ತ್ವಾದಿಗುಣಗಳು, **ಕಾರ್ಯಕಾರಣಕರ್ತೃತ್ವೇ** ಕಾರ್ಯಕರ್ತೃತ್ವದಲ್ಲಿ, ಕಾರಣಕರ್ತೃತ್ವದಲ್ಲಿ **ನಿತ್ಯದಾ ಮುಕ್ತಮ್** ಸ್ವತಃ ಜಡೇಂದ್ರಿಯಗಳಿಂದ ರಹಿತನಾದ, **ಮಾಯಿನಂ** ನಿತ್ಯದಾ ಜ್ಞಾನ ಉಳ್ಳ **ಪುರುಷಮ್** ಚಿದ್ರೂಪವಾದ ದೇಹ ಉಳ್ಳ ಜೀವಸಮೂಹವನ್ನು, **ದ್ರವ್ಯಜ್ಞಾನಕ್ರಿಯಾಶ್ರಯಾಃ** ಶರೀರ-ಜ್ಞಾನೇಂದ್ರಿಯ-ಕರ್ಮೇಂದ್ರಿಯಗಳನ್ನು ಆಶ್ರಯಿಸಿ, **ಬಂಧ್ನಂತಿ** ಅಭಿಮಾನವನ್ನು ಹುಟ್ಟಿಸುವ ಮೂಲಕ ಬಂಧಿಸುತ್ತವೆ.

ಇಲ್ಲಿ ಹೀಗೆ ವಿಭಾಗ ಮಾಡಿಕೊಳ್ಳಬೇಕು. ಸತ್ತ್ವಗುಣವು ಜ್ಞಾನಪದದಿಂದ ಉಕ್ತವಾದ ಜ್ಞಾನೇಂದ್ರಿಯಗಳನ್ನಾಶ್ರಯಿಸಿ, **ಕರಣೈಃ** ಜ್ಞಾನೇಂದ್ರಿಯಗಳಿಂದ ಆಯಾ ವಿಷಯಗಳ ಸಾಕ್ಷಾತ್ಕಾರದ್ವಾರಾ ಜನ್ಯವಾಗುವ ಸುಖಭೋಕ್ತೃತ್ವರೂಪ ಕರ್ತೃತ್ವವಿಷಯದಲ್ಲಿ ಬಂಧಿಸುತ್ತದೆ. ನನ್ನದು ಎಂಬ ಅಭಿಮಾನವನ್ನು ಹುಟ್ಟಿಸುತ್ತದೆ.

ರಜೋಗುಣವು ಕ್ರಿಯಾಪದದಿಂದ ಹೇಳಲ್ಪಟ್ಟ ಕರ್ಮೇಂದ್ರಿಯಗಳನ್ನು ಆಶ್ರಯಿಸಿ **ಕರಣೈಃ** ಕರ್ಮೇಂದ್ರಿಯಗಳಿಂದಾಗುವ ಮಾತುಗಳನ್ನಾಡುವುದೇ ಮೊದಲಾದ ಬಾಹ್ಯಕ್ರಿಯಾಕರ್ತೃತ್ವ ವಿಷಯದಲ್ಲಿ ಬಂಧಿಸುತ್ತದೆ.

ತಮೋಗುಣವೂ ಸಹ ದ್ರವ್ಯಪದದಿಂದ ಹೇಳಲ್ಪಟ್ಟ ಶರೀರವನ್ನಾಶ್ರಯಿಸಿ, **ಕಾರ್ಯಕರ್ತೃತ್ವೇ** ಶರೀರಸಂಬಂಧಿಯಾದ, ವೇದನಾ ಹೊಟ್ಟೆ ಶೂಲೆ, ತಲೆ ತಿರುಗುವುದು ಮುಂತಾದವುಗಳಿಂದ ಆಗುವ ದುಃಖಭೋಕ್ತೃತ್ವರೂಪ ಕರ್ತೃತ್ವವಿಷಯದಲ್ಲಿ ಬಂಧಿಸುತ್ತದೆ. ॥ ೧೯ ॥

ಸರಿಯಾಗಿ ಅರ್ಥವಾಗದಿರುವುದರಿಂದ ಈ ಶ್ಲೋಕವನ್ನು ವ್ಯಾಖ್ಯಾನಿಸುವರು-

**ತಾತ್ಪರ್ಯ- ಜ್ಞಾನೇಂದ್ರಿಯೈಶ್ಚ ಮನಸಾ ಸತ್ತ್ವಂ ಬಧ್ನಾತಿ ಪೂರುಷಮ್ ।**
**ರಜಃ ಕರ್ಮೇಂದ್ರಿಯೈರ್ನಿತ್ಯಂ ಶರೀರೇಣ ತಮಸ್ತಥಾ ॥**
**ಆಂತರಂ ಯತ್ತು ಕರ್ತೃತ್ವಂ ತತ್ಸತ್ತ್ವೇನಾಭಿಮನ್ಯತೇ ॥**

**ರಜಸಾ ತ್ವಭಿಮನ್ಯೇತ ಕರಣೈಃ ಕರ್ಮಕಾರಣೈಃ ।**
**ಶಾರೀರಂ ವೇದನಾದ್ಯಂ ತು ತಮಸಾ ಹ್ಯಭಿಮನ್ಯತೇ ॥**

**ಅಕರ್ತಾ ಕರಣೈರ್ಹೀನಃ ಶರಿರೇಣ ವಿವರ್ಜಿತಃ ।**
**ನಿತ್ಯಜ್ಞಾನಸ್ವರೂಪೋಽಸೌ ಗುಣೈರೇವಾಽಭಿಮನ್ಯತೇ ।**
**ಏವಂ ಜೀವಃ ಪರೇಣೈವ ಪ್ರೇರಿತಃ ಸಂಸೃತಿಂ ವ್ರಜೇತ್ ॥**

**ನ ಪರಃ ಸಂಸೃತಿಂ ಕ್ವಾಽಪಿ ಸ್ವಾತಂತ್ರ್ಯಾದಧಿಕತ್ವತಃ ।**
**ಏವಂ ಜೀವಪರೌ ಭಿನ್ನೌ ಕಿಮನ್ಯಚ್ಛ್ರೋತುಮಿಚ್ಛಸಿ ॥ -ಇತಿ ಪಾದ್ಮೇ**
**ಮಾಯಿನಂ ಜ್ಞಾನಿನಂ ಸ್ವತಃ ॥**

ಇಲ್ಲಿ ಸ್ಥೂಲಸತ್ತ್ವಾದಿಗಳನ್ನು ಸ್ವೀಕರಿಸಬೇಕು. ಸೂಕ್ಷ್ಮವಾದವುಗಳು ಮೋಚಕವಾಗಿವೆ ಬಂಧಕವಲ್ಲ.

ಈಗ (ಸ್ಥಿತಿಸಮಯದಲ್ಲೇ) ಏಕಕಾಲದಲ್ಲಿ ಕೆಲವರನ್ನು ಸೃಷ್ಟಿಸುವಾಗಲೇ ಮತ್ತೆ ಕೆಲವರಿಗೆ ಸ್ಥಿತಿ ಹಲವರಿಗೆ ಲಯವು ಕಂಡು ಬರುವುದರಿಂದ, ಏಕಕಾಲದಲ್ಲಿಯೂ ಆದಿಸೃಷ್ಟಿ ಮಹಾಪ್ರಲಯ ಅವುಗಳ ಮಧ್ಯದಲ್ಲಿ ಸ್ಥಿತಿಗಳನ್ನು ವಿವಕ್ಷಿಸಿ ಕ್ರಮವಾಗಿ ಎಂದು ಹೇಳಿದೆ. 'ಸ್ವಯಮೇವ' ಎಂಬ ಮಾತಿನಿಂದ ಬ್ರಹ್ಮ-ರುದ್ರರಿಗೆ ರಜೋಗುಣ-ತಮೋಗುಣಗಳ ಸ್ವೀಕಾರವಿಲ್ಲವೆಂದು ಸೂಚಿಸುವರು.

**ಸತ್ತ್ವಂ ರಜಸ್ತಮ ಇತಿ ನಿರ್ಗುಣಸ್ಯ ಗುಣಾಸ್ತ್ರಯಃ ।**
**ಸ್ಥಿತಿಸರ್ಗನಿರೋಧೇಷು ಗೃಹಿತಾ ಮಾಯಯಾ ವಿಭೋಃ** ॥ ೧೮ ॥

**ನಿರ್ಗುಣಸ್ಯ** ಸತ್ತ್ವಾದಿಗುಣಗಳಿಂದಾಗುವ ವಿಕಾರಶೂನ್ಯನಾದ ಶ್ರೀಹರಿಯಿಂದ, (ಷಷ್ಠೀ ತೃತಿಯಾರ್ಥೇ) **ಮಾಯಯಾ** ಸ್ವೇಚ್ಛೆಯಿಂದ ನಿತ್ಯದಲ್ಲಿಯೂ ಗೃಹೀತವಾಗಿದ್ದರೂ, **ಸ್ಥಿತಿಸರ್ಗ-ನಿರೋಧೇಷು** ಸ್ಥಿತಿ-ಸೃಷ್ಟಿ-ಸಂಹಾರಕ್ಕಾಗಿ, **ಸತ್ತ್ವಂ ರಜಃ ತಮ ಇತಿ** ಸತ್ತ್ವ-ರಜಸ್ಸು-ತಮಸ್ಸು ಎಂಬ ಗುಣಗಳು, **ತ್ರಯಃ** ಮೂರೂ ವಿಶೇಷವಾಗಿ, **ವಿಭೋಃ** ಶ್ರೀಹರಿಯಿಂದ ಕ್ರಮವಾಗಿಯೂ, **ಗೃಹೀತಾಃ** ಸ್ವಿಕರಿಸಲ್ಪಟ್ಟಿವೆ. ॥ ೧೮ ॥

*ಈಶ್ವರನೇ ಸತ್ತ್ವಾದಿಗುಣನಿಮಿತ್ತಕವಾಗಿ ಜೀವನಾಗುತ್ತಾನೆ. ಜೀವೇಶ್ವರರಿಗೆ ಭೇದವಿದೆ ಎನ್ನಲು ಪ್ರಮಾಣವಿಲ್ಲ. ಆದಕಾರಣ 'ನಿರ್ಗುಣಸ್ಯ' ಎಂದು ಹೇಳಿದ್ದು ಹೇಗೆ ಎಂಬ ಶಂಕೆ ಬಂದಾಗ ಈಶ್ವರನಿಗೆ ಜೀವಭೇಧವನ್ನು ಸಾಧನ ಮಾಡಲು ಮೊದಲಿಗೆ ಗುಣಗಳಿಂದ ಜೀವಬಂಧಕತ್ವ ಮಹಿಮೆಯನ್ನು ಹೇಳುವರು-*

**ಕಾರ್ಯಕಾರಣಕರ್ತೃತ್ವೇ ದ್ರವ್ಯಜ್ಞಾನಕ್ರಿಯಾಶ್ರಯಾಃ ।**
**ಬಧ್ನಂತಿ ನಿತ್ಯದಾ ಮುಕ್ತಂ ಮಾಯಿನಂ ಪುರುಷಂ ಗುಣಾಃ** ॥ ೧೯ ॥

**ಗುಣಾಃ** ಶ್ರೀಹರಿಯಿಂದ ಪ್ರೇರಿತವಾದ ಸತ್ತ್ವಾದಿಗುಣಗಳು, **ಕಾರ್ಯಕಾರಣಕರ್ತೃತ್ವೇ** ಕಾರ್ಯಕರ್ತೃತ್ವದಲ್ಲಿ, ಕಾರಣಕರ್ತೃತ್ವದಲ್ಲಿ **ನಿತ್ಯದಾ ಮುಕ್ತಮ್** ಸ್ವತಃ ಜಡೇಂದ್ರಿಯಗಳಿಂದ ರಹಿತನಾದ, **ಮಾಯಿನಂ** ನಿತ್ಯದಾ ಜ್ಞಾನ ಉಳ್ಳ **ಪುರುಷಮ್** ಚಿದ್ರೂಪವಾದ ದೇಹ ಉಳ್ಳ ಜೀವಸಮೂಹವನ್ನು, **ದ್ರವ್ಯಜ್ಞಾನಕ್ರಿಯಾಶ್ರಯಾಃ** ಶರೀರ-ಜ್ಞಾನೇಂದ್ರಿಯ-ಕರ್ಮೇಂದ್ರಿಯಗಳನ್ನು ಆಶ್ರಯಿಸಿ, **ಬಂಧ್ನಂತಿ** ಅಭಿಮಾನವನ್ನು ಹುಟ್ಟಿಸುವ ಮೂಲಕ ಬಂಧಿಸುತ್ತವೆ.

ಇಲ್ಲಿ ಹೀಗೆ ವಿಭಾಗ ಮಾಡಿಕೊಳ್ಳಬೇಕು. ಸತ್ತ್ವಗುಣವು ಜ್ಞಾನಪದದಿಂದ ಉಕ್ತವಾದ ಜ್ಞಾನೇಂದ್ರಿಯಗಳನ್ನಾಶ್ರಯಿಸಿ, **ಕರಣೈಃ** ಜ್ಞಾನೇಂದ್ರಿಯಗಳಿಂದ ಆಯಾ ವಿಷಯಗಳ ಸಾಕ್ಷಾತ್ಕಾರದ್ವಾರಾ ಜನ್ಯವಾಗುವ ಸುಖಭೋಕ್ತೃತ್ವರೂಪ ಕರ್ತೃತ್ವವಿಷಯದಲ್ಲಿ ಬಂಧಿಸುತ್ತದೆ. ನನ್ನದು ಎಂಬ ಅಭಿಮಾನವನ್ನು ಹುಟ್ಟಿಸುತ್ತದೆ.

ರಜೋಗುಣವು ಕ್ರಿಯಾಪದದಿಂದ ಹೇಳಲ್ಪಟ್ಟ ಕರ್ಮೇಂದ್ರಿಯಗಳನ್ನು ಆಶ್ರಯಿಸಿ **ಕರಣೈಃ** ಕರ್ಮೇಂದ್ರಿಯಗಳಿಂದಾಗುವ ಮಾತುಗಳನ್ನಾಡುವುದೇ ಮೊದಲಾದ ಬಾಹ್ಯಕ್ರಿಯಾಕರ್ತೃತ್ವ ವಿಷಯದಲ್ಲಿ ಬಂಧಿಸುತ್ತದೆ.

ತಮೋಗುಣವೂ ಸಹ ದ್ರವ್ಯಪದದಿಂದ ಹೇಳಲ್ಪಟ್ಟ ಶರೀರವನ್ನಾಶ್ರಯಿಸಿ, **ಕಾರ್ಯಕರ್ತೃತ್ವೇ** ಶರೀರಸಂಬಂಧಿಯಾದ, ವೇದನಾ ಹೊಟ್ಟೆ ಶೂಲೆ, ತಲೆ ತಿರುಗುವುದು ಮುಂತಾದವುಗಳಿಂದ ಆಗುವ ದುಃಖಭೋಕ್ತೃತ್ವರೂಪ ಕರ್ತೃತ್ವವಿಷಯದಲ್ಲಿ ಬಂಧಿಸುತ್ತದೆ. ।। ೧೯ ।।

ಸರಿಯಾಗಿ ಅರ್ಥವಾಗದಿರುವುದರಿಂದ ಈ ಶ್ಲೋಕವನ್ನು ವ್ಯಾಖ್ಯಾನಿಸುವರು-

**ತಾತ್ಪರ್ಯ- ಜ್ಞಾನೇಂದ್ರಿಯೈಶ್ಚ ಮನಸಾ ಸತ್ತ್ವಂ ಬಧ್ನಾತಿ ಪೂರುಷಮ್ ।**
**ರಜಃ ಕರ್ಮೇಂದ್ರಿಯೈರ್ನಿತ್ಯಂ ಶರೀರೇಣ ತಮಸ್ತಥಾ ।।**
**ಆಂತರಂ ಯತ್ತು ಕರ್ತೃತ್ವಂ ತತ್ಸತ್ತ್ವೇನಾಭಿಮನ್ಯತೇ ।।**

**ರಜಸಾ ತ್ವಭಿಮನ್ಯೇತ ಕರಣೈಃ ಕರ್ಮಕಾರಣೈಃ ।**
**ಶಾರೀರಂ ವೇದನಾದ್ಯಂ ತು ತಮಸಾ ಹ್ಯಭಿಮನ್ಯತೇ ।।**

**ಅಕರ್ತಾ ಕರಣೈರ್ಹೀನಃ ಶರಿರೇಣ ವಿವರ್ಜಿತಃ ।**
**ನಿತ್ಯಜ್ಞಾನಸ್ವರೂಪೋಽಸೌ ಗುಣೈರೇವಾಽಭಿಮನ್ಯತೇ ।**
**ಏವಂ ಜೀವಃ ಪರೇಣೈವ ಪ್ರೇರಿತಃ ಸಂಸೃತಿಂ ವ್ರಜೇತ್ ।।**

**ನ ಪರಃ ಸಂಸೃತಿಂ ಕ್ವಾಽಪಿ ಸ್ವಾತಂತ್ರ್ಯಾದಧಿಕತ್ವತಃ ।**
**ಏವಂ ಜೀವಪರೌ ಭಿನ್ನೌ ಕಿಮನ್ಯಚ್ಛ್ರೋತುಮಿಚ್ಛಸಿ ।। -ಇತಿ ಪಾದ್ಮೇ**
**ಮಾಯಿನಂ ಜ್ಞಾನಿನಂ ಸ್ವತಃ ।।**

ಇಲ್ಲಿ ಸ್ಥೂಲಸತ್ತ್ವಾದಿಗಳನ್ನು ಸ್ವೀಕರಿಸಬೇಕು. ಸೂಕ್ಷ್ಮವಾದವುಗಳು ಮೋಚಕವಾಗಿವೆ ಬಂಧಕವಲ್ಲ.

ಜ್ಞಾನೇಂದ್ರಿಯಗಳಿಂದಲೂ, ಮನಸ್ಸಿನಿಂದಲೂ ಸತ್ತ್ವಗುಣವು ಪುರುಷನನ್ನು ಬಂಧಿಸುತ್ತದೆ. ನಾನೇ ಕರ್ತೃವೆಂಬ ಅಭಿಮಾನವನ್ನು ಹುಟ್ಟಿಸುತ್ತದೆ ಎಂದು ಅರ್ಥ. ರಜೋಗುಣವು ಕರ್ಮಕ್ಕೆ ಕಾರಣಗಳಾದ ಇಂದ್ರಿಯಗಳಿಂದ ಕರ್ಮಗಳಲ್ಲಿ ಪುರುಷನನ್ನು ಬಂಧಿಸುತ್ತದೆ. ಹಾಗೆಯೇ ತಮೋಗುಣವು ಕಾರ್ಯವಾದ ಶರೀರದಲ್ಲಿ ಅದರಲ್ಲಿರುವ ದುಃಖಾದ್ಯನುಭವದಿಂದ ಪುರುಷನನ್ನು ಬಂಧಿಸುತ್ತದೆ. ಶರೀರದೊಳಗೆ ಇದ್ದು ನಾನು ಸುಖವನ್ನು ಅನುಭವಿಸುತ್ತೇನೆ ಎಂದು ಎಲ್ಲಿ ಕರ್ತೃತ್ವವಿದೆಯೋ ಅದು ಸತ್ತ್ವದಿಂದ ನನ್ನದೆಂಬ ಅಭಿಮಾನಕ್ಕೆ ಒಳಗಾಗುವುದು. ಕ್ರಿಯಾಶ್ರಯವಾದ ರಜೋಗುಣವು ಕರ್ಮಗಳನ್ನು ಹುಟ್ಟಿಸುವ ಕರ್ಮೇಂದ್ರಿಯಗಳಿಂದ ಬಾಹ್ಯಕಾರ್ಯದಲ್ಲಿ ಅಹಂ ಕರ್ತಾ ಎಂಬ ಅಭಿಮಾನವನ್ನು ಹುಟ್ಟಿಸಿ ಬಂಧಿಸುತ್ತದೆ. ತಮೊಗುಣದಿಂದ ಶರೀರದಲ್ಲಿರತಕ್ಕ ವೇದನಾದಿಗಳನ್ನು ಅಂದರೆ ವಾತಧಾತುವಿಕಾರದಿಂದಾಗುವ ಹೊಟ್ಟೆ ನೋವು ಮುಂತಾದವು, ಪಿತ್ತಧಾತುವಿನಿಂದ ಉಂಟಾಗುವ ತಲೆ ತಿರುಗುವುದೇ ಮುಂತಾದವುಗಳನ್ನು ನನ್ನದೆಂಬ ಅಭಿಮಾನದಿಂದ ಅನುಭವಿಸುತ್ತಾನೆ.

ಜಡೇಂದ್ರಿಯಗಳಲ್ಲಿಯೂ ಜಡಶರೀರದಲ್ಲಿಯೂ ಸ್ವಾತಂತ್ರ್ಯವಿಲ್ಲದಿರುವುದರಿಂದ ಜೀವನು ಸ್ವತಂತ್ರಕರ್ತೃವಲ್ಲ. ನಿತ್ಯಜ್ಞಾನಸ್ವರೂಪನಾದ ಜೀವನು ಜ್ಞಾನಾತ್ಮಕದೇಹೇಂದ್ರಿಯಾದಿಗಳಿಂದ ಕೂಡಿದವನು. ಇಂತಹ ಜೀವನು ಗುಣಗಳಿಂದಲೇ ಕರ್ತೃತ್ವಾಭಿಮಾನ ಉಳ್ಳವನಾಗುತ್ತಾನೆ. ಹೀಗೆ ಜೀವನು ಪರಮಾತ್ಮನಿಂದ ಪ್ರೇರಿಸಲ್ಪಟ್ಟವನಾಗಿಯೇ ಸಂಸಾರವನ್ನು ಹೊಂದುತ್ತಾನೆ. ಪರಮಾತ್ಮನು ಸರ್ವಸ್ವತಂತ್ರನೂ, ಸರ್ವೋತ್ತಮನೂ ಆದುದರಿಂದ ಯಾವ ದೇಶದಲ್ಲಿಯೂ ಯಾವ ಕಾಲದಲ್ಲಿಯೂ ಸಂಸಾರವನ್ನು ಹೊಂದುವುದಿಲ್ಲ, ಶ್ರೀಹರಿಯು ಬಂಧಕನು, ಜೀವನು ಸಂಸಾರಬದ್ಧನು ಹೀಗೆ ವಿರುದ್ಧಧರ್ಮಗಳು ಇದ್ದುದರಿಂದ ಜೀವೇಶ್ವರರು ಭಿನ್ನರೇ ಆಗಿದ್ದಾರೆ. ಇನ್ನೇನನ್ನು ಕೇಳಲಿಚ್ಛಿಸುವಿ. ಎಂದು ಪಾದ್ಮಪುರಾಣದಲ್ಲಿದೆ.

'ಮಾಯಿನಂ' ಎಂಬುದಕ್ಕೆ ಜಡಶರೀರೇಂದ್ರಿಯಗಳಿಲ್ಲದಿದ್ದರೂ, ಜ್ಞಾನ ಉಳ್ಳವನೆಂದರ್ಥ. 'ಮಾಯಾ ವಯುನಂ ಜ್ಞಾನಮ್' ಎಂದು ಜ್ಞಾನನಾಮಗಳಲ್ಲಿ ಹೇಳಿದ್ದರಿಂದ ಮಾಯಾ ಎಂದರೆ ಜ್ಞಾನ ಎಂದು ಅರ್ಥ. ।। ೧೯ ।।

*ಹೀಗೆ ಈಶ್ವರನು ಸತ್ತ್ವಾದಿಗುಣಗಳಿಂದ ಜೀವನನ್ನು ಬಂಧಿಸುತ್ತಾನೆ ಎಂದು ಹೇಳಿ ಈ ಭೇದವನ್ನು ದೃಢಪಡಿಸಲು ಗುಣಗಳಿಂದ ಮೋಚಕತ್ವವನ್ನು ಹೇಳುತ್ತ ಪರಮಸಾಧ್ಯವನ್ನು ತಿಳಿಸುವರು-*

**ಸ ಏಷ ಭಗವಾನ್ ಲಿಂಗೈಃ ತ್ರಿಭಿರೇತೈರಧೋಕ್ಷಜಮ್ ।**
**ಸ್ವಲಕ್ಷಿತಗತಿಃ ಬ್ರಹ್ಮನ್ ಸರ್ವೇಷಾಂ ಮಮ ಚೇಶ್ವರಃ ॥ ೨೦ ॥**

**ಸಃ** 'ಯೇನ ಸ್ವರೋಚಿಷಾ' ಎಂದು ನನ್ನ ಸ್ವಾಮಿ ಎಂದು ಹೇಳಲ್ಪಟ್ಟ, **ಏಷಃ** ಜೀವಬಂಧಕನೆಂದು ಹೇಳಲ್ಪಟ್ಟ **ಭಗವಾನ್** ಶ್ರೀಹರಿಯು, **ಏತೈಃ** ಬಂಧಕಗಳೆಂದು ಹಿಂದೆ ಹೇಳಿದ, **ತ್ರಿಭಿಃ** ಸೂಕ್ಷ್ಮಸತ್ತ್ವಾದಿಗುಣಗಳೆಂಬ, **ಲಿಂಗೈಃ** ತನಗೆ ಜ್ಞಾಪಕಗಳಿಂದ, **ಅಧೋಕ್ಷಜಃ** ಜೀವಪ್ರಯತ್ನದಿಂದ ಕಾಣಲು ಯೋಗ್ಯನಾಗದಿದ್ದರೂ, **ಸ್ವಲಕ್ಷಿತಗತಿಃ** ತನ್ನ ಪ್ರಸಾದದಿಂದ ಜೀವನಿಂದ ಕಾಣಲ್ಪಡುವ ಸ್ವರೂಪ ಉಳ್ಳವನಾಗುತ್ತಾನೆ. ಹೀಗೆ ಮೋಚಕನಾದ್ದರಿಂದ ಎಲ್ಲರಿಂದಲೂ ಭಿನ್ನನಾಗಿದ್ದಾನೆ, **ಸರ್ವೇಷಾಮ್** ಎಲ್ಲರಿಗೆ, **ಈಶ್ವರಃ** ಸ್ವಾಮಿಯಾಗಿದ್ದಾನೆ, **ಮಮ ಚ** ನನಗೂ, **ಈಶ್ವರಃ** ಸ್ವಾಮಿಯಾಗಿದ್ದಾನೆ. ಸ್ವಯಂ ಬ್ರಹ್ಮದೇವರು ಎಲ್ಲರಲ್ಲಿ ಸೇರಿದ್ದರೂ ನಾರದರ ಶಂಕೆಯನ್ನು ಪರಿಹರಿಸಲು 'ಮಮ ಚ' ಎಂದು ಪ್ರತ್ಯೇಕವಾಗಿ ಹೇಳಿದ್ದಾರೆ. ಇಲ್ಲಿಯೂ ಹೀಗೆ ವಿಭಾಗ. ಜಿವನನ್ನು ಮೋಚನ ಮಾಡಲು ಶ್ರೀಹರಿಯಿಂದ ಪ್ರೇರಿತವಾದ ಸೂಕ್ಷ್ಮಸತ್ತ್ವಗುಣವು ಆರು ಜ್ಞಾನೇಂದ್ರಿಯಗಳನ್ನು ಆಶ್ರಯಿಸಿ ಹರಿವಿಷಯಕವಾದ ಶ್ರವಣಾದಿರೂಪವಾದ ಜ್ಞಾನವನ್ನು ಹುಟ್ಟಿಸುತ್ತದೆ. ಸೂಕ್ಷ್ಮರಜೋಗುಣವು ಕರ್ಮೇಂದ್ರಿಯಗಳಲ್ಲಿದ್ದು ಹರಿಪ್ರೀತ್ಯರ್ಥವಾಗಿ ಕರ್ಮಗಳನ್ನು ಮಾಡಿಸಿ ಅಂತಃಕರಣಶುದ್ಧಿದ್ವಾರಾ ಹರಿಜ್ಞಾನಜನಕವಾಗುತ್ತದೆ.

ಸೂಕ್ಷ್ಮತಮೋಗುಣವೂ ಕೂಡ ಶರೀರದಲ್ಲಿದ್ದು ಶ್ರೀಹರಿಪ್ರೀತಿಜನಕವಾದ ಉಪವಾಸಾದಿಗಳನ್ನು ಮಾಡುವಾಗ ವೇದನೆಯನ್ನು ಹುಟ್ಟಿಸಿ ಹರಿಜ್ಞಾನಸಾಧಕವಾಗುತ್ತದೆ ಎಂದು ತಿಳಿಯಬೇಕು.

ಈ ಶ್ಲೋಕದಲ್ಲಿ 'ಲಿಂಗೈಃ' ಎಂಬುದಕ್ಕೆ ಅನುಮಾಪಕಗಳಿಂದ ಎಂದರ್ಥ ತೋರುವುದು. ಅದನ್ನು ನಿರಾಕರಿಸಲು ವ್ಯಾಖ್ಯಾನಿಸುವರು-

**ತಾತ್ಪರ್ಯ- ಲಿಂಗೈಃ ಜ್ಞಾಪಕೈಃ ।।**

'ತ್ರಿಭಿರೇತೈಃ' ಎಂಬುದರಿಂದ ಪರಾಮೃಶ್ಯವಾದದ್ದು ಯಾವುದೆಂದು ತಿಳಿಸುತ್ತಿದ್ದಾರೆ-

**ತಾತ್ಪರ್ಯ- ತ್ರಿಗುಣೈಃ ।**

ಜ್ಞಾಪಕತ್ವವನ್ನು ಉಪಪಾದಿಸುತ್ತ ಸ್ವಲಕ್ಷಿತಗತಿಃ ಎಂಬುದಕ್ಕೆ ಸು ಅಲಕ್ಷಿತಗತಿಃ ಎಂದು ಅನ್ಯಥಾ ವಾಖ್ಯಾನ ನಿರಾಕರಿಸಲು ವಾಖ್ಯಾನಿಸುವರು-

**ತಾತ್ಪರ್ಯ- ಏತೈರ್ಲಿಂಗೈಃ । ಸ್ವಪ್ರಸಾದಾತ್ ಜೀವೇನ ಲಕ್ಷಿತಗತಿಃ ।**

ಈವಿಷಯದಲ್ಲಿ ಪ್ರಮಾಣ ಹೇಳುವರು-

**ತಾತ್ಪರ್ಯ- 'ಸ್ವಪ್ರಸಾದಾದಿಮಂ ಜೀವಃ ಪಶ್ಯೇತ್ತೇನ ಸ್ವಲಕ್ಷಿತಃ' -ಇತಿ ಷಾಡ್ಗುಣ್ಯೇ**

**ತಾತ್ಪರ್ಯದ ಅರ್ಥ-** ಜ್ಞಾಪಕಗಳಾದ ಮೂರು ಗುಣಗಳಿಂದ ಈ ಲಿಂಗಗಳಿಂದ ಶ್ರೀಹರಿಯ ಅನುಗ್ರಹದಿಂದ ಜೀವನಿಂದ ಕಾಣಲ್ಪಟ್ಟ ಸ್ವರೂಪವುಳ್ಳವನು.

ಜೀವನು ಶ್ರೀಹರಿಯ ಪ್ರಸಾದಿಂದ ಪರಮಾತ್ಮನನ್ನು ನೋಡುತ್ತಾನೆ. ಆದ್ದರಿಂದ ಸ್ವಲಕ್ಷಿತ ಎನಿಸುತ್ತಾನೆ. ಎಂದು ಷಾಡ್ಗುಣ್ಯದಲ್ಲಿದೆ.

ಇಲ್ಲಿ ಜ್ಞಾಪಕಗಳೆಂದು ಹೇಳಿದ ಗುಣಗಳು ಸೂಕ್ಷ್ಮವಾದವುಗಳು. ಅವುಗಳೇ ಮೋಚಕಗಳೆಂದು ಶ್ರುತ್ಯಾದಿಗಳಲ್ಲಿ ಪ್ರಸಿದ್ಧವಾಗಿವೆ.

ಇಲ್ಲಿ ಒಂದು ಸಂದೇಹ ಬರುವುದು. ಅದೇನೆಂದರೆ ಇಲ್ಲಿ ಶ್ರೀಯಾದವಾರ್ಯರು ಸ್ಥೂಲ ಸತ್ತ್ವಾದಿಗಳು ಬಂಧಕಗಳು, ಸೂಕ್ಷ್ಮವಾದವುಗಳು ಮೋಚಕವಾದವುಗಳು ಎಂದು ಹೇಳಿರುವರು. ಸೂಕ್ಷ್ಮಸತ್ತ್ವಗುಣ ಜ್ಞಾನಜನಕ, ಸೂಕ್ಷ್ಮರಜೋಗುಣ ಸತ್ಕರ್ಮವನ್ನು ಮಾಡಿಸಿ ಅಂತಃಕರಣ ಶುದ್ಧಿ ದ್ವಾರಾ ಹರಿಜ್ಞಾನಜಕವಾಗುತ್ತದೆ. ಸೂಕ್ಷ್ಮತಮೋಗುಣವೂ ಕೂಡ ಹರಿಪ್ರೀತಿಜನಕ ಉಪವಾಸಾದಿತಪೋಜನಿತವಾದ ದುಃಖಾದಿಗಳ ಉತ್ಪಾದನೆ ಮಾಡಿ ಹರಿಜ್ಞಾನಸಾಧಕವೇ ಆಗಿದೆ. ಎಂದಿದ್ದಾರೆ.

ಆದರೆ ಗೀತಾಭಾಷ್ಯ ೧೪ನೆಯ ಅಧ್ಯಾಯ ೨೨-೨೩ ನೆಯ ಶ್ಲೋಕಗಳನ್ನು ವ್ಯಾಖ್ಯಾನಿಸುವಾಗ ಶ್ರೀಮದಾಚಾರ್ಯರು **ಸುತಮಶ್ಚ ಜಹ್ಯಾತ್** ಎಂದಿದ್ದಾರೆ. ಪ್ರಮೇಯದೀಪಿಕಾದಲ್ಲಿ **ಸುತಮಃ** ಎಂದರೆ **ಸೂಕ್ಷ್ಮತಮಃ** ಎಂದು ವ್ಯಾಖ್ಯಾನಿಸಿದ್ದಾರೆ. ಸೂಕ್ಷ್ಮಸತ್ತ್ವರಜೊಗುಣಗಳು ಶ್ರೀಹರಿಜ್ಞಾನಜನಕವಾದ್ದರಿಂದ ಅವುಗಳನ್ನು ಇಚ್ಛಿಸುವನು. ದೈವಾತ್ ಸೂಕ್ಷ್ಮತಮೋಗುಣ ತನ್ನಲ್ಲಿ ಬಂದರೆ ಈ ಗುಣವು ಭಗವದ್ವಿಷಯಕವಾದ ಮೋಹವನ್ನು ಹುಟ್ಟಿಸುತ್ತದೆ ಆದ್ದರಿಂದ ಅದನ್ನು ದ್ವೇಷಿಸುತ್ತಾನೆ ಎಂದು ಹೇಳಿರುವರು. ಅರ್ಥಾತ್ ಸೂಕ್ಷ್ಮತಮೋಗುಣವೂ ಬಂಧಕ ಎಂದಂತಾಯಿತು.

ಆದ್ದರಿಂದ ವಿರೋಧ ಬಂದಂತೆ ತೋರುವುದು. ಕಾರಣ ಹೀಗೆ ಪರಿಹಾರ ಮಾಡಬಹುದು.

ಹರಿಮೋಹಜನಕ ಸೂಕ್ಷ್ಮತಮೋಗುಣವನ್ನು ಗೀತಾಭಾಷ್ಯದಲ್ಲಿ ನಿಷೇಧಿಸಿದ್ದಾರೆ. ಇಲ್ಲಿ ಹರಿಪ್ರೀತಿ ಜನಕ ಉಪವಾಸಾದಿಜನ್ಯದುಃಖದಾಯಕವಾದ ಸೂಕ್ಷ್ಮತಮೋಗುಣವು ಸ್ವೀಕಾರ್ಯವಾಗಿದೆ ಎಂದು ಹೇಳಿದ್ದಾರೆ. ಆದ್ದರಿಂದ ವಿರೋಧವಿಲ್ಲ

ದಶಮಸ್ಕಂಧ ನಾಲ್ಕನೆಯ ಅಧ್ಯಾಯದ ಎರಡನೆಯ ಶ್ಲೋಕದ ತಾತ್ಪರ್ಯ ಮತ್ತು ವ್ಯಾಖ್ಯಾನಗಳಲ್ಲಿಯೂ ಗುರುಗಳಿಗೆ ಸಂಸಾರಿಗಳಾದ (ಆಚಾರ್ಯರಿಗೆ) ಸಚ್ಛಾಸ್ತ್ರಪಾಠ ಹೇಳುವಲ್ಲಿ ರಾಗವು, ಅವೈಷ್ಣವದ್ವೇಷವೂ ಸತ್ತ್ವಾತ್ಮಕವೇ ಆಗಿದೆ. ಮುಕ್ತರಿಗಂತೂ ಗುಣಜನ್ಯವೇ ಅಲ್ಲ, ಜ್ಞಾನಾತ್ಮಕವೇ ಎಂದಿದ್ದಾರೆ. ವಿಷ್ಣುದ್ವೇಷ ತಮಸ್ಸು ನಾಶವಾಗಲು ಇನ್ನೊಂದು ತಮಸ್ಸು ಅಂದರೆ ವಿಷ್ಣು ದ್ವೇಷದಲ್ಲಿ ದ್ವೇಷ ಬೇಕು ಪ್ರತಿದ್ವೇಷವಿಲ್ಲದೆ ದ್ವೇಷನಾಶವಾಗುವುದಿಲ್ಲ, ಕಾರಣ ದ್ವೇಷ ದ್ವೇಷವೇನಿದೆ ಅದು ಶುದ್ಧಸತ್ತ್ವಾತ್ಮಕ ಎನ್ನುತ್ತಾರೆ. ಇಲ್ಲಿ ದ್ವೇಷ ಎಂಬ ಶಬ್ದವನ್ನು ಪ್ರಯೋಗಿಸದೇ ತಮರಾಗ ಎಂಬ ಶಬ್ದ ಉಪಯೋಗಿಸಿದ್ದರಿಂದ ಭಗವದ್ಭಕ್ತರ ದ್ವೇಷ ತಮೋಗುಣಕಾರ್ಯ. ಅದು ತಮಃಸಾಧನ ಎಂದು ಸೂಚಿಸಿರುವರು. ಅಂತು ಇಲ್ಲಿ ಪ್ರಸಿದ್ಧ ರಜೋಗುಣ ತಮೋಗುಣ ಎಂಬ ಅರ್ಥ ವಿವಕ್ಷಿತವಲ್ಲ, ಶುಭೇಚ್ಛೆ ಅಸದ್ದ್ವೇಷಗಳು ವಿವಕ್ಷಿತವಾಗಿವೆ. ಕಾರಣ ಯಾವ ವಿರೋಧವೂ ಇಲ್ಲವೆಂದು ತೋರುತ್ತದೆ. ।। ೨೦ ।।

ಈ ವರೆಗೆ ಸಗುಣಜೀವರಿಂದ ಭಿನ್ನನಾದುದರಿಂದ ಈಶ್ವರನಿಗೆ ನಿರ್ಗುಣತ್ವವನ್ನು ಉಪಪಾದಿಸಿ ಈಗ ಶ್ರೀಹರಿಯಿಂದ ಸೃಷ್ಟಿಯನ್ನು ಹೇಳಲು ಭಗವಂತನು ಸೃಷ್ಟಿಮಾಡಲು ಕಾಲ-ಕರ್ಮ ಮುಂತಾದ ಕಾರಣಗಳನ್ನು ಅಪೇಕ್ಷಿಸುವನೋ ಇಲ್ಲವೋ ಅಪೇಕ್ಷಿಸುವನು ಎಂದರೆ ಸ್ವಾತಂತ್ರ್ಯಹಾನಿ, ಇಲ್ಲವೆಂದರೆ ಕಾಲ-ಕರ್ಮಗಳು ಸೃಷ್ಟಿಗೆ ಕಾರಣವೆಂದು ಹೇಳುವ ಶ್ರುತಿವಿರೋಧ ಬರುವುದು ಎಂಬ ಶಂಕೆಯನ್ನು ನಿರಾಕರಿಸುವರು-

**ಕಾಲಂ ಕರ್ಮ ಸ್ವಭಾವಶ್ಚ ಮಾಯೇಶೋ ಮಾಯಯಾ ಸ್ವಯಾ ।**
**ಆತ್ಮನ್ ಯದೃಚ್ಛಯಾ ಪ್ರಾಪ್ತಂ ವಿಬುಭೂಷುರುಪಾದದೇ ।। ೨೧ ।।**

**ಮಾಯೇಶಃ** ವಾಸುದೇವನು, **ವಿಬುಭೂಷುಃ** ಆಯಾ ಕಾರ್ಯನಿಯಾಮಕನಾಗಿ ಅಂತರ್ಯಾಮಿರೂಪದಿಂದ ವಿವಿಧ ರೂಪ ತೆಗೆದುಕೊಳ್ಳುವ ಇಚ್ಛೆಯಿಂದ ಅನಾದಿಕಾಲದಿಂದ, **ಆತ್ಮನ್** ತನ್ನಲ್ಲಿ, **ಯದೃಚ್ಛಯಾ** ಕೇವಲ ಈಶ್ವರ ಇಚ್ಛೆಯಿಂದ, **ಪ್ರಾಪ್ತಂ** ದೊರೆತ, **ಕಾಲಂ** ಸೃಷ್ಟಿಕಾಲವನ್ನು, **ಕರ್ಮ** ಜೀವರ ನಾನಾವಿಧವಾದ ಅದೃಷ್ಟವನ್ನೂ , **ಸ್ವಭಾವಃ** ಆಯಾ ಕಾರಣಗಳ ಸ್ವಭಾವವನ್ನು , **ಚ** ಪ್ರಕೃತಿಯನ್ನು , **ಸ್ವಮಾಯಯಾ** ತನ್ನ ಶಕ್ತಿಯಿಂದ, **ಉಪಾದದೇ** ವಿಶೇಷವಾಗಿ ಸ್ವೀಕರಿಸಿದನು. ಅವುಗಳಲ್ಲಿ ಪ್ರವೇಶಿಸಿ ಸೃಷ್ಟಿಗಾಗಿ ಪ್ರೇರಿಸಿದನು ಎಂದರ್ಥ.

ಶ್ರುತ್ಯಾದಿಪ್ರಸಿದ್ಧವಾದ ಅನಾದಿಕಾಲದಿಂದ ತನ್ನನ್ನಾಶ್ರಯಿಸಿದ್ದ ಕಾಲಾದಿಕಾರಣಗಳನ್ನು ಸ್ವೇಚ್ಛೆಯಿಂದ ಸ್ವೀಕರಿಸಿ, ಅವುಗಳು ಸೃಷ್ಟ್ಯುನ್ಮುಖವಾಗುವಂತೆ ಮಾಡುತ್ತಾನೆ ಪರಮಾತ್ಮ.

ಆದ್ದರಿಂದ ಅವುಗಳನ್ನು ಸ್ವೀಕರಿಸಿದರೂ ಸ್ವಾತಂತ್ರ್ಯಹಾನಿ ಇಲ್ಲ. ಅನಿವಾರ್ಯವಾಗಿ ಸ್ವೀಕರಿಸಿಲ್ಲ. ಆದ್ದರಿಂದ ಶ್ರುತಿವಿರೋಧವೂ ಬರುವುದಿಲ್ಲ.

ಇಲ್ಲಿ ಮಾಯಯಾ ಎಂಬುದಕ್ಕೆ ಅನಿರ್ವಾಚ್ಯವಾದ ಅವಿದ್ಯಾ ಎಂಬ ಅರ್ಥವಾಗದಿರಲು ಅನ್ವಯ ತೋರಿಸಿ ವ್ಯಾಖ್ಯಾನ ಮಾಡುವರು-

**ತಾತ್ಪರ್ಯ- ಸ್ವಯಾ ಮಾಯಯಾ ಸ್ವಶಕ್ತ್ಯಾ ।**

ಯದೃಚ್ಛಯಾ ಎಂಬುದಕ್ಕೆ ಅಕಸ್ಮಾತ್ ಎಂದು ಅರ್ಥವಾಗಬಾರದೆಂದು ವ್ಯಾಖ್ಯಾನಿಸುವರು-

**ತಾತ್ಪರ್ಯ- ಯತ್ರಾನ್ಯಹೇತ್ವಭಾವಃ ಸ್ಯಾದೀಶ್ವರೇಚ್ಛಾದಿನಾ ವಿನಾ ।**
**ತದಿಚ್ಛಾ ಹಿ ಯದೃಚ್ಛಾ ಸ್ಯಾದದತಸ್ತತ್ರ ಯದೃಚ್ಛಯಾ ॥ -ಇತಿ ಬ್ರಹ್ಮತರ್ಕೇ**

'ಕಾಲಾದಿಕಂ ಉಪಾದದೇ' ಎಂದರೆ ಮೊದಲು ಕಾಲಾದಿಗಳಿರಲಿಲ್ಲ ಎಂದು ತೋರುವುದು ಕಾರಣ ವ್ಯಾಖ್ಯಾನಿಸುವರು-

**ಕಾಲಕರ್ಮಸ್ವಭಾವಾದಿನಿತ್ಯಯೇಶೇಚ್ಛಯಾ ಸದಾ ।**
**ಪ್ರಾಪ್ತಮೇವ ವಿಶೇಷೇಣ ಸೃಷ್ಟ್ಯಾದಾವುನ್ನಯತ್ಯಜಃ ॥ -ಇತಿ ಚ**

'ವಿಬುಭೂಷುಃ' ಎಂಬಲ್ಲಿ ವಿ ಶಬ್ದಕ್ಕೆ ನಿಷೇಧ ಎಂದರ್ಥವಾಗದಿರಲು ವಾಖ್ಯಾನಿಸುವರು-

**ತಾತ್ಪರ್ಯ- ವಿಬುಭೂಷುಃ ಬಹುಧಾ ಬುಭೂಷುಃ ।**

(ಭಗವಂತನು ಬಹಳವಾಗಬೇಕೆಂದು ಇಚ್ಛಿಸಿದರೆ ಸೃಷ್ಟಿಗಾಗಿ ಕಾಲಾದಿಗಳನ್ನೇಕೆ ಸ್ವೀಕರಿಸಬೇಕು ಮತ್ಸ್ಯಾದಿಗಳಂತೆ ಬಹುಧಾ ಆಗುಬಹುದಲ್ಲ ಎಂದರೆ ಇಲ್ಲಿ ಮತ್ಸ್ಯಾದಿಗಳಂತೆ ಬಹುಭವನ ವಿವಕ್ಷಿತವಲ್ಲ. ಕಿಂತು ನಿಯಾಮಕ ಅಂತರ್ಯಾಮಿ ರೂಪಗಳು ಎಂಬ ಅಭಿಪ್ರಾಯದಿಂದ ಸಮಾಖ್ಯಾ ಪ್ರಮಾಣ ಹೇಳುವರು-

**ತಾತ್ಪರ್ಯ- ಈಶೋ ಬಹ್ವೀಃ ಪುರಃ ಸೃಷ್ಟ್ವಾ ತತ್ರೈವ ಬಹುರೂಪತಾಮ್ ।**
**ತತ್ತನ್ನಿಯಾಮಕತಯಾ ಪ್ರಾಪ್ತಂ ಕಾಲಾದ್ಯುಪಾದದೇ ॥ -ಇತಿ ಚ**

**ತಾತ್ಪರ್ಯದ ಭಾವಾರ್ಥ-** ಸ್ವಯಾ ಮಾಯಯಾ ಎಂದರೆ ತನ್ನ ಶಕ್ತಿಯಿಂದ ಎಂದರ್ಥ.

ಶ್ರೀಹರಿಯ ಇಚ್ಛೆಯ ಹೊರತು ಬೇರೆ ದೃಷ್ಟವಾದ ಕಾರಣವು ಯಾವ ಕಾರ್ಯದಲ್ಲಿ ಕಾಣುವುದಿಲ್ಲವೋ ಅಂತಹ ಕೇವಲ ಭಗವಂತನ ಇಚ್ಛೆಯಿಂದ ಹುಟ್ಟಿದ ಕಾರ್ಯವು ಯಾದೃಚ್ಛಿಕ ಎನ್ನಿಸಿಕೊಳ್ಳುತ್ತದೆ. ಎಂದು ಬ್ರಹ್ಮತರ್ಕದಲ್ಲಿ ಹೇಳಿದೆ.

ಕಾಲ-ಕರ್ಮ-ಸ್ವಭಾವಾದಿಗಳು ನಿತ್ಯದಲ್ಲಿಯೂ ನಿತ್ಯವಾದ ಈಶ್ವರೇಚ್ಛೆಯಿಂದ ಸದಾ ಪ್ರಾಪ್ತವೇ ಆಗುತ್ತವೆ. ಅವುಗಳನ್ನು ವಿಶೇಷವಾಗಿ ಶ್ರೀಪರಮಾತ್ಮನು ಸೃಷ್ಟ್ಯಾದಿಗಳಲ್ಲಿ ಪ್ರೇರಿಸುವನು. ವಿಬುಭೂಷುಃ ಬಹುರೂಪಗಳನ್ನು ತೆಗೆದುಕೊಳ್ಳಲಿಚ್ಛಿಸಿದವನು. ಶ್ರೀಪರಮಾತ್ಮನು ಬ್ರಹ್ಮಾದಿಗಳ ಅನೇಕಶರೀರಗಳನ್ನು ಸೃಷ್ಟಿ ಮಾಡಿ ಅಲ್ಲಿಯೇ ಆ ಶರೀರಗಳಿಗೆ ನಿಯಾಮಕನಾಗಿ ಅನೇಕರೂಪಗಳನ್ನು ಹೊಂದಲಿಕ್ಕೆ ಕಾಲಾದಿಗಳನ್ನು ನಿಮಿತ್ತಕಾರಣಗಳನ್ನಾಗಿ ತೆಗೆದುಕೊಂಡನು ಎಂದೂ ಹೇಳಿದೆ. ॥ ೨೧ ॥

*ಈಗ ಭಗವಂತನಿಂದ ಮಹತ್ತತ್ವದ ಸೃಷ್ಟಿಯನ್ನು ಹೇಳುವರು-*

**ಕಾಲಾದ್ಗುಣವ್ಯತಿಕರಾತ್ ಪರಿಣಾಮಸ್ವಭಾವತಃ ।**
**ಕರ್ಮಣೋ ಜನ್ಮ ಮಹತಃ ಪುರುಷಾಧಿಷ್ಠಿತಾದಭೂತ್ ॥ ೨೨ ॥**

**ಗುಣವ್ಯತಿಕರಾತ್** ತೃತೀಯಸ್ಕಂಧದಲ್ಲಿ ಹೇಳಿದ ಪ್ರಕಾರ ಮಿಶ್ರಿತತ್ವ-ಅಮಿಶ್ರಿತತ್ವರೂಪ ವೈಷಮ್ಯ ಉಳ್ಳ ಮತ್ತು ಮೂರು ರಜೋಗುಣ ಒಂದು ತಮೋಗುಣ ಹೀಗೆ ವಿಷಮಸಂಖ್ಯಾಕವಾದ ರಜೋಗುಣ-ತಮೋಗುಣಗಳಿಂದ, **ಪ್ರಕೃತೇಃ** ಪ್ರಕೃತಿಯ, **ಪರಿಣಾಮಸ್ವಭಾವತಃ** ಪರಿಣಾಮ (ವಿಕಾರ) ವಾಗುವ ಸ್ವಭಾವದಿಂದ, ಉಪಲಕ್ಷಣಯಾ ಕಾಲಾದಿಗಳ ನಿಮಿತ್ತತ್ವಸ್ವಭಾವದಿಂದ, **ಕಾಲಾತ್** ಕಾಲದಿಂದ, **ಕರ್ಮಣಃ** ಚತುರ್ಮುಖಜನಕವಾದ ಅದೃಷ್ಟದಿಂದ, **ಪುರುಷಾಧಿಷ್ಠಿತಾತ್** ಶ್ರೀಹರಿಯಿಂದ ಅಧಿಷ್ಠಿತವಾದ ಇವುಗಳಿಂದ, **ಮಹತಃ ಜನ್ಮ** ಮಹತ್ತತ್ತ್ವದ ಜನನವು, **ಅಭೂತ್** ಆಯಿತು. ॥ ೨೨ ॥

ಇಲ್ಲಿ 'ಪರಿಣಾಮಸ್ವಭಾವತಃ' ಎಂಬುವುದು ಬಹುವ್ರೀಹಿಸಮಾಸವೆಂದು ಇಟ್ಟುಕೊಂಡು (ಪರಿಣಾಮವೇ ಸ್ವಭಾವವಾಗಿ ಉಳ್ಳದ್ದು) ಕಾಲಕ್ಕೂ ಕರ್ಮಕ್ಕೂ ವಿಶೇಷಣವೆಂದು ತೋರುವುದು ಅದು ಸರಿ ಅಲ್ಲ. ಅವು ಎರಡೂ ಪರಿಣಾಮವಾಗದೇ ನಿಮಿತ್ತವಾಗುವ ಸ್ವಭಾವ ಉಳ್ಳವುಗಳು. ಕಾರಣ ಇದು ಕರ್ಮಧಾರಯ ಎಂಬ ಅಭಿಪ್ರಾಯದಿಂದ ಪ್ರಕೃತೇಃ ಎಂಬ ಪದ ಅಧ್ಯಾಹಾರ ಮಾಡಿ ಯೋಜಿಸುವರು-

ತಾತ್ಪರ್ಯ- ಪ್ರಕೃತೇಃ ಪರಿಣಾಮಸ್ವಭಾವತಃ ।

ಗುಣಕಾಲಸ್ವಭಾವೇಭ್ಯ ಈಶೇನಾಧಿಷ್ಠಿತತ್ವತಃ ।
ಜಗದಾದಿಮಹತ್ತತ್ವಮಭೂತ್ತಸ್ಯೇಚ್ಛಯಾ ಹರೇಃ ॥ -ಇತಿ ಷಾಡ್ಗುಣ್ಯೇ

ಪ್ರಕೃತಿಯ ಪರಿಣಾಮವಾಗುವ ಬದಲಾಗುವ ವಿಕಾರಹೊಂದುವ ಸ್ವಭಾವದಿಂದ, ಕಾಲ-ಕರ್ಮಗಳ ನಿಮಿತ್ತತಾಸ್ವಭಾವದಿಂದ, ಶ್ರೀಹರಿಯು ನಿಯಾಮಕನಾಗಿ ಅವುಗಳ ಒಳಗೆ ಇರುವುದರಿಂದ ಗುಣ-ಕಾಲಸ್ವಭಾವಗಳಿಂದ ಶ್ರೀಹರಿಯ ಇಚ್ಛೆಯಿಂದ ಜಗತ್ತಿಗೆ ಕಾರಣವಾದ ಮಹತ್ತತ್ತ್ವವು ಹುಟ್ಟಿತು ಎಂದು ಷಾಡ್ಗುಣ್ಯದಲ್ಲಿ ಹೇಳಿದೆ. ।। ೨೨ ।।

**ಮಹತಸ್ತು ವಿಕುರ್ವಾಣಾದ್ರಜಸ್ಸತ್ತ್ವೋಪಬೃಂಹಿತಾತ್ ।**
**ತಮಃಪ್ರಧಾನಸ್ತ್ವಭವದ್ ದ್ರವ್ಯಜ್ಞಾನಕ್ರಿಯಾತ್ಮಕಃ ।। ೨೩ ।।**

**ರಜಸ್ಸತ್ತ್ವೋಪಬೃಂಹಿತಾತ್** ಸತ್ತ್ವಗುಣದಿಂದ ಉಪಬೃಂಹಿತವಾದ ರಜೊಗುಣ ಪೂರ್ಣವಾದ, **ವಿಕುರ್ವಾಣಾತ್** ವಿಕಾರ ಹೊಂದುವ, **ಮಹತಃ** ಮಹತ್ತತ್ತ್ವದಿಂದ **ದ್ರವ್ಯಜ್ಞಾನಕ್ರಿಯಾತ್ಮಕಃ** ಪಂಚಭೂತಗಳು, ಜ್ಞಾನೇಂದ್ರಿಯ, ಕರ್ಮೇಂದ್ರಿಯ ಇವುಗಳೇ ಸ್ವರೂಪವಾಗಿ ಉಳ್ಳ, **ತಮಃಪ್ರಧಾನಃ** ತಮೋಗುಣವೇ ಪ್ರಧಾನವಾಗಿ ಉಳ್ಳ ಅಹಂಕಾರತತ್ತ್ವವು **ಅಭವತ್** ಹುಟ್ಟಿತು.

'ಮಹತಸ್ತು' ಎಂಬಲ್ಲಿ ತು ಶಬ್ದದಿಂದ ಸೂಚಿತವಾದ ಮಹತ್ತತ್ವದಲ್ಲಿಯ ವಿಶೇಷವನ್ನು 'ರಜಸ್ಸತ್ತ್ವೋಪಬೃಂಹಿತಾತ್' ಎಂದು ಹೇಳಿರುವರು. ಇದನ್ನು ಮೂರನೇ ಸ್ಕಂಧದಲ್ಲಿ ಆಚಾರ್ಯರೇ ಸ್ಪಷ್ಟಪಡಿಸುವರು. 'ತಮಃ ಪ್ರಧಾನಸ್ತು' ಎಂಬಲ್ಲಿಯ ತು ಶಬ್ದವು ಮಹತ್ತತ್ವದ ದೃಷ್ಟಿಯಿಂದಲೇ ತಮಃಪ್ರಧಾನತ್ವವೇ ಹೊರತು ಇತರಾಪೇಕ್ಷೆಯಿಂದ ಅಲ್ಲ ಎಂಬ ವಿಶೇಷವನ್ನು ತಿಳಿಸುತ್ತದೆ. ಇಲ್ಲಿ ತಮಸ್ಸು ಪ್ರಧಾನ ಎಂದರೆ, ಯಾವಗಲಾದರೊಮ್ಮೆ ಸತ್ತ್ವಕಾರ್ಯವನ್ನು ತಡೆಯುತ್ತದೆ ಎಂದು ಅರ್ಥವೇ ಹೊರತು ಸತ್ತ್ವಕ್ಕಿಂತಲೂ ಹೆಚ್ಚಿದೆ ಎಂದಲ್ಲ. ಹೀಗೆ ಹೇಳಿದರೆ ಮುಂದಿನ ವಚನ ವಿರುದ್ಧವಾಗುತ್ತದೆ. ಮಹತ್ತತ್ವದಲ್ಲಿ ಅಹಂಕಾರತತ್ವಕ್ಕಿಂತ ಹೆಚ್ಚು ತಮೋಗುಣವಿದ್ದರೂ ಅದು ಸತ್ವಕಾರ್ಯವನ್ನು ಯಾವಕಾಲದಲ್ಲಿಯೂ ಪ್ರತಿರೋಧಿಸುವುದಿಲ್ಲ. ಆದ್ದರಿಂದ ಅದನ್ನು ತಮಃಪ್ರಧಾನ ಎಂದು ವ್ಯವಹರಿಸುವುದಿಲ್ಲ. ತಮಃಪ್ರಧಾನಕತ್ವ ಈ ರೀತಿ ಔಪಚಾರಿಕವೇ ಹೊರತು ಮುಖ್ಯವಲ್ಲ ಎಂದು ತಿಳಿಯಬೇಕು. ಆದ್ದರಿಂದ ಸತ್ವಾದಿಕಾರ್ಯ ಜ್ಞಾನೇಂದ್ರಿಯ ಕರ್ಮೇಂದ್ರಿಯಾದ್ಯಾತ್ಮಕತ್ವವನ್ನು ಅಹಂಕಾರಕ್ಕೆ ಏನು ಹೇಳಿರುವರೋ ಅದು ಅನುಪಪನ್ನವಾಗಬೇಕಾದೀತು ಎಂಬ ಅಭಿಪ್ರಾಯದಿಂದಲೇ 'ದ್ರವ್ಯಜ್ಞಾನಕ್ರಿಯಾತ್ಮಕಃ' ಎಂದು ಹೇಳಿದರು. ಇದನ್ನು ಉಪಪಾದಿಸಲೆಂದೇ ಅಹಂಕಾರತತ್ವಕ್ಕೆ ಉಪದಾನವಾದ ಮಹತ್ತತ್ವಕ್ಕೆ ರಜಸ್ಸತ್ತ್ವೋಪಬೃಂಹಿತ ಎಂಬ ವಿಶೇಷಣವಿತ್ತಿದ್ದಾರೆ.

ಇಲ್ಲಿ ವಿವಕ್ಷಿತವಾದ ದ್ರವ್ಯಾದಿಪದಗಳ ವಾಚ್ಯಗಳನ್ನು ತಿಳಿಸುವರು-

**ತಾತ್ಪರ್ಯ- ಭೂತಾನಿ ದ್ರವ್ಯನಾಮಾನಿ ಜ್ಞಾನಂ ಜ್ಞಾನೇಂದ್ರಿಯಾಣ್ಯಪಿ ।**
**ಕ್ರಿಯಾಂ ಕರ್ಮೇಂದ್ರಿಯಾಣ್ಯಾಹುಸ್ತನ್ಮೂಲತ್ವಾದಹಂ ತ್ರಿಧಾ ॥ -ಇತಿ ಗಾರುಡೇ**

ಆಕಾಶ ಮೊದಲಾದ ಪಂಚಮಹಾಭೂತಗಳಿಗೆ ದ್ರವ್ಯವೆಂದೂ, ಜ್ಞಾನೇಂದ್ರಿಯಗಳಿಗೆ ಜ್ಞಾನವೆಂದು, ಕರ್ಮೇಂದ್ರಿಯಗಳಿಗೆ ಕ್ರಿಯಾ ಎಂದು ಹೆಸರು. ಅವುಗಳಿಗೆ ಉಪಾದಾನ (ಉಪಚಾಯಕ) ವಾದ್ದರಿಂದ ಅಹಂಕಾರತತ್ತ್ವವು ಮೂರು ವಿಧವಾದುದು ಎಂದು ಗಾರುಡ ಪುರಾಣದಲ್ಲಿದೆ. ॥ ೨೩ ॥

*ಮಹತ್ತತ್ತ್ವದಿಂದ ಹುಟ್ಟಿದ ಪದಾರ್ಥ ಯಾವುದೆಂದು ಹೇಳುವರು-*

**ಸೋಽಹಂಕಾರ ಇತಿ ಪ್ರೋಕ್ತೋ ವಿಕುರ್ವನ್ ಸಮಭೂತ್ ತ್ರಿಧಾ ।**
**ವೈಕಾರಿಕಸ್ತೈಜಸಶ್ಚ ತಾಮಸಶ್ಚೇತಿ ಯದ್ಭಿದಾ ।**
**ದ್ರವ್ಯಶಕ್ತಿಃ ಕ್ರಿಯಾಶಕ್ತಿಃ ಜ್ಞಾನಶಕ್ತಿರಿತಿ ಪ್ರಭೋಃ ॥ ೨೪ ॥**

**ಪ್ರಭೋಃ** ಜಗದ್ಬಂಧಕವಾದ್ದರಿಂದ, ಸಮರ್ಥವಾದ, **ಯಸ್ಯ** ವೈಕಾರಿಕ-ತೈಜಸ-ತಾಮಸ ಎಂದು ವಿಭಕ್ತವಾದ ಯಾವುದಕ್ಕೆ, **ದ್ರವ್ಯಶಕ್ತಿಃ ಕ್ರಿಯಾಶಕ್ತಿಃ ಜ್ಞಾನಶಕ್ತಿಃ ಇತಿ** ಈ ಮೂರು ಶಕ್ತಿಗಳನ್ನು ಕೊಡುವುದು, **ಭಿದಾ** ಭೇದಕವು ಲಕ್ಷಣವೋ, **ಸಃ** ಅದು, **ಅಹಂಕಾರಃ ಇತಿ ಪ್ರೋಕ್ತಃ** ಅಹಂಕಾರವೆಂದು ಹೇಳಲ್ಪಟ್ಟಿದೆ. **ಸಃ** ಅದು, **ವಿಕುರ್ವನ್** ವಿಕಾರ ಹೊಂದುವುದಾಗಿ, **ವೈಕಾರಿಕಃ ತೈಜಸಃ ತಾಮಸಃ ಇತಿ** ಈ ರೀತಿ, **ತ್ರಿಧಾ ಸಮಭೂತ್** ಮೂರು ವಿಭಾಗವಾಯಿತು.

ಅಹಂಕಾರ ಪ್ರಭೇದಗಳಿಗೆ ಈ ಹೆಸರುಗಳು ಹೇಗೆ ಬಂದವು ಎಂಬುದನ್ನು ತಿಳಿಸಲು ಅವುಗಳ ಕಾರ್ಯಗಳಾದ ದೇವತೆ ಮುಂತಾದವುಗಳಿಗೆ ವೈಕಾರಿಕ ಮುಂತಾದ ಶಬ್ದವಾಚ್ಯತ್ವವನ್ನು ಪ್ರಮಾಣದಿಂದ ತಿಳಿಸುವರು-

ತಾತ್ಪರ್ಯ- ವಿಶಿಷ್ಟಕಾರ್ಯಶಕ್ತಿತ್ವಾತ್ ದೇವಾ ವೈಕಾರಿಕಾಃ ಸ್ಮೃತಾಃ ।
ಅತಿಜಾಜ್ವಲ್ಯಮಾನತ್ವಾತ್ ತೈಜಸಾನೀಂದ್ರಿಯಾಣ್ಯಪಿ ।
ತಾಮಸಾನಿ ತು ಭೂತಾನಿ ಯತಸ್ತಾವನ್ನತೂಭಯಮ್ ॥ -ಇತಿ ಪಾದ್ಮೇ

ಜ್ಞಾನೇಂದ್ರಿಯಾಣಾಂ ದೇವಾನಾಂ ಜ್ಞಾನಶಕ್ತಿರುದೀರಿತಾ ।
ಕ್ರಿಯಾಕರ್ಮೇಂದ್ರಿಯಾಣಾಂ ಚ ಭೂತಾನಾಂ ದ್ರವ್ಯಶಕ್ತಿತಾ ॥ -ಇತಿ ಸ್ಕಾಂದೇ

ಪ್ರಕೃತಿಯ ಪರಿಣಾಮವಾಗುವ ಬದಲಾಗುವ ವಿಕಾರಹೊಂದುವ ಸ್ವಭಾವದಿಂದ, ಕಾಲ-ಕರ್ಮಗಳ ನಿಮಿತ್ತತಾಸ್ವಭಾವದಿಂದ; ಶ್ರೀಹರಿಯು ನಿಯಾಮಕನಾಗಿ ಅವುಗಳ ಒಳಗೆ ಇರುವುದರಿಂದ ಗುಣ-ಕಾಲಸ್ವಭಾವಗಳಿಂದ ಶ್ರೀಹರಿಯ ಇಚ್ಛೆಯಿಂದ ಜಗತ್ತಿಗೆ ಕಾರಣವಾದ ಮಹತ್ತತ್ತ್ವವು ಹುಟ್ಟಿತು ಎಂದು ಷಾಡ್ಗುಣ್ಯದಲ್ಲಿ ಹೇಳಿದೆ. ॥ ೨೨ ॥

**ಮಹತಸ್ತು ವಿಕುರ್ವಾಣಾದ್ರಜಸ್ಸತ್ತ್ವೋಪಬೃಂಹಿತಾತ್ ।**
**ತಮಃಪ್ರಧಾನಸ್ತ್ವಭವದ್ ದ್ರವ್ಯಜ್ಞಾನಕ್ರಿಯಾತ್ಮಕಃ ॥ ೨೩ ॥**

**ರಜಸ್ಸತ್ತ್ವೋಪಬೃಂಹಿತಾತ್** ಸತ್ತ್ವಗುಣದಿಂದ ಉಪಬೃಂಹಿತವಾದ ರಜೋಗುಣ ಪೂರ್ಣವಾದ, **ವಿಕುರ್ವಾಣಾತ್** ವಿಕಾರ ಹೊಂದುವ, **ಮಹತಃ** ಮಹತ್ತತ್ತ್ವದಿಂದ **ದ್ರವ್ಯಜ್ಞಾನಕ್ರಿಯಾತ್ಮಕಃ** ಪಂಚಭೂತಗಳು, ಜ್ಞಾನೇಂದ್ರಿಯ, ಕರ್ಮೇಂದ್ರಿಯ ಇವುಗಳೇ ಸ್ವರೂಪವಾಗಿ ಉಳ್ಳ **ತಮಃಪ್ರಧಾನಃ** ತಮೋಗುಣವೇ ಪ್ರಧಾನವಾಗಿ ಉಳ್ಳ ಅಹಂಕಾರತತ್ತ್ವವು **ಅಭವತ್** ಹುಟ್ಟಿತು.

'ಮಹತಸ್ತು' ಎಂಬಲ್ಲಿ ತು ಶಬ್ದದಿಂದ ಸೂಚಿತವಾದ ಮಹತ್ತತ್ವದಲ್ಲಿಯ ವಿಶೇಷವನ್ನು 'ರಜಸ್ಸತ್ತ್ವೋಪಬೃಂಹಿತಾತ್' ಎಂದು ಹೇಳಿರುವರು. ಇದನ್ನು ಮೂರನೇ ಸ್ಕಂಧದಲ್ಲಿ ಆಚಾರ್ಯರೇ ಸ್ಪಷ್ಟಪಡಿಸುವರು. 'ತಮಃ ಪ್ರಧಾನಸ್ತು' ಎಂಬಲ್ಲಿಯ ತು ಶಬ್ದವು ಮಹತ್ತತ್ವದ ದೃಷ್ಟಿಯಿಂದಲೇ ತಮಃಪ್ರಧಾನತ್ವವೇ ಹೊರತು ಇತರಾಪೇಕ್ಷೆಯಿಂದ ಅಲ್ಲ ಎಂಬ ವಿಶೇಷವನ್ನು ತಿಳಿಸುತ್ತದೆ. ಇಲ್ಲಿ ತಮಸ್ಸು ಪ್ರಧಾನ ಎಂದರೆ, ಯಾವಗಲಾದರೊಮ್ಮೆ ಸತ್ತ್ವಕಾರ್ಯವನ್ನು ತಡೆಯುತ್ತದೆ ಎಂದು ಅರ್ಥವೇ ಹೊರತು ಸತ್ತ್ವಕ್ಕಿಂತಲೂ ಹೆಚ್ಚಿದೆ ಎಂದಲ್ಲ. ಹೀಗೆ ಹೇಳಿದರೆ ಮುಂದಿನ ವಚನ ವಿರುದ್ಧವಾಗುತ್ತದೆ. ಮಹತ್ತತ್ವದಲ್ಲಿ ಅಹಂಕಾರತತ್ವಕ್ಕಿಂತ ಹೆಚ್ಚು ತಮೋಗುಣವಿದ್ದರೂ ಅದು ಸತ್ವಕಾರ್ಯವನ್ನು ಯಾವಕಾಲದಲ್ಲಿಯೂ ಪ್ರತಿರೋಧಿಸುವುದಿಲ್ಲ. ಆದ್ದರಿಂದ ಅದನ್ನು ತಮಃಪ್ರಧಾನ ಎಂದು ವ್ಯವಹರಿಸುವುದಿಲ್ಲ. ತಮಃಪ್ರಧಾನಕತ್ವ ಈ ರೀತಿ ಔಪಚಾರಿಕವೇ ಹೊರತು ಮುಖ್ಯವಲ್ಲ ಎಂದು ತಿಳಿಯಬೇಕು. ಆದ್ದರಿಂದ ಸತ್ವಾದಿಕಾರ್ಯ ಜ್ಞಾನೇಂದ್ರಿಯ ಕರ್ಮೇಂದ್ರಿಯಾದ್ಯಾತ್ಮಕತ್ವವನ್ನು ಅಹಂಕಾರಕ್ಕೆ ಏನು ಹೇಳಿರುವರೋ ಅದು ಅನುಪಪನ್ನವಾಗಬೇಕಾದೀತು ಎಂಬ ಅಭಿಪ್ರಾಯದಿಂದಲೇ 'ದ್ರವ್ಯಜ್ಞಾನಕ್ರಿಯಾತ್ಮಕಃ' ಎಂದು ಹೇಳಿದರು. ಇದನ್ನು ಉಪಪಾದಿಸಲೆಂದೇ ಅಹಂಕಾರತತ್ವಕ್ಕೆ ಉಪದಾನವಾದ ಮಹತ್ತತ್ವಕ್ಕೆ ರಜಸ್ಸತ್ತ್ವೋಪಬೃಂಹಿತ ಎಂಬ ವಿಶೇಷಣವಿತ್ತಿದ್ದಾರೆ.

ಇಲ್ಲಿ ವಿವಕ್ಷಿತವಾದ ದ್ರವ್ಯಾದಿಪದಗಳ ವಾಚ್ಯಗಳನ್ನು ತಿಳಿಸುವರು-

**ತಾತ್ಪರ್ಯ- ಭೂತಾನಿ ದ್ರವ್ಯನಾಮಾನಿ ಜ್ಞಾನಂ ಜ್ಞಾನೇಂದ್ರಿಯಾಣ್ಯಪಿ ।**
**ಕ್ರಿಯಾಂ ಕರ್ಮೇಂದ್ರಿಯಾಣ್ಯಾಹುಸ್ತನ್ಮೂಲತ್ವಾದಹಂ ತ್ರಿಧಾ ॥ -ಇತಿ ಗಾರುಡೇ**

ಆಕಾಶ ಮೊದಲಾದ ಪಂಚಮಹಾಭೂತಗಳಿಗೆ ದ್ರವ್ಯವೆಂದೂ, ಜ್ಞಾನೇಂದ್ರಿಯಗಳಿಗೆ ಜ್ಞಾನವೆಂದು, ಕರ್ಮೇಂದ್ರಿಯಗಳಿಗೆ ಕ್ರಿಯಾ ಎಂದು ಹೆಸರು. ಅವುಗಳಿಗೆ ಉಪಾದಾನ (ಉಪಚಾಯಕ) ವಾದ್ದರಿಂದ ಅಹಂಕಾರತತ್ತ್ವವು ಮೂರು ವಿಧವಾದುದು ಎಂದು ಗಾರುಡ ಪುರಾಣದಲ್ಲಿದೆ. ॥ ೨೩ ॥

*ಮಹತ್ತತ್ವದಿಂದ ಹುಟ್ಟಿದ ಪದಾರ್ಥ ಯಾವುದೆಂದು ಹೇಳುವರು-*

**ಸೋಽಹಂಕಾರ ಇತಿ ಪ್ರೋಕ್ತೋ ವಿಕುರ್ವನ್ ಸಮಭೂತ್ ತ್ರಿಧಾ ।**
**ವೈಕಾರಿಕಸ್ತೈಜಸಶ್ಚ ತಾಮಸಶ್ಚೇತಿ ಯದ್ಭಿದಾ ।**
**ದ್ರವ್ಯಶಕ್ತಿಃ ಕ್ರಿಯಾಶಕ್ತಿಃ ಜ್ಞಾನಶಕ್ತಿರಿತಿ ಪ್ರಭೋಃ ॥ ೨೪ ॥**

**ಪ್ರಭೋಃ** ಜಗದ್ಬಂಧಕವಾದ್ದರಿಂದ, ಸಮರ್ಥವಾದ, **ಯಸ್ಯ** ವೈಕಾರಿಕ-ತೈಜಸ-ತಾಮಸ ಎಂದು ವಿಭಕ್ತವಾದ ಯಾವುದಕ್ಕೆ **ದ್ರವ್ಯಶಕ್ತಿಃ ಕ್ರಿಯಾಶಕ್ತಿಃ ಜ್ಞಾನಶಕ್ತಿಃ ಇತಿ** ಈ ಮೂರು ಶಕ್ತಿಗಳನ್ನು ಕೊಡುವುದು, **ಭಿದಾ** ಭೇದಕವು ಲಕ್ಷಣವೋ, **ಸಃ** ಅದು, **ಅಹಂಕಾರಃ ಇತಿ ಪ್ರೋಕ್ತಃ** ಅಹಂಕಾರವೆಂದು ಹೇಳಲ್ಪಟ್ಟಿದೆ. **ಸಃ** ಅದು, **ವಿಕುರ್ವನ್** ವಿಕಾರ ಹೊಂದುವುದಾಗಿ, **ವೈಕಾರಿಕಃ ತೈಜಸಃ ತಾಮಸಃ ಇತಿ** ಈ ರೀತಿ, **ತ್ರಿಧಾ ಸಮಭೂತ್** ಮೂರು ವಿಭಾಗವಾಯಿತು.

ಅಹಂಕಾರ ಪ್ರಭೇದಗಳಿಗೆ ಈ ಹೆಸರುಗಳು ಹೇಗೆ ಬಂದವು ಎಂಬುದನ್ನು ತಿಳಿಸಲು ಅವುಗಳ ಕಾರ್ಯಗಳಾದ ದೇವತೆ ಮುಂತಾದವುಗಳಿಗೆ ವೈಕಾರಿಕ ಮುಂತಾದ ಶಬ್ದವಾಚ್ಯತ್ವವನ್ನು ಪ್ರಮಾಣದಿಂದ ತಿಳಿಸುವರು-

ತಾತ್ಪರ್ಯ- ವಿಶಿಷ್ಟಕಾರ್ಯಶಕ್ತಿತ್ವಾತ್ ದೇವಾ ವೈಕಾರಿಕಾಃ ಸ್ಮೃತಾಃ ।
ಅತಿಜಾಜ್ವಲ್ಯಮಾನತ್ವಾತ್ ತೈಜಸಾನೀಂದ್ರಿಯಾಣ್ಯಪಿ ।
ತಾಮಸಾನಿ ತು ಭೂತಾನಿ ಯತಸ್ತಾವನ್ನತೂಭಯಮ್ ॥ -ಇತಿ ಪಾದ್ಮೇ

ಜ್ಞಾನೇಂದ್ರಿಯಾಣಾಂ ದೇವಾನಾಂ ಜ್ಞಾನಶಕ್ತಿರುದೀರಿತಾ ।
ಕ್ರಿಯಾಕರ್ಮೇಂದ್ರಿಯಾಣಾಂ ಚ ಭೂತಾನಾಂ ದ್ರವ್ಯಶಕ್ತಿತಾ ॥ -ಇತಿ ಸ್ಕಾಂದೇ

ದ್ರವ್ಯಂ ತು ದ್ರವಣಪ್ರಾಪ್ಯಂ ದ್ವಯೋರ್ವಿವದಮಾನಯೋಃ ।
ಪೂರ್ವಂ ವೇಗಾಭಿಸಂಬಧಾದಾಕಾಶಸ್ತು ಪ್ರದೇಶತಃ ॥ -ಇತಿ ಪ್ರಕಾಶಸಂಹಿತಾಯಾಮ್

ಉತ್ತಮವಾದ ಜ್ಞಾನವನ್ನು ಹುಟ್ಟಿಸುವ ಶಕ್ತಿ ಇರುವುದರಿಂದ ಹತ್ತು ಇಂದ್ರಿಯಾಭಿಮಾನಿದೇವತೆಗಳು ವೈಕಾರಿಕರೆನಿಸುತ್ತಾರೆ. ಹತ್ತು ಇಂದ್ರಿಯಾಭಿಮಾನಿ ದೇವತೆಗಳೂ ಅತ್ಯಂತಪ್ರಕಾಶಸ್ವರೂಪರಾಗಿರುವುದರಿಂದ ತೈಜಸರೆನಿಸಿಕೊಳ್ಳುತ್ತಾರೆ. ಜ್ಞಾನವನ್ನು ಹುಟ್ಟಿಸುವ ಶಕ್ತಿಯೂ ಅತ್ಯಂತಪ್ರಕಾಶಿಸುವ ಶಕ್ತಿಯೂ ಈ ಎರಡೂ ಪಂಚಭೂತಾಭಿಮಾನಿಗಳಿಗೆ ಭೂತಾಭಿಮಾನಿಗಳಾಗಿರುವಾಗ ಇಲ್ಲದ ಕಾರಣ ಪಂಚಭೂತಾಭಿಮಾನಿಗಳು ತಾಮಸರೆನಿಸುತ್ತಾರೆ. ಎಂದು ಪಾದ್ಮಪುರಾಣದಲ್ಲಿ ಹೇಳಿದೆ. ತಾವತ್ ನು ಎಂದದ್ದರಿಂದ ಅಲ್ಪವಾಗಿ ಉಭಯಶಕ್ತಿಯು ಇದೆ ಎಂದು ಸೂಚಿತವಾಗಿದೆ. ಅಂತು ಕಾರ್ಯರಾದ ದೇವತೆಗಳಿಗೆ ವಾಚಕವಾದ ವೈಕಾರಿಕಾದಿ ಶಬ್ದಗಳು ಅವರಿಗೆ ಕಾರಣಗಳಾದ ಅಹಂಕಾರಪ್ರಭೇದಗಳಿಗೆ ಔಪಚಾರಿಕವಾಗಿ ವಾಚಕವಾಗಿವೆ. ಎಂದು ಭಾವ. ॥ ೨೪ ॥

ಜ್ಞಾನೇಂದ್ರಿಯಗಳಿಗೂ, ಜ್ಞಾನೇಂದ್ರಿಯಾಭಿಮಾನಿದೇವತೆಗಳಿಗೂ ಜ್ಞಾನವನ್ನು ಹುಟ್ಟಿಸುವ ಶಕ್ತಿಯೂ, ಕರ್ಮೇಂದ್ರಿಯಗಳಿಗೂ ಕರ್ಮೇಂದ್ರಿಯಾಭಿಮಾನಿದೇವತೆಗಳಿಗೆ ಕ್ರಿಯೆಯನ್ನು ಹುಟ್ಟಿಸುವ ಶಕ್ತಿಯೂ, ಪಂಚಭೂತಗಳಿಗೂ ಭೂತಾಭಿಮಾನಿ ದೇವತೆಗಳಿಗೂ ದ್ರವ್ಯಶಕ್ತಿ ಇದೆ ಎಂದು ಸ್ಕಾಂದದಲ್ಲಿದೆ. ಹೀಗೆ ಮೂರುಶಕ್ತಿಗಳಿಗೆ ಕಾರಣರಾದವರು ವೈಕಾರಿಕಾದಿದೇವತೆಗಳು ಜ್ಞಾನಶಕ್ತಿ ಎಂಬಲ್ಲಿ ಜ್ಞಾನಜನಕಶಕ್ತಿ ಎಂದು ಅರ್ಥವನ್ನು ಹೇಳಿದಂತೆ, ದ್ರವ್ಯಶಕ್ತಿ ಎಂಬುದಕ್ಕೆ ದ್ರವ್ಯಜನಕಶಕ್ತಿ ಎಂದು ಅರ್ಥಮಾಡಲಾಗುವುದಿಲ್ಲ. ದ್ರವ್ಯಪದದಿಂದ ಹಿಂದೆ ಭೂತಗಳನ್ನೇ ಹೇಳಿದೆ. ಭೂತಗಳು ಭೂತಜನಕ ಶಕ್ತಿ ಉಳ್ಳವುಗಳಾಗುವುದಿಲ್ಲ. ಕಾರಣ ವಿವಕ್ಷಿತವಾದ ದ್ರವ್ಯಶಕ್ತಿಯನ್ನು ಪ್ರಮಾಣದಿಂದ ತಿಳಿಸುವರು-

ನಾನೇ ಮೊದಲು ಹೊಂದುವೆನು ಎಂದು ಮೊದಲು ಹೊಂದುವ ವಿಷಯದಲ್ಲಿ ವಿವಾದ ಮಾಡತಕ್ಕವರ ಮಧ್ಯದಲ್ಲಿ ವೇಗದಿಂದ ಮೊದಲು ಹೊಂದಲ್ಪಡತಕ್ಕ ಗೋಡೆ ಮೊದಲಾದವುಗಳು ದ್ರವ್ಯವೆನಿಸುತ್ತವೆ. ಅವ್ಯಾಕೃತಾಕಾಶದ ಪ್ರದೇಶವೂ ವೇಗದಿಂದ ಹೊಂದಲ್ಪಡುವುದರಿಂದ ದ್ರವ್ಯವೆನಿಸಿಕೊಳ್ಳುತ್ತದೆ. ಎಂದು ಪ್ರಕಾಶಸಂಹಿತೆಯಲ್ಲಿದೆ. ಬ್ರಹ್ಮಾಂಡದ ಹೊರಗಿರುವ ಭೂತಗಳಲ್ಲಿ ದ್ರವಣಪ್ರಾಪ್ಯತ್ವ ಇಲ್ಲದಿದ್ದರೂ ಯೋಗ್ಯತೆ ಇದೆ. ಆದ್ದರಿಂದ ದ್ರವ್ಯ ಎನ್ನಬಹುದು.

*ಮೊದಲಿಗೆ ತಾಮಸ ಅಹಂಕಾರದಿಂದ ಭೂತೋತ್ಪತ್ತಿಯನ್ನು ಹೇಳುವರು-*

**ತಾಮಸಾದಪಿ ಭೂತಾದೇರ್ವಿಕುರ್ವಾಣಾದಭೂನ್ನಭಃ ।**
**ತಸ್ಯ ಮಾತ್ರಾಗುಣಃ ಶಬ್ದೋ ಲಿಂಗಂ ಯದ್ ದ್ರಷ್ಟೃದೃಶ್ಯಯೋಃ ॥ ೨೫ ॥**

**ವಿಕುರ್ವಾಣಾತ್** ವಿಕಾರ ಹೊಂದುವ, **ಭೂತಾದೇಃ** ಭೂತಗಳಿಗೆ ಮೂಲ ಕಾರಣವಾದ, **ತಾಮಸಾತ್** ತಾಮಸ ಅಹಂಕಾರದಿಂದ, **ನಭಃ** ಭೂತಾಕಾಶವು, **ಅಭೂತ್** ಉತ್ಪನ್ನವಾಯಿತು. **ತಸ್ಯ** ಆಕಾಶದ, **ಮಾತ್ರಾಗುಣಃ** ಮಾತ್ರಾಗುಣವಾದ, **ಶಬ್ದಃ ಅಪಿ** ಶಬ್ದವೂ ಕೂಡ, **ಅಭೂತ್** ಉಂಟಾಯಿತು, **ಯತ್** ಯಾವ ಶಬ್ದವು, **ದ್ರಷ್ಟೃದೃಶ್ಯಯೋಃ ಲಿಂಗಮ್** ಸ್ವತಂತ್ರದ್ರಷ್ಟೃವಾದ ಪರಮಾತ್ಮನಿಗೆ ಮತ್ತು ದೃಶ್ಯವಾದ ಜಗತ್ತಿಗೆ ಜ್ಞಾಪಕವಾದುದೂ ಅಂತಹ ಶಬ್ದವು ಹುಟ್ಟಿತು.

ಇಲ್ಲಿ ಅಸಾಧಾರಣವಾಗಿ ವಿವಕ್ಷಿತವಾದ ಮಾತ್ರಾಗುಣ ಶಬ್ದಾರ್ಥವನ್ನು ಪ್ರಮಾಣದಿಂದ ಹೇಳುವರು-

**ತಾತ್ಪರ್ಯ- ಪಂಚೇಂದ್ರಿಯಾಭಿಮೇಯಾತ್ವಾನ್ಮಾತ್ರಾಗುಣ ಇತೀರಿತಃ ॥ಇತಿ ಮಾತ್ಸ್ಯೇ॥ ಶಬ್ದೇನೈವ ಪರೋ ದ್ರಷ್ಟಾ ಜ್ಞಾಯತೇ ಜಗದೇವ ಚ ॥ -ಇತಿ ವಿಷ್ಣುಸಂಹಿತಾಯಾಮ್**

ಐದು ಇಂದ್ರಿಯಗಳಿಂದ ತಿಳಿಯಲ್ಪಡುವುದರಿಂದ ಗುಣಗಳಾದುದರಿಂದ ಮಾತ್ರಾಗುಣ ಎಂದು ಶಬ್ದಾದಿಗಳನ್ನು ಕರೆಯುತ್ತಾರೆ. ಸರ್ವವನ್ನು ನೋಡುವ ಸರ್ವೋತ್ತಮನಾದ ಶ್ರೀಹರಿಯು ಮತ್ತು ಜಗತ್ತು ಶಬ್ದದಿಂದಲೇ ತಿಳಿಯಲ್ಪಡುತ್ತದೆ. ಎಂದು ವಿಷ್ಣುಸಂಹಿತೆಯಲ್ಲಿ ಇದೆ. ಇಲ್ಲಿ ಆಕಾಶಗುಣವಾದ ಧ್ವನ್ಯಾತ್ಮಕ ಶಬ್ದವು ವರ್ಣಗಳಿಗೆ ವ್ಯಂಜಕವಾಗಿಯೇ ಜ್ಞಾಪಕವಾಗುವುದು ವರ್ಣದಂತೆ ಪ್ರತಿಪಾದಕವಲ್ಲ.

ಇಲ್ಲಿ ಶಬ್ದಕ್ಕೆ ಪಂಚೇಂದ್ರಿಯವೇದ್ಯತ್ವವನ್ನು ಹೀಗೆ ಕೂಡಿಸಬೇಕು. ತ್ವಗಾದಿ ಇಂದ್ರಿಯಗಳಿಂದ ವೇದ್ಯವಾದ ಸ್ಪರ್ಶಾದಿಗಳಲ್ಲಿ ಮೂಲಕಾರಣವಾಗಿ ಶಬ್ದವು ಅನುಸ್ಯೂತವಾದ್ದರಿಂದ ಸ್ಪರ್ಶಾದಿಗಳಿಂದ ಅಭೇದವಿರುವುದರಿಂದ ತ್ವಗಾದಿವೇದ್ಯತ್ವವೂ ಬರುವುದು ಸಾಧ್ಯವಿದೆ. ಕಾರಣ ಪಂಚೇಂದ್ರಿಯವೇದ್ಯತ್ವವು ಶಬ್ದಕ್ಕೆ ಉಪಪನ್ನವಾಗುತ್ತದೆ. ಅಥವಾ ಆಯಾ ಇಂದ್ರಿಯವೇದ್ಯತ್ವವು ಆಯಾ ಗುಣಗಳಿಗೆ ಮಾತ್ರಾ ಎಂದು ಕರೆಯಲು ನಿಮಿತ್ತ ಎಂದು ತಿಳಿಸಲು ಹೀಗೆ ಹೇಳಿರುವರು.

ಇಲ್ಲಿ ತಾಮಸ ಅಹಂಕಾರದಿಂದ ಗುಣವಾದ ಶಬ್ದ ಮೊದಲು ಹುಟ್ಟುತ್ತದೆ. ನಂತರ ಗುಣಿಯಾದ ಆಕಾಶವು ಹುಟ್ಟುತ್ತದೆ. ಇದರಂತೆ ಮುಂದೆಯೂ ತಿಳಿಯಬೇಕು ಎಂದು

ಯಾದವಾರ್ಯರು ಹೇಳಿದ್ದಾರೆ. ಇಲ್ಲಿ ಸ್ವಲ್ಪ ಗೊಂದಲವಾಗುವುದು. ಅದೇನೆಂದರೆ ಶಬ್ದ-ಸ್ಪರ್ಶ-ರೂಪ-ರಸ-ಗಂಧಗಳೆಂಬ ಶಬ್ದದಿಂದ ಕರೆಸಿಕೊಳ್ಳುವ ವಸ್ತುಗಳು ಎರಡಿವೆ. ಆಕಾಶಾದಿಭೂತಗಳಿಗೆ ಉಪಚಾಯಕವಾದ ದ್ರವ್ಯಗಳು ಅವುಗಳಿಗೆ ತನ್ಮಾತ್ರಾ ಎಂದು, ಅಪ್ರಧಾನ ಎಂಬರ್ಥದಲ್ಲಿ ಗುಣ ಎಂದೂ (ಸತ್ತ್ವಾದಿಗುಣ ಎಂದಂತೆ) ಕರೆಯುವರು. ಇನ್ನು ಆಯಾ ಭೂತಗಳಲ್ಲಿದ್ದು ನಮ್ಮ ಇಂದ್ರಿಯಗಳಿಗೆ ಗೋಚರವಾದವುಗಳು ಇವು ಗುಣಗಳೇ. ಇಲ್ಲಿ ಗುಣಗಳು ಮುಂಚೆ ಹುಟ್ಟುವವು. ಗುಣಿಯು ನಂತರ ಹುಟ್ಟುವುದು ಎನ್ನುವರು. ಇಂದ್ರಿಯಗೋಚರ ಎಂದೂ ಮಾತ್ರಾಶಬ್ದಾರ್ಥ ಮಾಡಿರುವರು. ಇಂದ್ರಿಯಗೋಚರವಾದವು ಮುಂಚೆ ಹುಟ್ಟುವುದಿಲ್ಲ. ಮುಂಚೆ ಹುಟ್ಟುವವು ಇಂದ್ರಿಯಗೋಚರಗಳಲ್ಲ. ಕಾರಣ ಇಲ್ಲಿ ಹೇಳಿದ ಮಾತ್ರಾಶಬ್ದವು ಕರ್ಮವ್ಯುತ್ಪತ್ತಿಯಿಂದ (ಮೀಯಂತೆ ಇತಿ ಮಾತ್ರಾ) ಹೇಳಿದ್ದು ಗುಣಗಳ ದೃಷ್ಟಿಯಿಂದ ದ್ರವ್ಯಗಳ ದೃಷ್ಟಿಯಿಂದ. ಮೀಯಂತೆ ನಿರ್ಮೀಯಂತೇ ಏತಾಭಿಃ ಇತಿ ಮಾತ್ರಾಃ ಎಂಬ ವ್ಯುತ್ಪತ್ತಿಯಿಂದ ಭೂತನಿರ್ಮಾಣಸಾಧನ ಎಂಬರ್ಥದಲ್ಲಿ ಮಾತ್ರಾ ಶಬ್ದ ಉಪಯೋಗಿಸುವರು ಎಂದು ತಿಳಿಯಬೇಕು. ಅಂತು ತೃತೀಯಸ್ಕಂಧದ ನಿರವಕಾಶವಾದ ಯಾದವಾರ್ಯರ ವಾಕ್ಯಗಳ ಪ್ರಕಾರ ಭೂತೋತ್ಪತ್ತಿಕ್ರಮ ಕೆಳಗಿನಂತೆ ತಿಳಿಯಬೇಕು. ಇಲ್ಲವಾದರೆ ಪೂರ್ವಾಪರ ವಿರೋಧ ಬರುವುದು.

ತಾಮಸ ಅಹಂಕಾರದಿಂದ ಉಪಚಿತವಾದ ಶಬ್ದತನ್ಮಾತ್ರಾಸೂಕ್ಷ್ಮವು ಶಬ್ದತನ್ಮಾತ್ರಾ ಆಗುವುದು. ಆ ತನ್ಮಾತ್ರಾಶಬ್ದದಿಂದ ಆಕಾಶವೆಂಬ ಭೂತಸೂಕ್ಷ್ಮವು ಉಪಚಯಗೊಂಡು ಭೂತಾಕಾಶವಾಗುವುದು. ಭೂತಾಕಾಶಕ್ಕೆ ಭೂತಸೂಕ್ಷ್ಮವೇ ಉಪಾದಾನಕಾರಣ. ತಾಮಸ ಅಹಂಕಾರ ಶಬ್ದತನ್ಮಾತ್ರಾಗಳು ಉಪಚಾಯಕಗಳೆಂದು ತಿಳಿಯಬೇಕು. ಇದರಂತೆ ಮುಂದೆಯೂ ತಿಳಿಯಬೇಕು. ।। ೨೫ ।।

**ನಭಸೋಽಥ ವಿಕುರ್ವಾಣಾದಭೂತ್ ಸ್ಪರ್ಶಗುಣೋಽನಿಲಃ ।**
**ಪರಾನ್ವಯಾಚ್ಛಬ್ದವಾಂಶ್ಚ ಪ್ರಾಣ ಓಜಃ ಸಹೋ ಬಲಮ್ ।। ೨೬ ।।**

**ವಿಕುರ್ವಾಣಾತ್** ವಿಕಾರಹೊಂದುವ, **ನಭಸಃ** ಭೂತಾಕಾಶದಿಂದ, **ಸ್ಪರ್ಶಗುಣಃ** ತ್ವಗಿಂದ್ರಿಯಗ್ರಾಹ್ಯವಾದ ಸ್ಪರ್ಶವೆಂಬ ಗುಣ ಉಳ್ಳ **ಅನಿಲಃ** ವಾಯುವು, **ಅಭೂತ್** ಜನಿಸಿತು. **ಪರಾನ್ವಯಾತ್** ಪೂರ್ವಕಾಲೀನವಾದ ಆಕಾಶವು ಉಪಚಾಯಕೋಪಾದಾನವಾಗಿ ವಾಯುವಿನಲ್ಲಿ ಬಂದದ್ದರಿಂದ, **ಶಬ್ದವಾಂಶ್ಚ** ವಾಯುವು ಶಬ್ದ ಉಳ್ಳದ್ದೂ ಆಗಿದೆ.

**ಪ್ರಾಣಃ** ಸರ್ವಚೇಷ್ಟಕತ್ವವು, **ಓಜಃ** ವೈರಿಗಳನ್ನು ಸೋಲಿಸುವ ಶಕ್ತಿಯು, **ಸಹಃ** ಶತ್ರುಗಳಿಂದ ಸೋಲಿಸಲಾಗದಿರುವ ಶಕ್ತಿಯು, **ಬಲಮ್** ತನ್ನ ಇಚ್ಛೆಯಂತೆ ಕೆಲಸಮಾಡುವುದರಿಂದ ಬಲವು, ವಿಧಾರಕನಾದ್ದರಿಂದ ವಿಧೃತಿ ಎಂಬ ಗುಣಗಳು ವಾಯುವಿನ ಸಹಜಗುಣಗಳು.

ಇಲ್ಲಿ 'ಭೂತಂ ಭೂತಾಭಿಮಾನೀ ಚ' ಎಂದು ಹೇಳಿದ ಪ್ರಕಾರ ಮುಖ್ಯವಾಯುವು ಅನಿಲ ಶಬ್ದದಿಂದ ವಿವಕ್ಷಿತವಾದ್ದರಿಂದ ಈ ಅಭಿಪ್ರಾಯದಿಂದ ಈ ಗುಣಗಳನ್ನು ಹೇಳಿದ್ದಾರೆ.

ಇಲ್ಲಿ ಪ್ರಾಣ ದೇಹಧಾರಣ, ಓಜ ಇಂದ್ರಿಯಬಲ, ಸಹ ಮನಸ್ಸಿನ ಬಲ, ಬಲ ಶರೀರಬಲ ಈ ಬಲಗಳಿಗೆ ಕಾರಣವಾದದ್ದು ಎಂದು ವ್ಯಾಖ್ಯಾನ ಮಾಡಿದ್ದಾರೆ. ಇದು ಸರಿಯಾದುದಲ್ಲ. ಇದರ ಸರಿಯಾದ ಅರ್ಥವನ್ನು ಶ್ರೀಮದಾಚಾರ್ಯರು ಈ ರೀತಿಯಾಗಿ ವ್ಯಾಖ್ಯಾನಿಸಿದ್ದಾರೆ-

**ತಾತ್ಪರ್ಯ- ಸರ್ವಚೇಷ್ಟಯಿತೃತ್ವಾತ್ತು ಪ್ರಾಣೋಽಭಿಭವಶಕ್ತಿತಃ ।**
**ಓಜಸ್ತ್ವನಭಿಭಾವ್ಯತ್ವಾತ್ ಸಹಶ್ಚ ಸ್ವೇಚ್ಛಯಾ ಕೃತೇಃ ।**
**ಬಲಂ ವಿಧಾರಕತ್ವಾಚ್ಚ ವಿಧೃತಿರ್ವಾಯುರುಚ್ಯತೇ ॥ -ಇತಿ ಭಾರತೇ**

ವಾಯುವು ಸರ್ವರಿಗೆ ಚೇಷ್ಟಕನಾದುದರಿಂದ ಪ್ರಾಣ ಎಂದೂ, ವೈರಿಗಳನ್ನು ಸೋಲಿಸುವ ಶಕ್ತಿ ಇದ್ದುದರಿಂದ ಓಜಃ ಎಂದೂ, ಶತ್ರುಗಳಿಂದ ಸೋಲಿಸಲಾಗದಿರುವ ಶಕ್ತಿ ಇರುವುದರಿಂದ ಸಹಃ ಎಂದೂ, ತನ್ನ ಇಚ್ಛಾನುಸಾರ ಕಾರ್ಯಮಾಡುವ ಶಕ್ತಿ ಇರುವುದರಿಂದ ಬಲ ಎಂದೂ, ಸರ್ವಧಾರಕ ಶಕ್ತಿ ಇರುವುದರಿಂದ ವಿಧೃತಿ ಎಂದೂ ಹೇಳಲ್ಪಡುತ್ತಾನೆ. ಎಂದು ಭಾರತದಲ್ಲಿದೆ.

ಇಲ್ಲಿಯೂ ಆಕಾಶದಿಂದ ಉಪಚಿತವಾಗಿ ಸ್ಪರ್ಶತನ್ಮಾತ್ರಾ ಸೂಕ್ಷ್ಮಸ್ಪರ್ಶವಾಗಿ ಸ್ಪರ್ಶತನ್ಮಾತ್ರಾದಿಂದ ವಾಯುಸೂಕ್ಷ್ಮಗಳು ಉಪಚಯಗೊಂಡು ವಾಯುಭೂತವಾಗುವುದು. ಅದರಲ್ಲಿ ಶಬ್ದ-ಸ್ಪರ್ಶ ಎಂಬ ಎರಡು ಗುಣಗಳು ಇರುವವು ಎಂದು ತಿಳಿಯಬೇಕು.

**ವಾಯೋರಪಿ ವಿಕುರ್ವಾಣಾತ್ ಕಾಲಕರ್ಮಸ್ವಭಾವತಃ ।**
**ಉದಪದ್ಯತ ತೇಜೋ ವೈ ರೂಪವತ್ ಸ್ಪರ್ಶಶಬ್ದವತ್ ॥ ೨೭ ॥**

**ಕಾಲಕರ್ಮಸ್ವಭಾವತಃ** ಸೃಷ್ಟಿಕಾಲ-ಅದೃಷ್ಟ -ಸ್ವಭಾವಗಳಿಂದ, **ವಿಕುರ್ವಾಣಾತ್** ವಿಕಾರ ಹೊಂದುವ, **ವಾಯೋಃ** ವಾಯುವಿನಿಂದ, **ರೂಪವತ್ ಸ್ಪರ್ಶವತ್ ಶಬ್ದವತ್** ಶಬ್ದ-ಸ್ಪರ್ಶ-ರೂಪಗಳುಳ್ಳ **ತೇಜಃ** ಅಗ್ನಿಯು, **ಉದಪದ್ಯತ** ಹುಟ್ಟಿತು.

ಇಲ್ಲಿಯೂ ವಾಯುವಿನಿಂದ ರೂಪತನ್ಮಾತ್ರಾ, ಆದರಿಂದ ಅಗ್ನಿಸೂಕ್ಷ್ಮವು ಅಗ್ನಿಯಾಗಿ ಪರಿಣಮಿಸುವುದು ಎಂದು ಭಾವ. ॥ ೨೭ ॥

**ತೇಜಸಸ್ತು ವಿಕುರ್ವಾಣಾದಾಸೀದಂಭೋ ರಸಾತ್ಮಕಮ್ ।**
**ರೂಪವತ್ ಸ್ಪರ್ಶವಚ್ಚಾಂಭೋ ಘೋಷವಚ್ಚ ತದನ್ವಯಾತ್ ॥ ೨೮ ॥**

**ವಿಕುರ್ವಾಣಾತ್** ವಿಕಾರಹೊಂದುವ, **ತೇಜಸಃ** ಅಗ್ನಿಯಿಂದ, **ರಸಾತ್ಮಕಂ ಅಂಭಃ** ರಸತನ್ಮಾತ್ರಾತ್ಮಕವಾದ ನೀರು, **ರೂಪವತ್ ಸ್ಪರ್ಶವತ್ ಘೋಷವತ್ ತದನ್ವಯಾತ್** ಕಾರಣ ಪರಂಪರಾಗಳ ಅಭಿನಿವೇಶವಿರುವುದರಿಂದ, ರೂಪ-ಸ್ಪರ್ಶ-ಶಬ್ದಗಳುಳ್ಳದ್ದಾಗಿ, **ಆಸೀತ್** ಹುಟ್ಟಿತು.

ಅಗ್ನಿಯಿಂದ ರಸತನ್ಮಾತ್ರಾ, ರಸತನ್ಮಾತ್ರಾದಿಂದ ಜಲವು ಜನಿಸಿತು ಅದರಲ್ಲಿ ರೂಪ-ರಸ-ಸ್ಪರ್ಶ-ಶಬ್ದ ಎಂಬ ನಾಲ್ಕು ಗುಣಗಳು ಇವೆ. ॥೨೮॥

**ವಿಶೇಷಸ್ತು ವಿಕುರ್ವಾಣಾದಂಭಸೋ ಗಂಧವಾನಭೂತ್ ।**
**ಪರಾನ್ವಯಾದ್ರಸಸ್ಪರ್ಶರೂಪಶಬ್ದಗುಣಾನ್ವಿತಃ ॥ ೨೯ ॥**

**ವಿಕುರ್ವಾಣಾತ್** ಕಾಲಕರ್ಮಗಳಿಂದ ವಿಕಾರಹೊಂದುವ, **ಅಂಭಸಃ** ನೀರಿನಿಂದ, **ವಿಶೇಷಃ** ಪೃಥಿವಿಯು, **ಗಂಧವಾನ್** ಗಂಧಗುಣ ಉಳ್ಳದ್ದು **ಪರಾನ್ವಯಾತ್** ಹಿಂದಿನ ಹಿಂದಿನ ಕಾರಣಗಳ ಅನುಪ್ರವೇಶವಿರುವುದರಿಂದ ರಸ-ಸ್ಪರ್ಶ-ರೂಪ-ಶಬ್ದಗಳೆಂಬ, **ಗುಣಾನ್ವಿತಃ** ಗುಣಗಳಿಂದ ಕೂಡಿ, **ಅಭೂತ್** ಉತ್ಪನ್ನವಾಯಿತು. ಅಂದರೆ ಜಲತತ್ತ್ವದಿಂದ ಗಂಧತನ್ಮಾತ್ರಾ ಜನಿಸಿ ಅದರಿಂದ ಪೃಥವಿಯು ಜನಿಸಿತು. ಅದರಲ್ಲಿ ಇಂದ್ರಿಯಗ್ರಾಹ್ಯವಾದ ಗಂಧವು ಜನಿಸಿತು ಎಂದು ಭಾವ. ॥ ೨೯ ॥

**ವೈಕಾರಿಕಾನ್ಮನೋ ಜಜ್ಞೇ ದೇವಾ ವೈಕಾರಿಕಾ ದಶ ।**
**ದಿಗ್ವಾತಾರ್ಕಪ್ರಚೇತೋಽಶ್ವಿವಹ್ನೀಂದ್ರೋಪೇಂದ್ರಮಿತ್ರಕಾಃ ॥ ೩೦ ॥**

**ವೈಕಾರಿಕಾತ್** ವೈಕಾರಿಕಅಹಂಕಾರದಿಂದ, **ಮನಃ** ಮನಸ್ಸು, **ಜಜ್ಞೇ** ಹುಟ್ಟಿತು. **ದಶ** ಹತ್ತು, **ವೈಕಾರಿಕಾಃ ದೇವಾಃ** ಇಂದ್ರಿಯಾಭಿಮಾನಿದೇವತೆಗಳು, **ಜಜ್ಞಿರೇ** ಜನಿಸಿದರು.

ಅವರ ಹೆಸರುಗಳನ್ನು ಹೇಳುವರು, **ದಿಕ್** ದಿಕ್‌ಶಬ್ದವಾಚ್ಯರಾದ ದಿಗ್ದೇವತೆಗಳು, ಶ್ರೋತ್ರಾಭಿಮಾನಿಗಳು **ವಾತಃ** ವಾತಶಬ್ದವಾಚ್ಯನಾದ, ತ್ವಗಭಿಮಾನಿಯಾದ ಪ್ರಾಣನು, **ಅರ್ಕ** ಚಕ್ಷುರಭಿಮಾನಿಯಾದ ಸೂರ್ಯನು, **ಪ್ರಚೇತಾಃ** ಜಿಹ್ವಾಭಿಮಾನಿಯಾದ ವರುಣನು, **ಇಂದ್ರಃ** ಹಸ್ತಾಭಿಮಾನಿಯಾದ ಇಂದ್ರನು, **ಉಪೇಂದ್ರಃ** ಪಾದಾಭಿಮಾನಿಯಾದ ವಾಮನನು, **ಮಿತ್ರಃ** ಪಾಯುವಿಗೆ ಅಭಿಮಾನಿಯಾದ ಮಿತ್ರನು, **ಕಃ** ಉಪಸ್ಥಾಭಿಮಾನಿ ಯಾದ ದಕ್ಷನು ಹೀಗೆ ಮುಂದೆ ಹತ್ತು ಇಂದ್ರಿಯಾಭಿಮಾನಿದೇವತೆಗಳು ಹೇಳಲ್ಪಟ್ಟಿವೆ.

ಇಲ್ಲಿ ಉಪೇಂದ್ರನು ಶ್ರೀಹರಿಯಾದುದರಿಂದ ಹಿಂದೆ ಇಂದ್ರಿಯಾಭಿಮಾನಿಗಳಲ್ಲಿ ಗಣನೆ ಮಾಡಿದ್ದು ಹೇಗೆ ಎಂದರೆ ಅದರ ಅಭಿಪ್ರಾಯವನ್ನು ಪ್ರಮಾಣದಿಂದ ತಿಳಿಸುವರು-

**ತಾತ್ಪರ್ಯ- ಅನಾದ್ಯನಂತೋऽಪಿ ಹರಿರ್ವೈಕಾರಿಗಣೇಷ್ವಜಃ ।**
**ಅವತೀರ್ಣಃ ಪದಾಂಗುಷ್ಠಮಧ್ಯಾಸ್ತೇ ವಿಶ್ವಭುಗ್ವಿಭುಃ ॥**

**ಪಾದದೇವಸ್ತು ಯಜ್ಞೋऽನ್ಯಸ್ತಂ ಪ್ರವಿಶ್ಯ ಹರಿಃ ಸ್ವಯಮ್ ।**
**ಸರ್ವಂ ವಿಧಾರಯನ್ ದೇಹೇ ವರ್ತತೇऽನಂತಶಕ್ತಿಧೃಕ್ ॥ -ಇತಿ ವಹ್ನಿಪುರಾಣೇ**

ಶ್ರೀಹರಿಗೆ ಉತ್ಪತ್ತಿ-ನಾಶಗಳು ಇಲ್ಲದಿದ್ದರೂ ವೈಕಾರಿಕ-ಅಹಂಕಾರಕಾರ್ಯದೇಹ ಉಳ್ಳ ಇಂದ್ರಿಯಾಭಿಮಾನಿದೇವತೆಗಳ ಗಣದಲ್ಲಿ ಅವತರಿಸಿ ಸರ್ವವನ್ನು ರಕ್ಷಿಸುತ್ತ ಪಾದಾಂಗುಷ್ಠದಲ್ಲಿ ಇರುವನು. ಪಾದಾಭಿಮಾನಿಯಾದ ಯಜ್ಞನು ಶ್ರೀಹರಿಯಿಂದ ಭಿನ್ನನು ಅವನಲ್ಲಿ ಪ್ರವೇಶಮಾಡಿ ಶ್ರೀಹರಿಯು ತಾನೇ ಅನಂತಶಕ್ತಿ ಉಳ್ಳವನಾಗಿ ಸಮಸ್ತದೇಹಗಳನ್ನು ಧರಿಸಿಕೊಂಡಿರುವನು ಎಂದು ವಹ್ನಿಪುರಾಣದಲ್ಲಿದೆ. ॥ ೩೦ ॥

**ತೈಜಸಾತ್ತು ವಿಕುರ್ವಾಣಾದಿಂದ್ರಿಯಾಣಿ ದಶಾಭವನ್ ।**
**ಜ್ಞಾನಶಕ್ತಿಃ ಕ್ರಿಯಾಶಕ್ತಿರ್ಬುದ್ಧಿಃ ಪ್ರಾಣಸ್ತು ತೈಜಸಃ ॥ ೩೧ ॥**

**ವಿಕುರ್ವಾಣಾತ್** ವಿಕಾರಹೊಂದುವ, **ತೈಜಸಾತ್** ತೈಜಸ ಅಹಂಕಾರದಿಂದ, **ದಶ ಇಂದ್ರಿಯಾಣಿ ಅಭವನ್** ಹತ್ತು ಇಂದ್ರಿಯಗಳು ಜನಿಸಿದವು. **ಜ್ಞಾನಶಕ್ತಿಃ ಬುದ್ಧಿಃ ಕ್ರಿಯಾಶಕ್ತಿಃ ಪ್ರಾಣಃ ತೈಜಸಃ** ಜ್ಞಾನೇಂದ್ರಿಯಗಳಿಗೆ ಜ್ಞಾನ ಹುಟ್ಟಿಸುವ ಶಕ್ತಿ ನೀಡುವ ಬುದ್ಧಿಗೆ ಅಭಿಮಾನಿಯಾದ ಉಮಾದೇವಿಯು, ಕರ್ಮೇಂದ್ರಿಯಗಳಿಗೆ ಕ್ರಿಯಾಜನನ ಶಕ್ತಿ ನೀಡುವ ಆಹಂಕಾರಿಕ ಪ್ರಾಣನು, ತೈಜಸ ಅಹಂಕಾರದಿಂದ ಹುಟ್ಟಿರುವರು.

*ಇಂದ್ರಿಯಗಳ ವಿಶೇಷ ಹೆಸರುಗಳನ್ನು ಹೇಳುವರು-*

**ಶ್ರೋತ್ರತ್ವಗ್‌ಘ್ರಾಣದೃಗ್‌ಜಿಹ್ವಾ ವಾಗ್ದೋರ್ಮೇಢ್ರಾಂಘ್ರಿಪಾಯವಃ ।**
**ಯ ಏತೇಽಸಂಗತಾ ಭಾವಾ ಭೂತೇಂದ್ರಿಯಮನೋಗುಣಾಃ ।**
**ಯದಾಯತನನಿರ್ಮಾಣೇ ನ ಶೇಕುರ್ಬ್ರಹ್ಮವಿತ್ತಮ ॥ ೩೨ ॥**

**ಶ್ರೋತ್ರ** ಕಿವಿ, **ತ್ವಕ್** ಸ್ಪರ್ಶವನ್ನು ತಿಳಿಸುವ ಇಂದ್ರಿಯ (ಚರ್ಮ) **ಘ್ರಾಣ** ಮೂಗು, **ದೃಕ್** ಕಣ್ಣು **ಜಿಹ್ವಾ** ನಾಲಿಗೆ, **ವಾಕ್** ಬಾಯಿ, **ದೋಃ** ಕೈಗಳು, **ಮೇಢ್ರ** ಗುಹ್ಯೇಂದ್ರಿಯ, **ಅಂಘ್ರಿ** ಪಾದಗಳು, **ಪಾಯವಃ** ಗುದ ಇವುಗಳು ಹತ್ತು ಇಂದ್ರಿಯಗಳು ಹೀಗೆ ಬಾಹ್ಯಸೃಷ್ಟಿಯನ್ನು ಹೇಳಿ ಅವುಗಳಿಂದ ಬ್ರಹ್ಮಾಂಡಸೃಷ್ಟಿಯ ಪ್ರಕಾರವನ್ನು ತಿಳಿಸುವರು.

**ಯೇ ಏತೇ** ಯಾವ ಈ, **ಭೂತೇಂದ್ರಿಯಮನೋಗುಣಾಃ** ಪಂಚಮಹಾಭೂತಗಳು ಇಂದ್ರಿಯಗಳು ಮನಸ್ಸು ಮತ್ತು ಶಬ್ದಾದಿಗುಣಗಳು ಸತ್ತ್ವಾದಿಗುಣಗಳು (ಉಪಲಕ್ಷಣ) ಮಹತ್ತತ್ವ ಅಹಂಕಾರತತ್ವ ಪ್ರಾಣ ಬುದ್ಧಿಗಳೆಂಬ, **ಭಾವಾಃ** ಪದಾರ್ಥಗಳು, **ಅಸಂಗತಾಃ** ಪರಸ್ಪರ ಅಸಂಬದ್ಧವಾದುದರಿಂದ, **ಯದಾಯತನನಿರ್ಮಾಣೇ ನ ಶೇಕುಃ** ಯಾವಾಗ ಬ್ರಹ್ಮಾಂಡವನ್ನು ನಿರ್ಮಿಸಲು ಸಮರ್ಥವಾಗಲಿಲ್ಲವೋ,

**ತದಾ ಸಂಹತ್ಯ ಚಾನ್ಯೋನ್ಯಂ ಭಗವಚ್ಛಕ್ತಿಚೋದಿತಾಃ ।**
**ಸದಸತ್ವಮುಪಾದಾಯ ನ ಭಯಂ ಸಸೃಜುರ್ಹ್ಯದಃ ॥ ೩೩ ॥**

**ತದಾ** ಆಗ ಭಗವಂತನನ್ನು ಶರಣು ಹೋದರು ಆಗ ಪ್ರಸನ್ನನಾಗಿ ಅವುಗಳಲ್ಲಿ ಪ್ರವೇಶ ಮಾಡಿದನು, ಅಂತಹ, **ಭಗವಚ್ಛಕ್ತಿಚೋದಿತಾಃ** ಪ್ರೇಕರನಾಗಿ ಪ್ರವೇಶಿಸಿದ ಶ್ರೀಹರಿಯ ಶಕ್ತಿಯಿಂದ ಪ್ರೇರಿತರಾಗಿ, **ಅನ್ಯೋನ್ಯಂ ಸಂಹತ್ಯ** ಪರಸ್ಪರ ಸೇರಿಕೊಂಡು, **ಸದಸತ್ತ್ವಮ್** (ಧರ್ಮಿಪ್ರಧಾನ ನಿರ್ದೇಶ) ಮೂರ್ತಾಮೂರ್ತ-ವಕ್ತಾವ್ಯಕ್ತ ಅಂದರೆ ಪೃಥಿವೀ-ಜಲ-ಅಗ್ನಿ-ಆಕಾಶ-ವಾಯುಗಳನ್ನು, **ಉಪಾದಾಯ** ಸ್ವೀಕರಿಸಿ ಉಪಾದಾನ ಮಾಡಿ, **ನಃ** ನಮಗೆ, **ಭಯಂ** ಸಂಸಾರಭಯಜನಕವಾದ, **ಅದಃ** ಬ್ರಹ್ಮಾಂಡವನ್ನು **ಸಸೃಜುಃ** ಸೃಷ್ಟಿಸಿದರು.

ಇಲ್ಲಿ ಸದಸತ್ತ್ವಗಳನ್ನು ಪ್ರತಿಯೋಗಿ ಎಂದಿಟ್ಟುಕೊಂಡು ನೊಭಯಂ ಎಂದು ಉಭಯವೈಲಕ್ಷಣ್ಯ ರೂಪ ಅನಿರ್ವಾಚ್ಯತ್ವವನ್ನು ಬ್ರಹ್ಮಾಂಡಕ್ಕೆ ಹೇಳಿದಂತೆ ತೋರುತ್ತದೆ. ಅದು ಸರಿಯಲ್ಲ ಎಂದು ಅನುವಾದ ಮಾಡಿ ವ್ಯಾಖ್ಯಾನಿಸುವರು-

**ತಾತ್ಪರ್ಯ- ಸದಸತ್ವಂ ವ್ಯಕ್ತಾವ್ಯಕ್ತತ್ವಮ್ । ನ ಭಯಮ್ । ಅದೋ ಬ್ರಹ್ಮಾಂಡಮ್ । ಬ್ರಹ್ಮಾಂಡಂ ಹಿ ವದಂತೀತಿ ಜೀವಾನಾಂ ಭಯಕಾರಣಮ್ । ತತ್ರ ಹಿ ಸಂಸೃತಿಃ ।**

**ಆಕಾಶವಾಯೂ ತ್ವವ್ಯಕ್ತಾವಿತರೇಽಂಡೇ ಪ್ರಕಾಶಿತಾಃ ।**
**ತಥಾತ್ವಾದ್ಬಾಹ್ಯಭೂತಾನಾಮಂಡಸ್ಥಾನಾಂ ಚ ಸಾ ಗತಿಃ ॥ -ಇತಿ ಮಾತ್ಸ್ಯೇ**

ಸದಸತ್ವಂ ಎಂದರೆ ವ್ಯಕ್ತತ್ವ-ಅವ್ಯಕ್ತತ್ವವೆಂದರ್ಥ. ಪೃಥವೀ-ಅಪ್-ತೇಜಸ್ಸು ಎಂಬುವು ವ್ಯಕ್ತವಾದವುಗಳು. ಆಕಾಶ-ವಾಯುಗಳು ಅವ್ಯಕ್ತವಾದವುಗಳು. ನಮಗೆ ಭಯಕಾರಣವಾದ **ಅದಃ** ಬ್ರಹ್ಮಾಂಡವನ್ನು, ಬ್ರಹ್ಮಾಂಡದಲ್ಲಿಯೇ ಸಂಸಾರವು ಭಯಕಾರಣವಾಗಿದೆ ಎಂದು ಪ್ರಸಿದ್ಧವಾಗಿದೆ.

ಆಕಾಶವಾಯುಗಳು ಅವ್ಯಕ್ತಗಳು ಉಳಿದ ಪೃಥಿವ್ಯಾದಿ ಮೂರು ವ್ಯಕ್ತವಾದುವು ಬ್ರಹ್ಮಾಂಡದ ಒಳಗಿನ ಹೊರಗಿನ ಭೂತಗಳಲ್ಲಿ ಕೆಲವು ವ್ಯಕ್ತ, ಕೆಲವು ಅವ್ಯಕ್ತ. ಆದಕಾರಣ ಪಂಚಭೂತಗಳಿಗೆ ಪ್ರಕಾಶ ಅಪ್ರಕಾಶ ಸ್ವರೂಪವು ವ್ಯಕ್ತಾವ್ಯಕ್ತ ಶಬ್ದ ಪ್ರವೃತ್ತಿಗೆ ನಿಮಿತ್ತವೆಂದು ಭಾವ. ಎಂದು ಮತ್ಸ್ಯ ಪುರಾಣದಲ್ಲಿದೆ. ॥ ೩೩ ॥

ಇಲ್ಲಿ 'ಸದಸದುಪಾದಾಯ' ಎಂದರೆ ಪಂಚಭೂತಗಳನ್ನು ವಿಷ್ಣುವೀರ್ಯಾತ್ಮನಾ ಪರಿಣಾಮಗೊಳಿಸಿ ಬ್ರಹ್ಮಾಂಡ ಹುಟ್ಟಿಸದರೆಂದು ಅರ್ಥ ತಿಳಿಯಬೇಕು. ಇದರಿಂದ 'ಸುಷಾವ ಸೈವಾಂಡಮಧೋಕ್ಷಜಸ್ಯ ಶುಷ್ಮಂ ಹಿರಣ್ಯಾತ್ಮಕಮಂಬುಮಧ್ಯೇ' ಮುಂತಾಗಿ ತಾತ್ಪರ್ಯನಿರ್ಣಯದಲ್ಲಿ ಬ್ರಹ್ಮಾಂಡಕ್ಕೆ ವಿಷ್ಣುವೀರ್ಯಾತ್ಮಕತ್ವವನ್ನು ಹೇಳಿದ್ದಾರೆ. ಆದರ ವಿರೋಧವು ಬರುವುದಿಲ್ಲ. ॥ ೩೩ ॥

*ಬ್ರಹ್ಮಾಂಡದ ಒಳಗೆ ಶ್ರೀಹರಿಯ ವಿರಾಡ್ರೂಪದಿಂದ ಅಭಿವ್ಯಕ್ತಿಯನ್ನು ಹೇಳಲು ಅಲ್ಲಿ ಅವನ ದೇಹ ಇರಲು ಬ್ರಹ್ಮಾಂಡದ ಅಭಿವೃದ್ಧಿ ಪ್ರಕಾರವನ್ನು ಹೇಳುವರು-*

**ವರ್ಷಪೂಗಸಹಸ್ರಾಂತೇ ತದಂಡಮುದಕೇಶಯಮ್ ।**
**ಕಾಲಕರ್ಮಸ್ವಭಾವಸ್ಥೋ(ಽ) ಜೀವೋ(ಽ) ಜೀವಮಜೀಜನತ್ ॥ ೩೪ ॥**

**ಕಾಲಕರ್ಮಸ್ವಭಾವಸ್ಥಃ** ಕಾಲ-ಕರ್ಮ-ಸ್ವಭಾವಗಳಿಗೆ ಉದ್ಬೋಧಕನಾಗಿ, ಅವುಗಳಲ್ಲಿರುವ **ಅಜೀವಃ** ಪ್ರಸಿದ್ಧಜೀವವಿಲಕ್ಷಣನಾದ ಶ್ರೀಹರಿಯು, **ಉದಕೇಶಯಮ್** ಆವರಣ ಜಲ ಮಧ್ಯದಲ್ಲಿರುವ, **ತದಂಡಮ್** ಆ ಬ್ರಹ್ಮಾಂಡವನ್ನು **ವರ್ಷಪೂಗಸಹಸ್ರಾಂತೇ** ವರ್ಷಗಳ ಸಮೂಹ ಸಾವಿರವಾದ ಮೇಲೆ, **ಯಥಾ** ಹೇಗೆ, **ಅಜೀವಮ್** ತನ್ನನ್ನು,

**ಪ್ರಸೂತೇ** ತನ್ನ ದೇಹದಷ್ಟು ಅವಕಾಶವುಳ್ಳದ್ದಾಗುವಂತೆ, **ಅಜೀಜನತ್** ಮಾಡಿದನು. ಶ್ರೀಹರಿಯು ಬ್ರಹ್ಮಾಂಡದೊಳಗಿರುವ ನೀರು ಮುಂತಾದ ಕೊಳೆಯನ್ನೂ ನಾಶಮಾಡಿ ಮುಂದೆ ಹೇಳುವ ಸ್ವರೂಪ ದೇಹದ ಸ್ಥಿತಿಗಾಗಿ ಅಂಡವನ್ನು ದೊಡ್ಡದಾಗಿಸಿದನು ಎಂದು ಭಾವ.

ಇಲ್ಲಿ ಯಾವನೋ ಒಬ್ಬ ಜೀವ ಮತ್ತೊಬ್ಬ ಜೀವನನ್ನು ಹುಟ್ಟಿಸಿದನು ಎಂದು ಅರ್ಥ ಕಾಣುವುದು. ಕಾರಣ ಎರಡೂ ಸ್ಥಳದಲ್ಲಿ ಅಕಾರ ಪ್ರಶ್ಲೇಷ ಮಾಡಿ ಪದಚ್ಛೇದ ತೋರಿಸಿ ವ್ಯಾಖ್ಯಾನಿಸುವರು-

ತಾತ್ಪರ್ಯ- ಕಾಲಕರ್ಮಸ್ವಭಾವಸ್ಥಃ ಅಜೀವಃ ಪರಮೇಶ್ವರಃ ।
ಅಜೀವಂ ಸ್ವಾತ್ಮಾನಂ ಅಜೀಜನತ್ ತದಂಡಂ ಯಥಾ ಸ್ವಾತ್ಮಾನಂ ಪ್ರಸೂತೇ ತಥಾ ಚಕಾರ ।

ಯಃ ಪ್ರಾಣಧಾರಣಂ ಪ್ರಾಣಪ್ರಸಾದಾತ್ಕುರುತೇಽನಿಶಮ್ ।
ಸ ಜೀವ ಇತಿ ಸಂದಿಷ್ಟಸ್ತದನ್ಯೋಽಜೀವ ಉಚ್ಯತೇ ।
ಯತ್ಪ್ರಸಾದಾತ್ಸ ತು ಪ್ರಾಣಃ ಕುರುತೇ ಸ್ವಸ್ಯ ಧಾರಣಮ್ ॥ -ಇತಿ ವಾಯುಪ್ರೋಕ್ತೇ

ಕಾಲಕರ್ಮಸ್ವಭಾವಸ್ಥೋ ವಾಸುದೇವಃ ಪರಃ ಪುಮಾನ್ ।
ಅಕರೋದಂಡಮುದ್ಬುದ್ಧಮಾತ್ಮಪ್ರಸವಕಾರಣಮ್ ॥ -ಇತಿ ಬ್ರಹ್ಮಾಂಡೇ

ಜೀವ ಇತಿ ವಾ ॥

ಪ್ರಾಣಂ ಧಾರಯತೇ ಯಸ್ಮಾತ್ಸ ಜೀವಃ ಪರಮೇಶ್ವರಃ ।
ಅಜೀವೋಽಪಿ ಮಹಾತೇಜಾಸ್ತ್ವಥವಾ ಜೀವಯನ್ ಜಗತ್ ॥ -ಇತಿ ಸ್ಕಾಂದೇ

ಕಾಲ-ಕರ್ಮ-ಸ್ವಭಾವಗಳಲ್ಲಿರುವ ಜೀವಭಿನ್ನನಾದ ಶ್ರೀಹರಿಯು ಜೀವವಿಲಕ್ಷಣನಾದ ತನ್ನನ್ನು ವ್ಯಕ್ತ ಮಾಡಿಕೊಂಡನು. ಆ ಬ್ರಹ್ಮಾಂಡವನ್ನು ತಾನು ವ್ಯಕ್ತನಾಗಲು ಎಷ್ಟು ಅವಕಾಶ ಆವಶ್ಯಕವೋ ಅಷ್ಟು ಅವಕಾಶ ಉಳ್ಳದ್ದನ್ನಾಗಿ ಮಾಡಿಕೊಂಡನು. ಯಾವಾತನು ಮುಖ್ಯಪ್ರಾಣನ ಅನುಗ್ರಹದಿಂದ ತನ್ನ ಪ್ರಾಣಧಾರಣವನ್ನು ನಿರಂತರ ಮಾಡಿಕೊಳ್ಳವನೋ ಅವನು ಜೀವನೆನಿಸುತ್ತಾನೆ. ಅವನಿಂದ ಭಿನ್ನನಾದವನು ಅಜೀವ ಎನಿಸುತ್ತಾನೆ. (ಮುಖ್ಯಪ್ರಾಣ ಪ್ರಸಾದವಿಲ್ಲದೇ ಪ್ರಾಣಧಾರಣ ಮಾಡುವವನು ಅಜೀವನೆಂದು ಭಾವ) ಎಲ್ಲರಿಗೂ ಪ್ರಾಣಧಾರಕನಾದ ಮುಖ್ಯಪ್ರಾಣನು ಯಾವ ಶ್ರೀಹರಿಯ ಅನುಗ್ರಹದಿಂದ ತನ್ನ ದೇಹಧಾರಣ ಮಾಡಿಕೊಳ್ಳುತ್ತಾನೋ ಆತನು ಶ್ರೀಪರಮಾತ್ಮನು. ಎಂದು ವಾಯುಪ್ರೋಕ್ತದಲ್ಲಿದೆ.

ಕಾಲ-ಕರ್ಮ-ಸ್ವಭಾವಗಳಲ್ಲಿರುವ ಶ್ರೀವಾಸುದೇವನು ಬ್ರಹ್ಮಾಂಡವನ್ನು ತನ್ನ ದೇಹಕ್ಕೆ ಬೇಕಾದಷ್ಟು ಅಭಿವೃದ್ಧಿಮಾಡಿಕೊಂಡನು ಎಂದು ಬ್ರಹ್ಮಾಂಡಪುರಾಣದಲ್ಲಿದೆ. ಅಥವಾ ಜೀವ ಎಂದು ಪದಚ್ಛೇದ ಮಾಡಿದರೂ ತಪ್ಪಿಲ್ಲ. ಸರ್ವರ ಪ್ರಾಣಗಳನ್ನೂ ಶ್ರೀಹರಿಯೇ ಧರಿಸುವುದರಿಂದ ಶ್ರೀಹರಿಯು ಜೀವನೆನಿಸುತ್ತಾನೆ. ಶ್ರೀಹರಿಯು ಜೀವರಿಗಿಂತ ಭಿನ್ನನಾದರೂ ಮಹಾತೇಜಸ್ಸುಳ್ಳವನು ಆ ಹರಿಯು ಜಗತ್ತನ್ನು ಬದುಕಿಸುವುದರಿಂದ ಜೀವನೆನಿಸುತ್ತಾನೆ. ಎಂದು ಸ್ಕಾಂದಪುರಾಣದಲ್ಲಿದೆ.

ಇಲ್ಲಿ ಜೀವರಿಗೆ ಪ್ರಾಣಧಾರಕನಾದ್ದರಿಂದ ಜೀವನು ಮತ್ತು ಜಗತ್‌ಶರೀರಾದಿಗಳನ್ನು ಜೀವಯುಕ್ತವನ್ನಾಗಿ ಮಾಡಿದ್ದರಿಂದ ಜೀವನು. ಜೀವನಿಗಿಂತ ಅತ್ಯಂತ ತೇಜಸ್ವಿದ್ದದ್ದರಿಂದ ಅಜೀವನು ಅಹುದು. ಹೀಗೆ ಜೀವನೆಂದು ಕರೆಯಲು ಎರಡು ಕಾರಣ, ಅಜೀವ ಎನ್ನಲು ಒಂದು ಕಾರಣ ಮತ್ತು ಇತರಾಧೀನ ಪ್ರಾಣಧಾರಣವಿಲ್ಲದಿರುವುದೂ ಒಂದು ಕಾರಣವೆಂದು ತಿಳಿಯಬೇಕು. ।।೩೪।।

*ಈ ರೀತಿ ಬ್ರಹ್ಮಾಂಡದ ವೃದ್ಧಿಯನ್ನು ಹೇಳಿ ಅಲ್ಲಿ ಪುರುಷರೂಪದಿಂದ ಭಗವಂತನ ಪ್ರಾದುರ್ಭಾವ ಹೇಳುವರು-*

**ಸ ಏವ ಪುರುಷಸ್ತಸ್ಮಾದಂಡಂ ನಿರ್ಭಿದ್ಯ ನಿರ್ಗತಃ ।**
**ಸಹಸ್ರೋರ್ವಂಘ್ರಿಬಾಹ್ವಕ್ಷಿಃ ಸಹಸ್ರಾನನಶೀರ್ಷವಾನ್ ।। ೩೫ ।।**

**ಸ ಏಷಃ** ಮಹತ್ತತ್ವಾದಿ ಬ್ರಹ್ಮಾಂಡಾಂತ ಪದಾರ್ಥಜನಕನಾದ ಶ್ರೀಹರಿಯು, **ಅಂಡಂ ನಿರ್ಭಿದ್ಯ** ಹಿಂದೆ ಹೇಳಿದಂತೆ ಬ್ರಹ್ಮಾಂಡವನ್ನು ಅಭಿವೃದ್ಧಿಗೊಳಿಸಿ, **ತಸ್ಮಾತ್** ತಂ ಅಭಿವ್ಯಾಪ್ಯ, ಅದನ್ನು ವ್ಯಾಪಿಸಿ, **ಪುರುಷಃ** ಪುರುಷನಾಮಕನಾಗಿ, **ಸಹಸ್ರೋರ್ವಂಘ್ರಿ-ಬಾಹ್ವಕ್ಷಿಃ** ಅನಂತ ತೊಡೆ-ಪಾದ-ಕೈ-ಕಣ್ಣುಳ್ಳ **ಸಹಸ್ರಾನನಶೀರ್ಷವಾನ್** ಅನಂತ ಮುಖ ತಲೆಗಳುಳ್ಳವನಾಗಿ, **ನಿರ್ಗತಃ** ಅತ್ಯಂತಪ್ರಕಾಶಿತನಾದನು ಪ್ರಾದುರ್ಭೂತನಾದನು.

ಇಲ್ಲಿ ಶ್ರೀಹರಿಯೊಬ್ಬನೇ ಅವತರಿಸಿದನೆಂದು ಕಾಣುವುದು ಕಾರಣ ತಾತ್ಪರ್ಯ ಹೇಳುವರು-

ತಾತ್ಪರ್ಯ- ಅಂಡೇ ಜಾತೌ ಪುಮಾಂಸೌ ದ್ವೌ ಹರಿರ್ಬ್ರಹ್ಮಾ ತಥೈವ ಚ ।
ಅನಾದಿಸ್ತು ಹರಿಸ್ತತ್ರ ಬ್ರಹ್ಮಾ ಸಾದಿರುದಾಹೃತಃ ।। -ಇತಿ ಚ

ಬ್ರಹಾಂಡದಲ್ಲಿ ಹರಿ ಮತ್ತು ಬ್ರಹ್ಮ ಎಂಬ ಇಬ್ಬರು ಪುರುಷರು ಅವತರಿಸಿದ್ದಾರೆ. ಅವರಲ್ಲಿ ಶ್ರೀಹರಿಯು ಅನಾದಿಯಾಗಿದ್ದಾನೆ ಎಂದು ಬ್ರಹ್ಮನು ಸಾದಿಯಾಗಿದ್ದಾನೆ ಎಂದು ಉಕ್ತನಾಗಿದ್ದಾನೆ. ॥ ೩೫ ॥

*'ನಾಭ್ಯಾ ಆಸೀದಂತರಿಕ್ಷಮ್' ಎಂಬ ಋಗರ್ಥವನ್ನು ಹೇಳುವರು-*

**ಯಸ್ಯೇಹಾವಯವೈರ್ಲೋಕಾನ್ ಕಲ್ಪಯಂತಿ ಮನೀಷಿಣಃ ।**
**ಊರ್ವಾದಿಭಿರಧಃ ಸಪ್ತ ಸಪ್ತೋರ್ಧ್ವಂ ಜಘನಾದಿಭಿಃ ॥ ೩೬ ॥**

**ಇಹ** ಬ್ರಹ್ಮಾಂಡದಲ್ಲಿ, **ಯಸ್ಯ** ಯಾವ ಶ್ರೀಹರಿಯ, **ಅವಯವೈಃ** ಅವಯವಗಳಿಂದ, **ಮನೀಷಿಣಃ** ಜ್ಞಾನಿಗಳು, **ಲೋಕಾನ್** ಲೋಕಗಳನ್ನು, **ಕಲ್ಪಯಂತಿ** ಮುಖ್ಯಸ್ರಷ್ಟಾ ಎಂದು ತಿಳಿಯುವರೋ, **ಸಃ ನಿರ್ಗತಃ** ಅವನು ಪ್ರಕಾಶಿತನಾದನೆಂದು ಅನ್ವಯವು.

**ಊರ್ವಾದಿಭಿಃ** ತೊಡೆಯಿಂದ ಪಾದತಲದ ವರೆಗಿನ ಅವಯಗಳಿಂದ ಅತಲ-ವಿತಲ- ಸುತಲ-ತಲಾತಲ-ರಸಾತಲ-ಮಹಾತಲ-ಪಾತಾಲಗಳನ್ನು, **ಅಧಃ ಸಪ್ತ** ಕೆಳಗಿನ ಏಳು ಲೋಕಗಳನ್ನು, **ಜಘನಾದಿಭಿಃ** ಟೊಂಕದಿಂದ ತಲೆಯ ವರೆಗಿನ ಅವಯವಗಳಿಂದ, **ಸಪ್ತ ಊರ್ಧ್ವಂ** ಮೇಲಿನ ಭೂರಾದಿ ಏಳು ಲೋಕಗಳನ್ನು ತಿಳಿಯುವುದು. ಬ್ರಹ್ಮನನ್ನು ತೆಗೆದುಕೊಂಡರೆ **ಯಸ್ಯ** ವಿರಿಂಚನ, **ಅವಯವೈಃ ಲೋಕಾನ್ ಕಲ್ಪಯಂತಿ** ಅವಯವಗಳೇ ಲೋಕಾಕಾರವಾಗಿ ಪರಿಣಮಿಸುವವು ಎಂದು ತಿಳಿಯುವುದು. (ಭೂಃ ಭುವಃ ಸ್ವಃ ಮಹಃ ಜನಃ ತಪಃ ಸತ್ಯಂ ಇವು ಮೇಲಿನ ಏಳು ಲೋಕಗಳು)

ಇಲ್ಲಿ ಯತ್ ಎಂಬ ಶಬ್ದದಿಂದ ಹಿಂದೆ ಪ್ರಕೃತರಾದ ಇಬ್ಬರು ಪುರುಷರನ್ನು (ಹರಿ-ವಿರಿಂಚರನ್ನು) ಸ್ವೀಕರಿಸಿದರೆ ಇಬ್ಬರಿಗೂ ಲೋಕಜನಕ ಅವಯತ್ವವು ಸಮಾನ (ಏಕವಿಧ) ಎಂದು ತೋರುವುದು. ಮತ್ತು ಕಲ್ಪಯಂತಿ ಎಂಬುದರಿಂದ ಹೇಳಿದ ಕಲ್ಪನೆಯು ಭ್ರಮ ಎಂದೂ ತೋರುವುದು ಕಾರಣ ಎರಡನ್ನೂ ನಿರಾಕರಿಸಲು ಪ್ರಮಾಣದಿಂದ ಶ್ಲೋಕತಾತ್ಪರ್ಯ ಹೇಳುವರು-

**ತಾತ್ಪರ್ಯ- ಹರೇರವಯವೈರ್ಲೋಕಾಃ ಸೃಷ್ಟಾ ಇತಿ ವಿಕಲ್ಪನಮ್ ।**
**ಸಾಕ್ಷಾತ್ ಸತ್ಯಮತೋಽನ್ಯಸ್ಮಾದ್ವ್ಯಾವಹಾರಿಕಮುಚ್ಯತೇ ॥ -ಇತಿ ಮಾತ್ಸ್ಯೇ**

ಶ್ರೀಹರಿಯ ಅವಯವಗಳಿಂದ ಎಲ್ಲ ಲೋಕಗಳು ಮುಖ್ಯವಾಗಿ ಸೃಷ್ಟಿಸಲ್ಪಟ್ಟಿವೆ ಎಂಬ ಜ್ಞಾನವು ಯಥಾರ್ಥವು ಸುಳ್ಳಲ್ಲ. ಚತುರ್ಮುಖನ ಅವಯವಸಮೂಹದಿಂದ

ಲೋಕಗಳು ಸೃಷ್ಟಿಸಲ್ಪಟ್ಟಿವೆ. ಎಂಬುದು ವ್ಯವಹಾರ ಮಾತ್ರ. ಮುಖ್ಯವಲ್ಲ, ಎಂದು ಮತ್ಸ್ಯಪುರಾಣದಲ್ಲಿದೆ.

ಅಂದರೆ ಬ್ರಹ್ಮದೇವರ ಅವಯವಗಳೇ ಲೋಕವಾಗಿ ಪರಿಣತವಾಗುತ್ತವೆಯಾದ್ದರಿಂದ ಅವುಗಳೇ ಲೋಕಗಳಾಗಿವೆ. ಆದ್ದರಿಂದ ಅವುಗಳಿಂದ ಎಂಬುದು ವ್ಯವಹಾರವಷ್ಟೇ. ಶ್ರೀಹರಿಯ ಅವಯಗಳು ನಿಮಿತ್ತಕಾರಣವಾದ್ದರಿಂದ ಮುಖ್ಯಸ್ರಷ್ಟೃತ್ವ ಶ್ರೀಹರಿಗೆ ಯುಕ್ತವಾಗುತ್ತದೆ. ಅವಯಗಳಿಂದ ಎಂಬ ವ್ಯವಹಾರವು ನಿಜವಾದುದೇ ಎಂದು ಭಾವ. ।। ೩೬ ।।

*ಈಗ 'ಬ್ರಾಹ್ಮಣೋಽಸ್ಯ ಮುಖಮಾಸೀತ್' ಎಂಬ ಋಕ್‌ನಲ್ಲಿ ಹೇಳಿದ ಭಗವಂತನ ಅಂಗದಿಂದ ಬ್ರಾಹ್ಮಣಾದಿ ಜಾತಿಗಳ ಜನ್ಮವನ್ನು ಹೇಳುವರು-*

**ಪುರುಷಸ್ಯ ಮುಖಂ ಬ್ರಹ್ಮ ಕ್ಷತ್ರಮೇತಸ್ಯ ಬಾಹವಃ ।**
**ಊರ್ವೋರ್ವೈಶ್ಯೋ ಭಗವತಃ ಪದ್ಭ್ಯಾಂ ಶೂದ್ರೋ ವ್ಯಜಾಯತ ।। ೩೭ ।।**

**ಪುರುಷಸ್ಯ** ಶ್ರೀಹರಿಯ, **ಮುಖಂ ಬ್ರಹ್ಮ** ಮುಖದಿಂದ ಬ್ರಾಹ್ಮಣಜಾತಿಯು ಜನಿಸಿತು, **ಏತಸ್ಯ ಬಾಹವಃ ಕ್ಷತ್ರಮ್** ಇವನ ಬಾಹುಗಳಿಂದ ಕ್ಷತ್ರಿಯಜಾತಿಯು ಜನಿಸಿತು. **ಊರ್ವೋಃ** ತೊಡೆಯಿಂದ, **ವೈಶ್ಯಃ** ವೈಶ್ಯಜಾತಿಯು, **ಭಗವತಃ ಪದ್ಭ್ಯಾಂ ಶೂದ್ರಃ** ಭಗವಂತನ ಪಾದಗಳಿಂದ ಶೂದ್ರನು, **ವ್ಯಜಾಯತ** ಹುಟ್ಟಿದನು. ।। ೩೭ ।।

ಇಲ್ಲಿ ಜನಕವಾದ ಮುಖಕ್ಕೆ ಜನ್ಯವಾದ ಬ್ರಾಹ್ಮಣರಿಂದ ಅಭೇದಪ್ರತೀತಿಯನ್ನು ವಾರಣ ಮಾಡಲು ಅಭಿಪ್ರಾಯ ಹೇಳುವರು-

ತಾತ್ಪರ್ಯ- ಬ್ರಾಹ್ಮಣೋ ಮುಖಮಿತ್ಯೇವ ಮುಖಾಜ್ಜಾತತ್ವಹೇತುತಃ ।
ಯಥಾವದತ್ ಪ್ರುತೌ ತದ್ವತ್ ಜೀವೋ ಬ್ರಹ್ಮೇತಿ ವಾಗ್ಭವೇತ್ ।। -ಇತಿ ಬ್ರಾಹ್ಮೇ

ಶ್ರೀಹರಿಯ ಮುಖದಿಂದ ಜನಿಸಿದ್ದರಿಂದ ಬ್ರಾಹ್ಮಣನೇ ಮುಖ ಎಂದು ಹೇಳಿದಂತೆ ಶ್ರುತಿಯಲ್ಲಿ ಬ್ರಹ್ಮನಿಂದ ಜನಿಸಿದ್ದರಿಂದ ಜೀವನೇ ಬ್ರಹ್ಮ ಎನ್ನುವ ಮಾತು ಉಪಪನ್ನವೇ ಆಗುವುದು. ।। ೩೭ ।।

*ಹಿಂದೆ ಹೇಳಿದ ಹದಿನಾಲ್ಕು ಲೋಕಸೃಷ್ಟಿಯನ್ನು ವಿವರಿಸುವರು-*

**ಭೂರ್ಲೋಕಃ ಕಲ್ಪಿತಃ ಪದ್ಭ್ಯಾಂ ಭುವರ್ಲೋಕೋಽಸ್ಯ ನಾಭಿತಃ ।**
**ಹೃದಾ ಸ್ವರ್ಲೋಕ ಉರಸಾ ಮಹರ್ಲೋಕೋ ಮಹಾತ್ಮನಃ ।। ೩೮ ।।**

**ಅಸ್ಯ** ಶ್ರೀಹರಿಯ, **ಪದ್ಭ್ಯಾಮ್** ಪಾದಗಳಿಂದ, **ಭೂಲೋಕಃ ಕಲ್ಪಿತಃ** ಭೂಲೋಕವು ಜನಿಸಿತು ಎಂದು ತಿಳಿಯಲ್ಪಟ್ಟಿತು ಎಂದರ್ಥ. **ನಾಭಿತಃ** ಹೊಕ್ಕಳದಿಂದ, **ಭುವಃ ಲೋಕಃ** ಅಂತರಿಕ್ಷಲೋಕವು, **ಹೃದಾ** ಹೃದಯದಿಂದ, **ಸ್ವರ್ಲೋಕಃ** ಸ್ವರ್ಗಲೋಕವು, **ಮಹಾತ್ಮನಃ ಉರಸಾ** (ಹೃದಯದ ಮೇಲೆ ಕಂಠದ ಕೆಳಗಿನ ಭಾಗ) ಎದೆಯಿಂದ, **ಮಹರ್ಲೋಕಃ** ಮಹೋಲೋಕವು, **ಕಲ್ಪಿತಃ** ಜನಿಸಿತೆಂದು ತಿಳಿದರು. ।। ೩೮ ।।

**ಗ್ರೀವಾಯಾಂ ಜನಲೋಕಶ್ಚ ತಪೋಲೋಕೋಽಸ್ಯ ನೇತ್ರಯೋಃ ।**
**ಮೂರ್ಧಭಿಃ ಸತ್ಯಲೋಕಸ್ತು ಬ್ರಹ್ಮಲೋಕಃ ಸನಾತನಃ ।। ೩೯ ।।**

**ಗ್ರೀವಾಯಾಂ** ಕುತ್ತಿಗೆಯಲ್ಲಿ **ಜನಲೋಕಃ** ಜನಲೋಕವು ಜನಿಸಿ ಆಶ್ರಯಿಸಿದೆ. **ಅಸ್ಯ ನೇತ್ರಯೋಃ** ಇವನ ಕಣ್ಣುಗಳಿಂದ, **ತಪೋಲೋಕಃ** ತಪೋಲೋಕವು, **ಸನಾತನಃ ಬ್ರಹ್ಮಲೋಕಃ ಸತ್ಯಲೋಕಸ್ತು ಮೂರ್ಧಭಿಃ** ಸನಾತನವಾದ ಚತುರ್ಮುಖಬ್ರಹ್ಮನ ಲೋಕವಾದ ಸತ್ಯಲೋಕವು ಶ್ರೀಹರಿಯ ತಲೆಯಿಂದ ಜನಿಸಿತು. ।। ೩೯ ।।

**ತತ್ಕಟ್ಯಾಮತಲಂ ಕ್ಲೃಪ್ತಮೂರುಭ್ಯಾಂ ವಿತಲಂ ವಿಭೋಃ ।**
**ಜಾನುಭ್ಯಾಂ ಸುತಲಂ ಕ್ಲೃಪ್ತಂ ಜಂಘಾಭ್ಯಾಂ ತು ತಲಾತಲಮ್ ।। ೪೦ ।।**

**ತತ್ಕಟ್ಯಾಮ್** ಅವನ ಟೊಂಕದಿಂದ, **ಅತಲಮ್** ಅತಲಲೋಕವು, **ಕ್ಲೃಪ್ತಮ್** ಜನಿಸಿತು, **ವಿಭೋಃ** ಶ್ರೀಹರಿಯ, **ಊರುಭ್ಯಾಮ್** ತೊಡೆಯಿಂದ, **ವಿತಲಮ್** ವಿತಲವು, **ಜಾನುಭ್ಯಾಮ್** ಮೊಣಕಾಲುಗಳಿಂದ, **ಸುತಲಮ್** ಸುತಲವು, **ಜಂಘಾಭ್ಯಾಮ್** ಮೀನುಗಂಡಗಳಿಂದ **ತಲಾತಲಂ** ತಲಾತಲವು, **ಕ್ಲೃಪ್ತಮ್** ಜನಿಸಿತು. ।। ೪೦ ।।

**ಮಹಾತಲಂ ತು ಗುಲ್ಫಾಭ್ಯಾಂ ಪ್ರಪದಾಭ್ಯಾಂ ರಸಾತಲಮ್ ।**
**ಪಾತಾಲಂ ಪಾದತಲತಃ ಇತಿ ಲೋಕಮಯಃ ಪುಮಾನ್ ।। ೪೧ ।।**

**ಗುಲ್ಫಾಭ್ಯಾಮ್** ಪಾದದ ಗಂಟುಗಳಿಂದ, **ಮಹಾತಲಮ್** ಮಹಾತಲವು, **ಪ್ರಪದಾಭ್ಯಾಂ** ಪಾದಗಳ ಮೇಲ್ಭಾಗದಿಂದ, **ರಸಾತಲಮ್** ರಸಾತಲವು, **ಪಾದತಲತಃ ಪಾತಾಲಮ್** ಪಾದದ ಕೆಳಭಾಗದಿಂದ ಪಾತಾಲವೂ ಜನಿಸಿವೆ ಎಂದು ತಿಳಿದರು, **ಇತಿ ಲೋಕಮಯಃ ಪುಮಾನ್** ಹೀಗೆ ಭಗವಂತನು ಲೋಕಗಳನ್ನು ನಿರ್ಮಿಸಿದ್ದಾನೆ ಎಂದರ್ಥ.

*ತ್ರಿಲೋಕವಿವಕ್ಷೆಯಿಂದ ಹೇಳುವರು-*

**ಭೂರ್ಲೋಕಃ ಕಲ್ಪಿತಃ ಪದ್ಭ್ಯಾಂ ಭುವರ್ಲೋಕಸ್ತು ನಾಭಿತಃ ।**
**ಸ್ವರ್ಲೋಕಃ ಕಲ್ಪಿತೋ ಮೂರ್ಧ್ನಿ ಇತಿ ವಾ ಲೋಕಕಲ್ಪನಾ ॥ ೪೨ ॥**

**ಪದ್ಭ್ಯಾಮ್** ಪಾದಗಳಿಂದ, **ಭೂಃ ಲೋಕಃ** ಭೂಲೋಕವು, **ನಾಭಿತಃ** ಹೊಕ್ಕಳಿನಿಂದ, **ಭುವಃ ಲೋಕಃ** ಭುವಃ ಎಂಬ ಲೋಕವು, **ಮೂರ್ಧ್ನಿ ಸ್ವಃ** ತಲೆಯಿಂದ ಸ್ವಃ ಎಂಬ, **ಲೋಕಃ** ಲೋಕವು, ಜನಿಸಿದವೆಂದು **ಕಲ್ಪಿತಃ** ತಿಳಿದರು. **ಇತಿ ವಾ** ಹೀಗಾದರೂ, **ಲೋಕಕಲ್ಪನಾ** ಲೋಕಗಳ ನಿರ್ಮಾಣವನ್ನು ತಿಳಿಯಬಹುದು.

ಇಲ್ಲಿ ಭೂಃ ಎಂಬುದು ಭೂಮಿವಾಚಕ ಅವ್ಯಯ. ಭುವಃ ಎಂಬುದೂ ಅವ್ಯಯ.

೩೯ನೆಯ ಶ್ಲೋಕದಲ್ಲಿ 'ಜಘನಾದಿಭಿಃ' ಎಂದಿದ್ದಾರೆ ಇಲ್ಲಿ 'ಪದ್ಭ್ಯಾಂ' ಎಂದಿದ್ದಾರೆ. ಜಘನ ಪಾದಗಳಿಗೆ ಸಾಮೀಪ್ಯವಿರುವುದರಿಂದ ವಿರೋಧವಿಲ್ಲ. ಕಟಿಯು ಊರುವಿಗೆ ಸಮೀಪವಿರುವುದರಿಂದ ಊರ್ವಾದಿಭಿಃ ಎಂಬುದರ ವಿರೋಧವೂ ಇಲ್ಲ.

ಹದಿನಾಲ್ಕು ಲೋಕವಿವಕ್ಷೆಯಿಂದ 'ಊರ್ವಾದಿಭಿಃ' ಮುಂತಾಗಿ ಹೇಳಿ, ಏಳುಲೋಕ ಎಂಬ ವಿವಕ್ಷೆಯಿಂದ ಭೂರ್ಲೋಕ ಮುಂತಾಗಿ ಹೇಳಿರುವರು. ಈ ಪಕ್ಷದಲ್ಲಿ ಅತಲಾದಿಗಳು ಭೂಲೋಕದಲ್ಲಿ ಅಂತರ್ಭಾವವಾಗುತ್ತವೆ. ಮತ್ತೊಂದು ರೀತಿಯಿಂದ ಸಪ್ತಲೋಕವಿವಕ್ಷಾ ಹೇಳುವರು 'ತತ್ಕಟ್ಯಾಂ' ಮುಂತಾಗಿ. ಈ ಪಕ್ಷದಲ್ಲಿ ಭೂಮಿ ಮುಂತಾದವು ಅತಲಲೋಕದಲ್ಲಿ ಸೇರುವವು. ೩೯ ನೆಯ ಶ್ಲೋಕದಲ್ಲಿ ಯಚ್ಛಬ್ದದಿಂದ ಪಾದತಲ ಆರಂಭಿಸಿ ಊರು ಪರ್ಯಂತ ತೆಗೆದುಕೊಳ್ಳಬೇಕು. ಊರುಲಕ್ಷಣಕವಾದ ಕಟಿಶಬ್ದದಿಂದ ಜಘನಾದಿ ಶೀರ್ಷಪರ್ಯಂತ ಸ್ವೀಕರಿಸಬೇಕು. ತ್ರಿಲೋಕ ವಿವಕ್ಷೆಯಿಂದ ೪೭ ನೆಯ ಶ್ಲೋಕ. ಈ ಪಕ್ಷದಲ್ಲಿಯೂ ಅತಲಾದಿಗಳು ಭೂಲೋಕದಲ್ಲಿ ಅಂತರ್ಭೂತವಾಗುತ್ತವೆ. ಮಹರಾದಿಗಳಿಗೆ ಸ್ವರ್ಲೋಕದಲ್ಲಿ ಅಂತರ್ಭಾವ ಎಂದು ತಿಳಿಯಬೇಕು. ॥

॥ ಇಲ್ಲಿಗೆ ಐದನೇ ಅಧ್ಯಾಯ ಸಮಾಪ್ತವಾಯಿತು ॥

# ಅಥ ಷಷ್ಠೋಽಧ್ಯಾಯಃ

**ಸಾರಾಂಶ**

ಇಂದ್ರಿಯಗಳು, ಇಂದ್ರಿಯಗೋಲಕಗಳು, ಇಂದ್ರಿಯವಿಷಯಗಳು ಇಂದ್ರಿಯಾಭಿಮಾನಿದೇವತೆಗಳು ಇವೆಲ್ಲವೂ ಪರಮಾತ್ಮನ ಸ್ವರೂಪಭೂತವಾದ ಅವಯವಗಳಿಂದ ಉತ್ಪನ್ನವಾಗಿವೆ. ಅವನಿಗೆ ಅಧೀನವಾಗಿವೆ. ಎಲ್ಲದರ ಬಾಹ್ಯಾಂತರದಲ್ಲಿ ಅವನು ವ್ಯಾಪ್ತನಾಗಿದ್ದಾನೆ. ಮುಕ್ತರೆಲ್ಲರಿಗೂ ಆ ಪರಮಾತ್ಮನೇ ನಿಯಾಮಕನಾಗಿದ್ದಾನೆ. ಬ್ರಹ್ಮಾಂಡವ್ಯಾಪಿಯಾದ ವಿರಾಟ್ ನಾಮಕನಾದ ಪರಮಾತ್ಮನಿಂದಲೇ ನಾನು ಜನಿಸಿದ್ದೇನೆ. ನನ್ನ ದೇಹ ಪ್ರಾಕೃತ. ಪರಮಾತ್ಮನ ದೇಹ ಅಪ್ರಾಕೃತ. ಭಗವಂತನ ನಾಭಿಕಮಲದಿಂದ ಚತುರ್ಮುಖನಾಗಿ ನಾನು ಮತ್ತೆ ಜನಿಸಿದ್ದೇನೆ. ಜನಕನಾದ ಪರಮಾತ್ಮನನ್ನು ಆರಾಧಿಸಲು ಯಾವುದೇ ಸಾಮಗ್ರಿಗಳು ನನಗೆ ದೊರೆಯಲಿಲ್ಲ. ಆವಾಗ ಅವನ ಅವಗಳಿಂದಲೇ ಜನಿಸಿ ಅಲ್ಲಿಯೇ ಆಶ್ರಿತವಾಗಿರುವ ಪಶು, ದರ್ಭ ಮುಂತಾದ ಸಾಮಗ್ರಿಗಳಿಂದ ದೇವರನ್ನು ಪೂಜಿಸಿದೆ. ನಂತರ ಪ್ರಜಾಪತ್ಯಾದಿಗಳೆಲ್ಲರೂ ಯಜ್ಞದಿಂದ ದೇವರನ್ನು ಆರಾಧಿಸಿದರು. ಶ್ರೀವಿಷ್ಣುವಿನ ಪ್ರೇರಣೆಯಿಂದಲೇ ನಾನು ಸೃಷ್ಟಿಕಾರ್ಯವನ್ನು ಮಾಡುತ್ತೇನೆ. ದೇವರ ಪ್ರೇರಣೆಯಿಂದಲೇ ದೇವರಿಗೆ ಅಧೀನನಾಗಿ ರುದ್ರನು ಸಂಹಾರಕಾರ್ಯವನ್ನು ಮಾಡುತ್ತಾನೆ. ಸ್ವಯಂ ಪರಮಾತ್ಮ ಸ್ವತಂತ್ರನಾಗಿ ಜಗತ್ತಿನ ಸಂರಕ್ಷಣೆಯನ್ನು ಮಾಡುತ್ತಾನೆ. ಇದು ವಾಸ್ತವ.

ನಾನು ಎಲ್ಲರಿಗಿಂತಲೂ ಅಧಿಕವಾಗಿ ತಿಳಿದವನಾಗಿದ್ದರೂ ಕೂಡಾ ಪರಮಾತ್ಮನನ್ನು ಪರಿಪೂರ್ಣವಾಗಿ ತಿಳಿಯಲಾರೆ. ಪರಮಾತ್ಮನನ್ನು ಭಕ್ತಿಯಿಂದ ನಾನು ಉಪಾಸಿಸುತ್ತೇನೆ. ಆದ್ದರಿಂದ ನನ್ನ ಮನಸ್ಸು ಎಂದಿಗೂ ತಪ್ಪು ಹೆಜ್ಜೆ ಹಾಕುವುದಿಲ್ಲ. ನನ್ನ ಇಂದ್ರಿಯಗಳು ಎಂದಿಗೂ ವಿಷಯವ್ಯಾಪೃತವಾಗುವುದಿಲ್ಲ. ನಾನೆಂದಿಗೂ ಅಸತ್ಯ ನುಡಿಯುವುದಿಲ್ಲ.

ನಮ್ಮೆಲ್ಲರಿಂದಲೂ ಗೇಯನಾದ ಪರಮಾತ್ಮ ಪ್ರತಿಕಲ್ಪದಲ್ಲಿಯೂ ಸ್ವಸಾಮರ್ಥ್ಯದಿಂದ ಮತ್ಸ್ಯ-ಕೂರ್ಮಾದಿರೂಪಗಳನ್ನು ಅಭಿವ್ಯಕ್ತಗೊಳಿಸುತ್ತಾನೆ. ಸಜ್ಜನರನ್ನು ಪೀಡಿಸುವ ದೈತ್ಯರನ್ನು ಸಂಹರಿಸುತ್ತಾನೆ. ಶರಣಾಗತಸಂರಕ್ಷಕನಾಗುತ್ತಾನೆ. ಆ ಪರಮಾತ್ಮ ಮೊದಲು ಪುರುಷನಾಮಕನಾಗಿ ಅವತರಿಸುತ್ತಾನೆ. ಈ ಪರಮಾತ್ಮ ಪರಮಾಣ್ವಾದಿಮಹಾಕಾಲ-ಪರ್ಯಂತವಾದ ಕಾಲವನ್ನು ಸೃಷ್ಟಿಸುತ್ತಾನೆ. ದೇವತೆಗಳು, ಸ್ಥಾವರ-ಜಂಗಮಗಳು, ಚಕ್ರವರ್ತಿಗಳು, ನಾಗಗಳು, ಗಂಧರ್ವರು, ವಿದ್ಯಾಧರರು, ದಿಕ್ಪಾಲಕರು, ರಾಕ್ಷಸರು, ಮಹೋರಗಗಳು, ಋಷಿಗಳು, ಪಿತೃಗಳು ಮೊದಲಾದವರೆಲ್ಲರೂ ಈ ಪರಮಾತ್ಮನಿಂದಲೇ ಜನಿಸಿದ್ದಾರೆ. ಪರಮಾತ್ಮನ ಈ ಅವತಾರಗಳ ಲೀಲಾವೈಭವಗಳನ್ನು ಶ್ರದ್ಧೆಯಿಂದ ಆಲಿಸುವವನ ಬಂಧಕವಾದ ಕರ್ಮಗಳೆಲ್ಲ ನಶಿಸುತ್ತವೆ.

ಈ ಅಧ್ಯಾಯದಲ್ಲಿ ಆಧ್ಯಾತ್ಮಿಕ-ಆಧಿದೈವಿಕ-ಆಧಿಭೌತಿಕಾದಿರೂಪವಾದ ಜಗತ್ತು ಶ್ರೀಹರಿಯ ಮುಖ ಮುಂತಾದ ಅವಯವಗಳಿಂದ ಉತ್ಪನ್ನವಾಗಿದೆ ಎಂಬುದನ್ನು, ಪರಮಾತ್ಮನಿಗೆ ಜಗತ್ತಿನಿಂದ ಭೇದವನ್ನು, ಜಗತ್ತಿನಿಂದ ಉತ್ತಮತ್ವವನ್ನು ,ಜಗತ್ತಿಗೆ ಪ್ರತಿಮಾದಂತೆ ರೂಪತ್ವವನ್ನು ಪ್ರತಿಪಾದಿಸುವರು.

ಮೊದಲಿಗೆ ಅಧ್ಯಾತ್ಮದಲ್ಲಿ ಇಂದ್ರಿಯ-ತದಭಿಮಾನಿದೇವತೆ ಮೊದಲಾದ ಎಲ್ಲ ಪದಾರ್ಥಗಳಿಗೆ ಭಗವಂತನ ಅಂಗದಿಂದ ಉತ್ಪತ್ತಿ ಪ್ರಕಾರವನ್ನು ಹೇಳುವರು 'ಚಕ್ಷೋಃ ಸೂರ್ಯೋ ಅಜಾಯತ' ಎಂಬ ಸೂಕ್ತೋಕ್ತವಾದ ಮಹಿಮೆ ಇದಾಗಿದೆ-

**ವಾಚೋ ವಹ್ನೇರ್ಮುಖಂ ಕ್ಷೇತ್ರಂ ಛಂದಸಾಂ ಸಪ್ತಧಾತವಃ ।**
**ಹವ್ಯಕವ್ಯಾಮೃತಾನ್ನಾನಾಂ ಜಿಹ್ವಾ ಸರ್ವರಸಸ್ಯ ಚ ॥೧॥**

**ವಾಚಃ** ವಾಗಿಂದ್ರಿಯಕ್ಕೆ ವಕ್ತವ್ಯವಾದ ಶಬ್ದಕ್ಕೆ ವಾಗಿಂದ್ರಿಯಾಭಿಮಾನಿಯಾದ, **ವಹ್ನೇಃ** ಅಗ್ನಿಗೆ, **ಪುರುಷಸ್ಯ** ಶ್ರೀಹರಿಯ, **ಮುಖಮ್** ಮುಖವು, **ಕ್ಷೇತ್ರಮ್** ಉತ್ಪತ್ತಿಸ್ಥಾನವು ಆಶ್ರಯವು. **ಛಂದಸಾಮ್** ಗಾಯತ್ರಿ-ಉಷ್ಣಿಕ್-ಅನುಷ್ಟುಪ್-ಬೃಹತೀ-ಪಂಕ್ತಿ-ತ್ರಿಷ್ಟುಪ್-ಜಗತೀ ಎಂಬ ಏಳು ಛಂದಸ್ಸುಗಳಿಗೆ, **ಸಪ್ತಧಾತವಃ** ತ್ವಕ್-ಚರ್ಮ-ಮಾಂಸ-ರುಧಿರ-ಮೇದಸ್ಸು-ಮಜ್ಜಾ-ಅಸ್ಥಿ ಎಂಬ ಏಳು ಧಾತುಗಳು, **ಕ್ಷೇತ್ರಮ್** ಉತ್ಪತ್ತಿಸ್ಥಾನ ಹಾಗೂ ಆಶ್ರಯವೆಂದರ್ಥ. **ಹವ್ಯ** ದೇವತೆಗಳ ಅನ್ನ, **ಕವ್ಯ** ಪಿತೃಗಳ ಅನ್ನ, **ಅಮೃತ** ಅವರಿಬ್ಬರಿಗೂ ಅನ್ನ, **ಅನ್ನ** ಮನುಷ್ಯರ ಅನ್ನ ಇವುಗಳಿಗೆ, **ಸರ್ವರಸಸ್ಯ** ಮಧುರಾದಿ ಷಡ್ರಸಗಳಿಗೆ, **ಚ** ರಸನೇಂದ್ರಿಯಕ್ಕೆ ಅದರ ಅಭಿಮಾನಿಯಾದ ವರುಣನಿಗೆ, **ಪುರುಷಸ್ಯ**

**ಜಿಹ್ವಾ** ಶ್ರೀಹರಿಯ ನಾಲಿಗೆಯು, **ಕ್ಷೇತ್ರಮ್** ಉತ್ಪತ್ತಿಸ್ಥಾನವು ಆಶ್ರಯವೂ ಆಗಿದೆ. ।।೧।।

**ಸರ್ವಾಸೂನಾಂ ಚ ವಾಯೋಶ್ಚ ತನ್ನಾಸೇ ಪರಮಾಯನೇ ।**
**ಅಶ್ವಿನೋರೋಷಧೀನಾಂ ಚ ಘ್ರಾಣೋ ಗಂಧಸ್ಯ ಚೈವ ಹಿ ॥ ೨ ॥**

**ಸರ್ವಾಸೂನಾಮ್** ಎಲ್ಲ ಮರುತ್ತುಗಳಿಗೆ, **ವಾಯೋಃ** ಮುಖ್ಯವಾಯುವಿಗೆ, **ತನ್ನಾಸೇ** ಶ್ರೀಹರಿಯ ಮೂಗಿನ ಹೊರಳೆಗಳು, **ಪರಮಾಯನೇ** ಉತ್ತಮವಾದ ಕ್ಷೇತ್ರಗಳಾಗಿವೆ. **ಅಶ್ವಿನೋಃ** ಘ್ರಾಣೇಂದ್ರಿಯಾಭಿಮಾನಿಗಳಾದ ಅಶ್ವೀನೀದೇವತೆಗಳಿಗೆ, **ಓಷಧೀನಾಂ** ಭತ್ತ ಮುಂತಾದವುಗಳಿಗೆ, **ಗಂಧಸ್ಯ ಚ** ಸುಗಂಧ-ದುರ್ಗಂಧಗಳಿಗೆ, **ಚ** ಘ್ರಾಣೇಂದ್ರಿಯಕ್ಕೂ **ಘ್ರಾಣಃ** ಶ್ರಿಹರಿಯ ಘ್ರಾಣೇಂದ್ರಿಯವು, **ಕ್ಷೇತ್ರಮ್** ಉತ್ಪತ್ತಿಸ್ಥಾನವು ಆಶ್ರಯವು. ।।೨।।

**ರೂಪಾಣಾಂ ತೇಜಸಾಂ ಚಕ್ಷುರ್ದಿವಃ ಸೂರ್ಯಸ್ಯ ಚಾಕ್ಷಿಣೀ ।**
**ಕರ್ಣೌ ದಿಶಾಂ ಚ ತೀರ್ಥಾನಾಂ ಶ್ರೋತ್ರಮಾಕಾಶಶಬ್ದಯೋಃ ॥ ೩ ॥**

**ಚಕ್ಷುಃ** ಶ್ರೀಹರಿಯ ಚಕ್ಷುರಿಂದ್ರಿಯವು ಚಕ್ಷುರಿಂದ್ರಿಯಕ್ಕೆ **ರೂಪಾಣಾಮ್** ಕಣ್ಣಿಗೆ ವಿಷಯವಾದ ರೂಪಗಳಿಗೆ, **ತೇಜಸಾಮ್** ವಿಷಯಪ್ರಕಾಶಕವಾದ ಜ್ಯೋತಿಗಳಿಗೆ, **ಕ್ಷೇತ್ರಮ್** ಉತ್ಪಾದಕವು ಆಶ್ರಯವು, **ದಿವಃ** ದ್ಯುಲೋಕಕ್ಕೆ, **ಸೂರ್ಯಸ್ಯ** ಚಕ್ಷುರಭಿಮಾನಿಯಾದ ಸೂರ್ಯನಿಗೆ, **ಅಕ್ಷಿಣೀ** ಚಕ್ಷುರ್ಗೋಲಕಗಳು, **ಕ್ಷೇತ್ರಮ್** ಉತ್ಪಾದಕವು ಆಶ್ರಯವು, **ಕರ್ಣೌ** ಶ್ರೋತ್ರೇಂದ್ರಿಯ ಗೋಲಕಗಳು, **ದಿಶಾಮ್** ಶ್ರೋತ್ರಾಭಿಮಾನಿಗಳಾದ ದಿಗ್ದೇವತೆಗಳಿಗೆ, **ತೀರ್ಥಾನಾಮ್** ಶಾಸ್ತ್ರಗಳಿಗೆ, **ಕ್ಷೇತ್ರಮ್** ಉತ್ಪಾದಕವು ಆಶ್ರಯವು, **ಶ್ರೋತ್ರಮ್** ಶ್ರೊತ್ರೇಂದ್ರಿಯವು **ಆಕಾಶಶಬ್ದಯೋಃ** ಆಕಾಶ ಶಬ್ದ ಮತ್ತು ಶ್ರೋತ್ರೇಂದ್ರಿಯಗಳಿಗೆ, **ಕ್ಷೇತ್ರಮ್** ಉತ್ಪಾದಕ ಆಶ್ರಯವೆಂದರ್ಥ.

ತಾತ್ಪರ್ಯ - ತೀರ್ಥಾನಾಂ ಶಾಸ್ತ್ರಾಣಾಮ್ ।

ಇಲ್ಲಿ 'ತೀರ್ಥಾನಾಂ' ಎಂಬ ಶಬ್ದದಿಂದ ಗಂಗಾದಿತೀರ್ಥಗಳು ಎಂಬ ಅರ್ಥವನ್ನು ಸ್ವೀಕರಿಸಬಾರದು. 'ನಾಡ್ಯೋ ನದನದೀನಾಂ ಚ' ಎಂಬುದರಿಂದ ಪುನರುಕ್ತಿ ಬರುತ್ತದೆ. ಆದ್ದರಿಂದ ಶಾಸ್ತ್ರಗಳು ಎಂಬ ಆಚಾರ್ಯರು ಹೇಳುವ ಅರ್ಥವನ್ನು ಸ್ವೀಕರಿಸಬೇಕು. ಇದರಿಂದ ಪುನರುಕ್ತಿಯು ಬರುವುದಿಲ್ಲ. ಹೀಗೆ ಅರ್ಥಭೇದವನ್ನು ಹೇಳುವುದರಿಂದ ಕಿವಿ ಮತ್ತು ನಾಡಿ ಒಂದಕ್ಕೇ ಜನಕ ಎಂದು ಹೇಳಿದಂತೆಯೂ ಆಗಲಿಲ್ಲವೆಂದು ತಿಳಿಯಬೇಕು. ।। ೩ ।।

**ತದಾಸ್ತ್ರಂ ವಸ್ತುಸಾರಾಣಾಂ ಸೌಭಾಗ್ಯಸ್ಯ ಚ ಭಾಜನಮ್ ।**
**ತ್ವಗಸ್ಯ ಸ್ಪರ್ಶವಾಯೋಶ್ಚ ಸರ್ವಮೇಧಸ್ಯ ಚೈವ ಹಿ ॥ ೪ ॥**

**ತದಾಸ್ತ್ರಮ್** ಶ್ರೀಹರಿಯ ದೇಹವು, **ವಸ್ತುಸಾರಾಣಾಮ್** ಶ್ರೇಷ್ಠವಾದ ವಸ್ತುಗಳಿಗೆ ಅಥವಾ ವಸ್ತುವಿನಲ್ಲಿರುವ ಬಲಕ್ಕೆ **ಚ** ಮತ್ತು, **ಸೌಭಾಗ್ಯಸ್ಯ** ಸೌಭಾಗ್ಯಕ್ಕೆ **ಭಾಜನಮ್** ಉತ್ಪಾದಕವು ಆಶ್ರಯವು (ಪಾತ್ರೆಯಂತೆ) **ಅಸ್ಯ ತಕ್ ಏವ** ತ್ವಗಿಂದ್ರಿಯವು, **ಸ್ಪರ್ಶವಾಯೋಃ** ಸ್ಪರ್ಶಸಹಿತ ನಾದ ತ್ವಗಿಂದ್ರಿಯಾಭಿಮಾನಿದೇವತೆಗೆ, **ಸರ್ವಮೇಧಸ್ಯ ಚ** ಎಲ್ಲ ಯಜ್ಞಗಳಿಗೂ, **ಕ್ಷೇತ್ರಮ್** ಉತ್ಪಾದಕ ಮತ್ತು ಆಶ್ರಯವು, **ಹಿ** ವೈದಿಕಪ್ರಸಿದ್ಧಿಯೇ ಈ ವಿಷಯದಲ್ಲಿ ಪ್ರಮಾಣವಾಗಿದೆ. ॥ ೪ ॥

**ರೋಮಾಣ್ಯುದ್ಭಿಜಜಾತೀನಾಂ ಯೈರ್ವಾ ಯಜ್ಞಸ್ತು ಸಂಭೃತಃ ।**
**ಕೇಶಶ್ಮಶ್ರುನಖಾನ್ಯಸ್ಯ ಶಿಲಾ ಲೋಹಾಭ್ರವಿದ್ಯುತಾಮ್ ॥ ೫ ॥**

**ಉದ್ಭಿಜಜಾತೀನಾಮ್** ವೃಕ್ಷಗಳ ಮಧ್ಯದಲ್ಲಿ, **ಯೈಃ** ಯಾವುಗಳಿಂದ, **ಯಜ್ಞಃ** ಯಜ್ಞವು, **ಯಜ್ಞಸಂಭೃತಃ** ಯಜಮಾನನಿಂದ ಸಂಪಾದಿತವಾಗುವುದೋ ಅಂತಹ, ಅಂದರೆ ಯಜ್ಞೋಪಯುಕ್ತವಾದ ಪಲಾಶ ಮುಂತಾದವುಗಳಿಗೆ, **ರೋಮಾಣಿ** ರೋಮಮೂಲಗಳು, **ಕ್ಷೇತ್ರಮ್** ಕಾರಣವು, ಯಜ್ಞಕ್ಕೆ ಉಪಯೋಗವಾಗದ ವೃಕ್ಷಗಳಿಗೆ, **ರೋಮಾಣಿ** ಕೂದಲ ತುದಿಗಳು ಕ್ಷೇತ್ರವಾಗಿವೆ, **ಅಸ್ಯ** ಈ ಶ್ರೀಹರಿಯ, **ಕೇಶಶ್ಮಶ್ರುನಖಾನಿ** ಕುದಲು-ಮೀಸೆ- ಉಗುರುಗಳು, **ಶಿಲಾಲೋಹಾಭ್ರವಿದ್ಯುತಾಂ ಕ್ಷೇತ್ರಮ್** ಕೂದಲುಗಳು ಅಭ್ರ-ಮೋಡಗಳಿಗೆ ಮೀಸೆಗಳು ವಿದ್ಯುತ್ತಿಗೆ, ಉಗುರು ಕಲ್ಲು-ಲೋಹಗಳಿಗೆ ಕ್ಷೇತ್ರವಾಗಿವೆ.

'ರೋಮಾಣಿ' ಎಂಬಲ್ಲಿ ವಾ ಶಬ್ದದಿಂದ ಸೂಚಿತವಾದ ವ್ಯವಸ್ಥಿತವಿಕಲ್ಪವನ್ನು ಪ್ರಮಾಣದಿಂದ ತಿಳಿಸುವರು-

ತಾತ್ಪರ್ಯ- ಯಾಜ್ಞಿಕಾ ರೋಮಮೂಲಸ್ಥಾ ರೋಮಾಂತಸ್ಥಾಸ್ತು ತತ್ಪರೇ ।
ಉದ್ಭಿದೋ ವಾಸುದೇವಸ್ಯ ಲಿಂಗಗಾಸ್ತು ಜರಾಯುಜಾಃ ॥ -ಇತಿ ಪಾದ್ಮೇ

ಮೇಲಿನ ಶ್ಲೋಕದಲ್ಲಿ ಕೇಶಶ್ಮಶ್ರುನಖಾನಿ ಎಂಬಲ್ಲಿ ಕ್ರಮವಾಗಿ ಶಿಲಾಲೋಹಾಭ್ರಗಳನ್ನು ಅನ್ವಯಿಸಿದರೆ ವಿದ್ಯುತ್ ಉಳಿದು ಬಿಡುವುದು ಕಾರಣ ಯಥಾಯೋಗ್ಯವಾಗಿ ಸಂಬಂಧ ಎಂಬ ಅಭಿಪ್ರಾಯದಿಂದ ಪ್ರಮಾಣ ಹೇಳುವರು-

**ಹರೇಃ ಶ್ಮಶ್ರ್ವಾಶ್ರಯಾ ವಿದ್ಯುತ್ ಶಿಲಾಲೋಹಾ ನಖಾಶ್ರಯಾಃ ॥ -ಇತ್ಯಾಗ್ನೇಯೇ**

**ತಾತ್ಪರ್ಯ ಭಾವಾರ್ಥ** -ಯಾಗಕ್ಕೆ ಉಪಯುಕ್ತವಾದ ಪಲಾಶಾದಿವೃಕ್ಷಗಳು ರೋಮಮೂಲಗಳಿಂದ ಹುಟ್ಟಿವೆ. ಬೇರೇ ವೃಕ್ಷಗಳು ರೋಮಗಳ ಅಗ್ರಭಾಗದಿಂದ ಹುಟ್ಟಿವೆ. ಗುಹ್ಯೇಂದ್ರಿಯದಿಂದ ಮನುಷ್ಯರು (ಜರಾಯುಜ) ಹುಟ್ಟಿದರು ಎಂದು ಪದ್ಮಪುರಾಣದಲ್ಲಿದೆ. ಶ್ರೀಹರಿಯ ಮೀಸೆಯಿಂದ ಮಿಂಚು, ನಖಗಳಿಂದ ಕಲ್ಲು-ಲೋಹಗಳು ಹುಟ್ಟಿದವು ಎಂದು ಆಗ್ನೇಯಪುರಾಣದಲ್ಲಿದೆ.

ಹಿಂದೆ 'ಈಶಸ್ಯ ಕೇಶಾನ್ವಿದುರಂಬುವಾಹಾನ್' ಎಂದು ಹೇಳಿದ್ದರಿಂದ ಕೂದಲಿನಿಂದ ಅಭ್ರ ಮೋಡಗಳು ಜನಿಸಿಜವು ಎಂದು ಹೇಳಿದೆ. (ಪ್ರಮಾಣದಲ್ಲಿ ಅದು ಇಲ್ಲ) ಇಲ್ಲಿ 'ಲಿಂಗಗಾಸ್ತು ಜರಾಯುಜಾಃ' ಎಂದು ಹೇಳಿದ್ದರಿಂದ ೮ನೆಯ ಶ್ಲೋಕದಲ್ಲಿ 'ಪುಂಸಃ ಶಿಶ್ನಃ ಎಂಬಲ್ಲಿ ಇದನ್ನೂ ಸ್ವಿಕರಿಸಬೇಕು ಎನ್ನುತ್ತಾರೆ ಯಾದವಾರ್ಯರು.

ಪ್ರಭೊಧಿನೀಕಾರರು- ಇಲ್ಲಿ 'ಲಿಂಗಗಾಸ್ತು ಜರಾಯುಜಾಃ' ಎಂದದ್ದರಿಂದ ಭಾಗವತದಲ್ಲಿಯ ವಾಶಬ್ದವು ರೋಮಾಣಿ ವಾ ಅನ್ಯಾನಿ ವಾ ಎಂದು ಅವ್ಯವಸ್ಥಿತವಿಕಲ್ಪಾರ್ಥಕವಲ್ಲ. ಕಿಂತು ಜರಾಯುಜಾಶ್ರಯ ಲಿಂಗಸಮುಚ್ಚಾಯಕ ಎಂದು ಹೇಳಿದಂತಾಯಿತು. 'ವಾಶಬ್ದೋ ನಯನೇ ಚಾಽಕ್ಷೇ ವಾಽವ್ಯಯಂ ಸ್ಯಾತ್ ಸಮುಚ್ಚಯೇ ಉಪಮಾಯಾಂ ವಿಕಲ್ಪೇ ಚ ನಿಶ್ಚಯೇ ಚ ನಿಗದ್ಯತೇ । ಎಂದು ರತ್ನಮಾಲಾ ಎಂಬ ಅಭಿಧಾನವಿದೆ ಎನ್ನುತ್ತಾರೆ.

**ಬಾಹವೋ ಲೋಕಪಾಲಾನಾಂ ಪ್ರಾಯಶಃ ಕ್ಷೇಮಕರ್ಮಣಾಮ್ ।**
**ವಿಕ್ರಮೋ ಭೂರ್ಭುವಸ್ಸ್ವಶ್ಚ ಕ್ಷೇಮಸ್ಯ ಶರಣಸ್ಯ ಚ ॥ ೬॥**

**ಕ್ಷೇಮಕರ್ಮಣಾಮ್** ಲೋಕಕ್ಕೆ ಕ್ಷೇಮವನ್ನು ಉಂಟುಮಾಡುವ, **ಪ್ರಾಯಶಃ ಲೋಕಪಾಲಾನಾಮ್** ಸತ್ಯಾದಿಲೋಕಪಾಲಕರಲ್ಲಿ ಬ್ರಹ್ಮ ಅಗ್ನಿಗಳಿಬ್ಬರು ಬ್ರಾಹ್ಮಣರು, ಕುಬೇರ ವೈಶ್ಯ ನಿಋತಿ ಶೂದ್ರನು, ಇವರನ್ನು ಬಿಟ್ಟು ಇಂದ್ರಾದಿಲೋಕಪಾಲಕರೇನಿರುವರೋ ಕ್ಷತ್ರಿಯರು ಅವರಿಗೆ, **ಬಾಹವಃ** ಕೈಗಳು, **ಕ್ಷೇತ್ರಮ್** ಉತ್ಪಾದಕವು ಆಶ್ರಯವು, **ಭೂಃ ಭುವಃ ಸ್ವಃ ಚ** ಪೃಥಿವೀ-ಅಂತರಿಕ್ಷ-ಸ್ವರ್ಗಗಳಿಗೆ, **ವಿಕ್ರಮಃ** ಪಾದವಿಕ್ಷೇಪವು, **ಆಸ್ಪದಮ್** ಆಶ್ರಯವು, **ಕ್ಷೇಮಸ್ಯ** ಪ್ರಾಪ್ತರಕ್ಷಣಕ್ಕೆ **ಶರಣಸ್ಯ** ಮೋಕ್ಷಕ್ಕೆ ಕೂಡ,

**ಸರ್ವಕಾಮವರಸ್ಯಾಽಪಿ ಹರೇಶ್ಚರಣ ಆಸ್ಪದಮ್ ।**
**ಅಪಾಂ ವೀರ್ಯಸ್ಯ ಸರ್ಗಸ್ಯ ಪರ್ಜನ್ಯಸ್ಯ ಪ್ರಜಾಪತೇಃ ॥ ೭ ॥**

**ಸರ್ವಕಾಮವರಸ್ಯ** ಎಲ್ಲ ಅಭೀಷ್ಟಗಳ ಲಾಭಕ್ಕೆ **ಹರೇಃ ಚರಣಃ ಆಸ್ಪದಮ್** ಶ್ರೀಹರಿಯ ಪಾದಗಳೇ ಆಶ್ರಯಗಳು, **ಅಪಾಮ್** ನೀರಿಗೆ, **ವೀರ್ಯಸ್ಯ** ರೇತಸ್ಸಿಗೆ, **ಸರ್ಗಸ್ಯ** ಸೃಷ್ಟಿಗೆ, **ಪರ್ಜನ್ಯಸ್ಯ** ಜಲಾಭಿಮಾನಿದೇವತೆಗೆ, **ಪ್ರಜಾಪತೇಃ** ಸೃಷ್ಟಿಗೆ ಅಭಿಮಾನಿಯಾದ ದಕ್ಷನಿಗೆ,

**ಪುಂಸಃ ಶಿಶ್ನ ಉಪಸ್ಥಸ್ತು ಪ್ರಜಾತ್ಯಾನಂದನಿರ್ವೃತೇಃ ।**
**ಪಾಯುರ್ಯಮಸ್ಯ ಮಿತ್ರಸ್ಯ ಪರಿಮೋಕ್ಷಸ್ಯ ನಾರದ ॥ ೮ ॥**

**ನಾರದ** ನಾರದನೇ, **ಪುಂಸಃ** ಪರಮಪುರುಷನ, **ಶಿಶ್ನಃ** ಗುಹ್ಯೇಂದ್ರಿಯ ಗೋಲಕವು, **ಉಪಸ್ಥಸ್ತು** ಗುಹ್ಯೇಂದ್ರಿಯವು, **ಪ್ರಜಾತ್ಯಾನಂದನಿರ್ವೃತೇಃ** ಸಂತಾನಕ್ಕಾಗಿ ಮಾಡುವ ಸಂಭೋಗದಿಂದ ಉಂಟಾಗುವ ಆನಂದಕ್ಕೆ ತಾಪಹಾನಿಗೆ ಗುಹ್ಯೇಂದ್ರಿಯಕ್ಕೂ ಆಶ್ರಯವು, **ಪಾಯುಃ** ಮಲವಿಸರ್ಜಿಸುವ ಇಂದ್ರಿಯವು, **ಯಮಸ್ಯ** ಯಮನಿಗೆ, **ಮಿತ್ರಸ್ಯ** ಮಿತ್ರ ಎಂಬ ಸೂರ್ಯನಿಗೆ, **ಪರಿಮೋಕ್ಷಸ್ಯ** ಮಲವಿಸರ್ಜನೆಗೆ ಆಶ್ರಯವು.

೯ನೆಯ **ಶ್ಲೋಕದಲ್ಲಿ ಪ್ರಾಯಶಃ** ಎಂದಿದ್ದಾರೆ. ಆದರಿಂದ ಬಿಡಬೇಕಾದವರಾರೆಂದು ತಿಳಿಯುವುದಿಲ್ಲ. ಕಾರಣ ಅದನ್ನು ತಿಳಿಸುವರು-

**ತಾತ್ಪರ್ಯ- ಬ್ರಾಹ್ಮಣವೈಶ್ಯಾದೀನ್ವರ್ಜಯಿತುಂ ಪ್ರಾಯಶಃ ಇತಿ ॥**

ಸತ್ಯಲೋಕವನ್ನಾರಂಭಿಸಿ ಇರುವ ಲೋಕಪಾಲಕರಲ್ಲಿ ಚತುರ್ಮುಖ-ಅಗ್ನಿಗಳು ಬ್ರಾಹ್ಮಣರು, ಕುಬೇರನು ವೈಶ್ಯ, ನಿಋತಿಯು ಶೂದ್ರನು ಇವರು ಶ್ರೀಹರಿಯ ಬಾಹುಗಳಿಂದ ಹುಟ್ಟಿದವರಲ್ಲ ಎಂದು ತಿಳಿಸಲು ಪ್ರಾಯಶಃ ಎಂದು ಹೇಳಿದ್ದಾರೆ. ಅಂತು ಇಷ್ಟು ಮಂದಿಯನ್ನು ಬಿಟ್ಟು ಇಂದ್ರ ಮೋದಲಾದ ಲೋಕಪಾಲಕರು ಕ್ಷತ್ರಿಯರು ಅವರು ಶ್ರೀಹರಿಯ ಬಾಹುಗಳಿಂದ ಹುಟ್ಟಿದವರು.

ಶರಣಶಬ್ದಕ್ಕೆ ಭಯರಕ್ಷಣೆ ಎಂದರ್ಥ ಮಾಡಿದರೆ ಮಹತ್ವ ಬರುವುದಿಲ್ಲ. ಕಾರಣ ಮೋಕ್ಷವೆಂದರ್ಥ ಮಾಡಬೇಕು ಎಂಬ ಅಭಿಪ್ರಾಯದಿಂದ ಶರಣಶಬ್ದಕ್ಕೆ ಮೋಕ್ಷವಾಚಕತ್ವ ವಿಷಯದಲ್ಲಿ ಪ್ರಮಾಣ ತಿಳಿಸುವರು-

**ಮೋಕ್ಷಃ ಶಾಂತಿಶ್ಚ ಶರಣಂ ನಿರ್ವಾಣಂ ಚಾಭಿಧೀಯತೇ ॥ -ಇತಿ ಬ್ರಾಹ್ಮೇ**

ಪ್ರಮಾಣಾಂತರ ಸಂವಾದದಿಂದಲೂ ಹೀಗೆ ಅರ್ಥ ಮಾಡಬೇಕು ಎಂದು ತಿಳಿಸಲು ಮೋಕ್ಷಕ್ಕೆ ಹರಿಚರಣವೇ ಆಸ್ಪದ ಎಂಬಲ್ಲಿ ಪ್ರಮಾಣ ಹೇಳುವರು-

ಮೋಕ್ಷ, ಶಾಂತಿ, ಶರಣ, ನಿರ್ವಾಣ ಇವು ನಾಲ್ಕು ಪರ್ಯಾಯಪದಗಳು ಎಂದು ಬ್ರಾಹ್ಮ ಪುರಾಣದಲ್ಲಿದೆ.

**'ಭೇಜೇ ಖಗೇಂದ್ರಧ್ವಜಪಾದಮೂಲಮ್' ಇತಿ ಚ ।**

ಭಾಗವತದಲ್ಲಿ ಮುಕ್ತನು (ಪರೀಕ್ಷಿತ) ಶ್ರೀಹರಿಪಾದಾರವಿಂದತಲವನ್ನಾಶ್ರಯಿಸಿರುವನು ಎಂದು ಹೇಳಿದೆ.

ಸಾಯುಜ್ಯ ಹೊಂದುವವರಿಗೆ ಪಾದಮೂಲದಲ್ಲಿ ಮುಕ್ತಿ ಇಲ್ಲ. ಆದ್ದರಿಂದ ವಿವಕ್ಷಿತ ಅಧಿಕಾರಿಗಳನ್ನು ತಿಳಿಸಲು ದೇವತೆಗಳೇ ಮೊದಲಾದ ಅಧಿಕಾರಿಗಳಿಗೆ ಮುಕ್ತಿಸ್ಥಾನಭೇದವನ್ನು ಪ್ರಮಾಣದಿಂದ ತಿಳಿಸುವರು-

**ಸ್ವೋತ್ಪತ್ತ್ಯಂಗೇಷು ದೇವಾನಾಮನ್ಯೇಷಾಂ ಪಾದಮೂಲತಃ ।**
**ಮುಕ್ತಿಸ್ತು ವಿಹಿತಾ ವಿಷ್ಣೋರ್ನಿರ್ದಿಷ್ಟೇಷು ಯಥಾವಚಃ ॥ -ಇತ್ಯಧ್ಯಾತ್ಮೇ**

ಯಾವ ಯಾವ ಅಂಗಗಳಿಂದ ದೇವತೆಗಳು ಹುಟ್ಟಿರುವವರೋ ಆ ತತ್ತ್ವಾಭಿಮಾನಿ ದೇವತೆಗಳಿಗೆ ಶ್ರೀಹರಿಯ ಆ ಅಂಗಸಾಯುಜ್ಯರೂಪವಾದ ಮುಕ್ತಿಯೂ ಆಗುವುದು.

ಅಪ್ರತೀಕಾಲಂಬನರಿಗೆ ವೈಕುಂಠ-ಮಹರಾದಿಲೋಕವನ್ನಾಶ್ರಯಿಸಿ ಸ್ವರೂಪಾನಂದಾ-ನುಭವರೂಪ ಮುಕ್ತಿಯು 'ಚಕ್ಷೋಃ ಸೂರ್ಯೋ ಅಜಾಯತ' ಮುಂತಾದ ವೇದಗಳಲ್ಲಿ ಯಾವ ಅಂಗಗಳಿಂದ ಉತ್ಪತ್ತಿ ಎಂದು ಹೇಳಿದೆಯೋ ಅದರಂತೆ ಆಯಾ ಅಂಗ ಸಾಯುಜ್ಯರೂಪ ಮುಕ್ತಿಯು ಎಂದು ಅಧ್ಯಾತ್ಮದಲ್ಲಿ ಹೇಳಿದೆ. ಅಂತೂ ಯಾವ ಅಧಿಕಾರಿಗಳಿಗೆ ಪಾದಮೂಲದಲ್ಲಿ ಮುಕ್ತಿ ಎಂದು ಹೇಳಿದೆಯೋ ಅವರ ಅಭಿಪ್ರಾಯದಿಂದ ಇಲ್ಲಿ ಹೇಳಿದೆ ಎಂದು ಭಾವ. ॥ ೬-೮ ॥

**ಹಿಂಸಾಯಾ ನಿಋತೇರ್ಮೃತ್ಯೋರ್ನಿರಯಸ್ಯ ಗುದಃ ಸ್ಥಿತಃ ।**
**ಪರಾಭೂತೇರಧರ್ಮಸ್ಯ ತಮಸಶ್ಚಾಪಿ ಪಶ್ಚಿಮಃ ॥ ೯ ॥**

**ಹಿಂಸಾಯಾಃ** ಹಿಂಸೆಗೆ, **ನಿಋತೇಃ** ನಿಋತಿ ಎಂಬ ದೇವತೆಗೆ, **ಮೃತ್ಯೋಃ** ಮೃತ್ಯುವಿಗೆ, **ನಿರಯಸ್ಯ** ನರಕಕ್ಕೆ **ಪರಾಭೂತೇಃ** ಸೋಲಿಗೆ, ಅಲಕ್ಷ್ಮಿಗೆ, **ಗುದಃ ಸ್ಮೃತಃ** ಅಪಾನದ್ವಾರವು ಆಶ್ರಯವಾಗಿದೆ. **ಅಧರ್ಮಸ್ಯ** ಅಧರ್ಮಕ್ಕೆ, **ತಮಸಃ**ಅಜ್ಞಾನಕ್ಕೆ **ಪಶ್ಚಿಮಃ** ಪೃಷ್ಠಭಾಗವು ಆಶ್ರಯವು. ॥ ೯ ॥

**ನಾಡ್ಯೋ ನದನದೀನಾಂ ತು ಗೋತ್ರಾಣಾಮಸ್ಥಿಸಂಹತಿಃ ।**
**ಅವ್ಯಕ್ತರಸಸಿಂಧೂನಾಂ ಭೂತಾನಾಂ ನಿಧನಸ್ಯ ಚ ।**
**ಉದರಂ ವಿದಿತಂ ಪುಂಸೋ ಹೃದಯಂ ಮನಸಃ ಪದಮ್ ॥ ೧೦ ॥**

**ನಾಡ್ಯಃ** ನಾಡಿಗಳು, **ನದನದೀನಾಮ್** ಗಂಡು ಹೆಣ್ಣು ನದಿಗಳಿಗೆ, **ಅಸ್ಥಿಸಂಹತಿಃ** ಎಲಬುಗಳ ಸಮೂಹವು, **ಗೋತ್ರಾಣಾಮ್** ಪರ್ವತಗಳಿಗೆ, **ಅವ್ಯಕ್ತ** ಪ್ರಧಾನವು, **ರಸ** ಮಧುರಾದಿ ರಸಗಳು, **ಸಿಂಧೂನಾಮ್** ಸಮುದ್ರಗಳಿಗೆ, **ಭೂತಾನಾಮ್** ಪಂಚಭೂತಗಳಿಗೆ, ಅಥವಾ ಪ್ರಾಣಿಗಳಿಗೆ, **ನಿಧನಸ್ಯ ಚ** ಪ್ರಲಯಕ್ಕೂ, **ಪುಂಸಃ** ಶ್ರೀಹರಿಯ, **ಉದರಮ್** ಹೊಟ್ಟೆಯು, **ಪದಮ್** ಸ್ಥಾನವೆಂದು, **ವಿದಿತಮ್** ಜ್ಞಾನಿಗಳಿಂದ ತಿಳಿಯಲ್ಪಟ್ಟಿದೆ. **ಹೃದಯಮ್** ಹೃದಯವು, **ಮನಸಃ ಪದಮ್** ಮನಸ್ಸಿಗೆ ಸ್ಥಾನವು.

**ಧರ್ಮಸ್ಯ ಮಮ ತುಭ್ಯಂ ಚ ಕುಮಾರಾಣಾಂ ಭವಸ್ಯ ಚ ।**
**ವಿಜ್ಞಾನಸ್ಯ ಚ ತತ್ತ್ವಸ್ಯ ಪರಸ್ಯಾತ್ಮಾ ಪರಾಯಣಮ್ ॥ ೧೧ ॥**

**ಧರ್ಮಸ್ಯ** ಪುಣ್ಯಕ್ಕೆ ಮತ್ತು ಅದಕ್ಕೆ ಅಭಿಮಾನಿಯಾದ ಧರ್ಮ ಎಂಬ ದೇವತೆಗೆ, **ತುಭ್ಯಮ್** ನಿನಗೆ, **ಕುಮಾರಾಣಾಮ್** ಸನಕಾದಿ ನಾಲ್ಕು ಜನರಿಗೆ, **ಭವಸ್ಯ** ರುದ್ರದೇವರಿಗೆ, **ವಿಜ್ಞಾನಸ್ಯ ತತ್ತ್ವಸ್ಯ** ವಿಜ್ಞಾನತತ್ತ್ವಕ್ಕೆ ಹಾಗು ಅದರ ಅಭಿಮಾನಿನಿಯಾದ ಸರಸ್ವತಿಗೆ, **ಪರಸ್ಯ** ಶ್ರೀಹರಿಯ, **ಆತ್ಮಾ** ಮಧ್ಯದೇಹವು, **ಪರಾಯಣಮ್** ಆಶ್ರಯವು.

ಇಲ್ಲಿ ಆತ್ಮಶಬ್ದವು ಮಧ್ಯದೇಹಪರ ಎನ್ನಲು ಪ್ರಮಾಣ ಹೇಳುವರು-

**ತಾತ್ಪರ್ಯ- ಕುಮಾರಬ್ರಹ್ಮರುದ್ರಾದ್ಯಾ ಹರೇರ್ಮಧ್ಯಾತ್ ಸಮುದ್ಗತಾಃ ॥ -ಇತಿ ವಾಮನೇ**

**ಆತ್ಮೇತಿ ಮಧ್ಯದೇಹಶ್ಚ ಸರ್ವದೇಹೋಽಪಿ ವಾ ಭವೇತ್ ।**
**ಮನೋ ಬುದ್ಧಿರಹಂಕಾರಶ್ಚಿತ್ತಂ ಜೀವಶ್ಚ ಕಥ್ಯತೇ ॥**

**ಅಥವಾ ಸ್ವಯಮೇವೇತಿ ವಾಯುರ್ಬ್ರಹ್ಮಾಪಿ ವಾ ಭವೇತ್ ।**
**ಮುಖ್ಯತೋ ಬ್ರಹ್ಮ ಪರಮಮಾತ್ಮಶಬ್ದೇನ ಭಣ್ಯತೇ ॥ -ಇತಿ ನಾಮಮಹೋದಧೌ**

**ದೇಹೇಂದ್ರಿಯಾದಿಭೇದೇನ ನಿರ್ಭೇದೋಽಪಿ ಹರಿಃ ಸ್ವಯಮ್ ।**
**ಭಣ್ಯತೇ ಕೇವಲೈಶ್ವರ್ಯಾದನಾದ್ಯಾನಂದಚಿದ್ಘನಃ ॥ -ಇತಿ ಗಾರುಡೇ**

ಕುಮಾರ, ಚತರ್ಮುಖ, ರುದ್ರ, ಧರ್ಮ, ನಾರದಾದಿಗಳು ಶ್ರೀಹರಿಯ ಮಧ್ಯದೇಹದಿಂದ ಹುಟ್ಟಿದವರು ಎಂದು ವಾಮನಪುರಾಣದಲ್ಲಿದೆ. ಆತ್ಮಾ ಎಂದರೆ ಮಧ್ಯದೇಹವು ಅಥವಾ ಎಲ್ಲ ದೇಹವು ಎಂದೂ ಅರ್ಥವಿದೆ.

ಮನಸ್ಸು, ಬುದ್ಧಿ, ಅಹಂಕಾರ, ಚಿತ್ತ, ಜೀವ, ವಾಯು, ಬ್ರಹ್ಮ ಇವರು ಅಮುಖ್ಯವಾಗಿ ಆತ್ಮಾ ಎಂದು ಹೇಳಲ್ಪಡುವರು. ಪರಬ್ರಹ್ಮನೇ ಮುಖ್ಯವಾಗಿ ಆತ್ಮಾ ಎನಿಸಿಕೊಳ್ಳುತ್ತಾನೆ ಎಂದು ನಾಮಮಹೋದಧಿಯಲ್ಲಿದೆ.

ಅಚಿಂತ್ಯವಾದ ಐಶ್ವರ್ಯ ಉಳ್ಳವನಾಗಿದ್ದಾನೆ ಪರಮಾತ್ಮ. ಆದ್ದರಿಂದ ತನ್ನ ದೇಹ-ಇಂದ್ರಿಯಾದಿಗಳಿಂದ ತನಗೆ ಭೇದವಿಲ್ಲದಿದ್ದರೂ ಅನಾದಿಕಾಲದಿಂದ ಆನಂದರೂಪಿಯಾದ ಶ್ರೀಪರಮಾತ್ಮನು ಭೇದ ಉಳ್ಳವನಂತೆ ವ್ಯವಹರಿಸಲ್ಪಡುವನು ಎಂದು ಗಾರುಡಪುರಾಣದಲ್ಲಿದೆ. ।। ೧೧ ।।

ಇಲ್ಲಿಯ ವರೆಗೆ 'ಚಕ್ಷೋಃ ಸೂರ್ಯೋ ಅಜಾಯತ' ಎಂಬುದು ಉಪಲಕ್ಷಣ ಎಂದಿಟ್ಟುಕೊಂಡು ಭಗವಂತನ ಅಂಗಗಳಿಂದ ಇಂದ್ರಿಯಾದಿಗಳ ಸೃಷ್ಟಿಯನ್ನು ಹೇಳಿ, ಈಗ 'ಪುರುಷ ಏವೇದಂ ಸರ್ವಮ್' ಎಂಬಲ್ಲಿ ಹೇಳಿದ ಮಹಾತ್ಮ್ಯವನ್ನು ಸರ್ವಶಬ್ದವಿವರಣಪೂರ್ವಕವಾಗಿ ತಿಳಿಸುವರು-

**ಅಹಂ ಭವಾನ್ ಭವಶ್ಚೈವ ಯ ಇಮೇ ಮುನಯೋಽಗ್ರಜಾಃ ।**
**ಸುರಾಸುರನರಾ ನಾಗಾಃ ಖಗಾ ಮೃಗಸರೀಸೃಪಾಃ ।। ೧೨ ।।**

**ಗಂಧರ್ವಾಪ್ಸರಸೋ ಯಕ್ಷಾ ರಕ್ಷೋ ಭೂತಗಣೋರಗಾಃ ।**
**ಪಶವಃ ಪಿತರಃ ಸಿದ್ಧಾ ವಿದ್ಯಾಧ್ರಾಶ್ಚಾರಣಾ ದ್ರುಮಾಃ ।। ೧೩ ।।**

**ಅನ್ಯೇ ಚ ವಿವಿಧಾ ಜೀವಾ ಜಲಸ್ಥಲನಭೌಕಸಃ ।**
**ಗ್ರಹರ್ಕ್ಷಕೇತವಸ್ತಾರಾಸ್ತಡಿತಃ ಸ್ತನಯಿತ್ನವಃ ।। ೧೪ ।।**

**ಸರ್ವಂ ಪುರುಷ ಏವೇದಂ ಭೂತಂ ಭವ್ಯಂ ಭವಚ್ಚ ಯತ್ ।**
**ತೇನೇದಮಾವೃತಂ ವಿಶ್ವಂ ವಿತಸ್ತಿಮಧಿತಿಷ್ಠತಾ ।। ೧೫ ।।**

**ಅಹಮ್** ನಾನು, **ಭವಾನ್** ನೀನು, (ನಾರದ) **ಭವಃ** ರುದ್ರನು, **ಇಮೇ ಅಗ್ರಜಾಃ ಮುನಯಃ** ಮೊದಲು ಜನಿಸಿದ ಈ ಸನಕಾದಿಗಳು, **ಸುರಾಸುರನರಾಃ** ದೇವ-ದಾನವ-ಮಾನವರು, **ನಾಗಾಃ** ಹೆಡೆಯುಳ್ಳ ಹಾವುಗಳು, **ಖಗಾಃ** ಪಕ್ಷಿಗಳು, **ಮೃಗಸರೀಸೃಪಾಃ** ಜಿಂಕೆ ಮತ್ತು ಹಾವುಗಳು, ।। ೧೨ ।।

**ಗಂಧರ್ವಾಪ್ಸರಸಃ** ಗಂಧರ್ವರು-ಅಪ್ಸರಾಸ್ತ್ರೀಯರು, **ಯಕ್ಷಾಃ** ಯಕ್ಷರು, **ರಕ್ಷಃ** ರಾಕ್ಷಸರು, **ಭೂತಗಣೋರಗಾಃ** ಭೂತಗಳು ಮತ್ತು ಹಾವಿನ ಪ್ರಭೇದಗಳು, **ಪಶವಃ**

ಪಶುಗಳು, **ಪಿತರಃ** ಪಿತೃಗಳು, **ಸಿದ್ಧಾಃ** ಸಿದ್ಧರು, **ವಿದ್ಯಾಧ್ರಾಃ** ವಿದ್ಯಾಧರರು, **ಚಾರಣಾಃ** ಚಾರಣರು, **ದ್ರುಮಾಃ** ಗಿಡಗಳು, ।। ೧೩ ।।

**ಚ** ಮತ್ತು, **ಅನ್ಯೇ** ಬೇರೆಯಾದ, **ವಿವಿಧಾಃ ಜೀವಾಃ** ನಾನಾವಿಧರಾದ ಜೀವರು, **ಜಲಸ್ಥಲನಭೌಕಸಃ** ನೀರು-ನೆಲ-ಆಕಾಶಗಳೇ ಮನೆಯಾಗಿ ಉಳ್ಳ ಪದಾರ್ಥಗಳು (ಪ್ರಾಣಿಗಳು) **ಗ್ರಹರ್ಕ್ಷಕೇತವಃ** ಸೂರ್ಯಾದಿಗ್ರಹಗಳು, ನಕ್ಷತ್ರಗಳು, ಕೇತುಗಳು, **ತಾರಾಃ** ಅಶ್ವಿನ್ಯಾದಿಗಳು, **ತಡಿತಃ** ವಿದ್ಯುತ್ತುಗಳು, **ಸ್ತನಯಿತ್ನವಃ** ಗುಡುಗು-ಸಿಡಿಲುಗಳು, ।।೧೪।।

**ಇದಂ** ಹಿಂದೆ ಹೇಳಿದ, **ಸರ್ವಮ್** ಎಲ್ಲ **ಭೂತಮ್** ಅತೀತವಾದ, **ಭವ್ಯಮ್** ಮುಂದೆ ಆಗುವ, **ಭವತ್ ಚ** ಈಗಿರುವ, **ವಿಶ್ವಮ್** ಪ್ರಪಂಚವು, **ವಿತಸ್ತಿಮ್** ಚೋಟುದ್ದ ಹೃದಯವನ್ನು, **ಅಧಿತಿಷ್ಠತಾ** ವ್ಯಾಪಿಸಿರುವ, **ತೇನ** ಭಗವಂತನಿಂದ, **ಆವೃತಮ್** ಬಹಿಃ ವಾಪ್ತವಾಗಿದೆ. **ಪುರುಷ ಏವ** ಸತ್ತಾ-ಪ್ರತೀತಿ-ಪ್ರವೃತ್ತಿಗಳೆಲ್ಲ ಭಗವದಧೀನವಾಗಿವೆ. ।। ೧೫ ।।

'ನ ಭಾತೀತಿ ನಭಃ' ಎಂಬ ವ್ಯುತ್ಪತ್ತಿಯಿಂದ ಯೌಗಿಕವಾದ ನಭ ಶಬ್ದವಿದು ಅಕಾರಾಂತವಾದದ್ದು ಮತ್ತು ಆಕಾಶವಾಚಕವಾದದ್ದು ಎಂದು ತಿಳಿಯಬೇಕು.

ಇಲ್ಲಿ 'ಇದಂ ಸರ್ವಂ ಪುರುಷ ಏವ' ಎಂದು ಎಲ್ಲದಕ್ಕೂ ಪುರುಷಾಭೇದ ಹೇಳಿದಂತೆ ತೋರುವುದು. ಕಾರಣ ಅಭಿಪ್ರಾಯವನ್ನು ಪ್ರಮಾಣದಿಂದ ಹೇಳುವರು-

**ತಾತ್ಪರ್ಯ- ಸರ್ವಂ ಪುರುಷ ಏವೇತಿ ಭಣ್ಯತೇಽಭೇದವಜ್ಜಗತ್ ।**
**ತದಧೀನಂ ತು ಸತ್ತಾದಿಯುತೋ ಹ್ಯಸ್ಯ ಸದಾ ಭವೇತ್ ।। -ಇತಿ ಬ್ರಹ್ಮತರ್ಕೇ**
**'ವಿತಸ್ತಿಮಾತ್ರಂ ಹೃದಯಮಾಸ್ಥಾಯ ವ್ಯಾಪ್ನುತೇ ಜಗತ್' ।। -ಇತಿ ಗಾರುಡೇ**

ವಸ್ತುತಃ ಶ್ರೀಹರಿಯಿಂದ ಜಗತ್ತು ಭಿನ್ನವಾಗಿದ್ದರೂ ಜಗತ್ತಿನ ಸತ್ತಾ-ಪ್ರತೀತಿ-ಪ್ರವೃತ್ತಿಗಳು ಸರ್ವದಾ ಶ್ರೀಹರಿಯ ಅಧೀನವಾದದ್ದರಿಂದ ಸರ್ವವೂ ಶ್ರೀಹರಿ ಎಂದು ಅಭೇದೇನ ಹೇಳಲ್ಪಡುವುದು ಎಂದು ಬ್ರಹ್ಮತರ್ಕದಲ್ಲಿದೆ.

ಹತ್ತು ಅಂಗುಲದ ಪರಿಮಾಣ ಉಳ್ಳ ಹೃದಯದಲ್ಲಿದ್ದು ಇಡಿಯ ಜಗತ್ತನ್ನು ವ್ಯಾಪಿಸಿ ಕೊಂಡಿದ್ದಾನೆ ಪರಮಾತ್ಮ ಎಂದು ಗರುಡಪುರಾಣದಲ್ಲಿದೆ.

ಇದರಿಂದ, **ಸಃ ಪುರುಷಃ** ಪರಮಾತ್ಮನು, **ದಶಾಂಗುಲಮ್** ವಿತಸ್ತಿಪರಿಮಿತವಾದ ಜನರ ಹೃದಯವನ್ನು, **ಅತಿ** ಅಧಿಕವಾಗಿ, **ವೃತ್ವಾ** ಇದ್ದು, **ಭೂಮಿಮ್** ಜಗತ್ತನ್ನು **ವಿಶ್ವತಃ**

ಸ್ವಲ್ಪವನ್ನೂ ಬಿಡದೇ ಎಲ್ಲಕಡೆಗೆ, **ಅತಿಷ್ಠತ್** ವ್ಯಾಪ್ತನಾಗಿರುವನು. ಎಂದು ಅಭಿಪ್ರಾಯ ಪುರುಷ ಸೂಕ್ತಕ್ಕೆ ಸೂಚಿತವಾಗುವುದು. ।। ೧೫ ।।

**ಸ್ವಧಿಷ್ಣ್ಯಂ ಪ್ರತಪನ್ ಪ್ರಾಣೋ ಬಹಿಶ್ಚ ಪ್ರತಪತ್ಯಸೌ ।**
**ಏವಂ ವಿರಾಜಂ ಪ್ರತಪಂಸ್ತಪತ್ಯಂತರ್ಬಹಿಃ ಪುಮಾನ್ ।। ೧೬ ।।**

**ಪ್ರಾಣಃ** ಪ್ರಕೃಷ್ಟಚೇಷ್ಟಕನಾದ, **ಅಸೌ ಪುಮಾನ್** ಈ ಪುರುಷನು, **ಯಥಾ** ಹೇಗೆ, **ಸ್ವಧಿಷ್ಣ್ಯಮ್** ತನಗೆ ಆವಾಸವಾದ ದೇಹವನ್ನು **ಪ್ರತಪನ್** ನೋಡುತ್ತ, **ಬಹಿಃ** ದೇಹದ ಹೊರಗೂ, **ತಪತಿ** ವಿಷಯಗಳನ್ನು ನೋಡುವನೋ, **ಏವಮ್** ಅದರಂತೆ, **ವಿರಾಜಮ್** ಬ್ರಹ್ಮಾಂಡವನ್ನು **ಅಂತಃ** ಒಳಗೆ, **ಪ್ರತಪನ್** ನೋಡುತ್ತ, **ಬಹಿರಪಿ** ಹೊರಗಿರುವ ಎಲ್ಲ ಪದಾರ್ಥಗಳನ್ನೂ, **ಪ್ರತಪತಿ** ನೋಡುವನು.

ಇಲ್ಲಿ 'ಸ್ವಧಿಷ್ಣ್ಯಮ್' ಮತ್ತು 'ಪ್ರತಪನ್' ಎಂಬ ಶಬ್ದಗಳಿಗೆ ವಿವಕ್ಷಿತವಾದ ಅರ್ಥವನ್ನು ತಿಳಿಸುವರು-

**ತಾತ್ಪರ್ಯ- ಪಶ್ಯನ್ ಸ್ವಧಿಷ್ಣ್ಯಂ ದೇಹಂ ಸ ಬಹಿಷ್ಠಾನ್ವಿಷಯಾನಪಿ ।**
**ಏವಮಂಡಾಂತರಂ ಪಶ್ಯನ್ ಬಹಿಃ ಸರ್ವಂ ಚ ಪಶ್ಯತಿ ।। -ಇತಿ ವಾಮನೇ**

ಶ್ರೀಹರಿಯು ತನ್ನ ಸ್ಥಾನವಾದ ಶರೀರವನ್ನು ನೋಡುವಂತೆ ಬಾಹ್ಯವಿಷಯಗಳನ್ನೂ ನೋಡುತ್ತಾನೆ. ಹೀಗೆಯೇ ಬ್ರಹ್ಮಾಂಡದ ಒಳಗಿನ ಪದಾರ್ಥಗಳನ್ನು ನೋಡುತ್ತ ಬಾಹ್ಯಪದಾರ್ಥಗಳನ್ನೂ ನೋಡುತ್ತಾನೆ. ಎಂದು ವಾಮನಪುರಾಣದಲ್ಲಿದೆ. ।।೧೬।।

'ಉತಾಮೃತತ್ವಸ್ಯೇಶಾನಃ' ಎಂಬಲ್ಲಿ ಹೇಳಿದ ಮುಕ್ತನಿಯಾಮಕತ್ವರೂಪವಾದ ಮಹಿಮೆಯನ್ನು ತಿಳಿಸುವರು-

**ಸೋಽಮೃತಸ್ಯಾಭಯಸ್ಯೇಶೋ ಮರ್ತ್ಯಮನ್ನಂ ಯದತ್ಯಗಾತ್ ।**
**ಮಹಿಮೈಷ ತತೋ ಬ್ರಹ್ಮನ್ ಪುರುಷಸ್ಯ ದುರತ್ಯಯಃ ।। ೧೭ ।।**

**ಯತ್** ಯಾವಕಾರಣ, **ಅನ್ನಂ ಮರ್ತ್ಯಮ್** ಭೋಗ್ಯವಾದ ಅವ್ಯಕ್ತತತ್ವವನ್ನೂ ವಿನಾಶಿಯಾದ ಮಹದಾದಿತತ್ತ್ವಗಳನ್ನು ಇವು ಬಂಧಕಗಳಾಗಿವೆ. ಇವುಗಳಿಂದ ಬಧ್ಯವಾದ ಬ್ರಹ್ಮಾದಿಚೇತನರನ್ನು, **ಅತ್ಯಗಾತ್** ಮೀರಿರುವನೋ, ಅಂದರೆ ಅಧಿಪತಿಯಾಗಿರುವನೋ, **ಸಃ** ಅವನು, **ಅಮೃತಸ್ಯ ಅಭಯಸ್ಯ** ಜನ್ಮಾದಿಭಯರಹಿತರಾದ ಮುಕ್ತಸಮೂಹಕ್ಕೆ **ಈಶಾನಃ** ಅಧಿಪತಿಯು, **ತತಃ** ಅವ್ಯಕ್ತಾದಿಗಳು ಅವನಿಗಿಂತ ನೀಚರಾದುದರಿಂದ, **ಪುರುಷಸ್ಯ** ಪರಮಾತ್ಮನ, **ಏಷಃ** ಹಿಂದೆ ಹೇಳಿದ, **ಮಹಿಮಾ**

ಮಾಹಾತ್ಮ್ಯವು, **ದುರತ್ಯಯಃ** ಯಾರಿಂದಲೂ ಮೀರಲಶಕ್ಯವಾದುದು, ಒಂದು ವೇಳೆ ಮುಕ್ತರು ತನ್ನ ಅಧೀನರಾಗಿ ಇರಲಾರರು ಎಂದಾದರೇ ಬಂಧಕ ಮತ್ತು ಬದ್ಧರಿಗೆ ಈಶನಾದ ಬುದ್ಧಿವಂತನು ಬಂಧದಿಂದ ಅವರನ್ನು ಮೋಚನೆ ಮಾಡಲಾರ ಎಂದು ಭಾವ. **ಅಸ್ಯ** ಈ ಪುರುಷನ, ಮಹಿಮಾ **ಏತಾವಾನ್** ಪೂರ್ವೋಕ್ತವಾದುದು ಅಷ್ಟೇ ಅಲ್ಲ ತತೋ **ಜ್ಯಾಯಾಂಶ್ಚ** ಇನ್ನೂ ಹೆಚ್ಚಿದೆ, ಕಾರಣ ದುರತ್ಯಯವೆಂದು ಭಾವ. ಇಲ್ಲಿ ಮುಕ್ತನಿಯಾಮಕತ್ವ ಹೇಳಲು ಹೊರಟ 'ಯದನ್ನೇನಾತಿರೋಹತಿ' ಎಂಬಲ್ಲಿ ಅನ್ನೇನ ಎಂಬ ತೃತೀಯಾ ದ್ವಿತೀಯಾರ್ಥಕವಾಗಿದೆ ಎಂದಿಟ್ಟುಕೊಂಡು 'ಅನ್ನಂ' ಎಂದು ಅನುವಾದ ಮಾಡಿ 'ಮರ್ತ್ಯಂ' ಎಂದು ವ್ಯಾಸರು ವ್ಯಾಖ್ಯಾನಿಸಿರುವರು. ಅಲ್ಲಿ ಮರ್ತ್ಯ ಎಂದರೇನು? ಮತ್ತು ಇದು ಮುಕ್ತನಿಯಾಮಕತ್ವಕ್ಕೆ ಹೇಗೆ ಹೇತುವಾಗುತ್ತದೆ ಎಂದರೆ ಪ್ರಮಾಣದಿಂದ ತಿಳಿಸುವರು-

**ಅವ್ಯಕ್ತಮಾತ್ಮನೋಽನ್ನಂ ಚ ಮಹದಾದಿ ವಿನಾಶಿ ಚ ।**
**ಯದತೀತಃ ಪರೋ ವಿಷ್ಣುಃ ಸ ಏವಾತೋ ವಿಮೋಕ್ಷದಃ ॥ -ಇತಿ ನಾರದೀಯೇ**

ಅವ್ಯಕ್ತತತ್ತ್ವಾಭಿಮಾನಿನಿಯಾದ ಲಕ್ಷ್ಮೀದೇವಿಯು ಪರಮಾತ್ಮನಿಗೆ ಅನ್ನವಾಗಿದ್ದಾಳೆ. ಅಂದರೆ ಭೋಗ್ಯಳಾಗಿದ್ದಾಳೆ. ಮಹತ್ತತ್ತ್ವಮೊದಲಾದವುಗಳು ವಿನಾಶಿಯಾಗಿವೆ. ಸರ್ವೋತ್ತಮನಾದ ಶ್ರೀವಿಷ್ಣುವು ಅವುಗಳಿಗೆ ಅಧಿಪತಿಯಾಗಿರುವುದರಿಂದಲೇ ಮೋಕ್ಷವನ್ನು ಕೋಡುವವನೂ ಅವನೇ ಎಂದು ನಾರದೀಯಪುರಾಣದಲ್ಲಿದೆ. ॥೧೭॥

**ಪಾದೋಽಸ್ಯ ಸರ್ವಾ ಭೂತಾನಿ ಪುಂಸಃ ಸ್ಥಿತಿವಿದೋ ವಿದುಃ ।**
**ಅಮೃತಂ ಕ್ಷೇಮಮಭಯಂ ತ್ರಿಮೂರ್ಧ್ನೋಽಧಾಯಿ ಮೂರ್ಧಸು ॥ ೧೮ ॥**

**ಅಸ್ಯ ಪುಂಸಃ** ಈ ಪರಮಪುರುಷನ, **ಸರ್ವಾ ಭೂತಾನಿ** ಬ್ರಹ್ಮಾದಿಸರ್ವಜೀವರು, **ಪಾದಾಃ** ಭಿನ್ನಾಂಶರು ಎಂದು, **ಸ್ಥಿತಿವಿದಃ** ಎಲ್ಲ ಜೀವರು ಶ್ರೀಹರಿಯ ಭಿನ್ನಾಂಶರೆಂಬ ಸ್ವರೂಪವನ್ನು ತಿಳಿದವರು, **ವಿದುಃ** ಹೀಗೆ ತಿಳಿದಿದ್ದಾರೆ. ಅಂದರೆ ಸರ್ವಜ್ಞರ ಪ್ರತ್ಯಕ್ಷವೇ ಪ್ರಮಾಣವೆಂದಂತಾಯಿತು. **ಅಮೃತಂ ಕ್ಷೇಮಂ ಅಭಯಂ** ಅನಂತಾಸನ-ವೈಕುಂಠ-ಶ್ವೇತದ್ವೀಪ ಇವುಗಳನ್ನು, **ತ್ರಿಮೂರ್ಧಾ** ಮೂರು ತಲೆಗಳುಳ್ಳ ಅವತಾರವಿಶೇಷವು, **ಮೂರ್ಧಸು** ತಲೆಗಳಲ್ಲಿ **ಅಧಾಯಿ** ಅದ್ಯಾಪಿ ಧರಿಸಲ್ಪಟ್ಟಿದೆ.

ಇಲ್ಲಿ ಅಮೃತಾದಿ ಪಾದತ್ರಯಗಳಂತೆ ಎಲ್ಲ ಭೂತಗಳು ಅಂಶಗಳು ಎಂದು ಹೇಳುವಂತೆ ಕಾಣುವುದು ಕಾರಣ ವ್ಯಾಖ್ಯಾನಿಸುವರು-

**ತಾತ್ಪರ್ಯ- ಸ್ವರೂಪಾಂಶೋ ವಿಭಿನ್ನಾಂಶ ಇತಿ ದ್ವೇಧಾಂಶ ಇಷ್ಯತೇ ।**
**ಅನಂತಾಸನವೈಕುಂಠಪದ್ಮನಾಭಾಃ ಸ್ವಯಂ ಹರಿಃ ॥**
**ಜೀವಾ ಇಮೇ ವಿಭಿನ್ನಾಂಶಾಃ ಧರ್ಮಾಧರ್ಮಾದಿಸಂಯುತಾಃ ॥ -ಇತಿ ವಾಮನೇ**

ಸ್ವರೂಪಾಂಶ ವಿಭಿನ್ನಾಂಶ ಎಂದು ಶ್ರೀಹರಿಯ ಅಂಶವು ಎರಡು ವಿಧವಾಗಿದೆ. ಅಮೃತವೆಂಬ ಅನಂತಾಸನದಲ್ಲಿರುವ ಅನಂತಾಸನನು ಅಮೃತಶಬ್ದವಾಚ್ಯನಾಗಿದ್ದಾನೆ. ಕ್ಷೇಮ ಎನಿಸಿದ ವೈಕುಂಠದಲ್ಲಿದ್ದ ವೈಕುಂಠನು ಕ್ಷೇಮಶಬ್ದವಾಚ್ಯನಾಗಿದ್ದಾನೆ. ಅಭಯವೆನಿಸಿದ ಶ್ವೇತದ್ವೀಪದಲ್ಲಿ ಇರುವ ಪದ್ಮನಾಭನು ಅಭಯಶಬ್ದವಾಚ್ಯನಾಗಿದ್ದಾನೆ. ಈ ರೂಪಗಳೆಲ್ಲ ಸ್ವರೂಪಾಂಶಗಳು. ಧರ್ಮಾಧರ್ಮಾದಿಗಳಿಂದ ಕೂಡಿದ ಈ ಜೀವರು ಪರಮಾತ್ಮನ ಭಿನ್ನಾಂಶರು ಎಂದು ವಾಮನ ಪುರಾಣದಲ್ಲಿದೆ. 'ಸ್ಥಿತಿವಿದಃ' ಎಂಬುದು ಭೂತಗಳು ಭಿನ್ನಾಂಶ ಎಂಬುದಕ್ಕೆ ಪ್ರಮಾಣ ಎಂಬ ಅಭಿಪ್ರಾಯದಿಂದ ವ್ಯಾಖ್ಯಾನಿಸುವರು-

**ತಾತ್ಪರ್ಯ- ಸರ್ವಸ್ಯ ಯಥಾವತ್ ಸ್ಥಿತಿವಿದಃ ॥**

ಬ್ರಹ್ಮಾದಿಗಳೆಲ್ಲರೂ ಪರಮಾತ್ಮನಿಂದ ಭಿನ್ನರು ಎಂಬ ಎಲ್ಲ ಪದಾರ್ಥಗಳ ಸರಿಯಾದ ಸ್ವರೂಪವನ್ನು ತಿಳಿದವರು ಎಂದರ್ಥ.

ಈ ಶ್ಲೋಕದಲ್ಲಿ ಹೇಳಿದ ತ್ರಿಮೂರ್ಧಾ ಯಾರು? ಅವನ ತಲೆಯ ಮೇಲೆ ಇರುವವು ಅನಂತಾಸನಾದಿಗಳಾದರೆ ಅವುಗಳಿಗೆ 'ತ್ರಿಪಾದಸ್ಯಾಮೃತಂ ದಿವಿ' ಎಂದು ಹೇಳಿದ ದ್ಯುಸ್ಥತ್ವ ಹೇಗೆ ಎಂದು ಹೇಳುವರು-

**ಭಾ.ತಾ- ತ್ರಿಮೂರ್ಧಾ ಸನ್ ಹರಿರ್ಧತ್ತೇ ದ್ಯುತ್ರಯಂ ಮೂರ್ಧಭಿಃ ತ್ರಿಭಿಃ ।**
**ಅನಂತಾಸನವೈಕುಂಠನಾರಾಯಣಪುರಾಣಿ ತು ।**
**ಬಹುಲಕ್ಷೋಚ್ಛ್ರಿತೇಷ್ವೇಷು ಸ ವಸತ್ಯಮೃತೋ ಹರಿಃ ॥ -ಇತಿ ಮಾತ್ಸ್ಯೇ**

ಶ್ರೀಹರಿಯು ಮೂರು ಶಿರಸ್ಸುಳ್ಳವನಾಗಿ ಮೂರು ಶಿರಸ್ಸುಗಳಿಂದ ಅಮೃತ-ಕ್ಷೇಮ-ಅಭಯವೆಂಬ ಅನಂತಾಸನ-ವೈಕುಂಠ-ಶ್ವೇತದ್ವಿಪ ಎಂಬ ಮೂರು ಲೋಕಗಳನ್ನು ಧರಿಸುತ್ತಾನೆ. ಅನಂತಾಸನ-ವೈಕುಂಠ-ನಾರಾಯಣಪುರಗಳು ದ್ಯು ಎನಿಸಿಕೋಳ್ಳುತ್ತವೆ. ಏಕೆಂದರೆ 'ಲೋಕತ್ರಯವಿವಕ್ಷಾಯಾಂ ಪರತೋ ಲಕ್ಷಯೋಜನಾತ್ । ಸರ್ವಂ ದ್ಯೌರಿತಿ ವಿಜ್ಞೇಯಂ' ಎಂಬ ಪ್ರಮಾಣಾನುಸಾರ ಒಂದು ಲಕ್ಷಯೋಜನದ ಮೇಲೆರುವುದೆಲ್ಲ ದ್ಯು ಎಂದಾದ ಮೇಲೆ ಬಹುಲಕ್ಷಯೋಜನ ಎತ್ತರವಾದ ಇವುಗಳೂ ದ್ಯು ಎಂಬುದು

ಸಿದ್ಧ ಇವುಗಳಲ್ಲಿ ಶ್ರೀಹರಿಯು ವಾಸಮಾಡುತ್ತಾನೆ. ಎಂದು ಮತ್ಸ್ಯಪುರಾಣದಲ್ಲಿದೆ. ಇದರಿಂದ ದಿವಿ ಎಂದು ಹೇಳಿದ ದ್ಯುಸ್ಥತ್ವ ವಿವರಿಸಿದಂತಾಯಿತು. ।। ೧೮ ।।

ತ್ರಿಪಾದೂರ್ಧ್ವ ಎಂಬಲ್ಲಿ ಹೇಳಿದ ಮಹಾತ್ಮ್ಯವನ್ನು ತಿಳಿಸುವರು-

**ಪಾದಾಸ್ತ್ರಯೋ ಬಹಿಸ್ತ್ವಾಸನ್ನಪ್ರಜಾನಾಂ ಯ ಆಶ್ರಯಃ ।**
**ಅಂತಸ್ತ್ರಿಲೋಕ್ಯಾದಪರೋ ಗೃಹಮೇಧೈಃ ಬೃಹದ್ವ್ರತಃ ।। ೧೯ ।।**

**ಯೇ** ಯಾವ ಲೋಕಗಳು ಅವುಗಳಲ್ಲಿರುವ ಸ್ವರೂಪಾಂಶಗಳು, **ಅಪ್ರಜಾನಾಂ** ತಮ್ಮ ಸ್ಥಾನವನ್ನು ಮಕ್ಕಳಿಗೆ ಕೊಡದಿರುವುದರಿಂದ ಮಕ್ಕಳಿಲ್ಲದವರೆನಿಸಿದ ಬ್ರಹ್ಮಾದಿದೇವತೆಗಳಿಗೆ, **ಆಶ್ರಯಾಃ** ಆಶ್ರಯವಾಗಿರುವವೋ, **ತೇ** ಅಂತಹ, **ತ್ರಯಃ ಪಾದಾಃ** ಅನಂತಾಸನ-ವೈಕುಂಠ-ಶ್ವೇತದ್ವೀಪಗಳೆಂಬ ಭಗವಂತನು ವ್ಯಕ್ತವಾಗಿ ವಾಸಮಾಡುವ ಸ್ಥಾನಗಳು **ತ್ರಿಲೋಕ್ಯಾಃ ಬಹಿಃ ಆಸನ್** ಮೂರು ಲೋಕಗಳ ಹೊರಗಿರುವವು. ಕಾರಣ ಅಲ್ಲಿರುವ ಭಗವಂತನೂ ಹೊರಗೆ ಎಂದು ಔಪಚಾರಿಕವಾಗಿ ಹೇಳಿದೆ. **ಗೃಹಮೇಧೈಃ** ಗೃಹಸ್ಥಾಶ್ರಮೋಚಿತವಾದ ಯಜ್ಞಗಳನ್ನು ಮಾಡುವವರಿಂದ, **ಬೃಹದ್ವ್ರತಃ** ಸಾಂಗವಾಗಿ ಹೋಮಮಾಡಲ್ಪಟ್ಟ ಆಶ್ರಿತನಾದವನು, **ತ್ರಿಲೋಕ್ಯಾಃ ಅಂತಃ** ಮೂರು ಲೋಕಗಳ ಒಳಗೆ, **ಅಪರಃ** ಮತ್ತೊಂದು ರೂಪದಿಂದ ಇರುವನು.

ಇಲ್ಲಿ 'ಬಹಿಃ' ಎಂಬುದಕ್ಕೆ ಅವಧಿ ಯಾವುದೆಂದು ತಿಳಿಯುವುದಿಲ್ಲ 'ತ್ರಿಲೋಕ್ಯಾಃ' ಎಂಬುದೇ ಅವಧಿ ಎಂದಿಟ್ಟುಕೊಂಡರೆ ಹೇಳಿದ ಪಾದತ್ರಯಗಳಿಗೆ ಮುಂದಿನ ಶ್ಲೋಕದಲ್ಲಿ 'ಸೃತೀ ವಿಚಕ್ರಮೇ' ಎಂದು ತ್ರಿಲೋಕಾಂತರ್ಗತವಾದರೂ ವಿದ್ಯುದಾದಿಸ್ಥಿತತ್ವ ಹೇಳುವುದರಿಂದ 'ತು'ಶಬ್ದದಿಂದ ಅವಧಾರಣ ಮಾಡಿದ್ದು ಕೂಡುವುದಿಲ್ಲ, ಮತ್ತು 'ಅಪ್ರಜಾನಾಂ' ಎಂಬುದಕ್ಕೂ 'ಅಂತಸ್ತ್ರಿಲೋಕ್ಯಾಸ್ತ್ವಪರಃ' ಎಂಬುದಕ್ಕೂ ವಿವಕ್ಷಿತ ಅರ್ಥ ತೋರುವುದಿಲ್ಲ ಕಾರಣ ಶ್ಲೋಕವನ್ನು ಪ್ರಮಾಣದಿಂದ ವ್ಯಾಖ್ಯಾನಿಸುವರು-

ತಾತ್ಪರ್ಯ- ಅನಂತಾಸನವೈಕುಂಠನಾರಾಯಣಪುರಾಣಿ ತು ।
ತ್ರೀಣಿ ಧಾಮಾನಿ ವೈ ವಿಷ್ಣೋಸ್ತ್ರಿಲೋಕಾತ್ ಬಹಿರೇವ ಚ ।।

ಅದಾಯಾದಾಸ್ತು ಪುತ್ರಾಣಾಮುದ್ರಿಕ್ತಜ್ಞಾನಚಕ್ಷುಷಃ ।
ನಾರಾಯಣಪರಾ ದೇವಾ ಏವಂ ತಾನ್ಯಾಪ್ನುವಂತಿ ಚ ।।

ಸ ಏವಾಽನ್ಯಸ್ವರೂಪೇಣ ಶಕ್ರಲೋಕಸಮೀಪಗಃ ।
ಇಜ್ಯೋ ಯಜ್ಞಪುಮಾನ್ನಾಮ ಜ್ಞಾನಿನಾಂ ಗೃಹಿಣಾಂ ಪದಮ್ ।।

**ಯತೀನಾಂ ಧ್ರುವಲೋಕಸ್ಥೋ ವನಿನಾಂ ಮೇರುಮಧ್ಯಗಃ ।**
**ಆದಿತ್ಯಮಂಡಲಸ್ಥಸ್ತು ಜ್ಞಾನಿನಾಂ ಬ್ರಹ್ಮಚಾರಿಣಾಮ್ ॥ -ಇತಿ ಬ್ರಹ್ಮಾಂಡೇ**

ಅನಂತಾಸನ-ವೈಕುಂಠ-ಶ್ವೇತದ್ವೀಪ ಎಂಬ ಮೂರು ಪಟ್ಟಣಗಳು ಶ್ರೀಹರಿಗೆ ವ್ಯಕ್ತವಾಗಿ ಆವಾಸಸ್ಥಾನಗಳು. ಅವುಗಳು ಮೂರುಲೋಕಗಳಿಂದ ಹೊರಗೆ ಇರುತ್ತವೆ. ಅವುಗಳಲ್ಲಿ ಶ್ರೀಹರಿಯ ಮೂರುರೂಪಗಳು ಇರುತ್ತವೆ. ಮಕ್ಕಳಿಗೆ ದ್ರವ್ಯದಲ್ಲಿ ಭಾಗವನ್ನು ಕೊಡದಿರುವ ಉತ್ಕೃಷ್ಟಜ್ಞಾನವನ್ನು ಸಂಪಾದಿಸಿರುವ ನಾರಾಯಣನೇ ಸರ್ವೋತ್ತಮನೆಂದು ತಿಳಿದಿರುವ ದೇವತೆಗಳೇ ಆ ಲೋಕಗಳನ್ನು ಹೊಂದುತ್ತಾರೆ. ಶ್ರೀಹರಿಯೇ ರೂಪಾಂತರದಿಂದ ಇಂದ್ರಲೋಕಕ್ಕಿಂತಲೂ ಕೆಳಗಿರುವ ವೈಶ್ವಾನರಲೋಕದಲ್ಲಿದ್ದಾನೆ. ಇವನು ಜ್ಞಾನಿಗಳಾದ ಗೃಹಸ್ಥಾಶ್ರಮಿಗಳಿಂದ ಪೂಜ್ಯನಾಗುತ್ತಾ ಅವರಿಗೆ ಆಶ್ರಯನಾಗಿದ್ದಾನೆ. ಯಜ್ಞಪುಮಾನ್ ನಾಮಕನಾಗಿದ್ದಾನೆ. ಜ್ಞಾನಿಗಳಾದ ಸನ್ಯಾಸಿಗಳಿಗೆ ಧ್ರುವಲೋಕದಲ್ಲಿದ್ದ ಶ್ರೀಹರಿಯು, ಜ್ಞಾನಿಗಳಾದ ವಾನಪ್ರಸ್ಥರಿಗೆ ಮೇರುಪರ್ವತದ ಮಧ್ಯದಲ್ಲಿರತಕ್ಕ ಶ್ರೀಹರಿಯು, ಜ್ಞಾನಿಗಳಾದ ಬ್ರಹ್ಮಚಾರಿಗಳಿಗೆ ಸೂರ್ಯಮಂಡಲದಲ್ಲಿರುವ ಶ್ರೀಹರಿಯು ಆಶ್ರಯನಾಗಿದ್ದಾನೆ ಎಂದು ಬ್ರಹ್ಮಾಂಡಪುರಾಣದಲ್ಲಿದೆ. ॥ ೧೯ ॥

**ಸೃತೀ ವಿಚಕ್ರಮೇ ವಿಷ್ವಙ್ ಸಾಶನಾನಶನೇ ಉಭೇ ।**
**ಯದವಿದ್ಯಾ ಚ ವಿದ್ಯಾ ಚ ಪುರುಷಸ್ತೂಭಯಾಶ್ರಯಃ ॥ ೨೦ ॥**

**ವಿಷ್ವಙ್** ವಿವಿಧರೂಪಗಳಿಂದ ಅನಂತಾಸನಾದಿಸ್ಥಾನಗಳಲ್ಲಿ ಸಂಚರಿಸುವ, **ಪುರುಷಃ** ಶ್ರೀಪರಮಾತ್ಮನು, **ಯತ್** ಯೇ ಯಾರು, **ಅವಿದ್ಯಾ** ಹರಿಪೂಜಾರೂಪವಾದ ಕರ್ಮವು, **ವಿದ್ಯಾ** ತತ್ತ್ವಜ್ಞಾನವು, **ಉಭೇ** ಈ ಎರಡು, **ಸೃತೀ** ಊರ್ಧ್ವಲೋಕಕ್ಕೆ ಹೋಗಲು ಮಾರ್ಗಗಳು, **ಸಾಶನಾನಶನೇ** ಋಷಿಗಳ, ದೇವತೆಗಳ ಸಂಬಂಧಿಯಾದವುಗಳು, **ಪುರುಷಃ** ಪರಮಾತ್ಮನು, **ಉಭಯಾಶ್ರಯಃ** ಸಾಶನಾನಶನರೂಪವಾದ ಉಭಯವಿಧರಾದ ಅಧಿಕಾರಿಗಳಲ್ಲಿದ್ದು ತಾನೇ, **ವಿಚಕ್ರಮೇ** ವಿಶೇಷವಾಗಿ ಸಾಧನ ಮಾಡಿಸಿದನೆಂದರ್ಥ. ॥೨೦॥

ಈವರೆಗೆ, ಅನಂತಾಸನಾದಿಸ್ಥಾನಗಳಲ್ಲಿ ದೇವಾದಿಗಳಿಂದ ಪರಮಾತ್ಮನು ಪ್ರಾಪ್ಯನೆಂದು ಹೇಳಿ, ಈಗ ಅದಕ್ಕೆ ಸಾಧನವಾದ ಜ್ಞಾನ-ಕರ್ಮಗಳಿಗೆ ಅಧಿಕಾರಿಗಳಾದ ದೇವತೆಗಳಲ್ಲಿ ಇತರರಲ್ಲಿ ಇದ್ದು ಪರಮಾತ್ಮನೇ ಸಾಧನ ಮಾಡಿಸುವನು ಎಂದು ಹೇಳಲು ಹೊರಟ 'ತತೋ ವಿಷ್ವಙ್ ವ್ಯಕ್ರಾಮತ್' ಎಂಬ ಅರ್ಧ ಋಕ್ಕಿನ ಅರ್ಥವನ್ನು ಹೇಳುವುದಕ್ಕಾಗಿ

ಮೂಲದ 'ಸ್ಪತೀ ವಿಚಕ್ರಮೇ' ಎಂಬ ಶ್ಲೋಕವು ಪ್ರವೃತ್ತವಾಗಿದೆ. ಈ ಶ್ಲೋಕದಲ್ಲಿ ವಿಷ್ವಕ್, ಸಾಶನಾನಶನೇ, ಉಭಯಾಶ್ರಯಃ ಎಂಬ ಮೂರು ಪದಗಳ ತಾತ್ಪರ್ಯವನ್ನು ಪ್ರಮಾಣದಿಂದ ತಿಳಿಸುವರು-

**ತಾತ್ಪರ್ಯ- ತ್ರಿಪಾತ್ ಸ ಏವ ಭಗವಾನ್ ಸರ್ವಪ್ರಾಣಿಷು ಸಂಸ್ಥಿತಃ ।**
**ನಿರನ್ನೇಷು ಚ ವಿದ್ವತ್ಸು ತ್ರಿದಶೇಷ್ವಿತರೇಷು ಚ ॥ ಇತ್ಯಧ್ಯಾತ್ಮೇ**

ಅನಂತಾಸನ-ವೈಕುಂಠ-ನಾರಾಯಣ ಎಂಬ ಮೂರು ಸ್ವರೂಪಾಂಶ ಉಳ್ಳ ಶ್ರೀಹರಿಯು ಎಲ್ಲ ಪ್ರಾಣಿಗಳಲ್ಲಿ ಇರುತ್ತಾನೆ. ಹಸಿವೆ-ನೀರಡಿಕೆಗಳಿಲ್ಲದ ಜ್ಞಾನಿಗಳಾದ ದೇವತೆಗಳಲ್ಲಿ, ಹಸವೆ-ನೀರಡಿಕೆ ಇರುವ ಜ್ಞಾನಿಗಳಾದ ಋಷಿಗಳಲ್ಲಿ ಮತ್ತು ಮನುಷ್ಯರಲ್ಲಿ ಇರುತ್ತಾನೆ. ಎಂದು ಅಧ್ಯಾತ್ಮದಲ್ಲಿ ಹೇಳಿದೆ.

19-20 ನೆಯ ಶ್ಲೋಕಗಳಿಗೆ ಮೂಲ ಶ್ರುತ್ಯರ್ಥ ಹಾಗೂ ಕೆಲವು ವಿಶೇಷ ವಿಷಯಗಳು ಕೆಳಗಿನಂತಿವೆ.

19ನೆಯ ಶ್ಲೋಕದಲ್ಲಿ ಅನಂತಾಸನ-ಶ್ವೇತದ್ವೀಪಗಳಿಗೆ ತ್ರಿಲೋಕಬಹಿತ್ವ ಹೇಳಿದೆ. ಯದ್ಯಪಿ ಇವು ತ್ರಿಲೋಕದ ಹೊರಗಿಲ್ಲ, ಆದರೂ ಇಲ್ಲಿ ಸ್ವರ್ಗಲೋಕವೆಂದರೆ ಸಾಂಕಲ್ಪಿಕಸ್ವರ್ಗವನ್ನು ವಿವಕ್ಷಾ ಮಾಡಿದಾಗ ಅದಕ್ಕಿಂತ ಮೇಲೆ ಎಂಬ ಮಾತು ಸ್ವರ್ಗಸಮಾನವಾದ ಶ್ವೇತದ್ವೀಪಕ್ಕೆ ಹಾಗೂ ಬಹುಲಕ್ಷಯೋಜನ ಎತ್ತರವಿರುವ ಅನಂತಾಸನಕ್ಕೂ ಉಪಪನ್ನವಾಗುವುದು ಎಂದು ತಿಳಿಯಬೇಕು.

ಈ ಶ್ಲೋಕದ ಪೂರ್ವಾರ್ಧದಿಂದ-

**ತ್ರಿಪಾತ್** ಪುರುಷನ ಸ್ವರೂಪಭೂತವಾದ ಮೂರು ಅಂಶಗಳು, **ಊರ್ಧ್ವಃ** ಮೂರು ಲೋಕಗಳ ಮೇಲಿರುವ ಅನಂತಾಶನ-ಶ್ವೇತದ್ವೀಪ-ವೈಕುಂಠಗಳಲ್ಲಿದ್ದು, **ಉದೈತ್** ವ್ಯಕ್ತವಾಯಿತು ಎಂದರ್ಥ. 'ತ್ರಿಪಾದೂರ್ಧ್ವ ಉದೈತ್' ಎಂಬುದರ ಅರ್ಥ ಸೂಚಿತವಾಯಿತು.

**ಅಸ್ಯ** ಈ ಪುರುಷನ, **ಪುನಃ ಪಾದಃ** ಮತ್ತೊಂದು ಪಾದವು, **ಇಹ** ಮೂರು ಲೋಕಗಳ ಒಳಗೆ, **ಇಹ** ಇಂದ್ರಲೋಕಕ್ಕೆ ಹತ್ತಿರದಲ್ಲಿರುವ ವೈಶ್ವಾನರಲೋಕದಲ್ಲಿ, ಗೃಹಸ್ಥಾಶ್ರಮಿಗಳಿಂದ ಪೂಜ್ಯವೂ ಪ್ರಾಪ್ಯವೂ ಆಗಿದೆ. ಮತ್ತು **ಇಹ** ಧ್ರುವಲೋಕದಲ್ಲಿ ಯತಿಗಳಿಂದ ಮತ್ತು **ಇಹ** ಮೇರುಮಧ್ಯದಲ್ಲಿ ವಾನಪ್ರಸ್ಥರಿಂದ ಮತ್ತು **ಇಹ** ಆದಿತ್ಯಮಂಡಲದಲ್ಲಿ ಬ್ರಹ್ಮಚಾರಿಗಳಿಂದ ಪೂಜ್ಯವೂ ಪ್ರಾಪ್ಯವೂ ಆಯಿತು ಎಂಬ ಅರ್ಥವನ್ನು ತಿಳಿಸಿದಂತಾಯಿತು.

೨೦ನೆಯ ಶ್ಲೋಕದಲ್ಲಿಯ 'ತತೋ ವಿಷ್ವಙ್ ವ್ಯಕ್ರಾಮತ್ ಸಾಶನಾನಶನೇ ಅಭಿ' ಇದರ ಅರ್ಥನುವಾದ,

**ತತಃ** ಉಕ್ತಲೋಕಪ್ರಾಪ್ತಿಗಾಗಿ, **ವಿಷ್ವಙ್** ವಿವಿಧವಾಗಿರುವ **ತ್ರಿಪಾತ್** ಪುರುಷನು, **ಅಭಿ** ಎಲ್ಲ ಕಡೆಗೆ ಇರುವ, **ಸಾಶನಾನಶನೇ** ದೇವತೆಗಳು ಮತ್ತು ಇತರರ ಸಂಬಂಧಿಯಾದ ವಿದ್ಯಾ-ಕರ್ಮರೂಪವಾದ **ಸೃತೀ** ಮಾರ್ಗಗಳನ್ನು **ವ್ಯಕ್ರಾಮತ್** ಪ್ರೇರಕನಾಗಿದ್ದು ಅವನೇ ಮಾಡಿಸಿದನು ಎಂದರ್ಥ. ।।೨೦।।

**ತಸ್ಮಾದಂಡಾದ್ವಿರಾಡ್ ಜಜ್ಞೇ ಭೂತೇಂದ್ರಿಯಗುಣಾಶ್ರಯಃ ।**
**ತದ್ದ್ರವ್ಯಮತ್ಯಗಾದ್ವಿಶ್ವಂ ಗೋಭಿಃ ಸೂರ್ಯ ಇವಾಶ್ರಯಮ್** ।। ೨೧ ।।

**ತಸ್ಮಾತ್** ಉಕ್ತವಾದ ಮಾಹಾತ್ಮ್ಯದಿಂದ ಕೂಡಿದ ಶ್ರೀಹರಿಯಿಂದ, **ಅಂಡಮ್** ಬ್ರಹ್ಮಾಂಡವು, **ಜಜ್ಞೇ** ಹುಟ್ಟಿತು, **ಅಂಡಾತ್** ಬ್ರಹ್ಮಾಂಡವನ್ನು ವ್ಯಾಪಿಸಿ, **ವಿರಾಟ್ ಜಜ್ಞೇ** ವಿರಾಟ್ ನಾಮಕನಾದ ಬ್ರಹ್ಮನು ಜನಿಸಿದನು. ಬ್ರಹ್ಮಾಂಡದಿಂದ ಜನಿಸಿದ ವಿರಾಜನು ಮತ್ತೊಂದು ರೂಪದಿಂದ, **ಭೂತೇಂದ್ರಿಯಗುಣಾಶ್ರಯಃ** ಪಂಚಭೂತಗಳು, ಏಕಾದಶಇಂದ್ರಿಯಗಳು, ಸತ್ತ್ವಾದಿಗುಣಾತ್ಮಕಪದ್ಮವನ್ನು ಆಶ್ರಯಿಸಿದವನಾಗಿ, **ಜಜ್ಞೇ** ಜನಿಸಿದನು. **ತಸ್ಮಾತ್** ಆ ಬ್ರಹ್ಮನಿಗಿಂತ ಅಪ್ರಾಕೃತ ದಿವ್ಯ ವಿಗ್ರಹ ಉಳ್ಳ **ಪುರುಷಃ** ಶ್ರೀಹರಿಯು, **ಅಧಿಕಃ** ಅಧಿಕನು. ಎಂದು ಶ್ರುತ್ಯನುಸಾರ ಶೇಷಪೂರಣ ಮಾಡಬೇಕು.

ಇದಕ್ಕೆ ಕಾರಣ **ಯತಃ** ಯಾವ ಕಾರಣ, ವಿರಾಜನು ಭೂತೇಂದ್ರಿಯಗುಣಾತ್ಮಕ-ದೇಹಾಶ್ರಿತನೋ ಅರ್ಥಾತ್ ಅವುಗಳಿಂದ ಬದ್ಧನೋ, **ಅತಃ** ಅದ್ದರಿಂದ ಎಂದೂ ಯೋಜಿಸಬೇಕು.

**ಸಃ** ಉಭಯಾತ್ಮಕ ಬ್ರಹ್ಮನು, **ಆಶ್ರಯಂ** ತನಗೆ ಆಶ್ರಯವಾದ, **ತದ್ದ್ರವ್ಯಂ** ಬ್ರಹ್ಮಾಂಡವನ್ನು ಪದ್ಮವನ್ನು **ವಿಶ್ವಂ** ಭೂಮ್ಯಾದಿ ಎಲ್ಲ ಲೋಕವನ್ನು ಅದಕ್ಕಭಿಮಾನಿಗಳಾದ ರುದ್ರಾದಿದೇವತೆಗಳನ್ನು **ಸೂರ್ಯಃ** ಸೂರ್ಯನು, **ಆಶ್ರಯಂ** ತನಗೆ ಆಶ್ರಯವಾದ ಅಂತರಿಕ್ಷವನ್ನು ಅದರ ಅಭಿಮಾನಿಯನ್ನು **ಗೋಭಿಃ** ತನ್ನ ಕಿರಣಗಳಿಂದ, **ಇವ** ಮೀರಿಸುವಂತೆ, **ಗೋಭಿಃ** ಜ್ಞಾನರಶ್ಮಿಗಳಿಂದ, **ಅತ್ಯಗಾತ್** ಮೀರಿದನು ಉತ್ಕೃಷ್ಟನಾದನು ಎಂದರ್ಥ.

ಇದರಿಂದ 'ತಸ್ಮಾದ್ವಿರಾಡಜಾಯತ ವಿರಾಜೋ ಅಧಿ ಪುರುಷಃ ಸ ಜಾತೋ ಅತ್ಯರಿಚ್ಯತ ಪಶ್ಚಾದ್ಭೂಮಿಮಥೋ ಪುರಃ' ಎಂಬ ಶ್ರುತಿಯನ್ನು ಈ ರೀತಿ ಯೊಜಿಸಿದಂತಾಯಿತು.

**ತಸ್ಮಾತ್** ಶ್ರೀಹರಿಯಿಂದ, **ವಿರಾಟ್** ವಿಶೇಷವಾಗಿ ರಾಜಿಸುವ ಅಂಡವು, **ಅಜಾಯತ** ಜನಿಸಿತು, **ಅಂಡಾತ್** ಅಂಡವನ್ನು ವ್ಯಾಪಿಸಿ ವಿರಾಟ್ ನಾಮಕ ಬ್ರಹ್ಮನು, **ಅಜಾಯತ** ಜನಿಸಿದನು, **ತಸ್ಮಾತ್** ಪುರುಷನಿಂದ, **ವಿರಾಟ್** ಬ್ರಹ್ಮನು ಮತ್ತೊಂದು ರೂಪದಿಂದ, **ಅಜಾಯತ** ಜನಿಸಿದನು ಈ ವಿರಾಜನು ಭೂತೇಂದ್ರಿಯಗುಣಬದ್ಧನಾದ್ದರಿಂದ, **ವಿರಾಜಃ** ವಿರಾಜನಿಗಿಂತ, **ಅಧಿಪೂರುಷಃ** ಅಪ್ರಾಕೃತದೇಹ ಉಳ್ಳವನಾದ್ದರಿಂದ ಶ್ರೀಹರಿಯು ಅಧಿಕನು, **ಸಃ** ಉಭಯಾತ್ಮಕ ಬ್ರಹ್ಮನು, **ಯದಾ ಜಾತಃ** ಯಾವಾಗ ಜನಿಸಿದನೋ, **ತದೈವ** ಆಗಲೇ **ಪಶ್ಚಾತ್** ನಂತರ ಜನಿಸುವ, **ಭೂಮಿಂ** ಜಗತ್ತನ್ನು, **ಪುನಃ (ರಃ)** ಪೂರ್ವಜಾತ ಬ್ರಹ್ಮಾಂಡವನ್ನು, ಪದ್ಮವನ್ನು ಅವುಗಳ ಅಭಿಮಾನಿಗಳನ್ನು, **ಅತ್ಯರಿಚ್ಯತ** ಮೀರಿದನು ಶ್ರೇಷ್ಠನಾದನೆಂದರ್ಥ.

21ನೆಯ ಶ್ಲೋಕವು ಸರಿಯಾಗಿ ಅರ್ಥವಾಗದೇ ಇದ್ದದ್ದರಿಂದ, ವಿರುದ್ಧ ಅರ್ಥವಾಗುವುದರಿಂದಲೂ ಸರಿಯಾದ ಅರ್ಥವನ್ನು ಪ್ರಮಾಣದಿಂದ ಹೇಳುವರು-

**ತಾತ್ಪರ್ಯ- ತಸ್ಮಾದ್ಧರೇರಂಡಮಭೂದಂಡಾದಪಿ ಚತುರ್ಮುಖಃ ।**
**ಸ ವಿರಾಣ್ಣಾಮಕಸ್ತಸ್ಮಾದಧಿಕೋ ಹರಿರೇವ ತು ॥**

**ಅಂಡಾಜ್ಜಾತಸ್ಯ ತಸ್ಯಾಽನ್ಯದ್ರೂಪಂ ಪದ್ಮಾದಭೂದ್ಧರೇಃ ।**
**ಯದೋಭಯಾತ್ಮಕೋ ಜಜ್ಞೇ ಬ್ರಹ್ಮಾ ಲೋಕಪಿತಾಮಹಃ ।**
**ತದೈವ ಸೋಽತಿರಿಕ್ತೋಽಭೂಚ್ಚರ್ವಪೂರ್ವಾಪರಾಜ್ಜನಾತ್ ॥**

ಆ ಶ್ರೀಹರಿಯಿಂದ ಬ್ರಹ್ಮಾಂಡವು ಹುಟ್ಟಿತು. ಆ ಬ್ರಹ್ಮಾಂಡದಿಂದ ಭೂತಾದ್ಯಾತ್ಮಕ ದೇಹ ಉಳ್ಳ ಚತುರ್ಮುಖನು ಹುಟ್ಟಿದನು. ಆ ಚತುರ್ಮುಖನಿಗಿಂತ ಶ್ರೀಹರಿಯು ಸರ್ವೋತ್ತಮನು.

ಬ್ರಹ್ಮಾಂಡದಿಂದ ಹುಟ್ಟಿದ ಚತುರ್ಮುಖನು ಶ್ರೀಹರಿಯ ಪದ್ಮದಿಂದ ಇನ್ನೊಂದು ರೂಪದಿಂದ ಹುಟ್ಟಿದನು. ಬ್ರಹ್ಮಾಂಡದಿಂದ (ಅದನ್ನು ವ್ಯಾಪಿಸಿ) ಮತ್ತು ಬ್ರಹ್ಮಾಂಡದ ಒಳಗಿರುವ ಶ್ರೀಹರಿಯ ನಾಭಿಪದ್ಮದಿಂದ ಹುಟ್ಟಿದ ಪ್ರಯುಕ್ತ ಎರಡು ರೂಪಗಳುಳ್ಳ ಲೋಕಕ್ಕೆ ಪಿತಾಮಹನಾದ ಚತುರ್ಮುಖನು ಯಾವಾಗ ಜನಿಸಿದನೋ ಆವಾಗಲೇ ರುದ್ರಮೊದಲಾದ ಎಲ್ಲ ದೇವತೆಗಳಿಂದಲೂ ಶ್ರೇಷ್ಠನಾದನು. ॥೨೦॥

**ಯದಾಸ್ಯ ನಾಭ್ಯಾನ್ನಲಿನಾದಹಮಾಸಂ ಮಹಾತ್ಮನಃ ।**
**ನಾವಿಂದಂ ಯಜ್ಞಸಂಭಾರಾನ್ ಪುರುಷಾವಯವಾನೃತೇ ॥ ೨೨ ॥**

**ಅಸ್ಯ** ವಿರಾಟ್‌ಕಲ್ಪ ಪ್ರಲಯದಲ್ಲಿ ಮಲಗಿರುವ ಶ್ರೀಹರಿಯ, **ನಾಭ್ಯಾತ್** ನಾಭಿಯಲ್ಲಿ ಜನಿಸಿದ, **ನಲಿನಾತ್** ಕಮಲದಿಂದ, **ಯದಾ** ಯಾವಾಗ, **ಅಹಂ** ನಾನು, **ಆಸಂ** ಜನಿಸಿದೆನೋ, **ತದಾ** ಆಗ, **ಪುರುಷಾವಯವಾನ್ ಋತೇ** ಶ್ರೀಹರಿಯ ಅವಯವಗಳನ್ನು ಬಿಟ್ಟು, **ಯಜ್ಞಸಂಭಾರಾನ್** ಯಜ್ಞಕ್ಕೆ ಬೇಕಾಗುವ ಸಾಧನಗಳನ್ನು, **ನ ಅವಿಂದಂ** ಹೊಂದಲಿಲ್ಲ (ಇದರಿಂದ ಪುರುಷಾವಯವಗಳೇ ಯಜ್ಞಸಾಧನಗಳಿಗೆ ಕಾರಣವೆಂದು ಹೇಳಿದಂತಾಯಿತು. ॥ ೨೨ ॥

**ತೇಷು ಯಜ್ಞಾಶ್ಚ ಪಶವಃ ಸವನಸ್ಪತಯಃ ಕುಶಾಃ ।**
**ಇದಂ ಚ ದೇವಯಜನಂ ಕಾಲಶ್ಚೋರುಗುಣಾನ್ವಿತಃ ॥ ೨೩ ॥**

ಕಾಲಶ್ಚಾತ್ಮಗುಣಾನ್ವಿತಃ ಎಂಬುದು ಪಾಠಾಂತರ.

**ತೇಷು** ಯಜ್ಞಸಾಧನೆಗಳ ಮಧ್ಯದಲ್ಲಿ, **ಯಜ್ಞಾಃ** ಪ್ರಯಾಜಾದಿಗಳು, **ಪಶವಃ** ಅಜಾ(ಆಡು)ದಿಗಳು, **ಸವನಸ್ಪತಯಃ** ಅಶ್ವತ್ಥಾದಿಗಳಿಂದ ಸಹಿತಗಳಾದ, **ಕುಶಾಃ** ದರ್ಭಗಳು, **ಇದಂ ದೇವಯಜನಂ** ಈ ಯಜ್ಞೋಪಯುಕ್ತ ಸ್ಥಾನವು, **ಕಾಲಃ** ವಸಂತಾದಿಕಾಲಗಳು, **ಆತ್ಮಗುಣಾನ್ವಿತಾಃ** ತನ್ನ ಧರ್ಮಾದಿಗಳಿಂದ ಕೂಡಿದ, **ಉರುಗುಣಾನ್ವಿತಃ** ಶ್ರೇಷ್ಠವಾದ ಘರ್ಮ (ಬಿಸಿ) ದಿಂದ ಕೂಡಿದ ಎಂದರ್ಥ. ॥೨೩॥

**ವಸೂನ್ಯೋಷಧಯಃ ಸ್ನೇಹಾ ರಸಲೋಹಮೃದೋ ಜಲಮ್ ।**
**ಋಚೋ ಯಜೂಂಷಿ ಸಾಮಾನಿ ಚಾತುರ್ಹೋತ್ರಂ ಚ ಸತ್ತಮ ॥ ೨೪ ॥**

**ಹೇ ಸತ್ತಮ** ಹೇ ಸಜ್ಜನನೇ, **ವಸೂನಿ** ಧನಗಳು, **ಓಷಧಯಃ** ಭತ್ತ-ಜವಿಗೋಧೆ ಮುಂತಾದವು, **ಸ್ನೇಹಾಃ** ತುಪ್ಪ ಮುಂತಾದವು, **ರಸಾಃ** (ಮಧುರಾದಿಗಳು) ಹಾಲು ಬೆಲ್ಲ ಮುಂತಾದವು, **ಲೋಹಃ** ಕಬ್ಬಿಣ ಮುಂತಾದವು, **ಮೃದಃ** ಇಟ್ಟಿಗೆ ಮುಂತಾದವುಗಳಿಗೆ ಬೇಕಾದ ಮಣ್ಣು, **ಜಲಮ್** ಗಂಗಾದಿ ನೀರು, **ಋಚಃ** ಋಗ್ವೇದ, **ಯಜೂಂಷಿ** ಯಜುರ್ವೇದ, **ಸಾಮಾನಿ** ಸಾಮವೇದ, **ಚಾತುರ್ಹೋತ್ರಂ ಚ** ಹೋತೃ, ಪೋತೃ, ಉದ್ಗಾತೃ, ಪ್ರತಿಹರ್ತೃ ಎಂಬ ನಾಲ್ಕು ಋತ್ವಿಜರಿಂದ ಮಾಡಲ್ಪಡುವ ಕರ್ಮವು, ॥೨೪॥

**ನಾಮಧೇಯಾನಿ ಮಂತ್ರಾಶ್ಚ ದಕ್ಷಿಣಾಶ್ಚ ವ್ರತಾನಿ ಚ ।**
**ದೇವಾತಾನುಕ್ರಮಃ ಕಲ್ಪಃ ಸಂಕಲ್ಪಃ ಸೂತ್ರಮೇವ ಚ ॥ ೨೫ ॥**

**ಗತಯೋ ಮತಯಃ ಶ್ರದ್ಧಾ ಪ್ರಾಯಶ್ಚಿತ್ತಂ ಸಮರ್ಪಣಮ್ ।**
**ಪುರುಷಾವಯವೈರೇತೈಃ ಸಂಭಾರಾಃ ಸಂಭೃತಾ ಮಯಾ ॥ ೨೬ ॥**

**ಇತಿ ಸಂಭೃತಸಂಭಾರಃ ಪುರುಷಾವಯವೈರಹಮ್ ।**
**ತಮೇವ ಪುರುಷಂ ಯಜ್ಞಂ ತೇನೈವಾಯಜಮೀಶ್ವರಮ್ ॥ ೨೭ ॥**

**ನಾಮಧೇಯಾನಿ** ಜ್ಯೋತಿಷ್ಟೋಮ ಮುಂತಾದ ಯಜ್ಞಗಳ ಹೆಸರುಗಳು, ಅಥವಾ ಇಂದ್ರಾದಿ ದೇವತಾನಾಮಗಳು, **ಮಂತ್ರಾಃ** ಬೀಜಾತ್ಮಕವಾದ ಮಾಲಾತ್ಮಕವಾದ ಮಂತ್ರಗಳು (ಋಗಾದಿಗಳನ್ನು ಹಿಂದೆ ಹೇಳಿದೆ) ೩೦ ವರ್ಣಕ್ಕಿಂತ ಕಡಿಮೆ ವರ್ಣವಿರುವ ಮಂತ್ರಗಳು ಬೀಜಾತ್ಮಕಗಳು, ಅದಕ್ಕೂ ಹೇಚ್ಚಿನ ವರ್ಣ ಉಳ್ಳವುಗಳು ಮಾಲಾತ್ಮಕಗಳು ಎಂದು ತಿಳಿಯಬೇಕು. **ದಕ್ಷಿಣಾಃ** ದಕ್ಷಿಣೆಗಳು, **ವ್ರತಾನಿ** ಬ್ರಹ್ಮಚರ್ಯ ಮುಂತಾದವು, **ದೇವಾತಾನುಕ್ರಮಃ** ಇಂದ್ರಾದಿಶಬ್ದವಾಚ್ಯರಾದ ದೇವತೆಗಳ ತಾರತಮ್ಯವು, ಅಥವಾ ಪೌರ್ವಾಪರ್ಯದಿಂದ ನಿರ್ದೇಶ ಮಾಡುವುದು, **ಕಲ್ಪಃ** ಪ್ರಯೋಗವಿಧಿಯನ್ನು ತಿಳಿಸುವ ಆಶ್ವಲಾಯನಾದಿ ಸೂತ್ರಗಂಥವು, **ಸಂಕಲ್ಪಃ** ನಾನು ಇದರಿಂದ ಯಜ್ಞ ಮಾಡುವೆನು ಎಂದು ಮನಸ್ಸು ಮಾತುಗಳಿಂದ ಅನುಸಂಧಾನ ಮಾಡುವುದು, ಹೇಳುವುದು, **ಸೂತ್ರಂ** ವಿವಿಧ ಮೀಮಾಂಸಾಗಳು(ಬ್ರಹ್ಮಮಾಂಸಾ-ಕರ್ಮಮಿಂಮಾಸಾ) ದೇವತಾತಾರತಮ್ಯಾಂತಗತ್ವೇನ ಹರ್ಯನುಸಂಧಾನಪೂರ್ವಕ ಕರ್ಮಸ್ವರೂಪಜ್ಞಾನವೂ ಯಾಗಾಂಗವಾಗಿದೆ. ಆದ್ದರಿಂದ ಮೀಂಮಾಸಾ ಬೇಕು. **ಗತಯಃ** ಸ್ವರ್ಗಾದಿಫಲಗಳು, **ಮತಯಃ** ದೇವತಾಧ್ಯಾನಾದಿಗಳು, **ಶ್ರದ್ಧಾ** ಇಲ್ಲಿ ಹೇಳಿದ್ದು ಸತ್ಯ ಇದರಿಂದ ನನಗೆ ಪ್ರಯೋಜನವಿದೆ ಎಂದು ತಿಳಿಯುವ ಆಸ್ತಿಕ್ಯ ಬುದ್ಧಿಯು, **ಪ್ರಾಯಶ್ಚಿತ್ತಂ** ಯಜ್ಞಗಳಲ್ಲಿ ಬರುವ ವಿಘ್ನಪರಿಹಾರಕವಾಗಿ ಹೇಳಿದ, ಫಲಸಾಧನತ್ವ ತಂದು ಕೊಡುವ ಕರ್ಮ, **ಸಮರ್ಪಣಮ್** 'ನಾಹಂ ಕರ್ತಾ ಹರಿಃ ಕರ್ತಾ' ಮುಂತಾದ ಅನುಸಂಧಾನಪೂರ್ವಕ ಹರಿಪ್ರೀತಿ ಪ್ರಾರ್ಥನೆಯು, **ಏತೈಃ ಪುರುಷಾವಯವೈಃ** ಈ ಶ್ರೀಹರಿಯ ಅವಯವಗಳಿಂದ, **ಮಯಾ** ನನ್ನಿಂದ, **ಸಂಭಾರಾಃ** ಸಾಧನೆಗಳು, **ಸಂಭೃತಾಃ** ಸಂಪಾದಿಸಲ್ಪಟ್ಟಿವೆ, **ಪುರುಷಾವಯವೈಃ** ಶ್ರೀಹರಿಯ ಅವಯವಗಳಿಂದ, **ಇತಿ ಸಂಭೃತಸಂಭಾರಃ** ಇವೇ ಮೊದಲಾದ ಯಜ್ಞಸಾಧನಗಳನ್ನು ಸಂಪಾದಿಸಿದ, **ಅಹಂ**

**ಯದಾಸ್ಯ ನಾಭ್ಯಾನ್ನಲಿನಾದಹಮಾಸಂ ಮಹಾತ್ಮನಃ ।**
**ನಾವಿಂದಂ ಯಜ್ಞಸಂಭಾರಾನ್ ಪುರುಷಾವಯವಾನೃತೇ ॥ ೨೨ ॥**

**ಅಸ್ಯ** ವಿರಾಟ್‌ಕಲ್ಪ ಪ್ರಲಯದಲ್ಲಿ ಮಲಗಿರುವ ಶ್ರೀಹರಿಯ, **ನಾಭ್ಯಾತ್** ನಾಭಿಯಲ್ಲಿ ಜನಿಸಿದ, **ನಲಿನಾತ್** ಕಮಲದಿಂದ, **ಯದಾ** ಯಾವಾಗ, **ಅಹಂ** ನಾನು, **ಆಸಂ** ಜನಿಸಿದೆನೋ, **ತದಾ** ಆಗ, **ಪುರುಷಾವಯವಾನ್ ಋತೇ** ಶ್ರೀಹರಿಯ ಅವಯವಗಳನ್ನು ಬಿಟ್ಟು, **ಯಜ್ಞಸಂಭಾರಾನ್** ಯಜ್ಞಕ್ಕೆ ಬೇಕಾಗುವ ಸಾಧನಗಳನ್ನು, **ನ ಅವಿಂದಂ** ಹೊಂದಲಿಲ್ಲ (ಇದರಿಂದ ಪುರುಷಾವಯವಗಳೇ ಯಜ್ಞಸಾಧನಗಳಿಗೆ ಕಾರಣವೆಂದು ಹೇಳಿದಂತಾಯಿತು. ॥ ೨೨ ॥

**ತೇಷು ಯಜ್ಞಾಶ್ಚ ಪಶವಃ ಸವನಸ್ಪತಯಃ ಕುಶಾಃ ।**
**ಇದಂ ಚ ದೇವಯಜನಂ ಕಾಲಶ್ಚೋರುಗುಣಾನ್ವಿತಃ ॥ ೨೩ ॥**

ಕಾಲಶ್ಚಾತ್ಮಗುಣಾನ್ವಿತಃ ಎಂಬುದು ಪಾಠಾಂತರ.

**ತೇಷು** ಯಜ್ಞಸಾಧನೆಗಳ ಮಧ್ಯದಲ್ಲಿ, **ಯಜ್ಞಾಃ** ಪ್ರಯಾಜಾದಿಗಳು, **ಪಶವಃ** ಅಜಾ(ಆಡು)ದಿಗಳು, **ಸವನಸ್ಪತಯಃ** ಅಶ್ವತ್ಥಾದಿಗಳಿಂದ ಸಹಿತಗಳಾದ, **ಕುಶಾಃ** ದರ್ಭಗಳು, **ಇದಂ ದೇವಯಜನಂ** ಈ ಯಜ್ಞೋಪಯುಕ್ತ ಸ್ಥಾನವು, **ಕಾಲಃ** ವಸಂತಾದಿಕಾಲಗಳು, **ಆತ್ಮಗುಣಾನ್ವಿತಾಃ** ತನ್ನ ಧರ್ಮಾದಿಗಳಿಂದ ಕೂಡಿದ, **ಉರುಗುಣಾನ್ವಿತಃ** ಶ್ರೇಷ್ಠವಾದ ಘರ್ಮ (ಬಿಸಿ) ದಿಂದ ಕೂಡಿದ ಎಂದರ್ಥ. ॥೨೩॥

**ವಸೂನ್ಯೋಷಧಯಃ ಸ್ನೇಹಾ ರಸಲೋಹಮೃದೋ ಜಲಮ್ ।**
**ಋಚೋ ಯಜೂಂಷಿ ಸಾಮಾನಿ ಚಾತುರ್ಹೋತ್ರಂ ಚ ಸತ್ತಮ ॥ ೨೪ ॥**

**ಹೇ ಸತ್ತಮ** ಹೇ ಸಜ್ಜನನೇ, **ವಸೂನಿ** ಧನಗಳು, **ಓಷಧಯಃ** ಭತ್ತ-ಜವಿಗೋಧೆ ಮುಂತಾದವು, **ಸ್ನೇಹಾಃ** ತುಪ್ಪ ಮುಂತಾದವು, **ರಸಾಃ** (ಮಧುರಾದಿಗಳು) ಹಾಲು ಬೆಲ್ಲ ಮುಂತಾದವು, **ಲೋಹಃ** ಕಬ್ಬಿಣ ಮುಂತಾದವು, **ಮೃದಃ** ಇಟ್ಟಿಗೆ ಮುಂತಾದವುಗಳಿಗೆ ಬೇಕಾದ ಮಣ್ಣು, **ಜಲಮ್** ಗಂಗಾದಿ ನೀರು, **ಋಚಃ** ಋಗ್ವೇದ, **ಯಜೂಂಷಿ** ಯಜುರ್ವೇದ, **ಸಾಮಾನಿ** ಸಾಮವೇದ, **ಚಾತುರ್ಹೋತ್ರಂ ಚ** ಹೋತೃ, ಪೋತೃ, ಉದ್ಗಾತೃ, ಪ್ರತಿಹರ್ತೃ ಎಂಬ ನಾಲ್ಕು ಋತ್ವಿಜರಿಂದ ಮಾಡಲ್ಪಡುವ ಕರ್ಮವು, ॥೨೪॥

**ನಾಮಧೇಯಾನಿ ಮಂತ್ರಾಶ್ಚ ದಕ್ಷಿಣಾಶ್ಚ ವ್ರತಾನಿ ಚ ।**
**ದೇವಾತಾನುಕ್ರಮಃ ಕಲ್ಪಃ ಸಂಕಲ್ಪಃ ಸೂತ್ರಮೇವ ಚ ॥ ೨೫ ॥**

**ಗತಯೋ ಮತಯಃ ಶ್ರದ್ಧಾ ಪ್ರಾಯಶ್ಚಿತ್ತಂ ಸಮರ್ಪಣಮ್ ।**
**ಪುರುಷಾವಯವೈರೇತೈಃ ಸಂಭಾರಾಃ ಸಂಭೃತಾ ಮಯಾ ॥ ೨೬ ॥**

**ಇತಿ ಸಂಭೃತಸಂಭಾರಃ ಪುರುಷಾವಯವೈರಹಮ್ ।**
**ತಮೇವ ಪುರುಷಂ ಯಜ್ಞಂ ತೇನೈವಾಯಜಮೀಶ್ವರಮ್ ॥ ೨೭ ॥**

**ನಾಮಧೇಯಾನಿ** ಜ್ಯೋತಿಷ್ಟೋಮ ಮುಂತಾದ ಯಜ್ಞಗಳ ಹೆಸರುಗಳು, ಅಥವಾ ಇಂದ್ರಾದಿ ದೇವತಾನಾಮಗಳು, **ಮಂತ್ರಾಃ** ಬೀಜಾತ್ಮಕವಾದ ಮಾಲಾತ್ಮಕವಾದ ಮಂತ್ರಗಳು (ಋಗಾದಿಗಳನ್ನು ಹಿಂದೆ ಹೇಳಿದೆ) ೩೦ ವರ್ಣಕ್ಕಿಂತ ಕಡಿಮೆ ವರ್ಣವಿರುವ ಮಂತ್ರಗಳು ಬೀಜಾತ್ಮಕಗಳು, ಅದಕ್ಕೂ ಹೇಚ್ಚಿನ ವರ್ಣ ಉಳ್ಳವುಗಳು ಮಾಲಾತ್ಮಕಗಳು ಎಂದು ತಿಳಿಯಬೇಕು. **ದಕ್ಷಿಣಾಃ** ದಕ್ಷಿಣೆಗಳು, **ವ್ರತಾನಿ** ಬ್ರಹ್ಮಚರ್ಯ ಮುಂತಾದವು, **ದೇವಾತಾನುಕ್ರಮಃ** ಇಂದ್ರಾದಿಶಬ್ದವಾಚ್ಯರಾದ ದೇವತೆಗಳ ತಾರತಮ್ಯವು, ಅಥವಾ ಪೌರ್ವಾಪರ್ಯದಿಂದ ನಿರ್ದೇಶ ಮಾಡುವುದು, **ಕಲ್ಪಃ** ಪ್ರಯೋಗವಿಧಿಯನ್ನು ತಿಳಿಸುವ ಆಶ್ವಲಾಯನಾದಿ ಸೂತ್ರಗಂಥವು, **ಸಂಕಲ್ಪಃ** ನಾನು ಇದರಿಂದ ಯಜ್ಞ ಮಾಡುವೆನು ಎಂದು ಮನಸ್ಸು ಮಾತುಗಳಿಂದ ಅನುಸಂಧಾನ ಮಾಡುವುದು, ಹೇಳುವುದು, **ಸೂತ್ರಂ** ವಿವಿಧ ಮೀಮಾಂಸಾಗಳು(ಬ್ರಹ್ಮಮಾಂಸಾ-ಕರ್ಮಮಿಂಮಾಸಾ) ದೇವತಾತಾರತಮ್ಯಾಂತಗತ್ವೇನ ಹರ್ಯನುಸಂಧಾನಪೂರ್ವಕ ಕರ್ಮಸ್ವರೂಪಜ್ಞಾನವೂ ಯಾಗಾಂಗವಾಗಿದೆ. ಆದ್ದರಿಂದ ಮೀಂಮಾಸಾ ಬೇಕು. **ಗತಯಃ** ಸ್ವರ್ಗಾದಿಫಲಗಳು, **ಮತಯಃ** ದೇವತಾಧ್ಯಾನಾದಿಗಳು, **ಶ್ರದ್ಧಾ** ಇಲ್ಲಿ ಹೇಳಿದ್ದು ಸತ್ಯ ಇದರಿಂದ ನನಗೆ ಪ್ರಯೋಜನವಿದೆ ಎಂದು ತಿಳಿಯುವ ಆಸ್ತಿಕ್ಯ ಬುದ್ಧಿಯು, **ಪ್ರಾಯಶ್ಚಿತ್ತಂ** ಯಜ್ಞಗಳಲ್ಲಿ ಬರುವ ವಿಘ್ನಪರಿಹಾರಕವಾಗಿ ಹೇಳಿದ, ಫಲಸಾಧನತ್ವ ತಂದು ಕೊಡುವ ಕರ್ಮ, **ಸಮರ್ಪಣಮ್** 'ನಾಹಂ ಕರ್ತಾ ಹರಿಃ ಕರ್ತಾ' ಮುಂತಾದ ಅನುಸಂಧಾನಪೂರ್ವಕ ಹರಿಪ್ರೀತಿ ಪ್ರಾರ್ಥನೆಯು, **ಏತೈಃ ಪುರುಷಾವಯವೈಃ** ಈ ಶ್ರೀಹರಿಯ ಅವಯವಗಳಿಂದ, **ಮಯಾ** ನನ್ನಿಂದ, **ಸಂಭಾರಾಃ** ಸಾಧನೆಗಳು, **ಸಂಭೃತಾಃ** ಸಂಪಾದಿಸಲ್ಪಟ್ಟಿವೆ, **ಪುರುಷಾವಯವೈಃ** ಶ್ರೀಹರಿಯ ಅವಯವಗಳಿಂದ, **ಇತಿ ಸಂಭೃತಸಂಭಾರಃ** ಇವೇ ಮೊದಲಾದ ಯಜ್ಞಸಾಧನಗಳನ್ನು ಸಂಪಾದಿಸಿದ, **ಅಹಂ**

**ಯದಾಸ್ಯ ನಾಭ್ಯಾನ್ನಲಿನಾದಹಮಾಸಂ ಮಹಾತ್ಮನಃ ।**
**ನಾವಿಂದಂ ಯಜ್ಞಸಂಭಾರಾನ್ ಪುರುಷಾವಯವಾನೃತೇ ॥ ೨೨ ॥**

**ಅಸ್ಯ** ವಿರಾಟ್‌ಕಲ್ಪ ಪ್ರಲಯದಲ್ಲಿ ಮಲಗಿರುವ ಶ್ರೀಹರಿಯ, **ನಾಭ್ಯಾತ್** ನಾಭಿಯಲ್ಲಿ ಜನಿಸಿದ, **ನಲಿನಾತ್** ಕಮಲದಿಂದ, **ಯದಾ** ಯಾವಾಗ, **ಅಹಂ** ನಾನು, **ಆಸಂ** ಜನಿಸಿದೆನೋ, **ತದಾ** ಆಗ, **ಪುರುಷಾವಯವಾನ್ ಋತೇ** ಶ್ರೀಹರಿಯ ಅವಯವಗಳನ್ನು ಬಿಟ್ಟು, **ಯಜ್ಞಸಂಭಾರಾನ್** ಯಜ್ಞಕ್ಕೆ ಬೇಕಾಗುವ ಸಾಧನಗಳನ್ನು, **ನ ಅವಿಂದಂ** ಹೊಂದಲಿಲ್ಲ (ಇದರಿಂದ ಪುರುಷಾವಯವಗಳೇ ಯಜ್ಞಸಾಧನಗಳಿಗೆ ಕಾರಣವೆಂದು ಹೇಳಿದಂತಾಯಿತು. ।। ೨೨ ।।

**ತೇಷು ಯಜ್ಞಾಶ್ಚ ಪಶವಃ ಸವನಸ್ಪತಯಃ ಕುಶಾಃ ।**
**ಇದಂ ಚ ದೇವಯಜನಂ ಕಾಲಶ್ಚೋರುಗುಣಾನ್ವಿತಃ ॥ ೨೩ ॥**

ಕಾಲಶ್ಚಾತ್ಮಗುಣಾನ್ವಿತಃ ಎಂಬುದು ಪಾಠಾಂತರ.

**ತೇಷು** ಯಜ್ಞಸಾಧನೆಗಳ ಮಧ್ಯದಲ್ಲಿ, **ಯಜ್ಞಾಃ** ಪ್ರಯಾಜಾದಿಗಳು, **ಪಶವಃ** ಅಜಾ(ಆಡು)ದಿಗಳು, **ಸವನಸ್ಪತಯಃ** ಅಶ್ವತ್ಥಾದಿಗಳಿಂದ ಸಹಿತಗಳಾದ, **ಕುಶಾಃ** ದರ್ಭಗಳು, **ಇದಂ ದೇವಯಜನಂ** ಈ ಯಜ್ಞೋಪಯುಕ್ತ ಸ್ಥಾನವು, **ಕಾಲಃ** ವಸಂತಾದಿಕಾಲಗಳು, **ಆತ್ಮಗುಣಾನ್ವಿತಾಃ** ತನ್ನ ಧರ್ಮಾದಿಗಳಿಂದ ಕೂಡಿದ, **ಉರುಗುಣಾನ್ವಿತಃ** ಶ್ರೇಷ್ಠವಾದ ಘರ್ಮ (ಬಿಸಿ) ದಿಂದ ಕೂಡಿದ ಎಂದರ್ಥ. ।।೨೩।।

**ವಸೂನ್ಯೋಷಧಯಃ ಸ್ನೇಹಾ ರಸಲೋಹಮೃದೋ ಜಲಮ್ ।**
**ಋಚೋ ಯಜೂಂಷಿ ಸಾಮಾನಿ ಚಾತುರ್ಹೋತ್ರಂ ಚ ಸತ್ತಮ ॥ ೨೪ ॥**

**ಹೇ ಸತ್ತಮ** ಹೇ ಸಜ್ಜನನೇ, **ವಸೂನಿ** ಧನಗಳು, **ಓಷಧಯಃ** ಭತ್ತ-ಜವಿಗೊಧೆ ಮುಂತಾದವು, **ಸ್ನೇಹಾಃ** ತುಪ್ಪ ಮುಂತಾದವು, **ರಸಾಃ** (ಮಧುರಾದಿಗಳು) ಹಾಲು ಬೆಲ್ಲ ಮುಂತಾದವು, **ಲೋಹಃ** ಕಬ್ಬಿಣ ಮುಂತಾದವು, **ಮೃದಃ** ಇಟ್ಟಿಗೆ ಮುಂತಾದವುಗಳಿಗೆ ಬೇಕಾದ ಮಣ್ಣು, **ಜಲಮ್** ಗಂಗಾದಿ ನೀರು, **ಋಚಃ** ಋಗ್ವೇದ, **ಯಜೂಂಷಿ** ಯಜುರ್ವೇದ, **ಸಾಮಾನಿ** ಸಾಮವೇದ, **ಚಾತುರ್ಹೋತ್ರಂ ಚ** ಹೋತೃ, ಪೋತೃ, ಉದ್ಗಾತೃ, ಪ್ರತಿಹರ್ತೃ ಎಂಬ ನಾಲ್ಕು ಋತ್ವಿಜರಿಂದ ಮಾಡಲ್ಪಡುವ ಕರ್ಮವು, ।।೨೪।।

**ನಾಮಧೇಯಾನಿ ಮಂತ್ರಾಶ್ಚ ದಕ್ಷಿಣಾಶ್ಚ ವ್ರತಾನಿ ಚ ।**
**ದೇವಾತಾನುಕ್ರಮಃ ಕಲ್ಪಃ ಸಂಕಲ್ಪಃ ಸೂತ್ರಮೇವ ಚ ॥ ೨೫ ॥**

**ಗತಯೋ ಮತಯಃ ಶ್ರದ್ಧಾ ಪ್ರಾಯಶ್ಚಿತ್ತಂ ಸಮರ್ಪಣಮ್ ।**
**ಪುರುಷಾವಯವೈರೇತೈಃ ಸಂಭಾರಾಃ ಸಂಭೃತಾ ಮಯಾ ॥ ೨೬ ॥**

**ಇತಿ ಸಂಭೃತಸಂಭಾರಃ ಪುರುಷಾವಯವೈರಹಮ್ ।**
**ತಮೇವ ಪುರುಷಂ ಯಜ್ಞಂ ತೇನೈವಾಯಜಮೀಶ್ವರಮ್ ॥ ೨೭ ॥**

**ನಾಮಧೇಯಾನಿ** ಜ್ಯೋತಿಷ್ಟೋಮ ಮುಂತಾದ ಯಜ್ಞಗಳ ಹೆಸರುಗಳು, ಅಥವಾ ಇಂದ್ರಾದಿ ದೇವತಾನಾಮಗಳು, **ಮಂತ್ರಾಃ** ಬೀಜಾತ್ಮಕವಾದ ಮಾಲಾತ್ಮಕವಾದ ಮಂತ್ರಗಳು (ಋಗಾದಿಗಳನ್ನು ಹಿಂದೆ ಹೇಳಿದೆ) ೩೦ ವರ್ಣಕ್ಕಿಂತ ಕಡಿಮೆ ವರ್ಣವಿರುವ ಮಂತ್ರಗಳು ಬೀಜಾತ್ಮಕಗಳು, ಅದಕ್ಕೂ ಹೇಚ್ಚಿನ ವರ್ಣ ಉಳ್ಳವುಗಳು ಮಾಲಾತ್ಮಕಗಳು ಎಂದು ತಿಳಿಯಬೇಕು. **ದಕ್ಷಿಣಾಃ** ದಕ್ಷಿಣೆಗಳು, **ವ್ರತಾನಿ** ಬ್ರಹ್ಮಚರ್ಯ ಮುಂತಾದವು, **ದೇವಾತಾನುಕ್ರಮಃ** ಇಂದ್ರಾದಿಶಬ್ದವಾಚ್ಯರಾದ ದೇವತೆಗಳ ತಾರತಮ್ಯವು, ಅಥವಾ ಪೌರ್ವಾಪರ್ಯದಿಂದ ನಿರ್ದೇಶ ಮಾಡುವುದು, **ಕಲ್ಪಃ** ಪ್ರಯೋಗವಿಧಿಯನ್ನು ತಿಳಿಸುವ ಆಶ್ವಲಾಯನಾದಿ ಸೂತ್ರಗಂಥವು, **ಸಂಕಲ್ಪಃ** ನಾನು ಇದರಿಂದ ಯಜ್ಞ ಮಾಡುವೆನು ಎಂದು ಮನಸ್ಸು ಮಾತುಗಳಿಂದ ಅನುಸಂಧಾನ ಮಾಡುವುದು, ಹೇಳುವುದು, **ಸೂತ್ರಂ** ವಿವಿಧ ಮೀಮಾಂಸಾಗಳು(ಬ್ರಹ್ಮಮಾಂಸಾ-ಕರ್ಮಮಿಂಮಾಸಾ) ದೇವತಾತಾರತಮ್ಯಾಂತಗತ್ವೇನ ಹರ್ಯನುಸಂಧಾನಪೂರ್ವಕ ಕರ್ಮಸ್ವರೂಪಜ್ಞಾನವೂ ಯಾಗಾಂಗವಾಗಿದೆ. ಆದ್ದರಿಂದ ಮೀಂಮಾಸಾ ಬೇಕು. **ಗತಯಃ** ಸ್ವರ್ಗಾದಿಫಲಗಳು, **ಮತಯಃ** ದೇವತಾಧ್ಯಾನಾದಿಗಳು, **ಶ್ರದ್ಧಾ** ಇಲ್ಲಿ ಹೇಳಿದ್ದು ಸತ್ಯ ಇದರಿಂದ ನನಗೆ ಪ್ರಯೋಜನವಿದೆ ಎಂದು ತಿಳಿಯುವ ಆಸ್ತಿಕ್ಯ ಬುದ್ಧಿಯು, **ಪ್ರಾಯಶ್ಚಿತ್ತಂ** ಯಜ್ಞಗಳಲ್ಲಿ ಬರುವ ವಿಘ್ನಪರಿಹಾರಕವಾಗಿ ಹೇಳಿದ, ಫಲಸಾಧನತ್ವ ತಂದು ಕೊಡುವ ಕರ್ಮ, **ಸಮರ್ಪಣಮ್** 'ನಾಹಂ ಕರ್ತಾ ಹರಿಃ ಕರ್ತಾ' ಮುಂತಾದ ಅನುಸಂಧಾನಪೂರ್ವಕ ಹರಿಪ್ರೀತಿ ಪ್ರಾರ್ಥನೆಯು, **ಏತೈಃ ಪುರುಷಾವಯವೈಃ** ಈ ಶ್ರೀಹರಿಯ ಅವಯವಗಳಿಂದ, **ಮಯಾ** ನನ್ನಿಂದ, **ಸಂಭಾರಾಃ** ಸಾಧನೆಗಳು, **ಸಂಭೃತಾಃ** ಸಂಪಾದಿಸಲ್ಪಟ್ಟಿವೆ, **ಪುರುಷಾವಯವೈಃ** ಶ್ರೀಹರಿಯ ಅವಯವಗಳಿಂದ, **ಇತಿ ಸಂಭೃತಸಂಭಾರಃ** ಇವೇ ಮೊದಲಾದ ಯಜ್ಞಸಾಧನಗಳನ್ನು ಸಂಪಾದಿಸಿದ, **ಅಹಂ**

ನಾನು, **ತಮೇವ ಯಜ್ಞಪುರುಷಮ್** ಆ ಪರಮಾತ್ಮನನ್ನೇ, **ತೇನೈವ** ನನ್ನಲ್ಲಿರುವ ಅವನಿಂದ ಪ್ರೇರಿತನಾಗಿ, **ಈಶ್ವರಮ್** ಸರ್ವೇಶ್ವರನನ್ನೂ, **ಅಯಜಮ್** ಯಜ್ಞಮಾಡಿದೆನು. ॥

ಇಲ್ಲಿ ಹೇಳಿದ ಯಜ್ಞಸಂಭಾರಸಂಪಾದಕ ಅವಯವವಿಶೇಷಗಳು ಮೂಲವೇದದಲ್ಲಿ ಹೇಳಿವೆ. ವಿಸ್ತರಭಯದಿಂದ ಇಲ್ಲಿ ತಿಳಿಸಿಲ್ಲ.

ಈ ತಾತ್ಪರ್ಯವು ಎಲ್ಲ ಶ್ಲೋಕಗಳಿಗೆ ಸಂಬಧಿಸಿದ್ದು ಎಂದು ಕೆಲವರು ಇಲ್ಲಿಯೇ ಈ ತಾತ್ಪರ್ಯವನ್ನು ಸೇರಿಸಿದ್ದಾರೆ. ಯಾದವಾರ್ಯರ ವ್ಯಾಖ್ಯಾನ ೨೧ ನೆಯ ಶ್ಲೋಕದ ಕೆಳಗೆ ಇದೆ.

> **ತಾತ್ಪರ್ಯ- ತ್ರಿಲೋಕಸ್ಥಾನಗಂ ವಿಷ್ಣುಮಯಜಚ್ಚ ಸಮಾಹಿತಃ ।**
> **ತದ್ರೂಪಭೂತಾಂಸ್ತ್ರೀಲ್ಲೋಕಾನ್ ಪಶೂನ್ ಕೃತ್ವಾ ಮಹಾಮನಾಃ ॥ -ಇತಿ ಗಾರುಡೇ**
> **ಸೂತ್ರಂ ಮೀಮಾಂಸಾಸೂತ್ರಮ್ ॥**

**ಯಾದವಾರ್ಯರ ಪ್ರಕಾರ ಅವತಾರಿಕಾ-** ಬ್ರಹ್ಮದೇವರು ವಿಷ್ಣುವಿನ ಮೂರು ರೂಪಗಳನ್ನು ಪಶುಗಳನ್ನಾಗಿ ಮಾಡಿಕೊಂಡು ಮೂರು ಲೋಕಗಳನ್ನು ಯಜ್ಞ ಮಾಡಿದನು. ಎಂದು ಎಲ್ಲಿಯೋ ಹೇಳಿದ್ದರ ತಾತ್ಪರ್ಯವಿದು, ಎಂದು ಹೇಳಿರುವರು.

ಅಂದರೆ ಆರೀತಿ ಹೇಳಿದಲ್ಲಿ ತ್ರಿಲೋಕಶಬ್ದದಿಂದ ಅಲ್ಲಿರುವ ವಿಷ್ಣುವು ಇಜ್ಯನು. ವಿಷ್ಣುವಿನ ಪ್ರತಿಮೆಯಾದ ಲೋಕತ್ರಯಗಳೇ ಪಶುಗಳು ಎಂದು ವಿವಕ್ಷಿತವಾಗಿವೆ. ವಿಷ್ಣುವಿನ ಸ್ವರೂಪಭೂತವಾದ ರೂಪಗಳಲ್ಲ, ಆದ್ದರಿಂದ ಯಾವ ದೋಷವಿಲ್ಲವೆಂದು ಭಾವ.

ಕೆಲವರು 'ನಾವಿಂದಂ ಯಜ್ಞಸಂಭಾರಾನ್' ಎಂಬಲ್ಲಿಂದ ಆರಂಭಿಸಿ 'ತಮೇವ ಯಜ್ಞಪುರುಷಂ' ಎಂಬಲ್ಲಿವರೆಗಿನ ಭಾಗವತದ ತಾತ್ಪರ್ಯ ಇದು ಎನ್ನುವರು-

೨೫ನೆಯ ಶ್ಲೋಕದಲ್ಲಿ ಕಲ್ಪಶಬ್ದದಿಂದ ಪ್ರಯೋಗಗಳನ್ನು ತಿಳಿಸುವ ಕಲ್ಪಸೂತ್ರ ಆಶ್ವಲಾಯನಾದಿಗಳನ್ನು ಹೇಳಿದ್ದರಿಂದ ಸೂತ್ರಶಬ್ದದಿಂದ ದೇವ-ಕರ್ಮ-ಬ್ರಹ್ಮಮೀಮಾಂಸಾಗಳನ್ನು ಸ್ವೀಕರಿಸಬೇಕು ಎಂದು ಭಾವ.

ಚತುರ್ಮುಖನ ಮತ್ತು ಪರಮಾತ್ಮನ ಪ್ರತಿಮಾಭೂತವಾದ ಮೂರು ಲೋಕಗಳನ್ನು ಪಶುಗಳನ್ನಾಗಿ ಮಾಡಿಕೊಂಡು ಮೂರು ಲೋಕಗಳಲ್ಲಿರುವ ಶ್ರೀಹರಿಯನ್ನು ಹೋಮಿಸಿದನು ಎಂದು ಗರುಡಪುರಾಣದಲ್ಲಿದೆ.

**ತತಸ್ತೇ ಭ್ರಾತರ ಇಮೇ ಪ್ರಜಾನಾಂ ಪತಯೋ ನವ ।**
**ಅಯಜನ್ ವ್ಯಕ್ತಮವ್ಯಕ್ತಂ ಪುರುಷಂ ಸುಸಮಾಹಿತಾಃ ॥ ೨೮ ॥**

**ತತಃ** ಅನಂತರ, **ಪ್ರಜಾನಾಂ ಪತಯಃ** ಪ್ರಜಾಪತಿಗಳಾದ, **ನವ** ಒಂಭತ್ತು ಜನ, **ಇಮೇ ತೇ ಭ್ರಾತರಃ** ನಿನ್ನ ತಮ್ಮಂದಿರಾದ ಮರೀಚಿಮುಂತಾದವರು, **ಸುಸಮಾಹಿತಾಃ** ಏಕಾಗ್ರಚಿತ್ತರಾಗಿ, **ಅವ್ಯಕ್ತಂ** ಸ್ವಭಾವತಃ ಕಾಣದಿರುವ, **ವ್ಯಕ್ತಂ** ಭಕ್ತರ ಮೇಲೆ ದಯೆಯಿಂದ ಪ್ರತ್ಯಕ್ಷನಾದ, **ಪುರುಷಂ** ಪರಮಾತ್ಮನನ್ನು, **ಅಯಜಂತ** ಪೂಜಿಸಿದರು, (ಯಜ್ಞಮಾಡಿದರು) ಇದರಿಂದ 'ತೇನ ದೇವಾ ಅಯಜಂತ ಸಾಧ್ಯಾ ಋಷಯಶ್ಚ ಯೇ' ಎಂಬ ಮಂತ್ರದ ಅರ್ಥ ತಿಳಿಸಿದರು.

*ಇದು ಉಪಲಕ್ಷಣವೆಂದು ಇಟ್ಟುಕೊಂಡು ಹೇಳುವರು-*

**ತತಶ್ಚ ಮನವಃ ಕಾಲ ಈಜಿರೇ ಋಷಯೋಽಪರೇ ।**
**ಪಿತರೋ ವಿಬುಧಾ ದೈತ್ಯಾ ಮನುಷ್ಯಾಃ ಕ್ರತುಭಿರ್ವಿಭುಮ್ ॥ ೨೯ ॥**

**ಕಾಲೇ** ವಸಂತ ಮೊದಲಾದ ಆಯಾ ಕಾಲದಲ್ಲಿ, **ಅಪರೇ** ಮರಿಚ್ಯಾದಿಗಳಿಂದ ಭಿನ್ನರಾದ, **ಪಿತರಃ** ಅರ್ಯಮಾದಿಗಳು, **ವಿಬುಧಾಃ** ಇಂದ್ರಾದಿದೇವತೆಗಳು, **ದೈತ್ಯಾಃ** ಪ್ರಹ್ಲಾದಾದಿಗಳು, **ಮನುಷ್ಯಾಃ** ಪ್ರಿಯವ್ರತಾದಿಗಳು, **ಮನವಃ** ಮನುಗಳೂ, **ವಿಭುಂ** ಪರಮಾತ್ಮನನ್ನು, **ಕ್ರತುಭಿಃ** ಯಜ್ಞಗಳಿಂದ, **ಈಜಿರೇ** ಪೂಜಿಸಿದರು. ॥ ೨೯ ॥

'ಪುರುಷ ಏವೇದಂ ಸರ್ವಂ' ಎಂಬಲ್ಲಿ ಎಲ್ಲವೂ ಪುರುಷನಾದ ಪರಮಾತ್ಮನಿಗೆ ಅಧೀನವಾಗಿದೆ ಎಂದು ಹೇಳಿದ್ದಾರೆ. ಈ ವಿಷಯದಲ್ಲಿ ಬ್ರಹ್ಮಾದಿದೇವತೆಗಳಿಂದ ಇಜ್ಯನಾಗಿದ್ದಾನೆ ಎಂಬ ಹೇತುವನ್ನು ಹೇಳಿ ಈ ವಿಷಯವನ್ನು ಸವಿಸ್ತಾರವಾಗಿ ತಿಳಿಸಿದ್ದಾರೆ. ಪುನಃ ಈ ವಿಷಯವನ್ನೇ ಹೇಳಿ ಈ ಶ್ಲೋಕದಲ್ಲಿ ನಿಗಮನ ಮಾಡುತ್ತಿದ್ದಾರೆ-

**ನಾರಾಯಣೇ ಭಗವತಿ ತದಿದಂ ವಿಶ್ವಮಾಹಿತಮ್ ।**
**ಗೃಹೀತಮಾಯೋರುಗುಣೇ ಸರ್ಗಾದಾವಗುಣೇ ಸ್ವತಃ ॥ ೩೦ ॥**

**ತತ್** ಯಾವ ಕಾರಣ ಶ್ರೀಹರಿಯಿಂದ ಪ್ರಾಪ್ತವಾದ ಸರ್ವವೈಭವ ಉಳ್ಳ ನಾನು ಆ ನಾರಾಯಣನನ್ನೇ ಯಜ್ಞಾದಿಗಳಿಂದ ಪೂಜಿಸಿದೆನೋ ಆದ್ದರಿಂದ, **ತತ್** ತಸ್ಮಿನ್ ಅಂತಹ, **ಸ್ವತಃ ಅಗುಣೇ** ಮಿಥ್ಯಾಭಿಮಾನದಿಂದ ಜೀವನಂತೆ ವಿಕಾರವಾದ್ದರಿಂದ ಜಡದಂತೆ ಸತ್ತ್ವಾದಿಗುಣರಹಿತನಾದ, **ಸರ್ಗಾದೌ** ಸೃಷ್ಟಿ-ಸ್ಥಿತಿ-ಲಯಗಳಿಗಾಗಿ,

**ಗೃಹಿತಮಾಯೋರು ಗುಣೇ** ವಿಶೇಷವಾಗಿ ಸ್ವೀಕರಿಸಿದ ಪ್ರಕೃತಿಯ ಬಹುಗುಣ ಉಳ್ಳ **ಭಗವತಿ** ಷಡ್ಗುಣಪೂರ್ಣನಾದ, **ನಾರಾಯಣೇ** ಶ್ರೀಹರಿಯಲ್ಲಿ, **ಇದಂ ವಿಶ್ವಂ** ಈ ಪ್ರಪಂಚವು, **ಆಹಿತಂ** ಆಶ್ರಿತವಾಗಿ ಇದೆ. ಅವನ ಅಧೀನವಾಗಿ ಅವನಿಂದ ವ್ಯಾಪ್ತವಾಗಿ ಇದೆ ಎಂದು ಭಾವ. ।। ೩೦ ।।

ಈ ಶ್ಲೋಕಕ್ಕೆ ಹಿಂದಿನ ಶ್ಲೋಕದಿಂದ ಸಂಗತಿ ತಿಳಿಯುವುದಿಲ್ಲ ಕಾರಣ ಅದನ್ನು ತಿಳಿಸುವರು-

**ತಾತ್ಪರ್ಯ- ಯಸ್ಮಾತ್ತಮೇವ ಅಯಜಂ ತಸ್ಮಾದಿದಂ ತಸ್ಮಿನ್ ಸಮಾಹಿತಮ್ ।**

ಭಗವಂತ ಸೃಷ್ಟಿಗಾಗಿ ಗುಣಗಳನ್ನು ಸ್ವೀಕರಿಸಿದನೆಂದು ಈ ಶ್ಲೋಕದಲ್ಲಿ ಹೇಳಿದ್ದಾರೆ. ಹೀಗೆ ಹೇಳಿದರೇ ಇದಕ್ಕಿಂತಲೂ ಮೊದಲು ಆ ಗುಣಗಳನ್ನು ಸ್ವೀಕರಿಸಿಲ್ಲವೆಂದಾಗುವುದು. ಭಗವಂತ ಈ ಮೊದಲು ಈ ಗುಣಗಳನ್ನು ಸ್ವೀಕರಿಸಿಲ್ಲವೆಂದಾದರೆ ಆ ಗುಣಗಳಿಗೆ ಸ್ಥಿತಿಯೇ ಇಲ್ಲವೆಂದಾಗುತ್ತದೆ. ಆಗ ಅವುಗಳಿಗೆ ಅನಾದಿತ್ವ ಹೇಳಿದ್ದುದರ ವಿರೋಧ ಬರುತ್ತದೆ. ಮತ್ತು ಭಗವಂತ ಜೀವನಂತೆ ಗುಣಗಳನ್ನು ಸ್ವೀಕರಿಸಿದ್ದಾನೆ ಎಂದು ಹೇಳಿದರೆ ಜೀವನಂತೆ ಬದ್ಧನೆಂದಾಗುತ್ತಾನೆ. ಜಡದಂತೆ ಗುಣಗಳ ಸ್ವೀಕಾರವನ್ನು ದೇವರಿಗೆ ಹೇಳಿದರೆ ವಿಕಾರಿತ್ವವು ಬರಬೇಕಾಗುತ್ತದೆ. ಸ್ವತಃ ಪರಮಾತ್ಮ ಅಗುಣ ಎಂದು ಹೇಳಿದ್ದುದರ ವಿರೋಧವೂ ಬರುತ್ತದೆ. ಆದ್ದರಿಂದ ಈ ಎಲ್ಲ ಶಂಕೆಗಳನ್ನು ಪರಿಹರಿಸಲು ಪ್ರಮಾಣ ಹೇಳುವರು-

**ನಿತ್ಯಂ ಗೃಹಿತಾಃ ಸತ್ತ್ವಾದ್ಯಾ ಜೀವವಜ್ಜಡವನ್ನ ತು ।**
**ಮಿಥ್ಯಾಮಾನಾತ್ ಸ್ವರೂಪತ್ವಾತ್ ಸ್ವಾತಂತ್ರ್ಯಾದ್ಬಹಿರೇವ ತು ।। -ಇತಿ ಬ್ರಹ್ಮತರ್ಕೇ**

ಜಗತ್ಪೂಜ್ಯರಾದ ಚತುರ್ಮುಖಾದಿಗಳು ಷಡ್ಗುಣಪೂರ್ಣನಾದ ಪರಮಾತ್ಮನನ್ನೇ ಪೂಜಿಸಿದ ಕಾರಣ ಪರಮಾತ್ಮನೇ ಸರ್ವೋತ್ತಮನೆಂದು ಸಿದ್ಧವಾಗುತ್ತದೆ. ಆದ್ದರಿಂದ ಈ ಮಹದಾದಿ ಜಗತ್ತು ಪುರುಷನೆನಿಸಿದ ಶ್ರೀನಾರಾಯಣನ ಅಧೀನವಾಗಿದೆ. ಯದ್ಯಪಿ ಸತ್ತ್ವಾದಿಗುಣಗಳು ಶ್ರೀಹರಿಯಿಂದ ನಿತ್ಯದಲ್ಲಿಯೂ ಅಧೀನಗಳಾಗಿ ಸ್ವೀಕರಿಸಲ್ಪಟ್ಟಿವೆ. ಆದರೂ ಸೃಷ್ಟಿ-ಸ್ಥಿತಿ-ಲಯಗಳನ್ನು ಮಾಡಲು ವಿಶೇಷವಾಗಿ ಸ್ವೀಕರಿಸುವುದರಿಂದ ಸರ್ಗಾದಿಯಲ್ಲಿ ಸ್ವೀಕರಿಸಲ್ಪಟ್ಟಿವೆ ಎಂದು ಹೇಳಿದ್ದು. ಜೀವರಿಗೆ ಮಿಥ್ಯಾಭಿಮಾನ-ವಿರುವುದರಿಂದ ವಸ್ತುತಃ ತನ್ನದಲ್ಲದ ವಸ್ತುಗಳಲ್ಲಿಯೂ ತನ್ನದೆಂಬ ಭ್ರಾಂತಿಯಿಂದ ಸತ್ತ್ವಾದಿಗುಣಗಳ ಸಂಬಂಧ ಹೇಗಿವೆಯೋ, ಜಡಕ್ಕೆ ಸತ್ತ್ವಾದಿಗುಣಗಳು ಸ್ವರೂಪವಾಗಿ

ಇರುವುದರಿಂದ (ಅವುಗಳ ವಿಕಾರವೇ ಜಡಗಳು) ಸತ್ತ್ವಾದಿಗಳ ಸಂಬಂಧ ಹೇಗಿದೆಯೋ ಹಾಗೆ ಶ್ರೀಹರಿಗೆ ಆ ಸತ್ತ್ವಾದಿಗಳ ಸಂಬಂಧವಿಲ್ಲ. ಆದರೆ ಸತ್ತ್ವಾದಿಗುಣಗಳನ್ನು ಕುರಿತು ಸ್ವಾತಂತ್ರ್ಯವಿದ್ದುದರಿಂದ ಆ ಗುಣಪ್ರಯುಕ್ತವಾದ ಅಭಿಮಾನ-ವಿಕಾರಗಳಿಲ್ಲದೇ ಅವುಗಳ ಸ್ಥಿತ್ಯಾದಿಗಳೂ ಶ್ರೀಹರಿಯ ಅಧೀನಗಳೇ ಆಗಿವೆ. ಆದ್ದರಿಂದ ಆ ಗುಣಗಳು ಶ್ರೀಹರಿಗೆ ಬಂಧಕಗಳಲ್ಲ ಎಂದು ಬ್ರಹ್ಮತರ್ಕದಲ್ಲಿ ಹೇಳಿದೆ ಎಂದು ಭಾವ.

ಈ ತಾತ್ಪರ್ಯವನ್ನು ನೋಡುವುದರಿಂದ ಅವತಾರಿಕೆಯಲ್ಲಿ ತಿಳಿಸಿದಂತೆ ಸಂಗತಿ ತಿಳಿಯುವುದು. ಮತ್ತು ತತ್ ಶಬ್ದಕ್ಕೆ ಆವೃತ್ತಿ ಮಾಡಿಕೊಂಡು ಒಂದು ಸಲ ತಸ್ಮಾತ್ ಎಂದು ಮತ್ತೊಂದು ಸಲ ತಸ್ಮಿನ್ ಎಂದು ಯೋಜಿಸಬೇಕೆಂದು ತಿಳಿಯುವುದು. ಮೂಲದಲ್ಲಿ ನಾರಾಯಣನಿಗೆ ಭಗವತಿ ಎಂದು ವಿಶೇಷಣ ಕೊಟ್ಟಿದ್ದರಿಂದ ಪುರವಃ ಷಾಃ ಷಡ್ಗುಣಾಃ ಯಸ್ಯ ಎಂಬ ನಿರ್ವಚನ ಮಾಡುವ ಮೂಲಕ ಪುರುಷಶಬ್ದಾಭಿಧೇಯತ್ವ ತಿಳಿಸಿದಂತಾಯಿತು. ॥ ೩೦ ॥

ಸೃಷ್ಟ್ಯಾದಿಗಳಿಗಾಗಿ ಶ್ರೀಮನ್ನಾರಾಯಣನೇ ಗುಣಗಳನ್ನು ಸ್ವೀಕರಿಸುವನೆಂದರೆ ಬ್ರಹ್ಮದೇವರು ರಜೊಗುಣದಿಂದ ಸೃಷ್ಟಿಸುವರು, ರುದ್ರದೇವರು ತಮೋಗುಣದಿಂದ ಸಂಹರಿಸುವರು ಎಂಬ ವೈದಿಕಪ್ರಸಿದ್ಧಿ ಹೇಗೆ ಎಂದರೆ ಹೇಳುವರು-

**ಸೃಜಾಮಿ ತನ್ನಿಯುಕ್ತೋಽಹಂ ಹರೋ ಹರತಿ ತದ್ವಶಃ ।**
**ವಿಶ್ವಂ ಪುರುಷರೂಪೇಣ ಪರಿಪಾತಿ ತ್ರಿಶಕ್ತಿಧೃಕ್ ॥ ೩೧ ॥**

**ತನ್ನಿಯುಕ್ತಃ** ನನ್ನಲ್ಲಿರುವ ಬ್ರಹ್ಮನಾಮಕನಾದ ನಾರಾಯಣನಿಂದ ಪ್ರೇರಿತನಾಗಿ, **ಅಹಂ** ನಾನು, **ಸೃಜಾಮಿ** ಸೃಷ್ಟಿಸುವೆನು, **ತದ್ವಶಃ** ತನ್ನಲ್ಲಿ ಪ್ರವಿಷ್ಟನಾದ ನಾರಾಯಣನ ಅಧೀನನಾಗಿ, **ಹರಃ** ರುದ್ರನು, **ಹರತಿ** ಸಂಹರಿಸುವನು, **ತ್ರಿಶಕ್ತಿಧೃಕ್** ಭಗವಂತನ ಶಕ್ತಿವಿಷಯರಾದ್ದರಿಂದ ಶಕ್ತಿಶಬ್ದವಾಚ್ಯರಾದ ಶ್ರೀ-ಭೂ-ದುರ್ಗಾರನ್ನು ಧರಿಸುವ ನಾರಾಯಣನೇ, **ಪುರುಷರೂಪೇಣ** ವಿಷ್ಣುರೂಪದಿಂದ, **ವಿಶ್ವಂ** ಜಗತ್ತನ್ನು, **ಪರಿಪಾತಿ** ರಕ್ಷಿಸುವನು.

ನಾರಾಯಣನೇ ಬ್ರಹ್ಮಾ-ವಿಷ್ಣು-ಶಿವ ನಾಮಕ ಮೂರ್ತಿತ್ರಯಗಳಿಂದ ಲಕ್ಷ್ಮಿಯ ಮೂರ್ತಿತ್ರಯಗಳಿಂದ ಅಭಿಮನ್ಯಮಾನವಾದ ಗುಣತ್ರಯಗಳನ್ನು ಧರಿಸಿ, ಸೃಷ್ಟ್ಯಾದಿಗಳನ್ನು ಮಾಡುತ್ತಾನೆ. ನಾನು (ಬ್ರಹ್ಮ) ರುದ್ರದೇವರು ಅವನ ಪ್ರೇರಣೆಯಿಂದ

ರಜಸ್ತಮೋಗುಣಗಳಿಂದ ಸೃಷ್ಟಿ-ಸಂಹಾರಗಳನ್ನು ಮಾಡುವೆವು. ಆದ್ದರಿಂದ ಮುಖ್ಯವಾದ ಗುಣಗ್ರಾಹಕತ್ವ ಅವನಲ್ಲಿಯೇ ಇದೆ. ನಮ್ಮಲ್ಲಿಯ ಗುಣಗ್ರಾಹಕತ್ವ ಅಮುಖ್ಯವೇ ಆಗಿದೆ. ಆದ್ದರಿಂದ ಯಾವುದೇ ರೀತಿಯಾದ ವಿರೋಧವಿರುವುದಿಲ್ಲ. ।। ೩೨ ।।

*'ಯದ್ರೂಪಂ ಯದಧಿಷ್ಠಾನಂ' ಮುಂತಾದ ಪ್ರಶ್ನೆಯ ಉತ್ತರವನ್ನು ಉಪಸಂಹರಿಸುವರು-*

**ಇತಿ ತೇಽಭಿಹಿತಂ ತಾತ ಯಥೇದಮನುಪೃಚ್ಛಸಿ ।**
**ನಾನ್ಯದ್ಭಗವತಃ ಕಿಂಚಿದ್ಭಾವ್ಯಂ ಸದಸದಾತ್ಮಕಮ್ ।। ೩೨ ।।**

**ಹೇ ತಾತ** ಮಗು ನಾರದನೇ, **ಯಥಾ ಪೃಚ್ಛಸಿ** ನಿನ್ನ ಪ್ರಶ್ನಾನುಸಾರವಾಗಿ, **ಇದಂ** 'ಯದ್ರೂಪಂ' ಮುಂತಾಗಿ ಕೇಳಿದ ಮೂಲಾಧಾರ ಯಾರು ಮುಂತಾದುದನ್ನು **ಇತಿ** ಈ ರೀತಿಯಾಗಿ, **ಸದಸದಾತ್ಮಕಂ** ವ್ಯಕ್ತಾವ್ಯಕ್ತವಾದ, **ಭಾವ್ಯಂ** ಉತ್ಪಾದ್ಯವಾದ, **ಕಿಂಚಿತ್** ಮಹದಾದಿಗಳು, **ಭಗವತಃ ನ ಅನ್ಯತ್** ಭಗವಂತನಿಗೆ ಅನಧೀನವಾದುದಲ್ಲ. ಅಧೀನವೇ ಆಗಿವೆ.

ಇಲ್ಲಿ ಅನ್ಯತ್ ನ ಎಂದರೆ ಅಭಿನ್ನವೆಂದು ತೋರುವುದು. ಮತ್ತು ಸದಸಾದಾತ್ಮಕತ್ವವು ಒಬ್ಬನಿಗೇ ವಿರುದ್ಧವು. ಕಾರಣ ಪ್ರಮಾಣದಿಂದ ತಾತ್ಪರ್ಯವನ್ನು ತಿಳಿಸುವರು-

ತಾತ್ಪರ್ಯ- ಸದಿತಿ ವ್ಯಕ್ತಮುದ್ದಿಷ್ಟಮಸದವ್ಯಕ್ತಮುಚ್ಯತೇ ।
ಗಮ್ಯಾಗಮ್ಯಸ್ವರೂಪತ್ವಾತ್ ತತ್ಸತ್ತಾದಿರ್ಹರೇರ್ಯತಃ ।
ಅತಸ್ತಸ್ಮಾದನ್ಯದೇವ ಹ್ಯನನ್ಯದಿತಿ ಭಣ್ಯತೇ ।। -ಇತಿ ಚ

ಸಾಮಾನ್ಯತಃ ತಿಳಿಯಲು ಯೋಗ್ಯವಾದ ಸ್ವರೂಪವಿರುವುದರಿಂದ ಸತ್ ವ್ಯಕ್ತವು (ಪೃಥಿವೀ-ಅಪ್-ತೇಜಸ್ಸುಗಳು) ಪ್ರತ್ಯಕ್ಷದಿಂದ ತಿಳಿಯಲಶಕ್ಯವಾದುದರಿಂದ ಅಸತ್ ಅವ್ಯಕ್ತವು (ಆಕಾಶ-ವಾಯು) ಮಹದಾದಿ ಜಗತ್ತು ಪರಮಾತ್ಮನ ಅಧೀನವಾದ ಸತ್ತಾದಿಗಳುಳ್ಳದ್ದು. ಆದುದರಿಂದಲೇ ಶ್ರೀಹರಿಯಿಂದ ವಸ್ತುತಃ ಭಿನ್ನವಾದರೂ ಅಭಿನ್ನ ಎಂದು ಹೇಳಲ್ಪಡುತ್ತದೆ ಎಂದು ಬ್ರಹ್ಮತರ್ಕದಲ್ಲಿದೆ. ।। ೩೨ ।।

ಈ ರೀತಿ ಪುರುಷಸೂಕ್ತದಲ್ಲಿ ಹೇಳಿದ ಮಾಹಾತ್ಮ್ಯ ಉಳ್ಳ ಭಗವಂತನನ್ನು ನಾರದನ ಪ್ರಶ್ನೆಗೆ ಉತ್ತರವಾಗಿ ಹೇಳಿ ಉಪಸಂಹಾರ ಮಾಡಿದರು. ಈಗ ಮತ್ತೆ ಅವನನ್ನು ಸಂಪೂರ್ಣವಾಗಿ ವರ್ಣಿಸು ಎಂಬ ನಾರದರ ಮನಸಿನಲ್ಲಿರುವ ಪ್ರಶ್ನೆಯನ್ನು ಪರಿಹರಿಸಲು ಸಂಪೂರ್ಣವಾಗಿ ಅವನನ್ನು ವರ್ಣಿಸುವುದು ಯಾರಿಂದಲೂ ಸಾಧ್ಯವಿಲ್ಲ

ಅವನು ಯಾರಿಂದಲೂ ಪೂರ್ಣವಾಗಿ ತಿಳಿಯಲು ಅಶಕ್ಯನು ಎಂದು ಉತ್ತರ ಹೇಳಲು, ಎಲ್ಲ ದೇವತೆಗಳಿಗಿಂತ ಉತ್ತಮನಾದ ನನಗೆ, ವಾಯುದೇವರಿಗೇನೇ ಸಾಕಲ್ಯೇನ ಅವನನ್ನು ತಿಳಿಯಲು ಶಕ್ತಿ ಇಲ್ಲ ಎಂದು ಎರಡು ಶ್ಲೋಕಗಳಿಂದ ಹೇಳುವರು-

**ನ ಭಾರತೀ ಮೇಽಂಗ ಮೃಷೋಪಲಕ್ಷ್ಯತೇ**
**ನ ಕರ್ಹಿಚಿನ್ಮೇ ಮನಸೋ ಮೃಷಾ ಗತಿಃ ।**
**ನ ಮೇ ಹೃಷೀಕಾಣಿ ಪತಂತ್ಯಸತ್ಪಥೇ**
**ಯನ್ಮೇ ಹೃದೌತ್ಕಂಠ್ಯವತಾ ಧೃತೋ ಹರಿಃ ॥ ೩೩ ॥**

ಸಾಕಲ್ಯೇನ ಅಜ್ಞಾನಕ್ಕೆ ಕಾರಣವಾದದ್ದು ಅಶಕ್ತಿಯಲ್ಲ. ಕಿಂತು ಜ್ಞಾನಸಾಮಗ್ರಿಯಾದ ಇಂದ್ರಿಯಜಯಾದಿಗಳು ಇಲ್ಲದ್ದರಿಂದ ಎಂದರೆ, ಹಾಗೇನಿಲ್ಲ ಜ್ಞಾನಸಾಮಗ್ರಿ ಎಲ್ಲವೂ ಇದೆ ಎಂದು ಹೇಳುತ್ತ ಮೊದಲಿಗೆ ಇಂದ್ರಿಯಜಯವು ನಮ್ಮಿಬ್ಬರಿಗೆ ಸ್ವಭಾವಸಿದ್ಧ ಎಂದು ಈ ಶ್ಲೋಕದಲ್ಲಿ ಹೇಳುವರು-

**ಹೇ ಅಂಗ** ನಾರದನೇ, **ಮೇ** ನನ್ನ (ಉಪಲಕ್ಷಣ) ವಾಯುವಿನ, **ಭಾರತೀ** ವಾಗಿಂದ್ರಿಯವು, **ಮೃಷಾ** ಇಲ್ಲದಿರುವ ಅರ್ಥವನ್ನು ಹೇಳಲು ವ್ಯರ್ಥವಾಗಿ ಮಾತನಾಡಲು ಪ್ರವರ್ತಕವಾದುದಾಗಿ, **ನೋಪಲಕ್ಷ್ಯತೇ** ನನ್ನಿಂದಾಗಲೀ ಬೇರೆಯವರಿಂದಾಗಲೀ ಕಂಡಿಲ್ಲ, **ಯತ್** ಯಾವಕಾರಣ, **ಔತ್ಕಂಠ್ಯವತಾ** ಭಕ್ತ್ಯುದ್ರೇಕಯುತವಾದ, **ಹೃದಾ** ಮನಸ್ಸಿನಿಂದ, **ಹರಿಃ ಧೃತಃ** ಶ್ರೀಹರಿಯು ಧ್ಯಾನಿಸಲ್ಪಟ್ಟಿರುವನೋ ಆ ಕಾರಣ, **ಕರ್ಹಿಚಿತ್ ಮೇ ಮನಸಃ** ನಮ್ಮ ಮನಸಿಗೆ, **ಮೃಷಾ** ಅವಿದ್ಯಮಾನವಾದ ವ್ಯರ್ಥವಾದ ವಿಷಯದಲ್ಲಿ **ನ ಗತಿಃ** ಗಮನವು ಎಲ್ಲಿಯೂ ಇರುವುದಿಲ್ಲ, **ಮೇ ಹೃಷೀಕಾಣಿ** ನಮ್ಮ ಇತರ ಇಂದ್ರಿಯಗಳು, **ಅಸತ್ಪಥೇ** ದುಷ್ಟಮಾರ್ಗದಲ್ಲಿ, **ನ ಪತಂತಿ** ಹೋಗಲಾರವು.

ಮೇಲಿನ ಶ್ಲೋಕದಲ್ಲಿ ಇಂದ್ರಿಯಜಯರೂಪವಾದ ಜ್ಞಾನಸಾಧನವು ನಮ್ಮಿಬ್ಬರಿಗೆ ಇದೆ ಎಂದು ಹೇಳಿ ಜ್ಞಾನಸಾಧನವಾದ ಶ್ರವಣಾದಿಗಳು ಇವೆ ಎಂದು ಇಲ್ಲಿ ಹೇಳುವರು-

**ಸೋಽಹಂ ಸಮಾಮ್ನಾಯಮಯಸ್ತಪೋಮಯಃ**
**ಪ್ರಜಾಪತೀನಾಮಭಿವಂದಿತಃ ಪತಿಃ ।**
**ಆಸ್ಥಾಯ ಯೋಗಂ ನಿಪುಣಂ ಸಮಾಹಿತ-**
**ಸ್ತನ್ನಾಧ್ಯಗಚ್ಛಂ ಯತ ಆತ್ಮಸಂಭವಃ ॥ ೩೪ ॥**

**ಸಃ** ಸ್ವಾಭಾವಿಕವಾದ ಇಂದ್ರಿಯಜಯ ಉಳ್ಳ **ಅಹಂ** ನಾನು ಮತ್ತು ವಾಯುವು, **ಸಮಾಮ್ನಾಯಮಯಃ** ನನ್ನ ಭಕ್ತಿವಿಷಯನಾದ ಶ್ರೀಹರಿಯ ಅನುಗ್ರಹದಿಂದ ಅವನ ನಂತರ ವೇದಪ್ರತಿಪಾದ್ಯರಲ್ಲಿ ಪ್ರಧಾನನು ಅಥವಾ ಅನಂತವೇದಗಳ ಜ್ಞಾನ ಉಳ್ಳವನು, **ತಪೋಮಯಃ** ಬಹು ತಪಸ್ಸುಳ್ಳವನು, **ಪ್ರಜಾಪತೀನಾಂ** ಪ್ರಜಾಪತಿಗಳಾದ ಮರೀಚ್ಯಾದಿಗಳಿಂದ, **ಅಭಿವಂದಿತಃ** ನಮಸ್ಕೃತನು, **ಪತಿಃ** ಸ್ವಾಮಿಗಳು ಆದ ನಾನು, **ಸಮಾಹಿತಃ** ಏಕಾಗ್ರಚಿತ್ತನಾಗಿ, **ನಿಪುಣಂ** ಚತುರತಮವಾದ, **ಯೋಗಂ** ಧ್ಯಾನವನ್ನು **ಆಸ್ಥಾಯ** ಮಾಡಿ, **ಯತಃ** ಯಾವನಿಂದ, **ಆತ್ಮಸಂಭವಃ** ನನ್ನ ಜನನವಾಯಿತೋ, **ತಂ** ಅವನನ್ನು **ಅಧ್ಯಗಚ್ಛಂ** ನನ್ನ ಯೋಗ್ಯತೆಗಿಂತ ಹೆಚ್ಚಾಗಿ ತಿಳಿಯಲಿಲ್ಲ, ಎಲ್ಲ ಸಾಧನವಿದ್ದು ಜ್ಞಾನವಾಗಿಲ್ಲ ಎಂದರೆ ಅದು ಅಶಕ್ತಿಯಿಂದಲೇ ಎಂದು ಭಾವ. ।। ೩೪ ।।

ಈ ರೀತಿ ನನಗೂ ವಾಯುವಿಗೂ ಭಗವಂತನನ್ನು ಪೂರ್ಣವಾಗಿ ತಿಳಿದುಕೊಳ್ಳಲು ಸಾಮರ್ಥ್ಯವಿಲ್ಲವೆಂದು ಉಪಪಾದಿಸಿ ಇತರರಿಗೆ ಇಲ್ಲವೆಂದು ಕೈಮುತ್ಯಸಿದ್ಧವೆಂದು ತಿಳಿಸುತ್ತ ಇತರಾಗಮ್ಯತ್ವವಿಶಿಷ್ಟನಾದ ಭಗವಂತನ ನಮನರೂಪವಾದ ಮಂಗಲವನ್ನು ಕೊನೆಯಲ್ಲಿಯೂ ಮಾಡುವರು-

**ನತೋಽಸ್ಮ್ಯಹಂ ತಚ್ಚರಣಂ ಸಮೀಯುಷಾಂ**
**ಭವಚ್ಛಿದಂ ಸ್ವಸ್ತ್ಯಯನಂ ಸುಮಂಗಲಮ್ ।**
**ಯಃ ಸ್ವಾತ್ಮಮಾಯಾವಿಭವಂ ಸ್ವಯಂಗತೋ**
**ನಾಽಹಂ ನಭಸ್ವಾನ್ ತಮಥಾಽಪರೇ ಕುತಃ** ।। ೩೫ ।।

**ಸಮೀಯುಷಾಂ** ಶರಣಾಗತರ, **ಭವಚ್ಛಿದಂ** ಸಂಸಾರನಿವರ್ತಕನಾದ, **ಸ್ವಸ್ತ್ಯಯನಂ** ಮಂಗಲಪ್ರದನಾದ, **ಸುಮಂಗಲಂ** ಪರಮಮಂಗಲರೂಪನಾದ, **ಯಃ** ಯಾವನು, **ಸಾತ್ಮಮಾಯಯಾ ವಿಭವಂ** ತನ್ನ ಸ್ವರೂಪಭೂತವಾದ ಮಹಿಮೆಯ ವಿಸ್ತಾರವನ್ನು ಸಾಕಲ್ಯವನ್ನು, **ಸ್ವಯಂ ಗತಃ** ತಾನೇ ತಿಳಿಯುವನೋ, **ಅಹಂ** ನಾನಾಗಲೀ, **ನಭಸ್ವಾನ್** ವಾಯುವಾಗಲೀ, ನ ತಿಳಿಯಲಾರೆವೋ, **ಅಪರೇ ಕುತಃ** ಸರಸ್ವತ್ಯಾದಿಗಳು, **ತಂ** ಭಗವಂತನನ್ನು **ಅಥ** ಸಂಪೂರ್ಣವಾಗಿ ತಿಳಿಯುವರೆಂಬ ಆಸೆ ಎಲ್ಲಿಯದು? ಸಾಧ್ಯವಿಲ್ಲವೆಂದರ್ಥ ಇಂತಹ ಇತಾರಾಜ್ಞೇಯನಾದ, **ತಚ್ಚರಣಂ** ಆ ಶ್ರೀಹರಿಯ ಪಾದಗಳನ್ನು, **ನತೋಽಸ್ಮಿ** ನಮಸ್ಕರಿಸುವೆನು.

ಇಲ್ಲಿ ಕೈಮುತ್ಯ ಹೇಳಿದ್ದರಿಂದ ಇತರ ಜಿವರಿಗಿಂತ ಬ್ರಹ್ಮ-ವಾಯುಗಳಿಗೆ ಭಗವಂತನ ಜ್ಞಾನ ಹೆಚ್ಚಾಗಿದೆ. ಭಗವಂತನಿಗೆ ಮಾತ್ರ ತನ್ನ ಜ್ಞಾನ ಪರಿಪೂರ್ಣವಾಗಿದೆ ಎಂದು ಈ ವಿಷಯದಲ್ಲಿ ಪುರಾಣಸಂವಾದವನ್ನು ಹೇಳುವರು-

**ತಾತ್ಪರ್ಯ- ಸರ್ವಜೀವನಿಕಾಯೇಷು ಬ್ರಹ್ಮವಾಯೂ ಹರೇರ್ವಿದೌ ।**
**ನ ಚಾನ್ಯಸ್ತಾದೃಶೋ ವೇತ್ತಾ ಯಾವದ್ವೇತ್ತಿ ಹರಿಃ ಸ್ವಯಮ್ ।**
**ತಾವತ್ತಾವಪಿ ನೋ ವಿಷ್ಣುಂ ಜಾನೀತೋ ಲೋಕವಂದಿತೌ ।। -ಇತಿ ಬ್ರಹ್ಮಾಂಡೇ**

ಸಮಸ್ತ ಜೀವರ ಸಮೂಹಗಳಲ್ಲಿ ಬ್ರಹ್ಮ-ವಾಯುಗಳು ಇತರ ಜೀವಗಳಿಗಿಂತ ಅಧಿಕವಾಗಿ ಪರಮಾತ್ಮನ ಜ್ಞಾನ ಉಳ್ಳವರು. ಅಷ್ಟು ತಿಳಿದವರು ಬೇರೆ ಯಾರೂ ಇಲ್ಲ ಶ್ರೀಹರಿಯು ತನ್ನನ್ನು ತಾನು ಎಷ್ಟು ತಿಳಿದಿರವವನೋ ಅಷ್ಟು ಲೋಕಪೂಜ್ಯರಾದ ಬ್ರಹ್ಮ-ವಾಯುಗಳೂ ತಿಳಿಯಲಿಲ್ಲ ಎಂದು ಬ್ರಹ್ಮಾಂಡಪುರಾಣದಲ್ಲಿದೆ. ।। ೩೫ ।।

*ಅಜ್ಞಾನಕ್ಕೆ ಕಾರಣ ತಿಳಿಸುತ್ತ ಇದನ್ನೇ ವಿವರಿಸುವರು-*

**ನಾಽಹಂ ನ ಯೂಯಂ ಬತ ತದ್ಗತಿಂ ವಿದುಃ**
**ನ ವಾಮದೇವಃ ಕಿಮುತಾಽಪರೇ ಸುರಾಃ ।**
**ಯನ್ಮಾಯಯಾ ಮೋಹಿತಬುದ್ಧಯಸ್ತ್ವಿದಂ**
**ವಿನಿರ್ಮಿತಂ ಸ್ವಾತ್ಮಸಮಂ ವಿಚಕ್ಷ್ಮಹೇ ।। ೩೬ ।।**

**ಯನ್ಮಾಯಯಾ** ಯಾವನ ಬಂಧಕಶಕ್ತಿಯಿಂದ, **ಮೋಹಿತಬುದ್ಧಯಃ** ಮೋಹಗೊಂಡ ಬುದ್ಧಿಯುಳ್ಳ **ಅಹಂ** ನಾನು, ವಾಯುದೇವರು, **ಯೇನ** ಯಾರಿಂದ, **ಇದಂ** ಈ ಜಗತ್ತು, **ವಿನಿರ್ಮಿತಂ** ಸೃಷ್ಟಿಸಲ್ಪಟ್ಟಿತ್ತೋ, **ತದ್ಗತಿಂ** ಅವನ ಸ್ಥಿತಿಯನ್ನು **ನ ವಿದುಃ** ಸಂಪೂರ್ಣವಾಗಿ ತಿಳಿದಿಲ್ಲ **ಅಪರೇ ಸುರಾ ನ ವಿದುಃ ಇತಿ ಕಿಮುತ** ಉಳಿದ ದೇವತೆಗಳು ತಿಳಿದಿಲ್ಲವೆಂಬುದು ಕೈಮುತ್ಯಸಿದ್ಧ. ಸರ್ವಥಾ ತಿಳಿದಿಲ್ಲವೇ ಎಂದರೆ, **ಸ್ವಾತ್ಮಸಮಂ ವಿಚಕ್ಷ್ಮಹೇ** ಯೋಗ್ಯತಾನುಸಾರ ತಿಳಿದಿರುವೆವು ಹೆಚ್ಚಿಗೆ ಇಲ್ಲ

ಇಲ್ಲಿ ಬ್ರಹ್ಮ-ವಾಯುಗಳಿಗೆ ಮೋಹವೆಂದರೆ ಭ್ರಮವಲ್ಲ ೧೧ನೇ ಸ್ಕಂಧ ೩ನೇ ಅಧ್ಯಾಯ ೧೩ ನೇ ಶ್ಲೋಕದ ತಾತ್ಪರ್ಯದಲ್ಲಿ ಹೇಳಿದಂತೆ ನೂರು ಜನ್ಮದ ಹಿಂದೆ ಅಪರೋಕ್ಷ ಜ್ಞಾನವಿಲ್ಲದಿರುವುದೇ ಮೋಹವೆಂದು ತಿಳಿಯಬೇಕು. ಅಲ್ಲಿಯ ತಾತ್ಪರ್ಯೋದಾಹೃತ ಶಕ್ತಿತತ್ವವಿವೇಕದ ವಾಕ್ಯವು ಈ ರೀತಿಯಾಗಿದೆ-

**ಸರ್ವೇಷಾಂ ಬ್ರಹ್ಮಪದವೀಯೋಗ್ಯಾನಾಂ ಪೂರ್ವಮೇವ ತು ।**
**ಅಭಾವಸ್ತ್ವಪರೋಕ್ಷಸ್ಯ ಮೋಹೋ ಜ್ಞಾನಸ್ಯ ಭಣ್ಯತೇ ॥**

*ಮಂಗಲರೂಪನಾದ ಶ್ರೀಹರಿಯ ಮೂಲರೂಪವನ್ನು ಸಂಪೂರ್ಣವಾಗಿ ತಿಳಿಯಲು, ವರ್ಣಿಸಲು ಅಶಕ್ಯವಾದರೂ ಅವನ ಅವತಾರರೂಪಗಳನ್ನು ಅವುಗಳ ಕಾರ್ಯವನ್ನು ಸಂಪೂರ್ಣವಾಗಿ ವರ್ಣಿಸಿರಿ ಎಂಬ ನಾರದರ ಮಾನಸಿಕಶಂಕೆಯನ್ನು ತಿಳಿದು ಶ್ರೀಹರಿಯ ಅವತಾರಗಳನ್ನು ಕಾರ್ಯಗಳನ್ನೂ ಹೇಳಲು ಅವುಗಳನ್ನು ಸಂಪೂರ್ಣ ಹೇಳುವುದು ಸಾಧ್ಯವಿಲ್ಲ ಎಂಬ ಅಭಿಪ್ರಾಯದಿಂದ ಸಾಕಲ್ಯೇನ ಅಜ್ಞೇಯತ್ವವಿಶೇಷಣವಿಶಿಷ್ಟನಾದ ಭಗವನ್ನಮನರೂಪ ಮಂಗಲವನ್ನು ಮೊದಲಿಗೆ ಮಾಡುವರು-*

**ಯಸ್ಯಾವತಾರಕರ್ಮಾಣಿ ಗಾಯಂತಿ ಹ್ಯಸ್ಮದಾದಯಃ ।**
**ನ ಯಂ ವಿದಂತಿ ತತ್ತ್ವೇನ ತಸ್ಮೈ ಭಗವತೇ ನಮಃ** ॥ ೩೭ ॥

**ಯಸ್ಯ** ಯಾವನ, **ಅವತಾರಕರ್ಮಾಣಿ** ಅವತಾರಕಾರ್ಯಗಳನ್ನು, **ಅಸ್ಮದಾದಯಃ** ನಾನೇ ಮೊದಲಾದವರು, **ಗಾಯಂತಿ** ಯೋಗ್ಯತಾನುಸಾರವಾಗಿ ಗಾನಮಾಡುವೆವು, ಆದರೆ **ಯಂ** ಯಾವಾತನನ್ನು, **ತತ್ತ್ವೇನ ನ ವಿದಂತಿ** ಸಾಕಲ್ಯೇನ ತಿಳಿಯಲಾರೆವೋ, **ತಸ್ಮೈ** ಅಂತಹ, **ಭಗವತೇ** ಶ್ರೀಹರಿಗೆ, **ನಮಃ** ನಮಸ್ಕಾರವು. ॥ ೩೭ ॥

ಅವತಾರಕಾರ್ಯಗಳನ್ನು ಸಂಕ್ಷೇಪವಾಗಿ ತಿಳಿಸುವರು-

**ಸ ಏಷ ಆದ್ಯಃ ಪುರುಷಃ ಕಲ್ಪೇ ಕಲ್ಪೇ ಸೃಜತ್ಯಜಃ ।**
**ಆತ್ಮಾತ್ಮನ್ಯಾತ್ಮನಾತ್ಮಾನಂ ಸ ಸಂಯಚ್ಛತಿ ಪಾತಿ ಚ** ॥ ೩೮ ॥

**ಸಃ** ಪುರುಷಸೂಕ್ತೋಕ್ತಮಹಿಮೆಯಿಂದ ಕೂಡಿದ, **ಏಷಃ** ಸಾಕಲ್ಯೇನ ವರ್ಣಿಸಲಶಕ್ಯನೆಂದು ಹೇಳಲ್ಪಟ್ಟ, **ಆದ್ಯಃ ಪುರುಷಃ** ಪದ್ಮನಾಭನು, **ಕಲ್ಪೇ ಕಲ್ಪೇ** ಪ್ರತಿದಿವಸದಲ್ಲಿಯೂ, (ಬ್ರಹ್ಮದೇವರ) **ಅಜಃ** ದೇಹೋತ್ಪತ್ತಿರಹಿತನಾದ, **ಆತ್ಮಾ** ತಾನೇ, **ಆತ್ಮನಿ** ತನ್ನನ್ನೇ ಆಧಾರವಾಗಿಟ್ಟುಕೊಂಡು, **ಆತ್ಮನಾ** ತನ್ನ ಇಚ್ಛೆಯಿಂದ, **ಆತ್ಮಾನಂ** ತನ್ನಿಂದ ಅಭಿನ್ನವಾದ ಮತ್ಸ್ಯಾದಿಗಳನ್ನು, **ಸೃಜತಿ** ವ್ಯಕ್ತಮಾಡುವನು. **ತೈಃ** ಅವುಗಳಿಂದ, **ಅಸುರಾನ್** ದೈತ್ಯರನ್ನು, **ಸಂಯಚ್ಛತಿ** ಸಂಹರಿಸುವನು, **ಸುರಾದೀನ್** ದೇವತೆಗಳೇ ಮೊದಲಾದ ಸಜ್ಜನರನ್ನು, **ಪಾತಿ** ರಕ್ಷಿಸುವನು. ॥ ೩೮ ॥

ಇಲ್ಲಿ ಆತ್ಮಾ ನ ಎಂಬುದಕ್ಕೆ ಸೃಜತಿ ಎಂಬಲ್ಲಿ ಅನ್ವಯ ತೊರುವಂತೆ ಸಂಯಚ್ಛತಿ ಎಂಬಲ್ಲಿಯೂ ಪಾತಿ ಎಂಬಲ್ಲಿಯೂ ಅನ್ವಯ ತೋರುವುದು ಆತ್ಮಾದಿಶಬ್ದಗಳಿಗೆ (ಆತ್ಮಾ ಆತ್ಮಾನಂ ಆತ್ಮನಾ ಆತ್ಮನಿ) ವಿವಕ್ಷಿತವಾದ ಅರ್ಥವು ತಿಳಿಯುವುದಿಲ್ಲ ಆದ್ದರಿಂದ ಪ್ರಮಾಣದಿಂದ ವಾಖ್ಯಾನಿಸುವರು-

**ತಾತ್ಪರ್ಯ- ಸ್ವಯಮೇವ ಸ್ವರೂಪಾಣಿ ಮತ್ಸ್ಯಕೂರ್ಮಾದಿಕಾನ್ಯಜಃ ।**
**ಸ್ವಾತ್ಮನ್ಯೇವೇಚ್ಛಯಾ ಸೃಷ್ಟ್ವಾ ತೈರ್ದೇವಾದೀನ್ಪ್ರಪಾತ್ಯಸೌ ॥**

**ಸಂಯಂಚ್ಛತ್ಯಸುರಾನ್ ವಿಷ್ಣುಃ ಕಲ್ಪೇ ಕಲ್ಪೇ ಜಗತ್ಪ್ರಭುಃ ।**
**ತಿರೋಹಿತಂ ಸ್ವರೂಪಂ ಚ ಪ್ರಕಾಶಯತಿ ಶಾಸ್ತ್ರತಃ ॥ -ಇತಿ ಭಾಗವತತಂತ್ರೇ**

**ಆತ್ಮಾ** ಶ್ರೀಹರಿಯು ತಾನೇ, **ಆತ್ಮಾನಂ** ತನ್ನಿಂದ ಅಭಿನ್ನಗಳಾದ ಮತ್ಸ್ಯ-ಕೂರ್ಮ ಮೊದಲಾದ ತನ್ನ ರೂಪಗಳನ್ನು ಬ್ರಹ್ಮದೇವರ ಪ್ರತಿದಿವಸದಲ್ಲಿಯೂ **ಆತ್ಮನಾ** ತನ್ನ ಇಚ್ಛೆಯಿಂದ, **ಆತ್ಮನಿ** ತನ್ನಲ್ಲಿಯೇ, ಅಭಿವ್ಯಕ್ತಗೊಳಿಸಿ ಆ ಅವತಾರಗಳಿಂದ ದೇವಾದಿಗಳನ್ನು (ಅಧ್ಯಾಹಾರ) ರಕ್ಷಿಸುತ್ತಾನೆ ಅಸುರರನ್ನು (ಅಧ್ಯಾಹಾರ) ಸಂಹರಿಸುತ್ತಾನೆ. ಮರೆಯಾದ ತನ್ನ ಸ್ವರೂಪವನ್ನು (ವ್ಯಾಸಾದಿರೂಪಗಳಿಂದ) ಪ್ರಕಾಶಪಡಿಸುತ್ತಾನೆ, ಎಂದು ಭಾಗವತತಂತ್ರದಲ್ಲಿ ಹೇಳಿದೆ. ॥ ೩೮ ॥

ವ್ಯಾಸಾದಿರೂಪಗಳಿಂದ ಎಂತಹ ಭಗವತ್ಸ್ವರೂಪವು ಪ್ರಕಾಶಿತವಾಯಿತು? ಆಜ್ಞಾನದಿಂದ ಫಲವೇನು ಎಂದರೆ ಹೇಳುವರು-

**ವಿಶುದ್ಧಂ ಕೇವಲಂ ಜ್ಞಾನಂ ಪ್ರತ್ಯಕ್ ಸಮ್ಯಗವಸ್ಥಿತಮ್ ।**
**ಸತ್ಯಂ ಪೂರ್ಣಮನಾದ್ಯಂತಂ ನಿರ್ಗುಣಂ ನಿತ್ಯಮದ್ವಯಮ್ ॥ ೩೯ ॥**

**ವಿಶುದ್ಧಂ** ಸ್ವತಃ ನಿರ್ದೋಷನಾದ, **ಕೇವಲಂ** ಸ್ವಸಮರಹಿತನಾದ, **ಜ್ಞಾನಂ** ಅಖಿಲ ಜ್ಞಾನರೂಪನಾದ, **ಪ್ರತ್ಯಕ್** ಸರ್ವಾಂತಸ್ಥನಾದ, **ಸಮ್ಯಗವಸ್ಥಿತಂ** ಅಪವಿತ್ರವಾದುದರ ಸ್ಪರ್ಶವಾದರೂ ಶುದ್ಧವಾಗಿಯೇ ಇರುವ, **ಸತ್ಯಂ** ಸಾಧುಗುಣ ಉಳ್ಳ **ಪೂರ್ಣಂ** ದೇಶತಃ ಅಪರಿಚ್ಛಿನ್ನನಾದ, **ನಿರ್ಗುಣಂ** ಸತ್ತ್ವಾದಿಗುಣಗಳ ಬಂಧವಿಲ್ಲದ, **ಅನಾದ್ಯಂತಂ** ಕಾಲತಃ ಪರಿಚ್ಛೇದವಿಲ್ಲದ, **ನಿತ್ಯಂ** ದೇಹದಿಂದಲೂ ನಿತ್ಯನಾದ, **ಅದ್ವಯಂ** ಸ್ವಗತಭೇದಶೂನ್ಯನಾದ ಅಥವಾ ನಿತ್ಯಂ ಎಂದರೆ ಸರ್ವದಾ ಎಂದರ್ಥ. ಪೂರ್ವೋತ್ತರಗಳಲ್ಲಿ ಸಂಬಂಧ ಸರ್ವದಾ ಅದ್ವಯ ಸರ್ವದಾ ನಿರ್ಗುಣ ಎಂದರ್ಥ. ॥ ೩೯ ॥

**ಋತಂ ವಿದಂತಿ ಮುನಯಃ ಪ್ರಶಾಂತಾತ್ಮೇಂದ್ರಿಯಾಶಯಾಮ್ ।**
**ಯದಾ ತದೈವಾಸತ್ತರ್ಕೈಸ್ತಿರೋಧೀಯೇತ ವಿಪ್ಲುತಮ್ ॥ ೪೦ ॥**

**ಋತಂ** ಅಪರಿಣಾಮಿಯಾದ ಶಶ್ವದೇಕಪ್ರಕಾರವಾದ ಭಗವತ್ಸ್ವರೂಪವನ್ನು, **ಪ್ರಶಾಂತಾತ್ಮೇಂದ್ರಿಯಾಶಯಾಂ** ಅತ್ಯಂತವಾಗಿ ವಿಷಯಗಳಲ್ಲಿ ಅಲಂಬುದ್ಧಿಯನ್ನು ಪಡೆದ ದೇಹೇಂದ್ರಿಯಮನಸ್ಸುಳ್ಳ ಸಜ್ಜನರಾದ, **ಮುನಯಃ** ಋಷಿಗಳು, **ಯದಾ** ಯಾವಾಗ, **ವಿದಂತಿ** ವ್ಯಾಸಾದಿಗಳಿಂದ ಮಾಡಲ್ಪಟ್ಟ ಸಚ್ಛಾಸ್ತ್ರಗಳ ಶ್ರವಣ-ಮನನ-ಧ್ಯಾನದಿಂದ ಅಪರೋಕ್ಷವಾಗಿ ತಿಳಿಯುವರೋ, **ತದೈವ** ಆಗಲೇ, **ಅಸತ್ತರ್ಕೈಃ** ದುಷ್ಟಶಾಸ್ತ್ರಗಳಲ್ಲಿ ಹೇಳಿದ ದುಷ್ಟತರ್ಕಗಳಿಂದ, **ವಿಪ್ಲುತಂ** ಮಿಥ್ಯಾಜ್ಞಾನಪರಂಪರಾಜನಕವಾದ್ದರಿಂದ ದೂಷಿತವಾದ ಜಡವಾದ ಅಂತಃಕರಣವು, **ತಿರೋಧೀಯೇತ** ಅಡಗುವದು, ಹುರಿದ ಬೀಜದಂತಾಗುವುದು. ಮಿಥ್ಯಾಜ್ಞಾನ ಜನಕವಾಗಲಾರದು ಎಂದು ಭಾವ.

ಮೇಲಿನ ಎರಡು ಶ್ಲೋಕಗಳಲ್ಲಿ ಇರುವ ಋತ-ಸತ್ಯ ಮುಂತಾದ ಶಬ್ದಗಳ ಅರ್ಥ ಭೇದವನ್ನು ಪ್ರಮಾಣದಿಂದ ತಿಳಿಸುವರು-

**ತಾತ್ಪರ್ಯ- ಋತಂ ತದಾತ್ಮನಾ ಜ್ಞಪ್ತೇಃ ಸತ್ಯಂ ಸಾಧುತ್ವತಃ ಪರಮ್ ।**
**ಸಮ್ಯಕ್ ಸಂಸ್ಥಮದೂಷ್ಯತ್ವಾತ್ ಶುದ್ಧಂ ದೋಷೋಜ್ಝಿತತ್ವತಃ ॥**

**ಕೇವಲಂ ತಾದೃಶಾಭಾವಾತ್ ಪ್ರತ್ಯಗಂತರವಸ್ಥಿತೇಃ ।**
**ಏತದೇತಾದೃಶಂ ತತ್ತ್ವಂ ಯೋ ವೇದ ಸ ವಿಮುಚ್ಯತೇ ॥ -ಇತಿ ಬ್ರಹ್ಮತರ್ಕೇ**

ಸರ್ವದಾ ಏಕಪ್ರಕಾರವಾಗಿ ತಿಳಿಯಲ್ಪಡುವುದರಿಂದ ಋತನೆಂದೂ, ಗುಣಪೂರ್ಣನಾದುದರಿಂದ ಸತ್ಯನೆಂದು, ಅಪವಿತ್ರವಾದ ಸ್ಪರ್ಶಾದಿಗಳಿಂದ ದೂಷಿಸಲ್ಪಡದಿರುವುದರಿಂದ ಸಮ್ಯಗವಸ್ಥಿತನೆಂದೂ, ದೋಷವಿಲ್ಲದಿರುವುದರಿಂದ ಶುದ್ಧನೆಂದೂ, ಸದೃಶವಾದ ವಸ್ತು ಇಲ್ಲದಿರುವುದರಿಂದ ಕೇವಲನೆಂದೂ, ಎಲ್ಲರ ಹೃದಯಲ್ಲಿ ನಿಯಾಮಕನಾಗಿರುವುದರಿಂದ ಪ್ರತ್ಯಕ್ ಎಂದೂ, ಅನ್ನಿಸಿಕೊಳ್ಳುವ ಶ್ರೀಹರಿಯ ಸ್ವರೂಪವನ್ನು ಯಾವನು ತಿಳಿಯುತ್ತಾನೋ ಆತನು ಮುಕ್ತನಾಗುತ್ತಾನೆ. ಎಂದು ಬ್ರಹ್ಮತರ್ಕದಲ್ಲಿದೆ.

*ಈಗ ವಿಸ್ತಾರವಾಗಿ ಅವತಾರಗಳನ್ನು ತಿಳಿಸುತ್ತ ಮೊದಲಿನ ಅವತಾರವನ್ನು ಮೊದಲು ತಿಳಿಸುವರು-*

**ಆದ್ಯೋಽವತಾರಃ ಪುರುಷಃ ಪರಸ್ಯ**
**ಕಾಲಸ್ವಭಾವಃ ಸದಸನ್ಮನಶ್ಚ ।**

**ದ್ರವ್ಯಂ ವಿಕಾರೋ ಗುಣ ಇಂದ್ರಿಯಾಣಿ**
**ವಿರಾಡ್ ಸ್ವರಾಟ್ ಸ್ಥಾಸ್ನು ಚರಿಷ್ಣು ಭೂಮ್ನಃ ॥ ೪೦ ॥**

**ಪರಸ್ಯ** ನಾರಾಯಣನ, **ಆದ್ಯಃ ಅವತಾರಃ** ಮೊದಲನೇ ಅವತಾರವು, **ಪುರುಷಃ** ಪುರುಷ ಎಂಬುವುದು, **ಕಾಲಃ** ಕಾಲವು ಕಾಲಾಭಿಮಾನಿ ಬ್ರಹ್ಮದೇವರು, **ಸ್ವಭಾವಃ** ಸ್ವಭಾವವು, **ಸದಸತ್** ಪ್ರಾಣ ಮತ್ತು ಪ್ರಕೃತಿಯು, **ಮನಃ** ಮನಸ್ತತ್ವವು, **ದ್ರವ್ಯಂ** ಪಂಚಭೂತಗಳು, **ವಿಕಾರಃ** ಬ್ರಹ್ಮಾಂಡವು, **ಗುಣಃ** ಸತ್ತ್ವಾದಿಗಳು, **ಇಂದ್ರಿಯಾಣಿ** ಇಂದ್ರಿಯಗಳು, **ವಿರಾಟ್** ಗರುಡನು, **ಸ್ವರಾಟ್** ಇಂದ್ರನು, **ಸ್ಥಾಸ್ನು** ಸ್ಥಾವರ, **ಚರಿಷ್ಣು** ಜಂಗಮವು, **ಭೂಮ್ನಃ** ಪೂರ್ಣವಾದ ಶ್ರೀಹರಿಯ, **ರೂಪವತ್** ಪ್ರತಿಮೆ ಇದ್ದಂತೆ.

**ಅಹಂ ಭವೋ ಯಜ್ಞ ಇಮೇ ಪ್ರಜೇಶಾಃ ದಕ್ಷಾದಯೋ ಯೇ ಭವದಾದಯಶ್ಚ ।**
**ಸ್ವರ್ಲೋಕಪಾಲಾ ಖಗಲೋಕಪಾಲಾ ನೃಲೋಕಪಾಲಾಸ್ತಲಲೋಕಪಾಲಾಃ ॥ ೪೨ ॥**

**ಅಹಂ** ನಾನು (ಕಾಲಾಭಿಮಾನಿಯಾಗಿ ಬ್ರಹ್ಮನನ್ನು ಹೇಳಿದ್ದರೂ ರೂಪಾಂತರ ವಿವಕ್ಷೆಯಿಂದ ಅಹಂ ಎಂದು ಹೇಳಿರುವರು), **ಭವಃ** ರುದ್ರದೇವರು, **ಯಜ್ಞಃ** ಯಜ್ಞಾಭಿಮಾನಿಯು, **ಇಮೇ ಪ್ರಜೇಶಾಃ** ಈ ಪ್ರಜಾಪತಿಗಳಾದ, **ದಕ್ಷಾದಯಃ** ದಕ್ಷಮೊದಲಾದವರು, **ಭವದಾದಯಃ** ನೀನೇ ಮೊದಲಾದ ಪರಮಹಂಸರು, **ಸ್ವರ್ಲೋಕಪಾಲಾಃ** ಇಂದ್ರಾದಿಗಳು, **ಖಗಲೋಕಪಾಲಾಃ** ಅರುಣಾದಿಗಳು, **ನೃಲೋಕಪಾಲಾಃ** ಪ್ರಿಯವ್ರತಾದಿಗಳು, **ತಲಲೋಕಪಾಲಾಃ** ಬಲ್ಯಾದಿಗಳು,

**ಗಂಧರ್ವವಿದ್ಯಾಧರಚಾರಣೇಶಾಃ**
**ಯೇ ಯಕ್ಷರಕ್ಷೋರಗನಾಗನಾಥಾಃ ।**
**ಯೋ ವಾ ಋಷೀಣಾಂ ಋಷಭಾಃ ಪಿತೃಣಾಂ**
**ದೈತ್ಯೇಂದ್ರಸಿದ್ಧೇಶ್ವರದಾನವೇಂದ್ರಾಃ ॥ ೪೩ ॥**

**ಗಂಧರ್ವೇಶಾಃ** ವಿಶ್ವಾವಸು ಮುಂತಾದವರು, **ವಿದ್ಯಾಧರೇಶಾಃ** ಚಿತ್ರಕೇತ್ವಾದಿಗಳು, **ಚಾರಣೇಶಾಃ** ಪುಷ್ಪದಂತಾದಿಗಳು, **ಯೇ** ಯಾರು, **ಯಕ್ಷನಾಥಾಃ** ಕುಬೇರಾದಿಗಳು, **ರಕ್ಷನಾಥಾಃ** ನಿಯುತಿ ಮುಂತಾದವರು, **ಉರಗನಾಥಾಃ** ವಾಸುಕಿ ಮೊದಲಾದವರು, **ನಾಗನಾಥಾಃ** ಅನಂತಾದಿಗಳು, **ಋಷೀಣಾಂ ಋಷಭಾಃ** ಋಷಿಶ್ರೇಷ್ಠರಾದ ವಸಿಷ್ಠಾದಿಗಳು, **ಪಿತೃಣಾಂ ಋಷಭಾಃ** ಅಗ್ನಿಷ್ವಾತ್ತಾದಿಗಳು, **ದೈತ್ಯೇಂದ್ರ** ಪ್ರಹ್ಲಾದಾದಿಗಳು, **ಸಿದ್ಧೇಶ್ವರ** ಸನಕಾದಿಗಳು, **ದಾನವೇಂದ್ರಾಃ** ವೃಷಪರ್ವಾದಿಗಳು, ॥ ೪೩ ॥

**ಅನ್ಯೇ ಚ ಯೇ ಪ್ರೇತಪಿಶಾಚಭೂತಕೂಷ್ಮಾಂಡಯಾದೋಮೃಗಪಶ್ವಧೀಶಾಃ ।**
**ಯತ್ಕಿಂಚ ಲೋಕೇ ಭಗವನ್ ಮಹಸ್ವದೋಜಃ ಸಹಸ್ವತ್ ಬಲವತ್ ಕ್ಷಮಾವತ್ ।**
**ಹ್ರೀಶ್ರೀವಿಭೂತ್ಯಾತ್ಮವದದ್ಭುತಾರ್ಣಂ ತತ್ತತ್ಪರಂ ರೂಪವದಸ್ವರೂಪಮ್ ॥ ೪೪ ॥**

**ಅನ್ಯೇ ಚ ಯೇ** ಬೇರೆ ಯಾವ, **ಪ್ರೇತೇಶ** ಯಮ, **ಪಿಶಾಚೇಶ** ಘಂಟಾಕರ್ಣಾದಿಗಳು, **ಭೂತೇಶ** ಭೈರವಾದಿಗಳು, **ಕೂಷ್ಮಾಂಡೇಶ** ಭೃಂಗಿ ಮುಂತಾದವರು, **ಯಾದಸಾಂ ಈಶಾಃ** ಜಲಚರಗಳಿಗೆ ಒಡೆಯರಾದ ತಿಮಿಂಗಲಾದಿಗಳು, **ಮೃಗೇಶಾಃ** ಸಿಂಹಾದಿಗಳು, **ಪಶ್ವಧೀಶಾಃ** ನಂದಿಕೇಶ್ವರಾದಿಗಳೇನಿರುವರೋ, **ಲೋಕೇ** ಜಗತ್ತಿನಲ್ಲಿ, **ಯತ್ಕಿಂ ಚ** ಯಾವುದೆಲ್ಲವೂ, **ಭಗವತ್** ಐಶ್ವರ್ಯಾದಿಗುಣ ಉಳ್ಳದ್ದು **ಮಹಸ್ವತ್** ಸ್ವತಃ ಮಹತ್ವ ಉಳ್ಳದ್ದು **ಓಜಸ್ವತ್** ಅವಷ್ಟಂಭ ಶಕ್ತಿ ಉಳ್ಳದ್ದು **ಸಹಸ್ವತ್** ಸಹನೆ ಉಳ್ಳದ್ದು **ಬಲವತ್** ಶರೀರಶಕ್ತಿಯುಳ್ಳದ್ದು **ಕ್ಷಮಾವತ್** ಕಾರಣವಿದ್ದರೂ ಸಿಟ್ಟು ಬರದಿರುವ, **ಹ್ರೀಮತ್** ಅಯೋಗ್ಯವಿಷಯದಲ್ಲಿ ಲಜ್ಜೆ ಇದ್ದದ್ದು, **ಶ್ರೀಮತ್** ಒಳ್ಳೆಯ ಲಕ್ಷಣ ಉಳ್ಳದ್ದು **ವಿಭೂತಿಮತ್** ವಿಶೇಷವನ್ನು ಪಡೆಯುವ ಯೋಗ್ಯತೆ ಉಳ್ಳದ್ದು **ಆತ್ಮವತ್** ಮನೋಜಯ ಉಳ್ಳದ್ದು **ಅದ್ಭುತಾರ್ಣಂ** ಆಶ್ಚರ್ಯಸಮುದ್ರವಾದ, **ಪರಂ** ವಿಶಿಷ್ಟವಾದ, **ತತ್ ತತ್** ಪೂರ್ವೋಕ್ತವಾದುದು ಎಲ್ಲವೂ, **ಅಸ್ವರೂಪಂ** ಪುರುಷಾದಿಗಳಂತೆ ಸ್ವರೂಪವಲ್ಲ ಆದರೂ, **ರೂಪವತ್** ರೂಪವೆಂಬಂತೆ, **ಆಮನಂತಿ** ಅವನಿಗೆ ಪ್ರಿಯವಾದುದರಿಂದ ಅವನ ಸನ್ನಿಧಾನದಿಂದ ಕೂಡಿದ್ದರಿಂದ ಹೇಳಲ್ಪಡುವುದು. ॥ ೪೪ ॥

*ಮತ್ಸ್ಯಾದಿಗಳು ಅವತಾರಗಳೆಂಬುದಕ್ಕೆ ಯುಕ್ತಿಯನ್ನು ಹೇಳುತ್ತ ಅವುಗಳನ್ನು ಕ್ರಮವಾಗಿ ಹೇಳುವೆನೆಂದು ಪ್ರತಿಜ್ಞೆ ಮಾಡುವರು-*

**ಪ್ರಾಧಾನ್ಯತೋ ಯಾನೃಷಯ ಆಮನಂತಿ**
**ಲೀಲಾವತಾರಾನ್ ಪುರುಷಸ್ಯ ಭೂಮ್ನಃ ।**
**ಆಪೀಯತಾಂ ಕರ್ಮಕಷಾಯಶೋಷಾನ-**
**ನುಕ್ರಮಿಷ್ಯೇತ ಇಮಾನ್ ಸುಪೇಶಲಾನ್ ॥ ೪೫ ॥**

**ಋಷಯಃ** ಬ್ರಹ್ಮಾದಿ ವಿಜ್ಞಾನಿಗಳು, **ಭೂಮ್ನಃ** ಆನಂದಾದಿಗುಣಪೂರ್ಣನಾದ, **ಪುರುಷಸ್ಯ** ಶ್ರೀಹರಿಯ, **ಯಾನ್** ಯಾವ, **ಲೀಲಾವತಾರಾನ್** ಕ್ರಿಡಾರೂಪವಾದ ಅವತಾರಗಳನ್ನು, **ಆಮನಂತಿ** ಹೇಳುವರೋ ಉಪಾಸಿಸುವರೋ, (**ಪ್ರಧಾನ್ಯತಃ** ಸರ್ವೋತ್ತಮತ್ವೇನ) **ತಾನ್** ಅವುಗಳನ್ನು, **ತೇ** ನಿನಗೆ, **ಅನುಕ್ರಮಿಷ್ಯೇ** ಕ್ರಮವಾಗಿ

ವರ್ಣಿಸುವೆನು, **ಸುಪೇಶಲಾನ್** ಮಧುರವಾದುದಕ್ಕಿಂತ ಅತಿಮಧುರವಾದ, **ಕರ್ಮಕಷಾಯಶೋಷಾನ್** ದೇಹಾರಂಭಕವಾದ ಕರ್ಮಗಳನ್ನು ನಾಶಮಾಡುವ, **ಇಮಾನ್** ಇವುಗಳನ್ನು, **ಆಪೀಯತಾಂ** ಕರ್ಣಪುಟಗಳಿಂದ ಪಾನ ಮಾಡಿರಿ. ಅಥವಾ **ಆಪೀಯತಾಂ** ಪಾನಮಾಡುವವರಿಗೆ, **ಕರ್ಮಕಷಾಯಶೋಷಾನ್** ದೇಹಾರಂಭಕವಾದ ಕರ್ಮಗಳಿಗೆ ಅನೇಕ ಔಷಧರಸಗಳ ಕಷಾಯದಂತೆ ಇರುವ, ನಾಶಕವಾದ, ಆದ್ದರಿಂದಲೇ ಮಧುರವಾದ ಕಿವಿಗಿಂಪಾದುದನ್ನು ವರ್ಣಿಸುವೆ ಎಂದರ್ಥ. ।।೪೫।।

೪೧ ನೇ ಶ್ಲೋಕದಲ್ಲಿ 'ಪರಸ್ಯ' ಎಂಬುದಕ್ಕೆ ಹೇಳಿದ ವಿಶುದ್ಧ ಸ್ವರೂಪದಿಂದ ಭಿನ್ನವಾದ ಮಾಯಾವಚ್ಛಿನ್ನ ಎಂದರ್ಥ ತೋರುವುದು. ಪುರುಷಪದದಿಂದ ಪುನ್ನಾಮಕ ಬ್ರಹ್ಮಾ ಎಂದೂ ತೋರುವುದು ಇವೆರಡೂ ಪ್ರಮಾಣವಿರುದ್ಧ ಎಂದು ಪರ, ಪುರುಷ ಎಂಬ ಶಬ್ದಗಳನ್ನು ಚೆನ್ನಾಗಿ ವ್ಯಾಖ್ಯಾನಿಸಲು ಪ್ರಮಾಣವನ್ನು ಉದಾಹರಿಸುವರು-

ತಾತ್ಪರ್ಯ- ಯಃ ಶೇತೇ ಪ್ರಲಯೇ ವಿಷ್ಣುಃ ಶೂನ್ಯನಾಮಾ ಮಹಾಕೃತಿಃ ।
ಸ ತು ನಾರಾಯಣೋ ನಾಮ ನರಾಣಾಮಯನತ್ವತಃ ।।

ರೂಪಂ ದ್ವಿತೀಯಂ ಭವತಿ ದೀಪಾದ್ದೀಪಾಂತರಂ ಯಥಾ ।
ಸಿಸೃಕ್ಷೋಸ್ತಸ್ಯ ಪುರುಷ ಇತ್ಯಾಹುಸ್ತದ್ವಿದೋ ಜನಾಃ ।।

ಸ ರಮಾಯಾ ದ್ವಿತೀಯೇ ತು ರೂಪೇ ಪ್ರಕೃತಿಸಂಜ್ಞಿತೇ ।
ವೀರ್ಯಮಾಧತ್ತ ಪುರುಷೋ ಮಹಾಂಸ್ತಸ್ಮಾದಜಾಯತ ।।

ಯೋಽಸೌ ಹಿರಣ್ಯಗರ್ಭಾಖ್ಯಃ ಪುರುಷಃ ಸೋಽಪಿ ಭಣ್ಯತೇ ।
ಶ್ರದ್ಧೇತ್ಯುಕ್ತಾ ತು ತತ್ಪತ್ನೀ ಸಾಽಪಿ ಪ್ರಕೃತಿರುಚ್ಯತೇ ।।

ಪ್ರಲಯೇ ತ್ವಶರೀರೌ ತೌ ವಿಭಾಗೇನ ವ್ಯವಸ್ಥಿತೌ ।
ಶರೀರಂ ಪ್ರಾಪ್ಯ ಪುರುಷಾತ್ ಸಂಯೋಗಂ ತೌ ಪ್ರಚಕ್ರತುಃ ।।

ತತಃ ಪುನರ್ಮಹತ್ತತ್ತ್ವಂ ಪ್ರಜಾತಂ ಜಗದಂಕುರಮ್ ।
ಸ್ವಸ್ಯೈವ ಪುತ್ರತಾಂ ಯಾತಮಹಂಕಾರಸ್ತತೋಽಜನಿ ।। -ಇತಿ ವ್ಯೋಮಸಂಹಿತಾಯಾಂ

ಪುರುಷಃ ತಸ್ಯೈವಾದ್ಯೋಽವತಾರಃ । ಕಾಲಾದಯೋ ರೂಪವತ್ । ಅಸ್ವರೂಪಮಪಿ ಪ್ರಿಯತ್ವಾತ್,

ಪುರಾಷಾದ್ಯಾ ಹರೇ ರೂಪಂ ಬ್ರಹ್ಮಾದ್ಯಾಸ್ತತ್ಪ್ರಿಯಾಃ ಸ್ಮೃತಾಃ ।
ಸ್ವರೂಪಭೂತಾ ನೈವೈತೇ ತತ್ಸನ್ನಿಧಿಯುತಾ ಅಪಿ ।। -ಇತಿ ಪಾದ್ಮೇ

ಕಾಲೊ ವಸ್ತುಸ್ವಭಾವಶ್ಚ ಪ್ರಕೃತಿಃ ಪ್ರಾಣ ಏವ ಚ ।
ಮನಶ್ಚ ಪಂಚಭೂತಾನಿ ವಿಕಾರಸ್ತ್ರಿಗುಣಾ ಅಪಿ ।
ನ ಸ್ವರೂಪಂ ಹರೇರೇತತ್ತಥಾಪ್ಯೇಷು ಹರಿಃ ಸ್ಥಿತಃ ॥ -ಇತಿ ಪಾದ್ಮೇ

ಸತ್ ಪ್ರಾಣಃ । 'ಸದಿತಿ ಪ್ರಾಣಃ' ಇತಿ ಶ್ರುತೇಃ ।

ದ್ರವ್ಯಂ ತು ಪಂಚಭೂತಾನಿ ವಿಕಾರೋಽಂಡಮುದಾಹೃತಮ್ ।
ವಿರಾಜಂ ಗರುಡಂ ಪ್ರಾಹುಃ ಸ್ವರಾಡಿಂದ್ರ ಉದಾಹೃತಃ ॥ -ಇತಿ ಷಾಡ್ಗುಣ್ಯೇ

ಸರ್ವಂ ತು ರೂಪವದ್ವಿಷ್ಣೋರ್ವಿಶೇಷೇಣ ವಿಭೂತಿಮತ್ ।
ಅತಿಪ್ರಿಯತ್ವಾನ್ನೈವೈತತ್ಸ್ವರೂಪಮಪಿ ಭಣ್ಯತೇ ॥ -ಇತಿ ಸ್ಕಾಂದೇ

ಸ್ವತೋ ಮಹತ್ವಂ ತು ಮಹೋವಿಶೇಷಪ್ರಾಪ್ತಿಶಕ್ತಿತಾ ।
ವಿಭೂತಿರ್ಲಕ್ಷಣೋನ್ನಾಹೋ ಲಕ್ಷ್ಮೀಶಬ್ದೇನ ಭಣ್ಯತೇ ॥ -ಇತಿ ಬ್ರಹ್ಮತರ್ಕೇ

ಪ್ರಧಾನತ್ವೇನ ಸರ್ವಸ್ಮಾನ್ಮತ್ಸ್ಯಕೂರ್ಮಾದಯೋ ಹರೇಃ ।
ಅವತಾರಾಃ ಶ್ರುತೌ ಖ್ಯಾತಾಃ ಸ ಏವೈತೇ ತತಃ ಸ್ಮೃತಾಃ ॥

ನ ಸ್ವರೂಪಂ ತು ಬ್ರಹ್ಮಾದ್ಯಾಃ ಸ್ಮೃತಾ ಮಯಾವಿಭೂತಯಃ ।
ಸ್ವೇಚ್ಛಯೈಷಾಂ ವಿಶಿಷ್ಟತ್ವಂ ಕುರುತೇ ತತ್ತಥಾ ಸ್ಮೃತಃ ॥ -ಇತಿ ವ್ಯೋಮ ಸಂಹಿತಾಯಾಮ್

ಯಜ್ಞಶಬ್ದೋದಿತೌ ದ್ವೌ ತು ದೇವೌ ಲೋಕಪುರಸ್ಕೃತೌ ।
ಏಕೋ ನಾರಾಯಣಸ್ತತ್ರ ರುದ್ರಃ ಛಿನ್ನಸ್ತಥಾಪರಃ ।
ಸ ತು ಯಜ್ಞಾಭಿಮಾನೀ ಸ್ಯಾತ್ ತತ್ಪತಿಃ ಕೇಶವಃ ಸ್ಮೃತಃ ॥ -ಇತಿ ಪಾದ್ಮೇ ॥ ೪೧-೪೫॥

**ತಾತ್ಪರ್ಯದ ಭಾವಾರ್ಥ-** ಎಲ್ಲ ಕಾರ್ಯದ್ರವ್ಯಗಳು ವಿನಾಶವಾಗುವ ಕಾಲದಲ್ಲಿ ಅತಿ ದೊಡ್ಡ ಶರೀರ ಉಳ್ಳ (ಪ್ರಲಯಕಾಲದಲ್ಲಿ ಎಲ್ಲ ಚೇತನರೂ ಶ್ರೀಹರಿಯ ಹೊಟ್ಟೆಯಲ್ಲಿದ್ದುದರಿಂದ) ಎಲ್ಲ ಚೇತನರಿಗೆ ಆಶ್ರಯನಾದುದರಿಂದ ನಾರಾಯಣನೆನಿಸಿದ ಶ್ರೀವಿಷ್ಣುವು (ಪ್ರಲಯಕಾಲದಲ್ಲಿ ಏನೂ ಇಲ್ಲದಿರುವುದರಿಂದ) ಶೂನ್ಯ ಎಂಬ ಹೆಸರುಳ್ಳವನಾಗಿ ಮಲಗಿರುತ್ತಾನೆ. ಸೃಷ್ಟಿಮಾಡಲಿಚ್ಛಿಸಿದ ಆ ಶ್ರೀಹರಿಯಿಂದ ದೀಪಾಭಿಮಾನಿಯಿಂದ ಮತ್ತೊಂದು ದೀಪಾಭಿಮಾನಿಯು ವ್ಯಕ್ತವಾಗುವಂತೆ ೨ನೇ ರೂಪವೂ ಅಭಿವ್ಯಕ್ತವಾಯಿತು. ಶೂನ್ಯನಾಮಕ ಶ್ರೀಹರಿಯಿಂದುಂಟಾದ ೨ನೇ ರೂಪವನ್ನು ಜ್ಞಾನಿಗಳು ಪುರುಷ ಎನ್ನುತ್ತಾರೆ. ಆ ಪುರುಷನಾಮಕ ಶ್ರೀಹರಿಯು ಪ್ರಕೃತಿನಾಮಕಳಾದ ಲಕ್ಷ್ಮೀದೇವಿಯ ೨ನೇ ರೂಪದಲ್ಲಿ ತನ್ನ ವೀರ್ಯವನ್ನಿಟ್ಟನು. (ವಾಸುದೇವ, ಮಾಯಾ,) ಆ ವೀರ್ಯದಿಂದ ಮಹತ್ತತ್ತ್ವಾಭಿಮಾನಿಯಾದ

ಚತುರ್ಮುಖನು ಹುಟ್ಟಿದನು. ಅವನಿಗೆ ಹಿರಣ್ಯಗರ್ಭನೆಂದು ಪುರುಷನೆಂದೂ ಹೆಸರಿದೆ. ಹಿರಣ್ಯಗರ್ಭನ ಪತ್ನಿಯು ಶ್ರದ್ಧಾ ಎಂದು ಪ್ರಕೃತಿ ಎಂದೂ ಕರಿಸಿಕೊಳ್ಳುತ್ತಾಳೆ. ಹಿರಣ್ಯಗರ್ಭ-ಶ್ರದ್ಧೆಯರು ಪ್ರಲಯಕಾಲದಲ್ಲಿ ಸ್ಥೂಲಶರೀರವಿಲ್ಲದಿರುವುದರಿಂದ ಪ್ರತ್ಯೇಕ ಪ್ರತ್ಯೇಕ ಇರುವವರಾಗಿ ಪುರುಷನಾಮಕ ಶ್ರೀಹರಿಯಿಂದ ದೇಹವನ್ನು ಹೊಂದಿ ಸಂಯೋಗವನ್ನು ಹೊಂದಿದರು. ಅನಂತರ ಜಗತ್ತಿಗೆ ಕಾರಣನಾದ ಮಹತ್ತತ್ತ್ವಾಭಿಮಾನಿಯಾದ ಚತುರ್ಮುಖನು ಪುನಃ ಪುರುಷ ನಾಮಕನಾದ ತನ್ನಿಂದಲೇ ಹುಟ್ಟಿ ತನ್ನ ಮಗನೇ ಆದನು. ಆ ಮಹತ್ತತ್ತ್ವಾಭಿಮಾನಿಯಿಂದ ಅಹಂಕಾರ ತತ್ತ್ವಾಭಿಮಾನಿಯು ಜನಿಸಿದನು. ಎಂದು ವ್ಯೋಮಸಂಹಿತೆಯಲ್ಲಿ ಹೇಳಿದೆ. (ತತ್ತ್ವದಿಂದ ತತ್ತ್ವಾಭಿಮಾನಿಯಿಂದ ಅಭಿಮಾನಿ ಜನಿಸುವರು)

ಶೂನ್ಯನಾಮಕ ನಾರಾಯಣನ ಮೊದಲನೆಯ ಅವತಾರವು ಪುರುಷ ಎನಿಸುತ್ತದೆ. ಇದು ಶ್ರೀಹರಿಯ ಸ್ವರೂಪವೇ. ಕಾಲಾದಿಗಳು ಕಾಲಾದ್ಯಭಿಮಾನಿಗಳು ಶ್ರೀಹರಿಯ ಸ್ವರೂಪಗಳಾಗದಿದ್ದರೂ ಶ್ರೀಹರಿಗೆ ಅತಿಪ್ರಿಯಗಳಾದುದರಿಂದ ಶ್ರೀಹರಿಯ ಅವತಾರಗಳು (ರೂಪ) ಎಂಬಂತೆ ಹೇಳಲ್ಪಡುತ್ತವೆ. (ಕಾಲಾದ್ಯಭಿಮಾನಿಗಳಿಗೂ ಶ್ರೀಹರಿಗೂ ಭೇದವಿದೆ ಈ ವಿಷಯದಲ್ಲಿ ಪ್ರಮಾಣ ಹೇಳುವರು) ಪುರುಷ ಮುಂತಾದವು ಶ್ರೀಹರಿಯ ಸಾಕ್ಷಾತ್ ಸ್ವರೂಪಗಳೇ ಆಗಿವೆ. ಕಾಲಾದಿಗಳಿಗೆ ಅಭಿಮಾನಿಗಳಾದ ಬ್ರಹ್ಮಾದಿದೇವತೆಗಳು ಶ್ರೀಹರಿಗೆ ಅತ್ಯಂತ ಪ್ರಿಯರಾಗಿರುತ್ತಾರೆ. ಮತ್ತು ಪರಮಾತ್ಮನ ಸನ್ನಿಧಾನವಿಶೇಷವುಳ್ಳವರೂ ಆಗಿರುತ್ತಾರೆ. ಆದಕಾರಣ ಶ್ರೀಹರಿಯ ಅವತಾರಗಳಂತೆ ಹೇಳಲ್ಪಡುತ್ತಾರೆ. ವಸ್ತುತಃ ಈ ಕಾಲಾದ್ಯಭಿಮಾನಿಗಳು ಶ್ರೀಹರಿಯ ಸ್ವರೂಪರಲ್ಲವೇ ಅಲ್ಲ. ಎಂದು ಪಾದ್ಮಪುರಾಣದಲ್ಲಿದೆ. ಮತ್ತೊಂದು ಪ್ರಮಾಣದ ಅರ್ಥ) ಕಾಲವು, ವಸ್ತುಗಳ ಸ್ವಭಾವವು, ಪ್ರಕೃತಿಯು, ಪ್ರಾಣನು, ಮನಸ್ಸು, ಪೃಥಿವ್ಯಾದಿ-ಪಂಚಭೂತಗಳೂ, ಬ್ರಹ್ಮಾಂಡವು, ಸತ್ತ್ವರಜಸ್ತಮೊಗಳೂ ಶ್ರೀಹರಿಯ ಸ್ವರೂಪಗಳಲ್ಲ. ಆದರೂ ಇವುಗಳಲ್ಲಿ ಶ್ರೀಹರಿಯು ವಿಶೇಷವಾಗಿ ಸನ್ನಿಹಿತನಾಗಿದ್ದಾನೆ. ಎಂದು ಪಾದ್ಮಪುರಾಣದಲ್ಲಿದೆ.

ಸತ್ ಎಂದರೆ ಪ್ರಾಣ ಎಂದು ಶ್ರುತಿ ಇರುವುದರಿಂದ ಸತ್ ಪ್ರಾಣನು, ದ್ರವ್ಯಂ ಪೃಥಿವ್ಯಾದಿ ಪಂಚಭೂತಗಳು, ವಿಕಾರಃ ಬ್ರಹ್ಮಾಂಡವು, ಪಕ್ಷಿಗಳಿಗೆ ರಾಜನಾದುದರಿಂದ ವಿರಾಟ್ ಗರುಡನು, ಸ್ವರ್ಗದಲ್ಲಿ ಪ್ರಕಾಶಿಸುವುದರಿಂದ ಸ್ವರಾಟ್ ದೇವೇಂದ್ರನು ಎಂದು ಷಾಡ್ಗುಣ್ಯದಲ್ಲಿದೆ.

ಕಾಲಾದ್ಯಭಿಮಾನಿಗಳಾದ ಬ್ರಹ್ಮಾದಿಗಳೆಲ್ಲರೂ ಶ್ರೀಹರಿಗೆ ಅತಿಪ್ರಿಯರಾಗಿರುವುದರಿಂದ ವಿಭೂತಿ ಉಳ್ಳವರಾಗಿ ವಿಶೇಷವಾಗಿ ಪರಮಾತ್ಮನ ಸ್ವರೂಪದಂತೆ ಹೇಳಲ್ಪಡುವರು. ವಸ್ತುತಃ ಇವರು ಶ್ರೀಹರಿಯ ಸ್ವರೂಪರು ಅಲ್ಲವೇ ಅಲ್ಲ ಎಂದು ಶ್ರುತಿಯಲ್ಲಿ ಹೇಳಿದೆ ಎಂದು ಸ್ಕಾಂದಪುರಾಣದಲ್ಲಿದೆ. (ಮಹಸ್ವತ್ ವಿಭೂತಿ ಶ್ರೀ ಇವುಗಳ ಅರ್ಥ ಹೇಳುವರು) ಸ್ವಾಭಾವಿಕವಾಗಿ ಹುಟ್ಟಿದಾಗಿನಿಂದ ಇರುವ ಮಹತ್ವವು ಮಹಃ ಎನಿಸುತ್ತದೆ. (ವರಾದಿಗಳಿಂದ ಬಂದದ್ದಲ್ಲ.) ವಿಶೇಷವಾಗಿ ಕಾರಾಣಾಂತರದಿಂದ ಬಂದ ಶಕ್ತ್ಯತಿಶಯವು ವಿಭೂತಿಯು. ಲಕ್ಷಣಾಧಿಕ್ಯವು ಶ್ರೀ ಎನಿಸುತ್ತದೆ ಎಂದು ಬ್ರಹ್ಮತರ್ಕದಲ್ಲಿ ಹೇಳಿದೆ.

ಶ್ರೀಹರಿಯ ಮತ್ಸ್ಯ-ಕೂರ್ಮ ಮೊದಲಾದ ಅವತಾರಗಳು ಬ್ರಹ್ಮರುದ್ರಾದಿಗಳಿಗಿಂತ ಎಲ್ಲ ರೀತಿಯಿಂದ ಶ್ರೇಷ್ಠಗಳೆಂದು ಶ್ರುತಿಯಲ್ಲಿ ಹೇಳಲ್ಪಟ್ಟಿವೆ. ಆದ್ದರಿಂದ ಇವುಗಳು ಶ್ರೀಹರಿಯಿಂದ ಅಭಿನ್ನವೇ ಆಗಿವೆ. ಶ್ರೀಹರಿಯ ಇಚ್ಛೆಯಿಂದಲೇ ಮಹದೈಶ್ವರ್ಯ ಹೊಂದಿದ ಬ್ರಹ್ಮಾದಿದೇವತೆಗಳು ಶ್ರೀಹರಿಯಿಂದ ಅಭಿನ್ನರಲ್ಲ. ಶ್ರೀಹರಿಯು ತನ್ನ ಇಚ್ಛೆಯಿಂದಲೇ ಬ್ರಹ್ಮಾದಿಗಳಿಗೆ ಉತ್ತಮತ್ವವನ್ನು ಕೊಡುವನು ಎಂದು ಹೇಳಿರುವುದರಿಂದ ಪರಮಾತ್ಮನ ಇಚ್ಛೆಯಿಂದಲೇ ವಿಶಿಷ್ಟ ಐಶ್ವರ್ಯವುಳ್ಳವರೆಂದು ಹೇಳಲ್ಪಟ್ಟಿರುತ್ತಾರೆ. ಎಂದು ವ್ಯೋಮಸಂಹಿತೆಯಲ್ಲಿ ಹೇಳಿದೆ.

'ಅಹಂ ಭವೊ ಯಜ್ಞ...' ಎಂಬಲ್ಲಿಯ ಯಜ್ಞ ಶಬ್ದಾರ್ಥ ಹೇಳುವರು- ಯಜ್ಞಶಬ್ದದಿಂದ ಹೇಳಲ್ಪಟ್ಟವರು ಲೋಕದಲ್ಲಿ ಶ್ರೇಷ್ಠರಾದವರು ಇಬ್ಬರು ದೇವತೆಗಳು. ಅವರಿಬ್ಬರಲ್ಲಿ ಒಬ್ಬನು ಶ್ರೀನಾರಾಯಣನು. ಇನ್ನೊಬ್ಬನು ರುದ್ರಚ್ಛಿನ್ನನು. ಅವನು ಯಜ್ಞಕ್ಕೆ ಅಭಿಮಾನಿಯು (ಬ್ರಹ್ಮ-ರುದ್ರರಿಗೆ ಪ್ರವರ್ತಕನಾದ ಕೇಶವನಾದರೂ ಯಜ್ಞಾಭಿಮಾನಿಯಾದ ಯಜ್ಞನಾಮಕ ದೇವತೆಗೆ ನಿಯಾಮಕನು ಎಂದು ಪಾದ್ಮಪುರಾಣದಲ್ಲಿದೆ. (ಅಂದರೆ ರುದ್ರನು ದಕ್ಷಪ್ರಜಾಪತಿಯ ಯಜ್ಞವನ್ನು ನಾಶಪಡಿಸಿದಾಗ ಈ ಯಜ್ಞಾಭಿಮಾನಿಯೂ ಛಿನ್ನನಾಗಿದ್ದನು ಅವನನ್ನೇ ಇಲ್ಲಿ ಯಜ್ಞಶಬ್ದದಿಂದ ಸ್ವೀಕರಿಸಬೇಕೆಂದು ಭಾವ.) ।। ೪೫ ।।

।। ಇಲ್ಲಿಗೆ ಆರನೆಯ ಅಧ್ಯಾಯ ಮುಗಿಯಿತು.।।

# ಅಥ ಸಪ್ತಮೋऽಧ್ಯಾಯಃ

**ಏಳನೆಯ ಅಧ್ಯಾಯದ ಸಾರಾಂಶ**

ವರಾಹ-ಯಜ್ಞ-ಕಪಿಲ-ದತ್ತಾತ್ರೇಯ-ಸನತ್ಕುಮಾರ-ನರ-ನಾರಾಯಣ-ವಾಸುದೇವ-ಪೃಥು-ಋಷಭ-ಹಯಗ್ರೀವ-ಮತ್ಸ್ಯ-ಕೂರ್ಮ-ನರಸಿಂಹ-ತಾಪಸಹರಿ-ವಾಮನ-ಮಹಿದಾಸ-ರಾಜರಾಜೇಶ್ವರ-ಧನ್ವಂತರಿ-ಪರಶುರಾಮ-ರಾಮ-ಕೃಷ್ಣ-ವೇದವ್ಯಾಸ-ಬುದ್ಧ-ಕಲ್ಕಿ ಮೊದಲಾದ ಅವತಾರಗಳನ್ನು ಪರಮಾತ್ಮ ತಾಳಿದ್ದಾನೆ. ಈ ಅವತಾರಗಳಲ್ಲಿ ನರ-ಪೃಥು ಇವುಗಳು ಪರಮಾತ್ಮನ ಸಾಕ್ಷಾದವತಾರಗಳಲ್ಲ. ಇವರಲ್ಲಿ ಭಗವಂತ ವಿಶೇಷವಾಗಿ ಆವಿಷ್ಟನಾಗಿದ್ದಾನೆ. ಆದ್ದರಿಂದ ಇಂತಹ ಅವತಾರಗಳನ್ನು ಆವೇಶಾವತಾರಗಳು ಎಂದು ತಿಳಿಯಬೇಕು. ಉಳಿದ ವರಾಹಾದ್ಯವತಾರಗಳು ಸ್ವರೂಪಾವತಾರಗಳು ಎಂದು ತಿಳಿಯಬೇಕು. ಈ ವಿಷಯದಲ್ಲಿ ವ್ಯತ್ಯಸ್ತವಾಗಿ ಸರ್ವಥಾ ತಿಳಿಯಬಾರದು. ವ್ಯತ್ಯಸ್ತವಾಗಿ ತಿಳಿಯುವುದು ಮೋಕ್ಷಪ್ರತಿಬಂಧಕವಾಗುತ್ತದೆ. ಇವುಗಳಲ್ಲದೇ ಭಗವಂತನ ಸ್ವರೂಪಾವತಾರಗಳು ಅಸಂಖ್ಯವಾಗಿವೆ. ಆವೇಶಾವತಾರಗಳು ಕೂಡಾ ಅಸಂಖ್ಯವಾಗಿವೆ. ಹೇ ನಾರದ ! ಶ್ರೀಹರಿಯ ಮಹಿಮೆಯನ್ನು ಸಂಕ್ಷೇಪವಾಗಿ ತಿಳಿಸಿದ್ದೇನೆ. ಮುಂದೆ ಪರಮಾತ್ಮ ವೇದವ್ಯಾಸರಾಗಿ ಅವತಾರ ತಾಳಿದಾಗ ಈ ವಿಷಯಗಳನ್ನು ಅವರ ಮುಂದೆ ನಿವೇದಿಸು. ಶ್ರೀಮದ್ಭಾಗವತದ ರಚನೆಗಾಗಿ ವಿಶೇಷವಾಗಿ ಪ್ರಾರ್ಥಿಸು. ಈ ಶ್ರೀಮದ್ಭಾಗವತ ಸಜ್ಜನರಿಗೆ ಮುಕ್ತಿಪ್ರದಾಯಕವಾಗಿದೆ.

ಹಿಂದಿನ ಅಧ್ಯಾಯದಲ್ಲಿ ಪ್ರತಿಜ್ಞೆ ಮಾಡಿದ ಪರಮಪುರುಷನ ಅವತಾರಗಳನ್ನು ಅವುಗಳ ಚರಿತ್ರೆಯನ್ನೂ ಈ ಅಧ್ಯಾಯದಲ್ಲಿ ಹೇಳುವರು. ಅದರಲ್ಲಿ ಮೊದಲಿಗೆ ವರಾಹಕಲ್ಪಾನುಸಾರ ವರಾಹಾವತಾರವನ್ನು, ಕಾರ್ಯವನ್ನೂ ಹೇಳುವರು-

ಬ್ರಹ್ಮೋವಾಚ-

**ಯತ್ರೋದ್ಯತಃ ಕ್ಷಿತಿತಲೋದ್ಧರಣಾಯ ಬಿಭ್ರತ್**
**ಕ್ರೌಡೀಂ ತನುಂ ಸಕಲಯಜ್ಞಮಯೀಮನಂತಃ ।**
**ಅಂತರ್ಮಹಾರ್ಣವ ಉಪಾಗತಮಾದಿದೈತ್ಯಂ**
**ತಂ ದಂಷ್ಟ್ರಯಾಽದ್ರಿಮಿವ ವಜ್ರಧರೋ ದದಾರ** ॥ ೧ ॥

**ಅನಂತಃ** ಶ್ರೀಹರಿಯು, **ಯತ್ರ** ಯಾವಾಗ, **ಕ್ಷಿತಿತಲೋದ್ಧರಣಾಯ** ಭೂಮಿಯನ್ನು ಮೇಲೆ ತರಲು, **ಸಕಲಯಜ್ಞಮಯೀಂ** ಸ್ರುಕ್-ಸ್ರುವ ಮುಂತಾದ ಯಜ್ಞ ಉಪಕರಣಗಳಿಗೆ ಜನಕವಾದ, **ಕ್ರೌಡೀಂ** ವರಾಹದಂತಿರುವ, **ತನುಂ** ಶರೀರವನ್ನು, **ಬಿಭ್ರತ್** ಧರಿಸಿ, **ಉದ್ಯತಃ** ಸಮುದ್ರದಲ್ಲಿ ಮುಳುಗಿ ರಸಾತಲದಲ್ಲಿರುವ ಭೂಮಿಯನ್ನು ಎತ್ತಿಕೊಂಡು ಕೋರೆಹಲ್ಲಿನ ಮೇಲಿರಿಸಿಕೊಂಡು ಮೇಲೆ ಬಂದನೋ, **ತದಾ** ಆಗ, **ಅಂತರ್ಮಹಾರ್ಣವೇ** ಸಮುದ್ರದ ಮಧ್ಯದಲ್ಲಿ, **ಉಪಾಗತಂ** ಅವನನ್ನು ತಡೆಯಲು ಬಂದ, **ತಂ** ಪ್ರಸಿದ್ಧನಾದ, **ಆದಿದೈತ್ಯಂ** ಹಿರಣ್ಯಾಕ್ಷನನ್ನು, **ದಂಷ್ಟ್ರಯಾ** ಹಲ್ಲಿನಿಂದ, **ವಜ್ರಧರಃ** ಇಂದ್ರನು, **ಅದ್ರಿಮಿವ** ಪರ್ವತವನ್ನು ಸೀಳಿದಂತೆ **ದದಾರ** ಸೀಳಿದನು.

**ವಿಜಯಧ್ವಜರು-** ಇಲ್ಲಿ ದಂಷ್ಟ್ರಶಬ್ದದಿಂದ ಸುದರ್ಶನ-ಗದೆಗಳನ್ನು ಉಪಲಕ್ಷಣಯಾ ತೆಗೆದುಕೊಂಡು 'ದಂಷ್ಟ್ರಯಾ ದದಾರ' ಎಂಬುದಕ್ಕೆ ಯಾವನು ಸಮುದ್ರದಲ್ಲಿ ಭೂಮಿಯನ್ನು ಮುಳುಗಿಸಿದ್ದನೋ ಅಂತಹ ಆದಿದೈತ್ಯನಾದ ಹಿರಣ್ಯಾಕ್ಷನನ್ನು ಗದೆಯಿಂದ ಸೀಳಿ, ಮುಷ್ಟಿಯಿಂದ ಕಿವಿಯ ಕೆಳಗೆ ಹೊಡೆದು ಕೊಂದನು ಎಂದರ್ಥ ಬರೆದಿರುವರು.

ಆದರೆ ತೃತೀಯಸ್ಕಂಧದ ೧೪ನೆಯ ಅಧ್ಯಾಯದ ೩೩-೩೪ನೆಯ ಶ್ಲೋಕದ ತಾತ್ಪರ್ಯ ಪ್ರಕಾರ ಬ್ರಹ್ಮಪುತ್ರನಾದ ಆದಿದೈತ್ಯನನ್ನು ಹಲ್ಲಿನಿಂದ ಕೊಂದನು. ಆಗ ಪ್ರಲಯೋದಕದಲ್ಲಿ ಭೂಮಿ ತಾನೇ ಮುಳುಗಿತ್ತು. ಅದೇ ಹಿರಣ್ಯಾಕ್ಷ ಶ್ರೀಹರಿಪಾರ್ಷದನಲ್ಲಿ ಆವಿಷ್ಟನಾದನು. ॥ ೧ ॥

*ಯಜ್ಞಾವತಾರ ಮತ್ತು ತತ್ಕಾರ್ಯವನ್ನು ಹೇಳುವರು-*

**ಜಾತೋ ರುಚೇರಜನಯತ್ ಸುಯಶಾಃ ಸುಯಜ್ಞಃ**
**ಆಕೂತಿಸೂನುರಮರಾನಥ ದಕ್ಷಿಣಾಯಾಮ್ ।**
**ಲೋಕತ್ರಯಸ್ಯ ಮಹತೀ ಮಹರದ್ಯ ಆರ್ತಿಂ**
**ಸ್ವಾಯಂಭುವೇನ ಮನುನಾ ಹರಿರಿತ್ಯನೂಕ್ತಃ** ॥ ೨ ॥

**ಸುಯಶಾಃ** ಪೂಜ್ಯವಾದ ಕೀರ್ತಿಯುಳ್ಳ, **ಸುಯಜ್ಞಃ** ಕ್ರಿಯಾಭಿಮಾನಿಯಾದ ಯಜ್ಞನೆಂಬ ಇಂದ್ರಪುತ್ರನು, **ಸು** ಶೋಭನನು ಯಾವನಿಂದ ಆದನೋ ಅವನು ಸುಯಜ್ಞನು ಅಥವಾ ಶೋಭನಯಜ್ಞಗಳು ಯಾವನಿಂದ ಆಗುವವೋ ಅಂತಹ ಯಜ್ಞನಿಯಾಮಕನಾದ, **ಅನಂತಃ** ಶ್ರೀಹರಿಯು, **ರುಚೇಃ** ರುಚಿಪ್ರಜಾಪತಿಯಿಂದ, **ಆಕೂತ್ಯಾಂ** ರುಚಿಪ್ರಜಾಪತಿಯ ಪತ್ನಿಯಲ್ಲಿ, **ಜಾತಃ** ಯಜ್ಞನಾಮಕನಾಗಿ ಜನಿಸಿದನು, **ಅಥ** ಇಂದ್ರಪದವಿಯನ್ನು ಪಡೆದ ನಂತರ, **ಆಕೂತಿಸುನುಃ** ಯಜ್ಞನಾಮಕನಾದ ಶ್ರೀಹರಿಯು **ದಕ್ಷಿಣಾಯಾಂ** ರಮಾವತಾರಳಾದ ತನ್ನ ಪತ್ನಿಯಲ್ಲಿ, **ಅಮರಾನ್** ತುಷಿತರೆಂಬ ದೇವತೆಗಳನ್ನು, **ಅಜೀಜನತ್** ಹುಟ್ಟಿಸಿದನು. **ಯಃ** ಯಾವನು, **ಲೋಕತ್ರಯಸ್ಯ** ಮೂರು ಲೋಕಗಳ, **ಮಹತೀಂ ಆರ್ತಿಂ** ತನ್ನ ಧ್ಯಾನದಿಂದ ಅಸುರರಿಂದ ಬಂದ ಅಪಾರದುಃಖವನ್ನು **ಅಹರತ್** ಪರಿಹರಿಸಿದನು, **ಹರಿಃ ಇತಿ ಜ್ಞಾತ್ವಾ** ಇವನು ಶ್ರೀಹರಿ ಎಂದು ತಿಳಿದು, **ಸ್ವಾಯಂಭುವೇನ ಮನುನಾ** ಸ್ವಾಯಂಭುವ ಮನುವಿನಿಂದ **ಅನೂಕ್ತಃ** 'ಈಶಾವಾಸ್ಯಂ...' ಮುಂತಾದ ವೇದಗಳಿಂದ ಸ್ತುತಿಸಲ್ಪಟ್ಟನು.

ಇಲ್ಲಿ ಸುಯಜ್ಞ ಎಂದದ್ದರಿಂದ ಸುಶಬ್ದದಿಂದ ನಿರಾಕೃತನಾದ ಯಜ್ಞನನ್ನು ತಿಳಿಸುವರು-

**ತಾತ್ಪರ್ಯ- ಕ್ರಿಯಾಭಿಮಾನಾದ್ಯಜ್ಞೋಽಸಾವಿಂದ್ರಸೂನುಃ ಪ್ರಕೀರ್ತಿತಃ ।**
**ಯಜ್ಞೇಶತ್ವಾತ್ ಸ್ವಯಂ ವಿಷ್ಣುಃ ಯಜ್ಞೋ ರುಚಿಸುತಃ ಸ್ಮೃತಃ ॥ -ಇತಿ ಪಾದ್ಮೇ**

ಹರಿ ಎಂಬ ಶಬ್ದದಿಂದ ಅನೂಕ್ತಃ ನಂತರ ಹೇಳಲ್ಪಟ್ಟನು ಎಂಬ ವ್ಯಾಖ್ಯಾನ ಸರಿಯಲ್ಲ. ಸ್ವಾಯಂಭುವ ಮನುವಿನ ಮಾತಿನಲ್ಲಿ ಹರಿಶಬ್ದ ಪ್ರಯೋಗವೇ ಇಲ್ಲ ಆದ್ದರಿಂದ ಇಲ್ಲಿ ಅಪೇಕ್ಷಿತವಾದುದನ್ನು ಅಧ್ಯಾಹಾರ ಮಾಡಿ ಚೆನ್ನಾಗಿ ವ್ಯಾಖ್ಯಾನಿಸುವರು-

**ತಾತ್ಪರ್ಯ- ಹರಿರಿತಿ ಜ್ಞಾತ್ವಾ ಈಶಾವಾಸ್ಯಮಿತ್ಯಾದಿನಾಽನೂಕ್ತಃ ।**

ಅನುವಚನ ಶಬ್ದಕ್ಕೆ ವೇದವಾಚಕತ್ವದಲ್ಲಿ ಅಭಿಧಾನ ಹೇಳುವರು-

**ತ್ರಯೀ ಶ್ರುತಿರ್ನಿತ್ಯವಾಕ್ ಚ ವೇದೋಽನುವಚನಂ ತಥಾ ॥ -ಇತಿ ಹ್ಯಭಿಧಾನಮ್**

ಇಂದ್ರನ ಪುತ್ರನು ಯಜ್ಞಕ್ರಿಯೆಗೆ ಅಭಿಮಾನಿಯಾದುದರಿಂದ ಯಜ್ಞನೆಂದು ಕರೆಸಿಕೊಳ್ಳುತ್ತಾನೆ. ರುಚಿಪ್ರಜಾಪತಿಯ ಮಗನಾದ ಸಾಕ್ಷಾತ್ ವಿಷ್ಣುವು ಯಜ್ಞಕ್ಕೆ ಯಜ್ಞಾಭಿಮಾನಿಗೆ ನಿಯಾಮಕನಾದುದರಿಂದ ಯಜ್ಞನೆಂದು ಹೇಳಲ್ಪಡುವನು ಎಂದು ಪದ್ಮ ಪುರಾಣದಲ್ಲಿದೆ.

ಯಜ್ಞನು ಸಾಕ್ಷಾತ್ ಶ್ರೀಹರಿ ಎಂದು ತಿಳಿದು ರಾಕ್ಷಸರಿಂದ ಪೀಡಿತನಾದ ಸ್ವಾಯಂಭುವಮನುವು 'ಈಶಾವಾಸ್ಯ...' ಮುಂತಾದ ವೇದವಚನಗಳಿಂದ ಸ್ತುತಿಸಿದನು.

ತ್ರಯೀ, ಶ್ರುತಿಃ, ನಿತ್ಯವಾಕ್, ವೇದಃ ಅನುವಚನಂ, ಎಂಬ ಈ ಎಲ್ಲ ಶಬ್ದಗಳೂ ಸಮಾನಾರ್ಥಕಗಳೆಂದು ಅಭಿಧಾನವಿದೆ. ।। ೨ ।।

*ಕಪಿಲಾವತಾರವನ್ನು ಹೇಳುವರು-*

**ಜಜ್ಞೇ ಚ ಕರ್ದಮಗೃಹೇ ದ್ವಿಜ ದೇವಹೂತ್ಯಾಂ**
**ಸ್ತ್ರೀಭಿಃ ಸಮಂ ನವಭಿರಾತ್ಮಗತಿಂ ಸ್ವಮಾತ್ರೇ ।**
**ಊಚೇ ಯ ಆತ್ಮಶಮಲಂ ಗುಣಸಂಗಪಂಕ-**
**ಮಸ್ಮಿನ್ವಿಧೂಯ ಕಪಿಲಃ ಸ್ವಗತಿಂ ಪ್ರಪೇದೇ** ।। ೩ ।।

**ಹೇ ದ್ವಿಜ** ನಾರದನೇ, **ಅನಂತಃ** ಶ್ರೀಹರಿಯು, **ಕರ್ದಮಗೃಹೇ** ಕರ್ದಮಪ್ರಜಾಪತಿಯ ಹೆಂಡತಿಯಾದ, **ದೇವಹೂತ್ಯಾಂ** ದೇವಹೂತಿ ಎಂಬುವಳಲ್ಲಿ, **ನವಭಿಃ** ಒಂಭತ್ತು, **ಸ್ತ್ರೀಭಿಃ ಸಮಂ** ಹೆಣ್ಣು ಮಕ್ಕಳೊಡನೇ ಅಕ್ಕಂದಿರೊಡನೆ, **ಕಪಿಲಃ ಸನ್** ಕಪಿಲನಾಮಕನಾಗಿ, **ಜಜ್ಞೇ** ಅವತರಿಸಿದನು, **ಸ್ವಮಾತ್ರೇ** ತನ್ನ ತಾಯಿಗೆ, **ಯಃ** ಯಾವನು, **ಆತ್ಮಗತಿಂ** ಪರಮಸಾಂಖ್ಯವೆಂಬ ತನ್ನ ವಿದ್ಯೆಯನ್ನು, **ಊಚೇ** ಉಪದೇಶಮಾಡಿದನು, **ಯಃ** ಯಾವನು, **ಅಸ್ಮಿನ್** ಅಧಿಕಾರಿಜನರಲ್ಲಿರುವ, **ಗುಣಸಂಗಪಂಕಂ** ಶಬ್ದಾದಿವಿಷಯ-ಸಂಬಂಧದಿಂದ ಉಂಟಾದ ಕೆಸರಿನಂತಿರುವ, **ಆತ್ಮಶಮಲಂ** ಮನೋದೋಷವನ್ನು, **ವಿಧೂಯ** ಪರಮಸಾಂಖ್ಯಶಾಸ್ತ್ರೋಪದೇಶದಿಂದ ತೊಳೆದು, **ಸ್ವಗತಿಂ ಪ್ರಪೇದೇ** ತನ್ನ ಸಾಕ್ಷಾತ್ಕಾರವನ್ನು ಹೊಂದಿದನು. ಅಂದರೆ ಅಧಿಕಾರಿಗಳ ಸಾಕ್ಷಾತ್ಕಾರವಿಷಯನಾದ-ನೆಂದರ್ಥ. ಇಂತಹ ಕಪಿಲನು ಅವತರಿಸಿದನು. ।। ೩ ।।

*ದತ್ತಾತ್ರೇಯಾವತಾರವನ್ನು ಹೇಳುವರು–*

**ಅತ್ರೇರಪತ್ಯಮಭಿಕಾಂಕ್ಷತ ಆಹ ತುಷ್ಟೋ**
**ದತ್ತೋ ಮಯಾಽಹಮಿತಿ ಯದ್ ಭಗವಾನ್ ಸ ದತ್ತಃ ।**
**ಯತ್ಪಾದಪಂಕಜಪರಾಗಪವಿತ್ರದೇಹಾ**
**ಯೋಗರ್ಧಿಮಾಪುರಮಯೀಂ ಯದುಹೈಹಯಾದ್ಯಾಃ** ।। ೪ ।।

**ಅಪತ್ಯಂ ಅಭಿಕಾಂಕ್ಷತಃ** ಹರಿಗೆ ಸಮಾನನಾದ ಮಗನನ್ನು ಇಚ್ಛಿಸುವ, **ಅತ್ರೇಃ** ಅತ್ರಿಋಷಿಯ ತಪಸ್ಸಿನಿಂದ ಸಂತುಷ್ಟನಾಗಿ, **ಭಗವಾನ್** ಶ್ರೀಹರಿಯು, **ಮಯಾ** ನನ್ನಿಂದ, **ತುಭ್ಯಂ** ನಿನಗೆ, **ಅಹಂ** ನಾನು, **ದತ್ತಃ** ಪುತ್ರನಾಗಿ ಕೊಡಲ್ಪಟ್ಟಿರುವೆನು, **ಇತಿ** ಎಂದು **ಯತ್** ಯಾವಕಾರಣ, **ಆಹ** ಹೇಳಿದನೋ, **ತಸ್ಮಾತ್** ಆದ್ದರಿಂದ, **ಸಃ** ಆ ಅತ್ರಿಪುತ್ರನು, **ದತ್ತಃ** ದತ್ತನೆಂದು ಪ್ರಸಿದ್ಧನಾದನು, **ಯತ್ಪಾದ** ಯಾವ ದತ್ತನ ಪಾದಗಳೆಂಬ, **ಪಂಕಜಪರಾಗ** ಕಮಲಗಳ ಧೂಳಿನಿಂದ, ಧೂಳನ್ನು ತಲೆಯ ಮೇಲೆ ಧರಿಸುವುದರಿಂದ ಎಂದು ಅರ್ಥ, **ಪವಿತ್ರದೇಹಾಃ** ಶುದ್ಧವಾದ ದೇಹವುಳ್ಳವರು, **ಅಮಯೀಂ** ವಿಷ್ಣುಪ್ರಧಾನವಾದ (ಶ್ರೀಹರಿಸೇವೋಪಯುಕ್ತವಾದ) **ಯೋಗರ್ಧಿಂ** ಅಣಿಮಾದಿ-ಯೋಗಸಮೃದ್ಧಿಯನ್ನು, **ಯದುಹೈಹಯಾದ್ಯಾಃ** ಯಯಾತಿಪುತ್ರನಾದ ಯದುವು, ಕಾರ್ತವೀರ್ಯಾರ್ಜುನ ಮೊದಲಾದವರು, **ಆಪುಃ** ಹೊಂದಿದರು.

ಇಲ್ಲಿ ''ಅಮಯೀಂ'' ಎಂಬ ಶಬ್ದದ ಅರ್ಥವಾಗುವುದಿಲ್ಲ. ಆದ್ದರಿಂದ ವ್ಯಾಖ್ಯಾನಿಸುವರು-

**ತಾತ್ಪರ್ಯ- ಅಮಯೀಂ ವಿಷ್ಣುಪ್ರಧಾನಾಮ್ ॥**

ಅಕಾರವು ವಿಷ್ಣುವಾಚಕವಾದ್ದರಿಂದ ಮಯಟ್ ಪ್ರತ್ಯಯಕ್ಕೆ ಪ್ರಧಾನವೆಂದು ಅರ್ಥವಿರುವದರಿಂದ 'ಅಮಯೀಂ' ಎಂದರೆ ವಿಷ್ಣುಪ್ರಧಾನವಾದ, ಭಗವಂತನ ಸೇವೆಗೆ ಉಪಯುಕ್ತವಾದ ಎಂದರ್ಥ.

ವಿಷ್ಣುವಿನ ಅವತಾರ ಮತ್ತು ಕಾರ್ಯವನ್ನು ಹೇಳುವರು-

**ತಪ್ತಂ ತಪೋ ವಿವಿಧಲೋಕಸಿಸೃಕ್ಷಯಾ ಮ-**
**ಆದೌ ಸನಾತ್ಸುತಪಸಸ್ತಪತಃ ಸ ನೋಽಭೂತ್ ।**
**ಪ್ರಾಕ್ಕಲ್ಪಸಂಪ್ಲವವಿನಷ್ಟಮಿಹಾತ್ಮತತ್ತ್ವಂ**
**ಸಮ್ಯಗ್ ಜಗಾದ ಮುನಯೋ ಯದಚಕ್ಷತಾತ್ಮನ್ ॥ ೫ ॥**

**ಯದಾ** ಯಾವಾಗ, **ಆದೌ** ಸೃಷ್ಟಿಯ ಮೊದಲು, **ಮೇ** ನನ್ನಿಂದ, **ತಪಃ** ತಪಸ್ಸು **ವಿವಿಧಲೋಕಸಿಸೃಕ್ಷಯಾ** ನಾನಾರೀತಿಯ ಪ್ರಪಂಚವನ್ನು ಸೃಷ್ಟಿಸುವ ಇಚ್ಛೆಯಿಂದ, **ತಪ್ತಂ** ತಪಸ್ಸು ಮಾಡಲ್ಪಟ್ಟಿತ್ತೋ, **ತದಾ** ಆಗ, **ಮೇ ತಪತಃ ಸತಃ** ತಪಸ್ಸು ಮಾಡುತ್ತಿರುವಾಗ, **ಸುತಪಸಃ** ಪೂಜ್ಯತಪಸ್ಸುಳ್ಳ **ಸನಾತ್ ಆದೌ** ಸನೋತ್ಪತ್ತಿಯ ಮೊದಲು, **ನಃ** ನಮಗಾಗಿ,

**ಸಃ** ಪರಮಾತ್ಮನು, **ಅಭೂತ್** ವಿಷ್ಣುನಾಮಕನಾಗಿ ಅವತರಿಸದನು, ನಂತರ **ಪ್ರಾಕ್ಕಲ್ಪಸಂಪ್ಲವವಿನಷ್ಟಂ** ಹಿಂದಿನ ಕಲ್ಪದ ಪ್ರಲಯದಿಂದ ತಿರೋಹಿತವಾದ, **ಆತ್ಮತತ್ತ್ವಂ** ಪರಮಾತ್ಮನ ಸ್ವರೂಪವನ್ನು, **ಇಹ** ಅಧಿಕಾರಿಜನರಲ್ಲಿ **ಸಮ್ಯಕ್** ಚೆನ್ನಾಗಿ, **ಜಗಾದ** ಉಪದೇಶಿಸಿದನು, ಉಪದೇಶಾನಂತರ, **ಯತ್** ಯಾವ ಆತ್ಮತತ್ತ್ವವನ್ನು, **ಮುನಯಃ** ಋಷಿಗಳು, **ಆತ್ಮನ್** ತಮ್ಮ ಹೃದಯದಲ್ಲಿ **ಅಚಕ್ಷತ** ಕಂಡರು.

ಈ ಶ್ಲೋಕದಲ್ಲಿ 'ಸನಾತ್ ಆದೌ ಸ ನೋಽಭೂತ್' ಎಂದು ವ್ಯಾಹತವಾದಂತೆ ತೋರುವುದು. ಆದ್ದರಿಂದ ಶ್ಲೋಕವನ್ನು ಸರಿಯಾಗಿ ವ್ಯಾಖ್ಯಾನಿಸುವರು-

**ತಾತ್ಪರ್ಯ- ಮೇ ತಪತಃ ಸತಃ । ಸಃ ನಃ ಅರ್ಥೇ । ಸನಾತ್ ಪೂರ್ವಂ ।**

**ಬ್ರಹ್ಮಣಸ್ತಪತಃ ಪೂರ್ವಂ ವಿಷ್ಣುರ್ಜಾತ ಉರುಕ್ರಮಃ ।**
**ಸರ್ವಲೋಕಹಿತಾರ್ಥಾಯ ಯೇನ ರೂಪಂ ಪ್ರಕಾಶಿತಮ್ ॥**

**ಯಶ್ಚ ಪಾತಿ ಸದಾ ಲೋಕಾನಜಿತೋ ಜಯತಾಂ ವರಃ ।**
**ತಸ್ಮಾದ್ರುದ್ರಃ ಸಮುತ್ಪನ್ನಃ ಸರ್ವಸಂಹಾರಕೃದ್ವಿಭುಃ ॥**

**ಏತೇ ತ್ರಿಪುರುಷಾಃ ಪ್ರೋಕ್ತಾಃ ಸೃಷ್ಟಿಸ್ಥಿತ್ಯಂತಕಾರಿಣಃ ।**
**ನಿಮಿತ್ತಮಾತ್ರಂ ತೌ ದೇವೌ ವಿಷ್ಣುಃ ಸರ್ವಸ್ಯ ಕಾರಣಮ್ ॥ -ಇತಿ ಸ್ಕಾಂದೇ**

ನಾನು ತಪಸ್ಸು ಮಾಡುತ್ತಿರುವಾಗ (ಸ ನಃ ಎಂಬುದು ಒಂದೇ ಪದವಲ್ಲ ಕಿಂತು ಸಃ ನಃ ಎಂದು ಎರಡು ಪದಗಳು.) ಆ ಶ್ರೀಹರಿಯು ನಮಗಾಗಿ ಎಂದರ್ಥವು. ಚತುರ್ಮುಖನು ತಪಸ್ಸು ಮಾಡುತ್ತಿರುವಾಗ ಸನಾಕಾದಿಗಳು ಹುಟ್ಟುವುದಕ್ಕಿಂತ ಮೊದಲು ಮೂಲರೂಪಿಯಾದ ಪರಮಾತ್ಮನು ವಿಷ್ಣುನಾಮಕನಾಗಿ ಸರ್ವಲೋಕಹಿತಕ್ಕಾಗಿ ಅವತರಿಸಿದನು. ಆತನೇ ತನ್ನ ಸ್ವರೂಪವನ್ನು ಪ್ರಕಾಶಪಪಡಿಸಿದ್ದಾನೆ.

ಯಾರಿಂದಲೂ ಪರಾಜಿತನಾಗದಿರುವ, ಜಯಿಸುವವರಲ್ಲಿ ಶ್ರೇಷ್ಠನಾದ ಆ ಶ್ರೀಹರಿಯು ಸದಾ ಸರ್ವಲೋಕಗಳನ್ನು ರಕ್ಷಿಸುತ್ತಾನೆ. ಆ ವಿಷ್ಣುವಿನಿಂದ ಸರ್ವಸಂಹಾರಕನಾದ ರುದ್ರನು ಹುಟ್ಟಿದನು. ಈ ಬ್ರಹ್ಮಾ-ವಿಷ್ಣು-ಮಹೇಶ್ವರ ಎಂಬ ಮೂರು ಪುರುಷರು ಸೃಷ್ಟಿ-ಸ್ಥಿತಿ-ಸಂಹಾರಗಳನ್ನು ಮಾಡುವವರು. ಚತುರ್ಮುಖಬ್ರಹ್ಮ-ರುದ್ರ ಇವರಿಬ್ಬರು ಸೃಷ್ಟಿ-ಸಂಹಾರಗಳಿಗೆ ಕಾರಣರಾಗಿದ್ದಾರೆ. ಶ್ರೀಹರಿಯು ಎಲ್ಲದಕ್ಕೂ ಮುಖ್ಯಕಾರಣನಾಗಿದ್ದಾನೆ. ಹೀಗೆಂದು ಸ್ಕಾಂದಪುರಾಣದಲ್ಲಿದೆ. (ಬ್ರಹ್ಮ-ರುದ್ರರು ಶ್ರೀಹರಿಯ ಅನುಗ್ರಹದಿಂದಲೇ ಸೃಷ್ಟಿ-ಸಂಹಾರಗಳನ್ನು ಮಾಡುವರು ಎಂದು ಭಾವ.

*ನರ-ನಾರಾಯಣಾವತಾರಗಳನ್ನು ತತ್ಕಾರ್ಯಗಳನ್ನು ಹೇಳುವರು-*

**ಧರ್ಮಸ್ಯ ದಕ್ಷದುಹಿತುರ್ಯಜನಿ ಸ್ವಮೂರ್ತ್ಯಾ**
**ನಾರಾಯಣೋ ನರ ಇತಿ ಸ್ವತಪಃಪ್ರಭಾವಃ ।**
**ದೃಷ್ಟ್ವಾತ್ಮನೋ ಭಗವತೋ ನಿಯಮಾವಲೋಪಂ**
**ದೇವ್ಯಸ್ತ್ವನಂಗಪೃತನಾ ಘಟಿತುಂ ನ ಶೇಕುಃ ॥ ೬ ॥**

**ಧರ್ಮಸ್ಯ** ಯಮಧರ್ಮನಿಂದ, **ದಕ್ಷದುಹಿತರಿ** ದಕ್ಷಪ್ರಜಾಪತಿಯ ಮಗಳಾದ ಮೂರ್ತಿ ಎಂಬ ಧರ್ಮನ ಪತ್ನಿಯಲ್ಲಿ, ಸ್ವಮೂರ್ತ್ಯಾ ತನ್ನ ಸ್ವರೂಪದೇಹದಿಂದಲೇ, **ನಾರಾಯಣಃ ನರಃ ಹರಿಃ ಕೃಷ್ಣಃ** ಈ ನಾಲ್ಕು ಹೆಸರಿನಿಂದ ನಾಲ್ಕು ರೂಪದಿಂದ, **ಅಜನಿ** ಅವತರಿಸಿದನು, **ಸ್ವತಪಃಪ್ರಭಾವಃ** ಲೋಕಶಿಕ್ಷಣಕ್ಕಾಗಿ ತನ್ನ ತಪಸ್ಸಿನ ಪ್ರತಾಪ ಉಳ್ಳವನು, (ಲೋಕಶಿಕ್ಷಣಕ್ಕಾಗಿ ತಪಸ್ಸು ಮಾಡುತ್ತ ಬದರಿಯಲ್ಲಿ ನರ-ನಾರಾಯಣರು ಜೊತೆಗೆ ಇರುವುದರಿಂದ ಅವರೀರ್ವರನ್ನು ಮೂಲದಲ್ಲಿ ಕಂಠತಃ ಹೇಳಿದ್ದಾರೆ. ಹರಿ-ಕೃಷ್ಣರನ್ನು ಪ್ರಮಾಣಾನುಸಾರ ಉಪಲಕ್ಷಣಯಾ ಸ್ವೀಕರಿಸಬೇಕು.) **ದೃಷ್ಟ್ವಾತ್ಮನಃ** ನಿತ್ಯದಲ್ಲಿಯೂ ತನ್ನನ್ನು ಅಪರೋಕ್ಷವಾಗಿ ಕಾಣುವ, **ಭಗವತಃ** ಐಶ್ವರ್ಯಶಾಲಿಯಾದ ಶ್ರೀಹರಿಯ, **ನಿಯಮಾವಲೋಪಂ** ತಪೋಭಂಗವನ್ನು, **ಘಟಿತುಂ** ಮಾಡಲು, **ಅನಂಗಪೃತನಾಃ ದೇವ್ಯಃ** ಕಾಮನ ಸೇನೆಯಂತಿರುವ ದೇವಸ್ತ್ರೀಯರು, **ನ ಶೇಕುಃ** ಸಮರ್ಥರಾಗಲಿಲ್ಲ.

ಇಲ್ಲಿ ನರನೂ ಭಗವದವತಾರವೆಂದು ತೊರುವುದು. ಮತ್ತು ನರ-ನಾರಾಯಣರಿಬ್ಬರೇ ಧರ್ಮನ ಮಕ್ಕಳೆಂದೂ ತೋರುವುದು. ಆದ್ದರಿಂದ ಪ್ರಮಾಣದಿಂದ ಶ್ಲೋಕತಾತ್ಪರ್ಯವನ್ನು ಹೇಳುವರು-

ತಾತ್ಪರ್ಯ- ನರೋ ನಾರಾಯಣಶ್ಚೈವ ಹರಿಃ ಕೃಷ್ಣಸ್ತಥೈವ ಚ ।
ಚತ್ವಾರೋ ಧರ್ಮತನಯಾ ಹರಿರೇವ ತ್ರಯೋ ಮತಾಃ ॥

ಅನಂತೋ ನರನಾಮಾऽತ್ರ ತಸ್ಮಿಂಸ್ತು ನರನಾಮವಾನ್ ।
ವಿಶೇಷೇಣ ಸ್ವಯಂ ವಿಷ್ಣುರ್ನಿವಸತ್ಯಂಬುಜೇಕ್ಷಣಃ ।
ತಸ್ಮಾಚ್ಚತುರ್ಧಾ ಧರ್ಮಸ್ಯ ಜಾತೋ ವಿಷ್ಣುರಿತೀರಿತಃ ॥ -ಇತಿ ಪಾಡ್ಮುಗ್ನ್ಯೇ

ನರ, ನಾರಾಯಣ, ಹರಿ, ಕೃಷ್ಣ ಎಂದು ನಾಲ್ವರು ಧರ್ಮಕುವರರು. ಅವರಲ್ಲಿ ನಾರಾಯಣ ಹರಿ, ಕೃಷ್ಣ ಈ ಮೂವರು ಸಾಕ್ಷಾತ್ ಭಗವದ್ರೂಪಗಳೇ ಆಗಿವೆ. (ನರನಲ್ಲಿಯಂತೆ ಆವಿಷ್ಟವಲ್ಲ) ನರನೆಂಬುವವನು ಶೇಷನು. ಅವನಲ್ಲಿ ಕಮಲದಂತೆ

ಕಣ್ಣುಳ್ಳ ನರನೆಂದು ಹೆಸರುಳ್ಳ ಶ್ರೀವಿಷ್ಣುವು ವಿಶೇಷತಃ ಸನ್ನಿಹಿತನಾಗಿರುವನು. ಆದುದರಿಂದಲೇ ಯಮಧರ್ಮನಿಂದ ಶ್ರೀವಿಷ್ಣುವು ನಾಲ್ಕುರೂಪಗಳಿಂದ ಅವತರಿಸಿರುತ್ತಾನೆ ಎಂದು ಹೇಳಲ್ಪಡುವನು ಎಂದು ಷಾಡ್ಗುಣ್ಯದಲ್ಲಿ ಇದೆ.

*ಮೇಲಿನ ಶ್ಲೋಕದಲ್ಲಿ ಕಾಮಜಯವನ್ನು ಹೇಳಿದಂತಾಯಿತು. ಅದು ಸರಿಯಲ್ಲ. ಭಗವಂತನನ್ನು ಪ್ರತ್ಯಕ್ಷವಾಗಿ ಕಂಡ, ಜಿತಕಾಮರಾದ ಶಂಕರಾದಿಗಳಿಗೆ ಮನಸ್ಸಿನಲ್ಲಿ ಪಾರ್ವತ್ಯಾದಿಕಾಮನ ಕಂಡಿದೆಯಲ್ಲ ಎಂದರೆ ಅವರಿಂದ ವೈಲಕ್ಷಣ್ಯವನ್ನು ತಿಳಿಸುತ್ತ ಭಗವಂತನ ಮನಸ್ಸಿನಲ್ಲಿ ಪುನಃ ಕಾಮೋದಯ ಇಲ್ಲವೆಂದು ತಿಳಿಸುವರು-*

**ಕಾಮಂ ದಹಂತಿ ಕೃತಿನೋ ನನು ರೋಷದೃಷ್ಟ್ಯಾ**
**ರೋಷಂ ದಹಂತಮುತ ತೇ ನ ದಹಂತ್ಯಸಹ್ಯಮ್ ।**
**ಸೋಽಯಂ ಯದಂತರಮಲಂ ನಿವಿಶನ್ ಬಿಭೇತಿ**
**ಕಾಮಃ ಕಥಂ ನು ಪುನರಸ್ಯ ಮನಃ ಶ್ರಯೇತ** **॥ ೭ ॥**

**ಕೃತಿನಃ** ತಪಸ್ವಿಗಳಾದ ರುದ್ರಾದಿಗಳು, **ರೋಷದೃಷ್ಟ್ಯಾ** ಸಿಟ್ಟಿನಿಂದ ಸಹಿತವಾದ ದೃಷ್ಟಿಯಿಂದ, **ಕಾಮಂ ದಹಂತಿ ನನು** ಕಾಮವನ್ನು ಸುಡುವರೆಂಬುದು ಪ್ರಸಿದ್ಧವು, **ತೇ ಉತ** ಅವರೂ ಸಹ, **ದಹಂತಂ** ತಮ್ಮನ್ನು ಸುಡುವ ಆದ್ದರಿಂದಲೇ, **ಅಸಹ್ಯಂ** ಸಹಿಸಲಾಗದ, **ರೋಷಂ** ಸಿಟ್ಟನ್ನು **ನ ದಹಂತಿ** ಸುಡಲಾರರು, (ರೊಷವನ್ನು ಸುಟ್ಟರೇ ರೋಷದಿಂದ ಕಾಮವನ್ನು ಸುಡುವುದು ಹೇಗೆ ಸಾಧ್ಯ) ಆದಕಾರಣ ಕ್ರೋಧಸಹಿತರಾದ ರುದ್ರಾದಿಗಳ ಮನಸ್ಸು ಒಳಗೆ ದೋಷಯುತವಾದುದು, **ಸಃ** ದೋಷವೆಂದು ಪ್ರಸಿದ್ಧವಾದ, **ಅಯಂ** ರುದ್ರನ ಮನಸಿನಲ್ಲಿರುವ ರೋಷವು, **ಯದಂತಃ** ಯಾವ ನಾರಾಯಣನ ಮನಸ್ಸನ್ನು **ನಿವಿಶನ್** ಪ್ರವೇಶಿಸಲು ಪ್ರಯತ್ನಿಸಿ, **ಬಿಭೇತಿ** ಹೆದರುವುದೋ, **ಅಸ್ಯ** ಅಂತಹ ಪರಮಾತ್ಮನ, **ಅಮಲಂ** ಪ್ರಕೃತಿಸಂಬಂಧಶೂನ್ಯವಾದ, **ಮನಃ** ಮನಸ್ಸನ್ನು **ಕಾಮಃ** ಕಾಮವು, **ಕಥಂ ಶ್ರಯೇತ** ಹೇಗೆ ಆಶ್ರಯಿಸಲು ಸಾಧ್ಯ.

ರುದ್ರಾದಿಗಳ ಮನಸ್ಸಿನಲ್ಲಿ ಕಾಮ ಹುಟ್ಟುವುದು ಯುಕ್ತವೇ ಆಗಿದೆ. ಏಕೆಂದರೆ ಅವರ ಮನಸ್ಸು ಕಾಮದಿಂದ ಯುಕ್ತವಾಗದಿದ್ದರೂ ಕ್ರೋಧವೆಂಬ ಕಾರ್ಯದಿಂದ ತಿಳಿದುಬರುವ ಪ್ರಕೃತಿಸಂಬಂಧರೂಪವಾದ ದೋಷದಿಂದ ಯುಕ್ತವಾಗಿದೆ. ನಾರಾಯಣನ ಮನಸ್ಸಿನಲ್ಲಿ ರುದ್ರಾದಿಗಳಂತೆ ಪ್ರಕೃತಿಸಂಬಂಧಾದಿದೋಷವನ್ನು ಊಹಿಸಲು ಬೇಕಾದ ಕ್ರೋಧಾದಿಗಳು ಇಲ್ಲ. ಆದ್ದರಿಂದ ಅದು ಸರ್ವಥಾ

ನಿರ್ದುಷ್ಟವಾಗಿದೆ ಎಂದು ನಿಶ್ಚಿತವಾಗುವುದು. ನಿರ್ದುಷ್ಟವೆಂದು ನಿಶ್ಚಿತವಾದ ಅಲ್ಲಿ ಅನಾದಿಕಾಲದಿಂದ ಕಾಮಜಯವಿದ್ದೇ ಇದೆ. ಅರ್ಥಾತ್ ಕಾಮವೇ ಇಲ್ಲ, ಅಂದ ಮೇಲೆ ಮುಂದಾದರೂ ಮತ್ತೆ ಹುಟ್ಟುವುದು ಹೇಗೆ ಸಾಧ್ಯವೆಂದು ಭಾವ. ।। ೭ ।।

**ವಿದ್ಧಃ ಸಪತ್ನ್ಯುದಿತಪತ್ರಿಭಿರಂತಿ ರಾಜ್ಞೋ**
**ಬಾಲೋಽಪಿ ಸನ್ನುಪಗತಸ್ತಪಸೇ ವನಾಯ ।**
**ತಸ್ಮಾ ಅದಾದ್ ಧ್ರುವಗತಿಂ ಗೃಣತೇ ಪ್ರಸನ್ನೋ**
**ದಿವ್ಯಾಃ ಸ್ತುವಂತಿ ಮುನಯೋ ಯದುಪರ್ಯಧಸ್ತಾತ್ ।। ೮ ।।**

**ರಾಜ್ಞಃ** ಉತ್ತಾನಪಾದನ, **ಅಂತಿ** ಸಮೀಪದಲ್ಲಿ, **ಸಪತ್ನ್ಯುದಿತಪತ್ರಿಭಿಃ** ತಾಯಿಯ ಸವತಿಯಾದ ಸುರುಚಿಯಿಂದ ಹೇಳಲ್ಪಟ್ಟ ಮಾತುಗಳೆಂಬ ಬಾಣಗಳಿಂದ, **ವಿದ್ಧಃ ಸನ್** ಹೊಡೆಯಲ್ಪಟ್ಟವನಾಗಿ, **ಬಾಲೋಽಪಿ** ಚಿಕ್ಕಬಾಲಕನಾದರೂ ಧ್ರುವನು, **ತಪಸೇ** ತಪಸ್ಸು ಮಾಡಲು, **ವನಾಯ** ಕಾಡಿಗೆ, **ಉಪಗತಃ** ಹೋದನು, **ಗೃಣತೇ** ಸ್ತೋತ್ರಮಾಡುವ, **ತಸ್ಮೈ** ಅವನಿಗೆ, **ಪ್ರಸನ್ನಃ** ಸಂತುಷ್ಟನಾದ ವಾಸುದೇವನು, **ಉಪರಿ** ಮೇಲೆ ಇರುವ, **ದಿವ್ಯಾಃ** ದೇವತೆಗಳು, **ಅಧಸ್ತಾತ್** ಕೆಳಗಿರುವ, **ಮುನಯಃ** ಮುನಿಗಳು, (ಸಪ್ತರ್ಷಿಗಳು) **ಯತ್** ಯಾವುದನ್ನು, **ಸ್ತುವಂತಿ** ಸ್ತುತಿಸುವರೋ, **ತಾಂ** ಅಂತಹ, **ಧ್ರುವಗತಿಂ** ಅಚಲವಾದ ಸ್ಥಾನವನ್ನು, **ಅದಾತ್** ಕೊಟ್ಟನು.

ಈಶ್ಲೋಕದಲ್ಲಿ ಹೇಳುವ ಅವತಾರ ಯಾವುದು ಎಂದು ತಿಳಿಯುವುದಿಲ್ಲ ಕಾರಣ ಪ್ರಮಾಣದಿಂದ ಅದನ್ನು ತಿಳಿಸುವರು-

ತಾತ್ಪರ್ಯ- ಅವತಾರೋ ಮಹಾವಿಷ್ಣೋರ್ವಾಸುದೇವ ಇತೀರಿತಃ ।
ಯೋ ಧ್ರುವಾಯ ನಿಜಂ ಪ್ರಾದಾತ್ ಸ್ಥಾನಮನ್ಯಾನಧಿಷ್ಠಿತಮ್ ।।
-ಇತಿ ಪ್ರಕಾಶಸಂಹಿತಾಯಮ್

ಧ್ರುವನ ತಪಸ್ಸಿನಿಂದ ಸಂತುಷ್ಟನಾದ ಶ್ರೀಹರಿಯು ಯಾವ ಅವತಾರದಿಂದ ಧ್ರುವನಿಗೆ ವರವನ್ನಿತ್ತನೋ ಅಂತಹ ಮಹಾವಿಷ್ಣುವಿನ ಅವತಾರವು ವಾಸುದೇವನೆಂದು ಶಾಸ್ತ್ರದಲ್ಲಿ ಹೇಳಲ್ಪಟ್ಟಿದೆ. ಆ ವಾಸುದೇವನು ತಾನೇ ಅಧಿಪತಿಯಾಗಿದ್ದ ತನ್ನ ಸ್ಥಾನವನ್ನು ಧ್ರುವನಿಗೆ ಇತ್ತನೆಂದು ಪ್ರಕಾಶಸಂಹಿತೆಯಲ್ಲಿ ಹೇಳಿದೆ. ।। ೮ ।।

**ಯದ್ವೇನಮುತ್ಪಥಗತಂ ದ್ವಿಜವಾಕ್ಯವಜ್ರ-**
**ನಿಷ್ಪ್ಲುಷ್ಟಪೌರುಷಭಗಂ ನಿರಯೇ ಪತಂತಮ್ ।**

**ಜ್ಞಾತ್ವಾರ್ಥಿತೋ ಜಗತಿ ಪುತ್ರಪದಂ ಚ ಲೇಭೇ**
**ದುಗ್ಧಾ ವಸೂನಿ ವಸುಧಾ ಸಕಲಾನಿ ಯೇನ** ॥ ೯ ॥

**ಯತ್** ಯಾವಾಗ, **ಉತ್ಪಥಗತಂ** ನನ್ನ ಉದ್ದೇಶದಿಂದಲೇ ಯಜ್ಞಮಾಡಿರಿ ನನ್ನ ಹೊರತು ಬೇರೆ ದೇವರಿಲ್ಲ ಎಂಬ ಅದ್ವೈತಮಾರ್ಗದಲ್ಲಿರುವ, ಆದ್ದರಿಂದಲೇ, **ದ್ವಿಜವಾಕ್ಯವಜ್ರನಿಷ್ಪಿಷ್ಟ- ಪೌರುಷಭಗಂ** ಬ್ರಾಹ್ಮಣರ ವಾಕ್ಯಗಳೆಂಬ ವಜ್ರಾಯುಧದಿಂದ ನಷ್ಟವಾದ ಪರಾಕ್ರಮ ಮತ್ತು ಐಶ್ವರ್ಯ ಉಳ್ಳ, **ನಿರಯೇ ಪತಂತಂ** ಸತ್ತ ಮೇಲೆ ನರಕದಲ್ಲಿ ಬೀಳಲು ಸಿದ್ಧನಾದ, **ವೇನಂ** ವೇನನನ್ನು, **ಜ್ಞಾತ್ವಾ** ತಿಳಿದು, **ಅರ್ಥಿತಃ** ಋಷಿಗಳಿಂದ ಪ್ರಾರ್ಥಿತನಾಗಿ ಪೂರ್ವಜನ್ಮದಲ್ಲಿ ಪೃಥುವಿನಿಂದಲೂ ಪ್ರಾರ್ಥಿತನಾಗಿ, **ಜಗತಿ** ಭೂಲೋಕದಲ್ಲಿ, **ತದಾ** ಆಗ, **ಪುತ್ರಪದಂ** ಮಥಿತವಾದ ವೇನನ ಬಲಭುಜದಿಂದ ಹುಟ್ಟಿದ ಪೃಥುರಾಜನೆಂಬ (ಅವನ ಶರೀರವೆಂಬ) ಸ್ಥಾನವನ್ನು, **ಲೇಭೇ** ಪಡೆದನು ಅವನಲ್ಲಿ ಆವಿಷ್ಟನಾದನೆಂದರ್ಥ. ಪೃಥು ಎಂಬ ಹೆಸರನ್ನೂ ಪಡೆದನು ಎಂದು ಚ ಶಬ್ದದ ಅರ್ಥ. **ಯೇನ** ಪೃಥುವಿನಲ್ಲಿ ಆವಿಷ್ಟನಾದ ಪೃಥು ಎಂಬ ವಿಷ್ಣುವಿನ ರೂಪದಿಂದ, **ವಸುಧಾ** ಭೂಮಿಯು, **ಸಕಲಾನಿ ವಸೂನಿ** ಅಮೃತಾದಿ ಎಲ್ಲ ದ್ರವ್ಯಗಳನ್ನು, **ದುಗ್ಧಾ** ಕರೆದಳು. ॥ ೯ ॥

ಇಲ್ಲಿ ವೇನಪುತ್ರ ಪೃಥುವು ಭಗವದವತಾರ ಎಂದು ತೋರುವುದು. ಅದು ಪ್ರಮಾಣವಿರುದ್ಧವಾಗಿದೆ. ಆದ್ದರಿಂದ ಈ ಶ್ಲೋಕ ಆವೇಶಾಭಿಪ್ರಾಯಕ ಎಂದು ವ್ಯಾಖ್ಯಾನಿಸಬೇಕೆಂದು ಪ್ರಮಾಣದಿಂದ ತಿಳಿಸುವರು-

**ತಾತ್ಪರ್ಯ- ಪೃಥುರ್ನಾಮ ಮಹಾರಾಜಸ್ತತ್ರ ವಿಷ್ಣುಃ ಸ್ವಯಂ ಪ್ರಭುಃ ।**
**ಪೃಥುನಾಮಾ ಚತುರ್ಬಾಹುಃ ಪ್ರವಿಷ್ಟಸ್ತೇನ ಚಾರ್ಥಿತಃ ॥**

**-ಇತಿ ಮಹಾಸಂಹಿತಾಯಾಂಮ್**

ಪೃಥು ಎಂದು ಪ್ರಸಿದ್ಧನಾದ ಮಹಾರಾಜನು ಇರುತ್ತಿದ್ದನು. ಅವನಲ್ಲಿ ನಾಲ್ಕು ಭುಜಗಳುಳ್ಳ ಪೃಥು ಎಂದು ಹೆಸರುಳ್ಳ ಪ್ರಭುವಾದ ಸಾಕ್ಷಾದ್ವಿಷ್ಣುವು ಪೃಥುರಾಜನಿಂದ ಪೂರ್ವಜನ್ಮದಲ್ಲಿಯೂ ವೇನನ ಮರಣಾನಂತರ ಋಷಿಗಳಿಂದಲೂ ಪ್ರಾರ್ಥಿತನಾಗಿ ಪ್ರವೇಶಿಸಿದನು. ಎಂದು ಮಹಾಸಂಹಿತೆಯಲ್ಲಿದೆ. ॥ ೯ ॥

*ಋಷಭಾವತಾರವನ್ನು ಹೇಳುವರು-*

**ನಾಭೇರಸಾವೃಷಭ ಆಸ ಸುದೇವಿಸೂನುಃ**
**ಯೊ ವೈ ಚಚಾರ ಸಮದೃಗ್ ಹೃದಿ ಯೋಗಚರ್ಯಾಮ್ ।**
**ಯತ್ಪಾರಮಹಂಸ್ಯಮೃಷಭಃ ಪದಮಾಮನಂತಿ**
**ಸ್ವಸ್ಥಃ ಪ್ರಶಾಂತಕರಣಃ ಪರಿಮುಕ್ತಸಂಗಃ** ॥ ೧೦ ॥

**ಅಸೌ** ಶ್ರೀಮನ್ನಾರಾಯಣನು, **ನಾಭೇಃ** ನಾಭಿರಾಜನಿಂದ, **ಸುದೇವಿಸೂನುಃ** ಸುದೇವಿಯ ಮಗನಾಗಿ ಋಷಭನು, **ಆಸ** ಅವತರಿಸಿದನು. (ನಾಭಿಯ ಹೆಂಡತಿ ಮೇರುದೇವಿಗೆ ಸುದೇವಿ ಎಂದು ಮತ್ತೊಂದು ಹೆಸರು) **ಯಃ** ಯಾವನು, **ಹೃದಿ** ಎಲ್ಲರ ಹೃದಯದಲ್ಲಿ **ಸಮದೃಕ್** ನಿರ್ದೋಷನಾದ ತನನ್ನು ಕಾಣುವನೋ, **ಯೋಗಚರ್ಯಾಂ** ಪರಮಹಂಸಧರ್ಮವನ್ನು, **ಚಚಾರ** ಲೋಕಶಿಕ್ಷಣಕ್ಕಾಗಿ ಆಚರಿಸಿದನೋ, **ಯತ್** ಯಾವನ, **ಪದಂ** ರೂಪವು, **ಪಾರಮಹಂಸ್ಯಂ** ಪರಮಹಂಸಧರ್ಮದ ಜ್ಞಾನಕ್ಕಾಗಿ ಪರಮಹಂಸರಿಂದ ಪ್ರಾಪ್ಯವಾಗಿದೆ ಎಂದು, **ಋಷಯಃ** ಋಷಿಗಳು, **ಆಮನಂತಿ** ಹೇಳುವರೋ, **ಯಶ್ಚ** ಯಾವನು, **ಸ್ವಸ್ಥಃ** ತನ್ನಲ್ಲಿಯೇ ಇರುವನೋ, **ಪ್ರಶಾಂತಕರಣಃ** ಪ್ರಕೃಷ್ಟಸುಖಾತ್ಮಕ ಇಂದ್ರಿಯ ಉಳ್ಳವನು ಆದ್ದರಿಂದಲೇ, **ಪರಿಮುಕ್ತಸಂಗಃ** ಬಾಹ್ಯಸುಖಾಪೇಕ್ಷಾರಹಿತನೋ, **ಸಃ ಋಷಭಃ** ಅವನು ಋಷಭನು.

ಇಲ್ಲಿ 'ಯತ್ಪಾರಮಹಂಸ್ಯಂ ಪದಂ' ಎಂಬುದನ್ನು ಪ್ರತ್ಯಯಾರ್ಥ ತಿಳಿಸುತ್ತ ವ್ಯಾಖ್ಯಾನಿಸುವರು-

**ತಾತ್ಪರ್ಯ- ಯದ್ರೂಪಂ ತು ಪರಮಹಂಸಪ್ರಾಪ್ಯಂ ಪದಂ ಅಮನಂತಿ ।**

ಯಾವ ಋಷಭರೂಪಿಯಾದ ಪರಮಾತ್ಮನ ರೂಪವು ಪರಮಹಂಸರಿಂದ ಪ್ರಾಪ್ಯವೆಂದು ಹೇಳುವರು. (ಮೂಲದಲ್ಲಿ ಯತ್ ಎಂಬುದು ಅವ್ಯಯವಾಗಿದೆ. ಅದು ಷಷ್ಠ್ಯರ್ಥಕವಾಗಿದೆ. ಪದಂ ಎಂಬುದಕ್ಕೆ ರೂಪಂ ಎಂಬುದು ವ್ಯಾಖ್ಯಾನ.) ॥೧೦॥

*ಹಯಗ್ರೀವಾವತಾರ ಅದರ ಕಾರ್ಯವನ್ನು ಹೇಳುವರು-*

**ಸತ್ರೇ ಮಮಾಸ ಭಗವಾನ್ ಹಯಶೀರ್ಷ ಏಷಃ**
**ಸಾಕ್ಷಾತ್ ಸ ಯಜ್ಞಪುರುಷಸ್ತಪನೀಯವರ್ಣಃ ।**
**ಛಂದೋಮಯೋ ಮಖಮಯೋಽಖಿಲದೇವತಾತ್ಮಾ**
**ವಾಚೊ ಬಭೂವುರುಶತೀಃ ಶ್ವಸತೋಽಸ್ಯ ನಸ್ತಃ** ॥ ೧೧ ॥

**ಸಃ** ವೇದಾದಿಗಳಲ್ಲಿ ಪ್ರಸಿದ್ಧನಾದ, **ತಪನೀಯವರ್ಣಃ** ಬಂಗಾರದಂತೆ ಬಣ್ಣ ಉಳ್ಳ **ಛಂದೋಮಯಃ** ಛಂದಸ್ಸಿಗೆ ಆಧಾರನಾದ, **ಮಖಮಯಃ** ಯಜ್ಞಾಧಾರನಾದ, **ಅಖಿಲದೇವತಾತ್ಮಾ** ಎಲ್ಲ ಲೋಕಗಳಿಗೆ, ದೇವತೆಗಳಿಗೆ ಆಧಾರನಾದ, **ಏಷಃ ಯಜ್ಞಪುರುಷಃ** ಯಜ್ಞಭೋಕ್ತೃವಾದ ಈ ಪುರುಷನು, **ಸಾಕ್ಷಾತ್** ತಾನೇ, **ಮಮ ಸತ್ರೇ** ನಾನು ಮಾಡುತ್ತಿರುವ ಯಜ್ಞದಲ್ಲಿ, **ಹಯಶೀರ್ಷಃ** ಹಯಗ್ರೀವನಾಮಕನಾಗಿ, **ಆಸ** ಅವತರಿಸಿದನು,**ಶ್ವಸತಃ** ಶ್ವಾಸಮಾಡುತ್ತಿರುವ **ಅಸ್ಯ** ಈ ಹಯಗ್ರೀವದೇವರ, **ನಸ್ತಃ** ನಾಸಾಪುಟಗಳಿಂದ, **ಉಶತೀಃ** ಅಪೌರುಷೇಯವಾದುದರಿಂದ ಶುದ್ಧವಾದ, **ವಾಚಃ** ವೇದಗಳು, **ಬಭೂವುಃ** ಹೊರ ಹೊರಟವು.

ಇಲ್ಲಿ ವೇದಾದಿಗಳಿಗೆ ಛಂದೋಮಯ ಎಂಬ ಮಾತಿನಿಂದ ವೇದಗಳಿಂದ ಭಗವಂತನಿಗೆ ತಾದಾತ್ಮ್ಯವು ತೋರುವುದು. ಕಾರಣ ಅಭಿಪ್ರಾಯ ಹೇಳುವರು-

ತಾತ್ಪರ್ಯ- ಛಂದಾಸಿ ಚ ಮಖಾಶ್ಚೈವ ದೇವಾ ಲೋಕಾಶ್ಚ ಸರ್ವಶಃ ।
ಸರ್ವೇ ವಿಷ್ಣೌ ಸ್ಥಿತಾ ಯಸ್ಮಾದತಃ ಸರ್ವಮಯೋ ಹ್ಯಸೌ ॥
-ಇತಿ ಮಹಾಸಂಹಿತಾ ಯಾಮ್ ॥

ವೇದಗಳು, ಯಜ್ಞಗಳು, ದೇವತೆಗಳು, ಎಲ್ಲ ಲೋಕಗಳು ಇವೆಲ್ಲವೂ ವಿಷ್ಣುವನ್ನೇ ಆಶ್ರಯಿಸಿಕೊಂಡಿವೆ. ಆದ್ದರಿಂದ ದೇವರನ್ನು ಛಂದಾದಿಸರ್ವಮಯ ಎಂದು ವ್ಯವಹರಿಸುತ್ತಾರೆ. ಹೀಗೆಂದು ಮಹಾಸಂಹಿತೆಯಲ್ಲಿದೆ. ॥ ೧೧ ॥

ಮತ್ಸ್ಯಾವತಾರ ಮತ್ತು ಕಾರ್ಯಗಳನ್ನು ಹೇಳುವರು-

**ಮತ್ಸ್ಯೋ ಯುಗಾಂತಸಮಯೇ ಮನುನೋಪಲಬ್ಧಃ**
**ಕ್ಷೋಣೀಮಯೋ ನಿಖಿಲಜೀವನಿಕಾಯಕೇತಃ ।**
**ವಿಸ್ರಂಸಿತಾನುರುಭಯೇ ಸಲಿಲೇ ಮುಖಾನ್ಮೆ**
**ಆದಾಯ ತತ್ರ ವಿಜಹಾರ ಹ ವೇದಮಾರ್ಗಾನ್** ॥೧೨॥

**ಸಃ ಭಗವಾನ್** ಶ್ರೀಹರಿಯು, **ಮೇ** ನನ್ನ, **ಮುಖಾತ್** ಮುಖದಿಂದ, **ವಿಸ್ರಂಸಿತಾನ್** ಹೊರಹೊರಟಿರುವ, **ವೇದಮಾರ್ಗಾನ್** ವೇದದ ಪ್ರಭೇದಗಳನ್ನು, ಹಯಗ್ರೀವನೆಂಬ ದೈತ್ಯನಿಂದ ಅಪಹೃತವಾದ ಎಲ್ಲ ವೇದಗಳನ್ನು, **ಉರುಭಯೇ ಸಲಿಲೇ** ಬಹುಭಯಾನಕವಾದ ನೀರಿನಲ್ಲಿ, **ಆದಾಯ** ಅವನನ್ನು ಕೊಂದು, ಮತ್ತೆ ತಂದು, **ತತ್ರ** ಆ ನೀರಿನಲ್ಲಿ, **ವಿಜಹಾರ** ವಿಹಾರ ಮಾಡಿದನು (ಇದು ಮೊದಲನೆಯ ಮನ್ವಂತರ

ಮತ್ಸ್ಯಾವತಾರ) **ಯುಗಾಂತಸಮಯೇ** ಚಾಕ್ಷುಷಮನ್ವಂತರದ ಸಮಾಪ್ತಿ ಸಮಯದಲ್ಲಿ **ಮನುನಾ** ಭಾವಿವೈವಸ್ವತಮನುವಾದ ಸತ್ಯವ್ರತರಾಜನಿಂದ, **ಮತ್ಸ್ಯಃ** ಮತ್ಸ್ಯರೂಪೀ ಹರಿಯು, **ಉಪಲಬ್ಧಃ** ಕಾಣಿಸಿಕೊಂಡನು, **ಕ್ಷೋಣೀಮಯಃ** ಭೂಮ್ಯಾತ್ಮಕವಾದ ನೌಕೆಗೆ ಆಶ್ರಯನಾದ್ದರಿಂದ ಕ್ಷೋಣಿಮಯನೆನಿಸಿದ ಆದ್ದರಿಂದಲೇ, **ನಿಖಿಲಜೀವನಿಕಾಯಕೇತಃ** ಎಲ್ಲ ಜೀವಸಮುದಾಯಕ್ಕೆ ಆಶ್ರಯನಾದ ಆ ಪರಮಾತ್ಮನು, **ಉರುಭಯೇ ಸಲಿಲೇ** ಮನ್ವಂತರ ಪ್ರಲಯಜಲದಲ್ಲಿ, **ವಿಜಹಾರ** ವಿಹಾರ ಮಾಡಿದನು. (ಇದು ಎರಡನೆಯ ಅವತಾರ)

**ತಾತ್ಪರ್ಯ- ಕ್ಷೋಣಿಮಯನೌಕಾಶ್ರಯತ್ವಾತ್ ಕ್ಷೋಣಿಮಯಃ ।**

ಭೂರೂಪವಾದ ನೌಕೆಗೆ ಆಶ್ರಯನಾದ್ದರಿಂದ ಮತ್ಸ್ಯನು ಕ್ಷೋಣೀಮಯ ಎಂದು ಭಾವ. ॥ ೧೨ ॥

*ಕೂರ್ಮಾವತಾರ ಅದರ ಕಾರ್ಯ ಹೇಳುವರು-*

**ಕ್ಷೀರೋದಧಾವಮರದಾನವಯೂಥಪಾನಾ-**
**ಮುನ್ಮಥ್ನತಾಮಮೃತಲಬ್ಧಯ ಆದಿದೇವಃ ।**
**ಪೃಷ್ಠೇನ ಕಚ್ಛಪವಪುರ್ವಿದಧಾರ ಗೋತ್ರಂ**
**ನಿದ್ರೇಕ್ಷಣೋऽದ್ರಿಪರಿವರ್ತಕಷಾಣಕಂಡುಃ** ॥ ೧೩ ॥

**ಆದಿದೇವಃ** ನಾರಾಯಣನು, **ಅಮೃತಲಬ್ಧಯೇ** ಅಮೃತದ ಪ್ರಾಪ್ತಿಗಾಗಿ **ಅಮರದಾನವಯೂಥಪಾನಾಮ್** ದೇವತೆಗಳ ಮತ್ತು ದಾನವರ ಪ್ರಮುಖರು, **ಕ್ಷೀರೋದಂ** ಹಾಲಿನ ಸಮುದ್ರವನ್ನು **ಉನ್ಮಥ್ನತಾಂ ಸತಾಂ** ಕಡೆಯುತ್ತಿರಲು, **ಕ್ಷಿರೋದಧೌ** ಕ್ಷೀರಸಮುದ್ರದಲ್ಲಿ ಮುಳುಗುತ್ತಿರುವ, **ಗೋತ್ರಂ** ಮಂದರಪರ್ವತವನ್ನು **ಕಚ್ಛಪವಪುಃ** ಕೂರ್ಮರೂಪನಾಗಿ, **ಪೃಷ್ಠೇನ ದಧಾರ** ಬೆನ್ನ ಮೇಲೆ ಮತ್ತೆ ಮುಳುಗದಂತೆ ಧರಿಸಿದನು. **ಅದ್ರಿಪರಿವರ್ತಕಷಾಣಕಂಡುಃ** ಮಂದರಪರ್ವತದ ಭ್ರಮಣದಿಂದ ಉಂಟಾದ ಘರ್ಷಣದಿಂದ ತುರಿಕೆಯುಳ್ಳವನಾದದ್ದರಿಂದ, **ನಿದ್ರೇಕ್ಷಣಃ** ನಿದ್ದೆಯಿಂದ ಸ್ವಲ್ಪ ಕಣ್ಣು ಮುಚ್ಚಿದನು. ॥ ೧೩ ॥

*ನೃಸಿಂಹಾವತಾರ, ಅವತಾರದ ಕಾರ್ಯವನ್ನು ಹೇಳುವರು-*

**ತ್ರೈವಿಷ್ಟಪೋರುಭಯಹಾರಿನೃಸಿಂಹರೂಪಂ**
**ಕೃತ್ವಾ ಭ್ರಮದ್ ಭ್ರುಕುಟಿದಂಷ್ಟ್ರಕರಾಲವಕ್ತ್ರಮ್ ।**
**ದೈತ್ಯೇಂದ್ರಮಾಶು ಗದಯಾಽಭಿಪತಂತಮಾರಾ-**
**ದೂರೌ ನಿಪಾತ್ಯ ವಿದದಾರ ನಖೈಃ ಸ್ಫುರಂತಮ್ ॥ ೧೪ ॥**

**ಆದಿದೇವಃ** ಶ್ರೀಮನ್ನಾರಾಯಣನು, **ತ್ರೈವಿಷ್ಟಪೋರುಭಯಹಾರಿನೃಸಿಂಹರೂಪಂ ಕೃತ್ವಾ** ದೇವತೆಗಳ ಬಹಳವಾದ ಭಯವನ್ನು ಪರಿಹರಿಸುವ ನರಸಿಂಹರೂಪವನ್ನು ಪ್ರಕಟಗೊಳಿಸಿ, **ಭ್ರಮದ್‌ಭ್ರುಕುಟಿದಂಷ್ಟ್ರಕರಾಲವಕ್ತ್ರಮ್** ಚಲಿಸುವ ಹುಬ್ಬುಗಳು ಮತ್ತು ಕೋರೆಹಲ್ಲುಗಳಿಂದ ಭಯಕಂರವಾದ ಮುಖ ಉಳ್ಳ ರೂಪವನ್ನು ಧರಿಸಿ, **ಆರಾತ್** ದೂರದಲ್ಲಿ **ಗದಯಾ ಅಭಿಪತಂತಂ** ಗದೆಯಿಂದ ಎದುರಾಗಿ ಬರುವ, **ಸ್ಫುರಂತಂ ದೈತ್ಯೇಂದ್ರಂ** ಹೊಳೆಯುವ ಹಿರಣ್ಯಕಶಿಪುವನ್ನೂ, **ಆಶು** ಬೇಗನೇ, **ಊರೌ** ತೊಡೆಯ ಮೇಲೆ, **ನಿಪಾತ್ಯ** ಕೆಡವಿಕೊಂಡು, **ನಖೈಃ ವಿದದಾರ** ಉಗುರುಗಳಿಂದ ಸೀಳಿದನು. ॥೧೪॥

*ಹರಿಯ ಅವತಾರವನ್ನೂ ಕಾರ್ಯವನ್ನು ಹೇಳುವರು-*

**ಅಂತಃ ಸರಸ್ಯುರುಬಲೇನ ಪದೇ ಗೃಹಿತೋ**
**ಗ್ರಾಹೇಣ ಯೂಥಪತಿರಂಬುಜಹಸ್ತ ಆರ್ತಃ ।**
**ಆಹೇದಮಾದಿಪುರುಷಾಽಖಿಲಲೋಕನಾಥ-**
**ತೀರ್ಥಶ್ರವಃ ಶ್ರವಣಮಂಗಲನಾಮಧೇಯ ॥ ೧೫ ॥**

**ಯದಾ** ಯಾವಾಗ, **ಯೂಥಪತಿಃ** ಗಜೇಂದ್ರನು, **ಸರಸಿ ಅಂತಃ** ಸರೋವರದ ಮಧ್ಯದಲ್ಲಿ **ಗ್ರಾಹೇಣ** ಮೊಸಳೆಯಿಂದ, **ಪದೇ ಗೃಹೀತಃ** ಕಾಲಲ್ಲಿ ಹಿಡಿಯಲ್ಪಟ್ಟು **ಆರ್ತಃ** ದುಃಖಿತನಾಗಿ, **ಅಂಬುಜಹಸ್ತಃ** ಸೊಂಡಿಲಿನಿಂದ ಕಮಲವನ್ನು ಹಿಡಿದು, **ಹೇ ತೀರ್ಥಶ್ರವಃ** ಪವಿತ್ರಕೀರ್ತಿ ಉಳ್ಳವನೇ, **ಶ್ರವಣಮಂಗಲನಾಮಧೇಯ** ಕೇಳುವ ಮಾತ್ರದಿಂದ ಮಂಗಲವನ್ನುಂಟುಮಾಡುವ ನಾರಾಯಣಾದಿ ನಾಮಗಳುಳ್ಳವನೇ, **ಅಖಿಲಲೋಕನಾಥ** ಎಲ್ಲ ಜಗದೊಡೆಯನೇ, **ಆದಿಪುರುಷ** ಕಾರಣಪುರುಷನೇ, **ತ್ವಂ** ನೀನು, **ಅಸ್ಮಾನ್ ರಕ್ಷ** ನಮನ್ನು ರಕ್ಷಿಸು, **ಇತಿ ಇದಂ ಆಹ** ಹೀಗೆ ಇದನ್ನು ಹೇಳಿದನು. ॥ ೧೫ ॥

**ಸ್ಮೃತ್ವಾ ಹರಿಸ್ತಮರಣಾರ್ಥಿನಮಪ್ರಮೇಯ-**
**ಶ್ಚಕ್ರಾಯುಧಃ ಪತಗರಾಜಭುಜಾಧಿರೂಢಃ ।**
**ಚಕ್ರೇಣ ನಕ್ರವದನಂ ವಿನಿಪಾಟ್ಯ ತಸ್ಮಾ-**
**ದ್ಧಸ್ತೇ ಪ್ರಗೃಹ್ಯ ಭಗವಾನ್ ಕೃಪಯೋಜ್ಜಹಾರ** ॥ ೧೬ ॥

**ತದಾ** ಆಗ, **ಅಪ್ರಮೇಯಃ** ಯಾರಿಂದಲೂ ಪೂರ್ಣವಾಗಿ ತಿಳಿಯಲಾಗದ, **ಚಕ್ರಾಯುಧಃ** ಚಕ್ರವನ್ನು ಧರಿಸಿದ, **ಪತಗರಾಜಭುಜಾಧಿರೂಢಃ** ಗರುಡನ ಹೆಗಲ ಮೇಲೆರಿದ, **ಹರಿಃ** ಹರಿ ಎಂಬ ಹೆಸರಿನ ತಾಪಸಮನುವು, **ಅರಣಾರ್ಥಿನಂ** ರಕ್ಷಣೆಯನ್ನು ಅಪೇಕ್ಷಿಸಿದ, **ತಂ** ಗಜೇಂದ್ರನನ್ನು ಕುರಿತು, **ಸ್ಮೃತ್ವಾ** ಅನುಗ್ರಹೋನ್ಮುಖನಾಗಿ (ನಿತ್ಯಜ್ಞಾನವುಳ್ಳ ಭಗವಂತನಿಗೆ ಸಂಸ್ಕಾರಜನ್ಯವಾದ ಜ್ಞಾನರೂಪವಾದ ಸ್ಮರಣೆ ಸಾಧ್ಯವಿಲ್ಲದರಿಂದಲೂ 'ಕ್ರತೋ ಸ್ಮರ' ಎಂಬ ಈಶಾವಾಸ್ಯವಾಕ್ಯದ ವ್ಯಾಖ್ಯಾನದಲ್ಲಿ ಶ್ರೀಮದಾಚಾರ್ಯರು ಹೀಗೆಯೇ ಸ್ಮರಣ ಶಬ್ದಾರ್ಥ ಮಾಡಿದ್ದರಿಂದಲೂ ಈ ರೀತಿ ಅರ್ಥ ಯುಕ್ತವಾದುದು) **ನಕ್ರವದನಂ** ಮೊಸಳೆಯ ಮುಖವನ್ನು, **ಚಕ್ರೇಣ** ಚಕ್ರದಿಂದ, **ವಿನಿಪಾಟ್ಯ** ಕತ್ತರಿಸಿ, **ಹಸ್ತೇ ಪ್ರಗೃಹ್ಯ** ಸೊಂಡೆಯನ್ನು ಹಿಡಿದು, **ತಸ್ಮಾತ್** ಮೊಸಳೆಯಿಂದ, **ಕೃಪಯಾ** ದಯೆಯಿಂದ, **ಭಗವಾನ್** ಶ್ರೀಹರಿಯು, **ಉಜ್ಜಹಾರ** ಉದ್ಧರಿಸಿದನು ಮೇಲೆತ್ತಿದನು.

ಇಲ್ಲಿ ಹರಿ ಎಂದರೆ ಮೂಲರೂಪಿ ಎಂದು ತೋರುವುದು. ಅವತಾರಗಳನ್ನು ಹೇಳುವಾಗ ಈ ರೂಪದ ವರ್ಣನೆಯು ಅಸಂಗತವಾಗಿದೆ. ಆದ್ದರಿಂದ ಪ್ರಕೃತ ಹರಿಶಬ್ದವಾಚ್ಯವಾದ ಗಜೇಂದ್ರಮೋಚಕವಾದ ಅವತಾರವನ್ನು ಪ್ರಮಾಣದಿಂದ ತಿಳಿಸುವರು-

ತಾತ್ಪರ್ಯ- ಹರಿಸ್ತಾಪಸನಾಮಾಽಸೌ ಜಾತಸ್ತಪಸಿ ವೈ ಮನುಃ ।
ಗಜೇಂದ್ರಂ ಮೋಚಯಾಮಾಸ ಸಸರ್ಜ ಚ ಜಗದ್ವಿಭುಃ ॥ -ಇತಿ ಮಾತ್ಸ್ಯೇ

ಶ್ರೀಹರಿಯು ಉತ್ತಮನ ತಮ್ಮನಾಗಿ ಅವತರಿಸಿದನು. ತಪಸ್ಸು ಮಾಡಿದ್ದರಿಂದ ತಾಪಸನೆಂದು ಕರಿಸಿಕೊಂಡನು. ಅವನು ಗಜೇಂದ್ರನನ್ನು ಮೊಸಳೆಯಿಂದ ಮೋಚನ ಮಾಡಿದನು. ಮತ್ತು ಜಗತ್ತನ್ನೂ ಸೃಷ್ಟಿಸಿದನು. ಎಂದು ಮಾತ್ಸ್ಯಪುರಾಣದಲ್ಲಿ ಹೇಳಿದೆ. ವೈ ಇದು ಪ್ರಸಿದ್ಧವಾಗಿದೆ. 'ಚತುರ್ಥ ಉತ್ತಮಭ್ರಾತಾ ಮನುರ್ನಾಮ್ನಾ ಚ ತಾಪಸಃ । ಹರಿರಿತ್ಯಾಹುತೋ ಯೇನ ಗಜೇಂದ್ರೋ ಮೋಚಿತೋ ಗ್ರಹಾತ್' ಎಂದು ಈ ವಿಷಯವನ್ನು ಮುಂದೆ ಹೇಳುವವರಿದ್ದಾರೆ. ॥ ೧೬ ॥

ವಾಮನಾವತಾರವನ್ನು ಅದರ ಕಾರ್ಯವನ್ನು ಎರಡು ಶ್ಲೋಕಗಳಿಂದ ಹೇಳುವರು-

**ಜ್ಯಾಯಾನ್ ಗುಣೈರವರಜೋಽಪ್ಯದಿತೇಃ ಸುತಾನಾಂ**
**ಲೋಕಾನ್ ವಿಚಕ್ರಮ ಇಮಾನ್ಯದಥೋಽಧಿಯಜ್ಞಃ ।**
**ಕ್ಷ್ಮಾಂ ವಾಮನೇನ ಜಗೃಹೇ ತ್ರಿಪದಚ್ಛಲೇನ**
**ಯಾಂಚಾಮೃತೇ ಪಥಿ ಚರನ್ ಪ್ರಭುಭಿರ್ನ ಚಾಲ್ಯಃ ॥ ೧೭ ॥**

**ಅಧಿಯಜ್ಞಃ** ಯಜಮಾನ-ಋತ್ವಿಕ್ ಮೊದಲಾದ ಎಲ್ಲರ ದೇಹನಿಯಾಮಕನಾದ ಶ್ರೀಹರಿಯು, **ಗುಣೈಃ** ಗುಣಗಳಿಂದ, **ಜ್ಯಾಯಾನಪಿ** ಹಿರಿಯನಾಗಿದ್ದರೂ, **ಅದಿತೇಃ ಸುತಾನಾಂ** ಇಂದ್ರಾದಿದೇವತೆಗಳಿಗೆ, **ಅವರಜಃ** ಕಿರಿಯನಾಗಿ ಜನಿಸಿದನು. **ಯಾಂಚಾಂ ಋತೇ** ತಾನು ಕೇಳದಲೇ, ಅರ್ಥಾತ್ ಕೇಳಿದ ಮೇಲೆ ಕೊಡುವೆನೆಂದು, ಹೇಳಿ ಕೊಡದಿರುವುದೆಂಬ ತಪ್ಪು ಮಾಡದಿರುವಾಗ, **ಪಥಿ ಚರನ್** ಧರ್ಮಮಾರ್ಗದಲ್ಲಿರುವವನು, **ಪ್ರಭುಭಿಃ** ಯಜಮಾನರಿಂದ, **ನ ಚಾಲ್ಯಃ** ಐಶ್ವರ್ಯಭ್ರಷ್ಟನನ್ನಾಗಿ ಮಾಡಲ್ಪಡಬಾರದು ಆದ ಕಾರಣ, **ವಾಮನೇನ** ಚಿಕ್ಕದಾದ ರೂಪದಿಂದ, **ತ್ರಿಪದಚ್ಛಲೇನ** ನನಗೆ ನನ್ನ ಕಾಲಿನಿಂದ ಮೂರು ಹೆಜ್ಜೆ ಅಳತೆಯ ಭೂಮಿಯನ್ನು ಕೊಡು ಎಂದು ಕೇಳುವ ನೆಪದಿಂದ, **ಕ್ಷ್ಮಾಂ** ಭೂಮಿಯನ್ನು, **ಜಗೃಹೇ** ಸ್ವೀಕರಿಸಿದನು, **ಯತ್ ಇಮಾನ್ ಲೋಕಾನ್ ವಿಚಕ್ರಮೇ** ಯಾವ ಕಾರಣ ಎಲ್ಲ ಲೋಕಗಳನ್ನು ಪಾದಗಳಿಂದ ಆಕ್ರಮಿಸಿದನೋ ಆದ್ದರಿಂದ ಗುಣಗಳಿಂದ ಶ್ರೇಷ್ಠನೆಂದು ಭಾವ. (ಅಥವಾ ದುಷ್ಟರನ್ನು ನಿಗ್ರಹಿಸಿ ಐಶ್ವರ್ಯ ಸ್ವೀಕರಿಸುವಂತೆ ಸಜ್ಜನರನ್ನು ನಿಗ್ರಹಿಸಬಾರದು. ಕೇಳಿಯೇ ಎಲ್ಲ ಸಂಪತ್ತನ್ನು ಪಡೆದು ಐಶ್ವರ್ಯ ಇಲ್ಲದಂತೆ ಮಾಡಬಹುದು. ಹೀಗೆ ಮಾಡುವೆನೆಂದು ಪ್ರಹ್ಲಾದನಿಗೆ ಮಾತು ಕೊಟ್ಟಿದ್ದನು. ಕಾರಣ ಯಾಚಿಸಿದನು ಎಂದು ಭಾವ. ॥೧೭॥

*ಯಾಚಿಸಿ ಸ್ಥಾನಭ್ರಂಶ ಮಾಡುವುದು ಉಚಿತವಲ್ಲ ಎಂದು ಶಂಕಿಸಿ ಇದಕ್ಕಿಂತಲೂ ಹೆಚ್ಚಿನ ಫಲವನ್ನು ಕೊಡುವೆನೆಂಬ ಅಭಿಪ್ರಾಯದಿಂದ ಯಾಚಿಸಿದನು ಎಂದು ಹೇಳುವರು-*

**ನಾರ್ಥೋ ಬಲೇರಯಮುರಕ್ರಮಪಾದಶೌಚ-**
**ಮಂಭಃ ಶಿವಂ ಧೃತವತೋ ವಿಬುಧಾಧಿಪತ್ಯಮ್ ।**
**ಯೋ ವೈ ಪ್ರತಿಶ್ರುತಮೃತೇಽಪಿ ಚ ಶೀರ್ಷಮಾಣ-**
**ಮಾತ್ಮನ್ಯಮಂಗ ಮನಸಾ ಹರಯೇಽಭಿಮೇನೇ ॥ ೧೮ ॥**

**ಹೇ ಅಂಗ** ನಾರದನೇ, **ಯಃ** ಯಾವನು, **ಪ್ರತಿಶ್ರುತಂ ಋತೇ** ಕೊಡುವೆನೆಂದು ಹೇಳಿದ, (ಪ್ರತಿಜ್ಞೆಮಾಡಿದ) ಮೂರು ಪಾದಗಳನ್ನು ಬಿಟ್ಟು ಕೂಡ, **ಆತ್ಮನ್ಯಂ** ತನ್ನ **ಶೀರ್ಷಮಾಣಂ** ತಲೆ ಎಂಬ ಪರಿಮೇಯವಾದ ವಸ್ತುವನ್ನು **ಹರಯೇ** ವಾಮನನಿಗೆ, **ಮನಸಾ ಅಭಿವೇನೇ** ಮನಃಪೂರ್ವಕವಾಗಿ ಸಮರ್ಪಿಸಿದನು, ಮತ್ತು **ಶಿವಂ** ಮಂಗಳಕರವಾದ, **ಉರುಕ್ರಮಪಾದಶೌಚಮಂಭಃ** ವಾಮನನ ಪಾದವನ್ನು ತೊಳೆದ ನೀರನ್ನು, **ಧೃತವತಃ** ತಲೆಯಲ್ಲಿ ಧರಿಸಿದ, **ಬಲೇಃ** ಬಲಿರಾಜನಿಗೆ, **ವಿಬುಧಾಧಿಪತ್ಯಂ** ಮುಂದಿನ ಮನ್ವಂತರದಲ್ಲಿ ಶ್ರೀಹರಿಯು ಕೊಟ್ಟ ಇಂದ್ರ ಪದವಿಯು, **ನ ಅರ್ಥಃ** ಮುಖ್ಯ ಫಲವಲ್ಲ.

ಕಿಂತು ಆನುಷಂಗಿಕಫಲವು. ಮುಕ್ತಿಯಲ್ಲಿ ಆನಂದಾಭಿವೃದ್ಧಿಕರವಾದ ಶ್ರೀಹರಿಯ ಪ್ರೀತಿಯೇ ಮುಖ್ಯವಾದ ಫಲ. ವಾಮನನು ಭೂಮಿಯನ್ನು ಬೇಡಿ ತೆಗೆದುಕೊಂಡುದು ಬಲಿಗೆ ಅನುಗ್ರಹಿಸಲೆಂದೇ ಹೊರತು ಐಶ್ವರ್ಯವನ್ನು ನಾಶ ಮಾಡಲು ಅಲ್ಲ.

ಇಲ್ಲಿ ಇಂದ್ರಪದವಿಯು ಸರ್ವಥಾ ಫಲವಲ್ಲ ಎಂದು ತೋರುವುದು. ಕಾರಣ ಪ್ರಮಾಣದಿಂದ ಅಭಿಪ್ರಾಯ ತಿಳಿಸುವರು-

**ತಾತ್ಪರ್ಯ- ಐಂದ್ರಂ ಪದಂ ನಾಂತರೀಯಂ ಫಲಂ ತು ಹರಿತೋಷಣಮ್ ।**
**ಜಗದ್ಧಾತುರ್ಬಲೇರ್ಯಸ್ಮಾದಾನಂದೋದ್ರಿಕ್ತತಾ ಭವೇತ್ ॥**
**-ಇತಿ ಬ್ರಹ್ಮತರ್ಕೇಶೀರ್ಷಾಖ್ಯಮಾನಮ್ ॥**

ವಾಮನನಿಗೆ ಜಗತ್ತನ್ನೇ ದಾನಮಾಡಿದ ಬಲಿಗೆ ಇಂದ್ರಪದವಿಯು ಅಮುಖ್ಯವಾದ ಫಲವಾಗಿದೆ. ಮುಕ್ತಿಯಲ್ಲಿ ಆನಂದಾತಿಶಯಕ್ಕೆ ಕಾರಣವಾದ ಹರಿತೋಷಣವೇ ಮುಖ್ಯವಾದ ಫಲವಾಗಿದೆ. ಎಂದು ಭಾವ. ॥ ೧೮ ॥

*ಮಹಿದಾಸಾವತಾರ ಮತ್ತು ಅದರ ಕಾರ್ಯ ಹೇಳುವರು-*

**ತುಭ್ಯಂ ಚ ನಾರದ ಭೃಶಂ ಭಗವಾನ್ವಿವೃದ್ಧ-**
**ಭಾವೇನ ಸಾಧು ಪರಿತುಷ್ಟ ಉವಾಚ ಯೋಗಮ್ ।**
**ಜ್ಞಾನಂ ಚ ಭಾಗವತಮಾತ್ಮಸುತತ್ತ್ವದೀಪಂ**
**ಯದ್ವಾಸುದೇವಶರಣಾ ವಿದುರಂಜಸೇವ ॥ ೧೯ ॥**

**ಹೇ ನಾರದ** ನಾರದನೇ, **ತುಭ್ಯಂ ಚ** ನಿನಗೆ ಮತ್ತು ನಮಗೂ, **ಭೃಶಂ ವಿವೃದ್ಧಭಾವೇನ** ಬಹಳವಾದ ಭಕ್ತಿಯಿಂದ, **ಸಾಧು ಪರಿತುಷ್ಟಃ** ಚೆನ್ನಾಗಿ ಅಂದರೇ

ಪರಮಸುಖಜನಕವಾದ ತನ್ನ ಉಪದೇಶಕ್ಕೆ ಅನುಕೂಲವಾದ ಪ್ರೀತಿ ಉಳ್ಳವನಾಗಿ, **ಭಗವಾನ್** ಮಹಿದಾಸನು, **ಯೋಗಂ** ಕರ್ಮಯೋಗವನ್ನು **ಉವಾಚ** ಹೇಳಿದನು. **ಯತ್** ಯವ ಜ್ಞಾನಾದಿಗಳನ್ನು **ವಾಸುದೇವಶರಣಾಃ** ಭಗವದ್ಭಕ್ತರಾದ ವೈಷ್ಣವರೇ, **ಅಂಜಸಾ** ಚೆನ್ನಾಗಿ **ವಿದುಃ** ಹೊಂದುವರೋ, **ತತ್** ಅಂತಹ, **ಆತ್ಮಸುತತ್ತ್ವದೀಪಂ** ತನ್ನ ಸರಿಯಾದ ಸ್ವರೂಪವನ್ನು ತಿಳಿಸುವ, **ಭಾಗವತಂ** ಭಗವತ್ಸಂಬದ್ಧವಾದ, **ಜ್ಞಾನಂ ಚ ಉವಾಚ** ಜ್ಞಾನವನ್ನೂ ಉಪದೇಶಿಸಿದನು.

ಈ ಶ್ಲೋಕದಲ್ಲಿ ನಾರದರಿಗೆ ಉಪೇದೇಶ ಮಾಡಿದ ಅವತಾರ ಯಾವುದು ಎಂದು ತಿಳಿಯುವುದಿಲ್ಲ. ಕಾರಣ ಪ್ರಮಾಣದಿಂದ ಶ್ಲೋಕದ ತಾತ್ಪರ್ಯವನ್ನು ತಿಳಿಸುವರು-

ತಾತ್ಪರ್ಯ- ಐತರೇಯೋ ಹರಿಃ ಪ್ರಾಹ ನಾರದಾಯ ಸ್ವಕಾಂ ತನುಮ್ ।
ಯತ್ಪ್ರಾಪುರ್ವೈಷ್ಣವಾ ನಾऽನ್ಯೇ ಯದೃತೇನ ಸುಖಂ ಪರಮ್ ॥ -ಇತಿ ಬ್ರಾಹ್ಮೇ

ಯಾವ ಭಗವಂತನ ಜ್ಞಾನವನ್ನು ವೈಷ್ಣವರಾದ ಬ್ರಹ್ಮಾದಿಗಳು ಹೊಂದಿರುವರೋ ಇತರರು ಹೊಂದಲಿಲ್ಲವೋ, ಯಾವ ಭಗವಂತನ ಜ್ಞಾನವಿಲ್ಲದೇ ಸ್ವರೂಪಾನಂದಾನುಭವರೂಪವಾದ ಮುಕ್ತಿಯು ದೊರೆಯಲಾರದೋ ಅಂತಹ ಭಗವದ್ರೂಪವನ್ನು ಇತರಾದೇವಿಯ ಪುತ್ರನಾಗಿ ಅವತರಿಸಿದ ಮಹಿದಾಸರೂಪಿ ಶ್ರೀಹರಿಯು ನಾರದರಿಗೆ ಉಪದೇಶಿಸಿದನು. ॥ ೧೯ ॥

*ರಾಜರಾಜೇಶ್ವರ ಅವತಾರವನ್ನು ಹೇಳುವರು-*

**ಚಕ್ರಂ ಚ ದಿಕ್ಷ್ವವಿಹತಂ ದಶಸು ಸ್ವತೇಜೋ**
**ಮನ್ವಂತರೇಷು ಮನುವಂಶಧರೋ ಬಿಭರ್ತಿ ।**
**ದುಷ್ಟೇಷು ರಾಜಸು ದಮಂ ವಿದಧತ್ಸ್ವಕೀರ್ತಿಂ**
**ಸತ್ಯೇ ನಿವಿಷ್ಟ ಉಶತೀಂ ಪ್ರಥಯಂಶ್ಚರಿತ್ರೈಃ** ॥ ೨೦ ॥

ರಾಜರಾಜೇಶ್ವರನೆಂಬ ಹೆಸರಿನಿಂದ ಅವತರಿಸಿದ ಶ್ರೀಹರಿಯು, **ಮನುವಂಶಧರಃ** ಸ್ವಾಯಂಭುವ ಮುಂತಾದ ಮನುವಂಶದಲ್ಲಿ ಜನಿಸಿದ ಚಕ್ರವರ್ತಿಗಳಲ್ಲಿದ್ದು ಅವರಿಗೆ ಸಾಮರ್ಥ್ಯ ನೀಡುವ ಮೂಲಕ ಧರಿಸುವವನಾಗಿ, **ಮನ್ವಂತರೇಷು** ಹದಿನಾಲ್ಕು ಮನ್ವಂತರಗಳಲ್ಲಿ, **ದಶಸು ದಿಕ್ಷು** ಹತ್ತು ದಿಕ್ಕುಗಳಲ್ಲಿಯೂ, **ಅವಿಹತಂ** ತಡೆ ಇಲ್ಲದ, **ಸ್ವತೇಜಃ** ಸ್ವರೂಪಭೂತವಾದ ಸಾಮರ್ಥ್ಯದಿಂದ ಕೂಡಿದ, **ದುಷ್ಟೇಷು ರಾಜಸು ದಮಂ ವಿಧದತ್** ದುಷ್ಟರ ನಿಗ್ರಹ ಮಾಡುವ, **ಚಕ್ರಂ** ಆಜ್ಞಾರೂಪವಾದ ಹಾಗು ಸುದರ್ಶನ

ಚಕ್ರವನ್ನೂ, **ಬಿಭರ್ತಿ** ಧಾರಣಮಾಡುವನು, **ಸತ್ಯೇ** ಸತ್ಯವಚನದಲ್ಲಿ ಎಲ್ಲ ಸದ್ಧರ್ಮಗಳಲ್ಲಿ **ನಿವಿಷ್ಟಃ** ಆಸಕ್ತಿ ಉಳ್ಳವನಾಗಿ, **ಉಶತೀಂ** ನಿರ್ಮಲವಾದ, **ಕೀರ್ತಿಂ** ಯಶಸ್ಸನ್ನು, **ಚರಿತ್ರೈಃ** ಕಾರ್ಯಗಳಿಂದ, **ಪ್ರಥಯನ್** ವಿಸ್ತಾರಗೊಳಿಸಿ ಪಾಲಿಸುವನು. ।। ೨೦ ।।

ಇಲ್ಲಿಯೂ ಅವತಾರ ಯಾವುದೆಂದು ತಿಳಿಯುವುದಿಲ್ಲ. 'ಮನುವಂಶಧರಃ' ಎಂದದ್ದರಿಂದ ಮನುವಂಶದಲ್ಲಿ ಜನಿಸಿದ ರಾಜರಿಂದ ಅಭೇದವೂ ತೋರುವುದು. ಕಾರಣ ಪ್ರಮಾಣದಿಂದ ಶ್ಲೋಕತಾತ್ಪರ್ಯವನ್ನು ಹೇಳುವರು-

**ತಾತ್ಪರ್ಯ- ಮನ್ವಂತರೇಷು ಭಗವಾನ್ ಚಕ್ರವರ್ತಿಷು ಸಂಸ್ಥಿತಮ್ ।**
**ಚತುರ್ಭುಜೋ ಜುಗೋಪೈತದ್ದುಷ್ಟರಾಜನ್ಯನಾಶಕಃ ।**

**ರಾಜರಾಜೇಶ್ವರೇತ್ಯಾಹುಃ ಮುನಯಶ್ಚಕ್ರವರ್ತಿನಮ್ ।**
**ವೀರ್ಯದಂ ಪರಮಾತ್ಮಾನಂ ಶಂಖಚಕ್ರಗದಾಧರಮ್ ।। -ಇತಿ ಸತ್ಯಸಂಹಿತಾಯಾಮ್**

ನಾಲ್ಕು ಭುಜಗಳುಳ್ಳ ರಾಜರಾಜೇಶ್ವರನೆಂಬ ಶ್ರೀಹರಿಯು ಹದಿನಾಲ್ಕು ಮನ್ವಂತರಗಳಲ್ಲಿರುವ ಚಕ್ರವರ್ತಿಗಳಲ್ಲಿದ್ದು ದುಷ್ಟರಾಜರನ್ನು ನಾಶಮಾಡುತ್ತಾ ಈ ಜಗತ್ತನ್ನು ರಕ್ಷಿಸುವನು.

ಮುನಿಗಳು ಚಕ್ರವರ್ತಿಗಳಲ್ಲಿ ನಿಯಾಮಕನಾಗಿದ್ದು ಸಾಮರ್ಥ್ಯನೀಡುವ, ಶಂಖ-ಚಕ್ರ- ಗದಾಭಯಗಳನ್ನು ಧರಿಸಿದ ಶ್ರೀಹರಿಯನ್ನು ರಾಜರಾಜೇಶ್ವರ ಎಂದು ಹೇಳುತ್ತಾರೆ. ಎಂದು ಸತ್ಯಸಂಹಿತೆಯಲ್ಲಿ ಹೇಳಿದೆ. ।। ೨೦ ।।

*ಧನ್ವಂತರಿಯ ಅವತಾರ ಮತ್ತು ಕಾರ್ಯವನ್ನು ಹೇಳುವರು-*

**ಧನ್ವಂತರಿಶ್ಚ ಭಗವಾನ್ ಸ್ವಯಮಾಸ ದೇವೋ**
**ನಾಮ್ನಾ ನೃಣಾಂ ಪುರುರುಜಾಂ ರುಜ ಆಶು ಹಂತಿ ।**
**ಯಜ್ಞೇ ಚ ಭಾಗಮಮೃತಾಯುರವಾಪ ಚಾದ್ಯಾ**
**ಆಯುಶ್ಚ ವೇದಮನುಶಾಸ್ತ್ಯವತೀರ್ಯ ಲೋಕೇ ।। ೨೧ ।।**

**ಭಗವಾನ್ ದೇವಃ** ಐಶ್ವರ್ಯಶಾಲಿಯಾದ ಶ್ರೀಮನ್ನಾರಾಯಣನು, **ಸ್ವಯಂ** ತಾನೇ ವಿಶೇಷಾವೇಶವಿಲ್ಲದೇ, **ಧನ್ವಂತರಿಃ** ಧನ್ವಂತರಿನಾಮಕನಾಗಿ, **ಆಸ** ಅವತರಿಸಿದನು, **ಅವತೀರ್ಯ** ಅವತಾರಮಾಡಿ, **ಪುರುರುಜಾಂ** ಬಹುರೋಗ ಉಳ್ಳ, **ನೃಣಾಂ** ಜನರ, **ರುಜಃ** ರೋಗಗಳನ್ನು, **ನಾಮ್ನಾ** ತನ್ನ ಹೆಸರನ್ನು ಉಚ್ಚಾರ ಮಾಡುವ ಮಾತ್ರದಿಂದ, **ಹಂತಿ**

ನಾಶಮಾಡುವವನು, ಕೇವಲ ಐಹಿಕರೋಗವನ್ನು ಕೀಳೆಯುವುದಷ್ಟೇ ಅಲ್ಲ **ಅಮೃತಾಯುಶ್ಚ** ಮರಣರಹಿತವಾದ ಆಯುಷ್ಯವನ್ನು ಅಂದರೆ ಮೋಕ್ಷವನ್ನೂ ಕೊಡುವವನು, **ಅದ್ಧಾ** ಚೆನ್ನಾಗಿ, **ಯಜ್ಞೇ ಭಾಗಂ ಚ ಅವಾಪ** ಯಜ್ಞದಲ್ಲಿ ಭಾಗವನ್ನು ಪಡೆದನು, **ಲೋಕೇ** ಜಗತ್ತಿನಲ್ಲಿ **ಆಯುಶ್ಚ ವೇದಂ** ಆಯುರ್ವೇದವನ್ನು (ವೈದ್ಯಶಾಸ್ತ್ರವನ್ನು) **ಅನುಶಾಸ್ತಿ** ಪ್ರವರ್ತಿಸುವನು. ।। ೨೧ ।।

*ಪರಶುರಾಮವತಾರ ಮತ್ತು ಕಾರ್ಯವನ್ನು ಹೇಳುವರು-*

**ಕ್ಷತ್ರಂ ಕ್ಷಯಾಯ ವಿಧಿನೋಪಹೃತಂ ಮಹಾತ್ಮಾ**
**ಬ್ರಹ್ಮಧ್ರುಗುಜ್ಝಿತಪಥಂ ನರಕಾರ್ತಿಲಿಪ್ಸು ।**
**ಉದ್ಧಂತ್ಯಸಾವವನಿಕಂಟಕಮುಗ್ರವೀರ್ಯಃ**
**ತ್ರಿಃಸಪ್ತಕೃತ್ವ ಉರುಧಾರ ಪರಶ್ವಧೇನ ।। ೨೨ ।।**

**ಉಗ್ರವೀರ್ಯಃ** ತೀಕ್ಷ್ಣವಾದ ಪರಾಕ್ರಮ ಉಳ್ಳ ಅಥವಾ, **ಉಂ** ರುದ್ರನನ್ನು **ಗ್ರಸತಿ** ನುಂಗುವವನು ಆದ್ದರಿಂದ ಉಗ್ರವಾದ ಸಾಮರ್ಥ್ಯ ಉಳ್ಳ **ಮಹಾತ್ಮಾ** ಪೂಜ್ಯವಾದ ಸ್ವರೂಪ ಉಳ್ಳ, **ಅಸೌ** ಭಾರ್ಗವನು, **ಉರುಧಾರಪರಶ್ವಧೇನ** ನಿಶಿತವಾದ ಅಗ್ರಭಾಗ ಉಳ್ಳ ಕೊಡಲಿಯಿಂದ, **ತ್ರಿಃಸಪ್ತಕೃತ್ವಃ** ಇಪ್ಪತ್ತೊಂದು ಬಾರಿ, **ಅವನಿಕಂಟಕಂ** ಭೂಮಿಗೆ ಮುಳ್ಳಿನಂತಿರುವ ಆದ್ದರಿಂದಲೇ, **ನರಕಾರ್ತಿಲಿಪ್ಸು** ನರಕದುಃಖವನ್ನು ಹೊಂದುವ ಸಂಭಾವನಾವಿಷಯರಾದ, **ಉಜ್ಝಿತಪಥಂ** ಸನ್ಮಾರ್ಗವನ್ನು ಬಿಟ್ಟ **ಬ್ರಹ್ಮಧ್ರುಕ್** ಬ್ರಾಹ್ಮಣ ದ್ರೋಹಿಗಳಾದ ಆದ್ದರಿಂದಲೇ, **ವಿಧಿನಾ** ದೈವದಿಂದ, **ಕ್ಷಯಾಯ** ಮೃತ್ಯುವಿಗೆ, **ಉಪಹೃತಂ** ಸಮರ್ಪಿತವಾದ, **ಕ್ಷತ್ರಕುಲಮ್** ಕ್ಷತ್ರಿಯಕುಲವನ್ನು **ಉದ್ಧಂತಿ** ಉನ್ಮೂಲನ ಮಾಡುವವನು. ।। ೨೨ ।।

*ರಾಮಾವತಾರವನ್ನು ಅವನ ಪರಾಕ್ರಮವನ್ನು ಮೂರು ಶ್ಲೋಕಗಳಿಂದ ಹೇಳುವರು-*

**ಕೃತ್ಸ್ನಪ್ರಸಾದಸುಮುಖಃ ಕಲಯಾ ಕಲೇಶ**
**ಇಕ್ಷ್ವಾಕುವಂಶ ಅವತೀರ್ಯ ಗುರೋರ್ನಿದೇಶೇ ।**
**ತಿಷ್ಠನ್ವನಂ ಸದಯಿತಾನುಜ ಆವಿವೇಶ ಯಸ್ಮಿನ್**
**ವಿರುಧ್ಯ ದಶಕಂಧರ ಆರ್ತಿಮಾರ್ಚ್ಛತ್ ।। ೨೩ ।।**

**ದಶಕಂಧರಃ** ರಾವಣನು, **ಯಸ್ಮಿನ್** ಯಾವನಲ್ಲಿ **ವಿರುಧ್ಯ** ವಿರೋಧ ಮಾಡಿ, **ಆರ್ತಿಂ** ಮರಣರೂಪ ದುಃಖವನ್ನು **ಆರ್ಚ್ಛತ್** ಹೊಂದಿದನೋ, **ಕೃತ್ಸ್ನಪ್ರಸಾದಸುಮುಖಃ** ಬ್ರಹ್ಮಾದಿದೇವತೆಗಳಲ್ಲಿ ಪೂರ್ಣವಾದ ಅನುಗ್ರಹದಿಂದ ವಿಕಸಿತವಾದ ಮುಖ ಉಳ್ಳ ಅಥವಾ ಪೂರ್ಣವಾದ ಆನಂದ ಮತ್ತು ಸುಂದರವಾದ ಮುಖ ಉಳ್ಳ, **ಕಲೇಶಃ** ಪ್ರಾಣ-ಶ್ರದ್ಧಾದಿ ಕಲಾಗಳಿಗೆ ಮತ್ತು ಅವುಗಳ ಅಭಿಮಾನಿಗಳಿಗೆ ಸ್ವಕಾರ್ಯಶಕ್ತಿಪ್ರದನಾದ, (ಇದರಿಂದ ಶ್ರೀರಾಮನ ಶರೀರ ಷೋಡಶಕಲಾತ್ಮಕವಲ್ಲ ಎಂದು ಸೂಚಿತವಾಯಿತು) **ಸಃ** ಆ ರಾಮಚಂದ್ರನು, **ಕಲಯಾ** ಸ್ವರೂಪಾಂಶದಿಂದ, **ಇಕ್ಷ್ವಾಕುವಂಶೇ** ಇಕ್ಷ್ವಾಕುಕುಲದಲ್ಲಿ, **ಅವತೀರ್ಯ** ಅವತಾರ ಮಾಡಿ, **ಗುರೋಃ** ದಶರಥನ, **ನಿದೇಶೇ** ಆಜ್ಞೆಯಲ್ಲಿ, **ತಿಷ್ಠನ್** ಇರುವವನಾಗಿ, **ಸದಯಿತಾನುಜಃ** ಹೆಂಡತಿ ಮತ್ತು ಲಕ್ಷ್ಮಣನಿಂದ ಸಹಿತನಾಗಿ, **ವನಂ ಆ ವಿವೇಶ** ಅಡವಿಯನ್ನು ಪ್ರವೇಶಿಸಿದನು.

ಈ ಶ್ಲೋಕದಲ್ಲಿ 'ಕಲೇಶಃ' ಎಂದರೆ ಚಂದ್ರನೆಂದರ್ಥ ತೋರುವುದು ಆದ್ದರಿಂದ ವ್ಯಾಖ್ಯಾನಿಸುವರು-

**ತಾತ್ಪರ್ಯ- ಪ್ರಾಣಾದಿಕಲೇಶಃ ।**

'ಸ ಪ್ರಾಣಮಸೃಜತ ಪ್ರಾಣಾಚ್ಛ್ರದ್ಧಾಂ' ಮುಂತಾಗಿ ಷಟ್‌ಪ್ರಶ್ನದಲ್ಲಿ ಹೇಳಿದ ಪ್ರಾಣ ಮೊದಲಾದ ೧೬ ಕಲೆಗಳಿಗೆ ಮತ್ತು ಆ ಕಲಾಭಿಮಾನಿದೇವತೆಗಳಿಗೆ ಸ್ವಾಮಿಯಾದವನೆಂದರ್ಥ. ॥ ೨೩ ॥

**ಯಸ್ಮಾ ಅದಾದುದಧಿರೂಢಭಯಾಂಗವೇಪೋ**
**ಮಾರ್ಗಂ ಸಪದ್ಯರಿಪುರಂ ಹರವದ್ದಿಧಕ್ಷೋಃ ।**
**ದೂರೇಸುಹೃನ್ಮಥಿತರೋಷಸುಶೋಷದೃಷ್ಟ್ಯಾ**
**ತಾತಪ್ಯಮಾನಮಕರೋರಗನಕ್ರಚಕ್ರಃ** ॥ ೨೪ ॥

**ದೂರೇಸುಹೃತ್** ದೂರದಲ್ಲಿರುವ ಸೀತಾದೇವಿಯುಳ್ಳ ರಾಮನ, **ಮಥಿತರೋಷ-ಸುಶೋಷದೃಷ್ಟ್ಯಾ** ಉಜ್ವಲಿತವಾದ ಸಿಟ್ಟೆಂಬ ಅಗ್ನಿಯಿಂದ ಕೂಡಿದ ನೋಟದಿಂದ, **ತಾತಪ್ಯಮಾನಮಕರೋರಗನಕ್ರಚಕ್ರಃ** ಅತ್ಯಂತ ಸಂತಾಪಗೊಂಡ ಮೀನು, ಹಾವು, ಮೊಸಳೆಗಳ ಸಮೂಹ ಉಳ್ಳ, **ಹರವತ್** ರುದ್ರದೇವರು ತ್ರಿಪುರಾಸುರನನ್ನು ಸುಟ್ಟಂತೆ, **ಅರಿಪುರಮ್** ಶತ್ರುವಿನ ಲಂಕಾಪಟ್ಟಣವನ್ನು **ದಿಧಕ್ಷೋಃ** ಸುಡಲಿಚ್ಛಿಸುವ ರಾಮದೇವರಿಂದ **ಊಢಭಯಾಂಗವೇಪಃ** ಪ್ರಾಪ್ತವಾದ ಭಯದಿಂದುಂಟಾದ ಶರೀರದಲ್ಲಿ ನಡುಕ ಉಳ್ಳ

ನಾಶಮಾಡುವನು, ಕೇವಲ ಐಹಿಕರೋಗವನ್ನು ಕೇಳೆಯುವುದಷ್ಟೇ ಅಲ್ಲ, **ಅಮೃತಾಯುಶ್ಚ** ಮರಣರಹಿತವಾದ ಆಯುಷ್ಯವನ್ನು ಅಂದರೆ ಮೋಕ್ಷವನ್ನೂ ಕೊಡುವವನು, **ಅದ್ಧಾ** ಚೆನ್ನಾಗಿ, **ಯಜ್ಞೇ ಭಾಗಂ ಚ ಅವಾಪ** ಯಜ್ಞದಲ್ಲಿ ಭಾಗವನ್ನು ಪಡೆದನು, **ಲೋಕೇ** ಜಗತ್ತಿನಲ್ಲಿ **ಆಯುಶ್ಚ ವೇದಂ** ಆಯುರ್ವೇದವನ್ನು (ವೈದ್ಯಶಾಸ್ತ್ರವನ್ನು) **ಅನುಶಾಸ್ತಿ** ಪ್ರವರ್ತಿಸುವನು. ॥ ೨೧ ॥

*ಪರಶುರಾಮವತಾರ ಮತ್ತು ಕಾರ್ಯವನ್ನು ಹೇಳುವರು-*

**ಕ್ಷತ್ರಂ ಕ್ಷಯಾಯ ವಿಧಿನೋಪಹೃತಂ ಮಹಾತ್ಮಾ**
**ಬ್ರಹ್ಮಧ್ರುಗುಜ್ಝಿತಪಥಂ ನರಕಾರ್ತಿಲಿಪ್ಸು ।**
**ಉದ್ಧಂತ್ಯಸಾವವನಿಕಂಟಕಮುಗ್ರವೀರ್ಯಃ**
**ತ್ರಿಃಸಪ್ತಕೃತ್ವ ಉರುಧಾರ ಪರಶ್ವಧೇನ ॥ ೨೨ ॥**

**ಉಗ್ರವೀರ್ಯಃ** ತೀಕ್ಷ್ಣವಾದ ಪರಾಕ್ರಮ ಉಳ್ಳ ಅಥವಾ, **ಉಂ** ರುದ್ರನನ್ನು **ಗ್ರಸತಿ** ನುಂಗುವನು ಆದ್ದರಿಂದ ಉಗ್ರವಾದ ಸಾಮರ್ಥ್ಯ ಉಳ್ಳ, **ಮಹಾತ್ಮಾ** ಪೂಜ್ಯವಾದ ಸ್ವರೂಪ ಉಳ್ಳ, **ಅಸೌ** ಭಾರ್ಗವನು, **ಉರುಧಾರಪರಶ್ವಧೇನ** ನಿಶಿತವಾದ ಅಗ್ರಭಾಗ ಉಳ್ಳ ಕೊಡಲಿಯಿಂದ, **ತ್ರಿಃಸಪ್ತಕೃತ್ವಃ** ಇಪ್ಪತ್ತೊಂದು ಬಾರಿ, **ಅವನಿಕಂಟಕಂ** ಭೂಮಿಗೆ ಮುಳ್ಳಿನಂತಿರುವ ಆದ್ದರಿಂದಲೇ, **ನರಕಾರ್ತಿಲಿಪ್ಸು** ನರಕದುಃಖವನ್ನು ಹೊಂದುವ ಸಂಭಾವನಾವಿಷಯರಾದ, **ಉಜ್ಝಿತಪಥಂ** ಸನ್ಮಾರ್ಗವನ್ನು ಬಿಟ್ಟ, **ಬ್ರಹ್ಮಧೃಕ್** ಬ್ರಾಹ್ಮಣ ದ್ರೋಹಿಗಳಾದ ಆದ್ದರಿಂದಲೇ, **ವಿಧಿನಾ** ದೈವದಿಂದ, **ಕ್ಷಯಾಯ** ಮೃತ್ಯುವಿಗೆ, **ಉಪಹೃತಂ** ಸಮರ್ಪಿತವಾದ, **ಕ್ಷತ್ರಕುಲಮ್** ಕ್ಷತ್ರಿಯಕುಲವನ್ನು **ಉದ್ಧಂತಿ** ಉನ್ಮೂಲನ ಮಾಡುವನು. ॥ ೨೨ ॥

*ರಾಮಾವತಾರವನ್ನು ಅವನ ಪರಾಕ್ರಮವನ್ನು ಮೂರು ಶ್ಲೋಕಗಳಿಂದ ಹೇಳುವರು-*

**ಕೃತ್ಸ್ನಪ್ರಸಾದಸುಮುಖಃ ಕಲಯಾ ಕಲೇಶ**
**ಇಕ್ಷ್ವಾಕುವಂಶ ಅವತೀರ್ಯ ಗುರೋರ್ನಿದೇಶೇ ।**
**ತಿಷ್ಠನ್ವನಂ ಸದಯಿತಾನುಜ ಆವಿವೇಶ ಯಸ್ಮಿನ್**
**ವಿರುಧ್ಯ ದಶಕಂಧರ ಆರ್ತಿಮಾರ್ಚ್ಛತ್ ॥ ೨೩ ॥**

**ದಶಕಂಧರಃ** ರಾವಣನು, **ಯಸ್ಮಿನ್** ಯಾವನಲ್ಲಿ, **ವಿರುಧ್ಯ** ವಿರೋಧ ಮಾಡಿ, **ಆರ್ತಿಂ** ಮರಣರೂಪ ದುಃಖವನ್ನು **ಆರ್ಚ್ಛತ್** ಹೊಂದಿದನೋ, **ಕೃತ್ಸ್ನಪ್ರಸಾದಸುಮುಖಃ** ಬ್ರಹ್ಮಾದಿದೇವತೆಗಳಲ್ಲಿ ಪೂರ್ಣವಾದ ಅನುಗ್ರಹದಿಂದ ವಿಕಸಿತವಾದ ಮುಖ ಉಳ್ಳ ಅಥವಾ ಪೂರ್ಣವಾದ ಆನಂದ ಮತ್ತು ಸುಂದರವಾದ ಮುಖ ಉಳ್ಳ, **ಕಲೇಶಃ** ಪ್ರಾಣ-ಶ್ರದ್ಧಾದಿ ಕಲಾಗಳಿಗೆ ಮತ್ತು ಅವುಗಳ ಅಭಿಮಾನಿಗಳಿಗೆ ಸ್ವಕಾರ್ಯಶಕ್ತಿಪ್ರದನಾದ, (ಇದರಿಂದ ಶ್ರೀರಾಮನ ಶರೀರ ಷೋಡಶಕಲಾತ್ಮಕವಲ್ಲ ಎಂದು ಸೂಚಿತವಾಯಿತು) **ಸಃ** ಆ ರಾಮಚಂದ್ರನು, **ಕಲಯಾ** ಸ್ವರೂಪಾಂಶದಿಂದ, **ಇಕ್ಷ್ವಾಕುವಂಶೇ** ಇಕ್ಷ್ವಾಕುಕುಲದಲ್ಲಿ, **ಅವತೀರ್ಯ** ಅವತಾರ ಮಾಡಿ, **ಗುರೋಃ** ದಶರಥನ, **ನಿದೇಶೇ** ಆಜ್ಞೆಯಲ್ಲಿ, **ತಿಷ್ಠನ್** ಇರುವವನಾಗಿ, **ಸದಯಿತಾನುಜಃ** ಹೆಂಡತಿ ಮತ್ತು ಲಕ್ಷ್ಮಣನಿಂದ ಸಹಿತನಾಗಿ, **ವನಂ ಆ ವಿವೇಶ** ಅಡವಿಯನ್ನು ಪ್ರವೇಶಿಸಿದನು.

ಈ ಶ್ಲೋಕದಲ್ಲಿ 'ಕಲೇಶಃ' ಎಂದರೆ ಚಂದ್ರನೆಂದರ್ಥ ತೋರುವುದು ಆದ್ದರಿಂದ ವ್ಯಾಖ್ಯಾನಿಸುವರು-

**ತಾತ್ಪರ್ಯ- ಪ್ರಾಣಾದಿಕಲೇಶಃ ।**

'ಸ ಪ್ರಾಣಮಸೃಜತ ಪ್ರಾಣಾಚ್ಛ್ರದ್ಧಾಂ' ಮುಂತಾಗಿ ಷಟ್‌ಪ್ರಶ್ನದಲ್ಲಿ ಹೇಳಿದ ಪ್ರಾಣ ಮೊದಲಾದ ೧೬ ಕಲೆಗಳಿಗೆ ಮತ್ತು ಆ ಕಲಾಭಿಮಾನಿದೇವತೆಗಳಿಗೆ ಸ್ವಾಮಿಯಾದವನೆಂದರ್ಥ. ॥ ೨೩ ॥

**ಯಸ್ಮಾ ಅದಾದುದಧಿರೂಢಭಯಾಂಗವೇಪೋ**
**ಮಾರ್ಗಂ ಸಪದ್ಯರಿಪುರಂ ಹರವದ್ದಿಧಕ್ಷೋಃ ।**
**ದೂರೇಸುಹೃನ್ಮಥಿತರೋಷಸುಶೋಷದೃಷ್ಟ್ಯಾ**
**ತಾತಪ್ಯಮಾನಮಕರೋರಗನಕ್ರಚಕ್ರಃ ॥ ೨೪ ॥**

**ದೂರೇಸುಹೃತ್** ದೂರದಲ್ಲಿರುವ ಸೀತಾದೇವಿಯುಳ್ಳ ರಾಮನ, **ಮಥಿತರೋಷ-ಸುಶೋಷದೃಷ್ಟ್ಯಾ** ಉಜ್ವಲಿತವಾದ ಸಿಟ್ಟೆಂಬ ಅಗ್ನಿಯಿಂದ ಕೂಡಿದ ನೋಟದಿಂದ, **ತಾತಪ್ಯಮಾನಮಕರೋರಗನಕ್ರಚಕ್ರಃ** ಅತ್ಯಂತ ಸಂತಾಪಗೊಂಡ ಮೀನು, ಹಾವು, ಮೊಸಳಿಗಳ ಸಮೂಹ ಉಳ್ಳ, **ಹರವತ್** ರುದ್ರದೇವರು ತ್ರಿಪುರಾಸುರನನ್ನು ಸುಟ್ಟಂತೆ, **ಅರಿಪುರಮ್** ಶತ್ರುವಿನ ಲಂಕಾಪಟ್ಟಣವನ್ನು, **ದಿಧಕ್ಷೋಃ** ಸುಡಲಿಚ್ಛಿಸುವ ರಾಮದೇವರಿಂದ **ಊಢಭಯಾಂಗವೇಪಃ** ಪ್ರಾಪ್ತವಾದ ಭಯದಿಂದುಂಟಾದ ಶರೀರದಲ್ಲಿ ನಡುಕ ಉಳ್ಳ,

**ಉದಃ** ಸಮುದ್ರರಾಜನು, **ಸಪದಿ** ಶೀಘ್ರದಲ್ಲಿಯೇ, **ಯಸ್ಮೈ** ಯಾವನಿಗೆ, **ಮಾರ್ಗಂ** ಹಾದಿಯನ್ನು **ಅದಾತ್** ಕೊಟ್ಟನೋ, **ತಸ್ಯ ದಾರಹರ್ತುಃ** ಎಂದು ಮುಂದಿನ ಶ್ಲೋಕದಲ್ಲಿ ಅನ್ವಯ.

ಇಲ್ಲಿ 'ದೂರೇಸುಹೃತ್' ಎಬುಂದಕ್ಕೆ ವಿಪರೀತ ಅರ್ಥವಾಗದಿರಲೆಂದು ವ್ಯಾಖ್ಯಾನಿಸುವರು-

**ತಾತ್ಪರ್ಯ- ದೂರಸ್ಥಾ ಸುಹೃತ್ ಯಸ್ಯ ಭಗವತಃ ಸ ದೂರೇಸುಹೃತ್ । ಸುಶೋಷೋಽಗ್ನಿಃ । ಅಗ್ನಿಃ ಸುಶೋಷಃ ಕಕ್ಷಘ್ನಸ್ತಿಮಿರಾರಿರ್ಹಿರಣ್ಯದಃ । ಇತಿ ಹಿ ಅಭಿಧಾನೇ ।**

ಯಾವ ಶ್ರೀರಾಮನಿಗೆ ಹೆಂಡತಿಯಾದ ಸೀತಾದೇವಿಯು ದೂರದಲ್ಲಿ (ಲಂಕೆಯಲ್ಲಿ) ಇದ್ದಾಳೋ ಆ ಶ್ರೀರಾಮನು ದೂರೇಸುಹೃತ್. ಸುಶೋಷಃ ಎಂದರೇ ಅಗ್ನಿ ಎಂದು ಅರ್ಥ. ಅಗ್ನಿ, ಸುಶೋಷ, ಕಕ್ಷಘ್ನ ತಿಮಿರಾರಿ ಹಿರಣ್ಯದ ಇವು ಅಗ್ನಿಯ ನಾಮಗಳು ಎಂದು ಅಭಿಧಾನವಿದೆ. ।। ೨೪ ।।

**ವಕ್ಷಸ್ಥಲಸ್ಪರ್ಶರುಗ್ಣಮಹೇಂದ್ರವಾಹದಂತೈ-**
**ರ್ವಿಲಂಬಿತಕಕುಬ್ಜಯರೂಢಹಾಸಃ ।**
**ಸದ್ಯೋಽಸುಭಿಃ ಸಹ ವಿನೇಷ್ಯತಿ ದಾರಹರ್ತು-**
**ರ್ವಿಸ್ಫೂರ್ಜಿತೈರ್ಧನುಷ ಉಚ್ಚರಿತೈಃ ಸಸೈನ್ಯಃ ।। ೨೫ ।।**

ಯುದ್ಧದಲ್ಲಿ ರಾವಣನ, **ವಕ್ಷಸ್ಥಲಸ್ಪರ್ಶರುಗ್ಣಮಹೇಂದ್ರವಾಹದಂತೈಃ** ಎದೆಯ ಸ್ಪರ್ಶದಿಂದ ಭಗ್ನವಾದ ಐರಾವತದ ಕೊರೆಗಳಿಂದ, **ವಿಲಂಬಿತಕಕುಬ್ಜಯರೂಢಹಾಸಃ** ತಡವಾದ ದಿಕ್ಕುಗಳ ಜಯದಿಂದುಂಟಾದ ಅಟ್ಟಹಾಸ ಉಳ್ಳ, **ಸಸೈನ್ಯಃ** ಸೈನ್ಯಸಹಿತನಾದ ರಾವಣನು, **ದಾರಹರ್ತುಃ** ಸೀತಾದೇವಿಯನ್ನು ತಿರುಗಿ ಸ್ವೀಕರಿಸುವ ರಾಮಚಂದ್ರನ, **ಧನುಷಃ** ಬಿಲ್ಲಿನಿಂದ, **ಉಚ್ಚಾರಿತೈಃ** ಹೊರಟ, **ವಿಸ್ಫೂರ್ಜಿತೈಃ** ಧ್ವನಿಯಿಂದ, **ವಿನೇಷ್ಯತಿ** ಧೈರ್ಯನಾಶವನ್ನು ಹೊಂದುವನು. ನಂತರ **ವಿಸ್ಫೂರ್ಜಿತೈಃ** ಪ್ರಕಾಶಮಾನಗಳಾದ, **ಶರೈಃ** ಬಾಣಗಳಿಂದ, **ಅಸುಭಿಃ ಸಹ** ಪ್ರಾಣಗಳಿಂದ ಕೂಡಿಕೊಂಡು, **ವಿನೇಷ್ಯತಿ** ಮೃತ್ಯುವನ್ನು ಹೊಂದುವನು. ।। ೨೫ ।।

ಇಲ್ಲಿ 'ದಾರಹರ್ತುಃ' ಎಂಬುದಕ್ಕೆ ರಾಮನ ಹೆಂಡತಿಯನ್ನು ಅಪಹರಿಸಿದ ರಾವಣನೆಂದರ್ಥ ತೋರುವುದು ಕಾರಣ ವ್ಯಾಖ್ಯಾನಿಸುವರು ಮತ್ತು 'ವಿನೇಷ್ಯತಿ' ಎಂಬುದರ ಅರ್ಥ ಹೇಳುವರು-

**ತಾತ್ಪರ್ಯ- ವಿನೇಷ್ಯತಿ ವಿನಾಶಂ ಏಷ್ಯತಿ । ದಾರಹರ್ತುಃ ಭಗವತಃ ।**

**ಧನುರ್ವಿಸ್ಫೂರ್ಜಿತೈರ್ನಷ್ಟೋ ರಾವಣಃ ಪೂರ್ವಮೇವ ತು ।**
**ಪುನಃ ಶರೈಃ ರಾಮಮುಕ್ತೈಃ ಸಾನುಬಂಧೋ ವಿನಶ್ಯತಿ ॥ -ಇತಿ ಸ್ಕಾಂದೇ**

**ವಿನೇಷ್ಯತಿ** ವಿನಾಶವನ್ನು ಹೊಂದುವನು. **ದಾರಹರ್ತುಃ** ತನ್ನ ಹೆಂಡತಿಯನ್ನು ಹಿಂತೆಗೆದುಕೊಂಡು ಹೋಗಲಿಚ್ಛಿಸಿದ ಶ್ರೀರಾಮಚಂದ್ರನ ಎಂದು ಅರ್ಥ.

ಧನುಸ್ಸಿನ ಧ್ವನಿವಿಶೇಷದಿಂದ ಮೊದಲೇ ಧೈರ್ಯಭ್ರಷ್ಟನಾದ ರಾವಣನು ಪುನಃ ರಾಮನು ಬಿಟ್ಟ ಬಾಣಗಳಿಂದ ಸೈನ್ಯಸಮೇತನಾಗಿ ಮರಣಹೊಂದುತ್ತಾನೆ ಎಂದು ಸ್ಕಾಂದಪುರಾಣದಲ್ಲಿದೆ. ॥ ೨೫ ॥

*ಶ್ರೀಕೃಷ್ಣಾವತಾರ ಮತ್ತು ಅವನ ಕಾರ್ಯಗಳನ್ನು ಹತ್ತು ಶ್ಲೋಕಗಳಿಂದ ಹೇಳುವರು-*

**ಭೂಮೇಃ ಸುರೇತರವರೂಥವಿಮರ್ದಿತಾಯಾಃ**
**ಕ್ಲೇಶವ್ಯಯಾಯ ಕಲಯಾ ಸಿತಕೃಷ್ಣಕೇಶಃ ।**
**ಜಾತಃ ಕರಿಷ್ಯತಿ ಜನಾನುಪಲಕ್ಷ್ಯಮಾರ್ಗಃ**
**ಕರ್ಮಾಣಿ ಚಾऽತ್ಮಮಹಿಮೋಪನಿಬಂಧನಾನಿ ॥ ೨೬ ॥**

**ಸುರೇತರವರೂಥವಿಮರ್ದಿತಾಯಾಃ** ಅಸುರರ ಸಮೂಹದಿಂದ (ಗುಪ್ತಸೇನೆಯಿಂದ) ಪೀಡಿತಳಾದ, **ಭೂಮೇಃ** ಭೂದೇವಿಯ, **ಕ್ಲೇಶವ್ಯಯಾಯ** ಕಷ್ಟವನ್ನು ದೂರಮಾಡಲು, **ಕಲಯಾ** ಸ್ವರೂಪಾಂಶದಿಂದ, **ಸಿತಕೃಷ್ಣಕೇಶಃ** ಶುಕ್ಲ ಮತ್ತು ಕೃಷ್ಣ ಕೇಶಾಂಶದಿಂದ, **ಜಾತಃ** ಅವತರಿಸಿದ ಪರಮಾತ್ಮನು, **ಜನಾನುಪಲಕ್ಷ್ಯಮಾರ್ಗಃ** ಪ್ರಾಕೃತಜನರಿಂದ ಅಜ್ಞೇಯವಾದ ಮಾರ್ಗ ಉಳ್ಳವನಾಗಿ, **ಆತ್ಮಮಹಿಮೋಪನಿಬಂಧನಾನಿ** ಕೇವಲ ತನ್ನ ಸಾಮರ್ಥ್ಯವೇ ಕಾರಣವಾಗಿ ಉಳ್ಳ **ಕರ್ಮಾಣಿ** ಕಾರ್ಯಗಳನ್ನು, **ಕರಿಷ್ಯತಿ** ಮಾಡುವವನು. ॥ ೨೬ ॥

ಇಲ್ಲಿ 'ಸಿತಕೃಷ್ಣಕೇಶೋ ಜಾತಃ' ಎಂದು ಹೇಳಿದ್ದರಿಂದ ಕೃಷ್ಣನಂತೆ ಬಲರಾಮನು ಕೂಡಾ ಸಾಕ್ಷಾತ್ ಅವತಾರವೆಂದು ತೋರುವುದು ಕಾರಣ ತಾತ್ಪರ್ಯ ಹೇಳುವರು-

ತಾತ್ಪರ್ಯ- ರಾಮ ಏಕೋ ಹ್ಯನಂತಾಂಶಸ್ತತ್ರ ರಾಮಾऽಭಿಧೋ ಹರಿಃ ।
ಶುಕ್ಲಕೇಶಾತ್ಮಕಸ್ತಿಷ್ಠನ್ ರಮಯಾಮಾಸ ವೈ ಜಗತ್ ॥ -ಇತಿ ಬ್ರಾಹ್ಮೇ

ಪರಶುರಾಮ, ದಶರಥರಾಮ ಇವರಿಂದ ಬೇರೆಯಾದ ಬಲರಾಮನು ಶೇಷಾವತಾರನು. ಆವನಲ್ಲಿ ರಾಮ ಎಂಬ ಹೆಸರುಳ್ಳ ಶ್ರೀಹರಿಯು ಶುಕ್ಲಕೇಶರೂಪದಿಂದ ಸನ್ನಿಹಿತನಾಗಿ ಜಗತ್ತನ್ನು ಸಂತೋಷಗೊಳಿಸಿದನು ಎಂದು ಬ್ರಾಹ್ಮಪುರಾಣದಲ್ಲಿದೆ.

ಎಲ್ಲರ ಕಾರ್ಯಗಳು ತಮ್ಮ ಸಾಮರ್ಥ್ಯದಿಂದಲೇ ಆಗುವವು ಕಾರಣ ಇದು ಶ್ರೀಕೃಷ್ಣನ ಅಸಾಧಾರಣ ಹೇಗೆಂದು ಹೇಳುವರು-

**ವಿಷ್ಣೋರ್ನಾನ್ಯೇನ ಕರ್ಮಾಣಿ ಪರೇಷಾಂ ತನ್ನಿಬಂಧನಮ್ ॥ -ಇತಿ ಮಾತ್ಸ್ಯೇ**

ಶ್ರೀವಿಷ್ಣುವಿನ ಕರ್ಮಗಳು ಇತರರ ಅಧೀನವಲ್ಲ, ಕೇವಲ ತನ್ನ ಮಾಹಾತ್ಮ್ಯ ನಿಮಿತ್ತಕವಾದವುಗಳಾಗಿವೆ. ಇತರರ ಕರ್ಮಗಳು ಶ್ರೀಹರಿಯ ಸಾಮರ್ಥ್ಯವೇ ನಿಮಿತ್ತವಾಗಿ ಉಳ್ಳವುಗಳು ಎಂದು ಮತ್ಸ್ಯಪುರಾಣದಲ್ಲಿದೆ.

ಈ ತಾತ್ಪರ್ಯದಿಂದ ಶೇಷಾವತಾರನಾದ ಬಲರಾಮನಲ್ಲಿ ಶುಕ್ಲಕೇಶಾತ್ಮಕ ಹರಿಯ ವಿಶೇಷ ಸನ್ನಿಧಾನವಿರುವುದರಿಂದ ಆ ಶ್ರೀಹರಿಯನ್ನೇ ಕೃಷ್ಣನ ಜೊತೆಗೆ ಗಣನೆ ಮಾಡಿದ್ದು. ಶೇಷಾವತಾರನಾದ ಬಲರಾಮನನ್ನಲ್ಲ ಎಂದು ತಿಳಿಯಬೇಕು. ಮತ್ತು 'ಆತ್ಮಮಹಿಮೋಪನಿಂಬಧನಂ' ಎಂದರೆ ತನ್ನ ಮಹಿಮೆಯ ಹೊರತು ಬೇರೇ ಕಾರಣವಿರಬಾರದು. ಇದು ಶ್ರೀಕೃಷ್ಣನಿಗೆ ಮಾತ್ರ ಇರುವುದು. ಉಳಿದವರಿಗೆ ತಮ್ಮ ಸಾಮರ್ಥದ ಜೊತೆಗೆ ಶ್ರೀಹರಿಯ ಸಾಮರ್ಥ್ಯ ಬೇಕೇ ಬೇಕು. ಆದ್ದರಿಂದ ಮಹಿಮಾಮಾತ್ರ ನಿಬಂಧನವಲ್ಲವೆಂದು ಭಾವ. ॥ ೨೬ ॥

**ತೋಕೇನ ಜೀವಹರಣಂ ಯದುಲೂಪಿಕಾಯಾಃ**
**ತ್ರೈಮಾಸಿಕಸ್ಯ ಚ ಪದಾ ಶಕಟೋಽಪವೃತ್ತಃ ।**
**ಯದ್ರಿಂಗತಾಂತರಗತೇನ ದಿವಿ ಸ್ಪೃಶೋರ್ವಾ**
**ಉನ್ಮೂಲನಂ ತ್ವಿತರಥಾಽರ್ಜುನಯೋರ್ನ ಭಾವ್ಯಮ್ ॥ ೨೭ ॥**

**ತೋಕೇನ** ಅತ್ಯಂತ ಚಿಕ್ಕ ಬಾಲಕನಿಂದ, **ಉಲೂಪಿಕಾಯಾಃ** (ಊನ್ ಪ್ರಾಣಗಳನ್ನು ಲುಂಪತೀತಿ ಉಲೂಪಿಕಾ) ಬಾಲಕರ ತ್ರಾಣಹಾರಕಳಾದ ಪೂತನೆಯ, **ಜೀವಹರಣಂ** ಅವಳ ಸ್ತನಪಾನದಿಂದ ಪ್ರಾಣ ತೆಗೆದದ್ದು **ಯತ್** ಯಾವ ಕರ್ಮ ಉಂಟೋ ಮತ್ತು, **ತ್ರೈಮಾಸಿಕಸ್ಯ** ಮೂರು ತಿಂಗಳು ಕೂಸಾದ ಕೃಷ್ಣನ, **ಪದಾ** ಪಾದದಿಂದ, **ಶಕಟಃ ಉಪವೃತ್ತಃ** ಶಕಟಾಸುರನು ನಾಶಮಾಡಲ್ಪಟ್ಟನು, **ಇತಿ ಯತ್** ಇದು ಏನಿದೆಯೋ, **ಯಚ್ಚ** ಮತ್ತು **ರಂಗತಾ** ಅಂಬೆಗಾಲಿಡುತ್ತಾ, **ಅಂತರಂಗತೇನ** ಮಧ್ಯದಲ್ಲಿ ಹೋಗುವುದರಿಂದ,

**ದಿವಿಸ್ಪೃಶೋಃ** ಸಾವಿರ ಧನುಸ್ಸಿಗಿಂತ ಮೇಲೆ ಹೋಗಿರುವ, ಅತಿ ಎತ್ತರವಾದ, **ಅರ್ಜುನಯೋಃ** ಅರ್ಜುನವೆಂಬ ಗಿಡಗಳನ್ನು **ಉನ್ಮೂಲನಂ** ಕೆಡಹುವುದು, **ಇತರಥಾ** ಶ್ರೀಕೃಷ್ಣನು ವಿಷ್ಣುವಾಗದಿದ್ದರೇ, **ನ ಭಾವ್ಯಂ** ಸಾಧ್ಯವಾಗದು. ಈ ಕರ್ಮವು ಕೇವಲ ತನ್ನ ಸಾಮರ್ಥ್ಯದಿಂದ ಆಗಬಾರದಿತ್ತು. ಆಗಿದೆ ಆದ್ದರಿಂದ ಅವನು ವಿಷ್ಣುವೇ ಎಂದು ನಿರ್ಣಯಿಸಬಹುದು.

ಇಲ್ಲಿ 'ದಿವಿ ಸ್ಪೃಶೋಃ' ಎಂದು ಅರ್ಜುನವೃಕ್ಷಗಳಿಗೆ ಸ್ವರ್ಗಲೋಕವನ್ನು ಮುಟ್ಟುವ ಎಂದು ಹೇಳುವಂತೆ ತೋರುವುದು. ಅದು ಸಾಧ್ಯವಿಲ್ಲ, ಕಾರಣ ತಾತ್ಪರ್ಯ ಹೇಳುವರು-

**ತಾತ್ಪರ್ಯ- ಸಹಸ್ರಧನುಷಸ್ತೂರ್ಧ್ವಂ ದ್ಯುಶಬ್ದೇನಾಽಪಿ ಭಣ್ಯತೇ ॥**

**-ಇತಿ ತಂತ್ರಮಾಲಾಯಾಂ**

ಒಂದು ಸಾವಿರ ಧನುಃ ಪರಿಮಿತ ಪ್ರದೇಶದ ಮೇಲಿನ ಪ್ರದೇಶವನ್ನು ಅಂತರಿಕ್ಷ ಶಬ್ದದಿಂದ ಮಾತ್ರವಲ್ಲದೇ ದ್ಯು ಎಂಬ ಶಬ್ದದಿಂದಲೂ ಕರೆಯಬಹುದು ಎಂದು ತಂತ್ರಮಾಲಾದಲ್ಲಿ ಹೇಳಿದೆ.

ಇತರಥಾ ಅಂದರೆ ಅಲ್ಲದೇ ಹೋದರೆ ಎಂದು ಅರ್ಥ. ಏನಲ್ಲದೇ ಹೊದರೆ ಎಂದು ತಿಳಿಯುವುದಿಲ್ಲ ಕಾರಣ ಹೇಳುವರು-

**ತಾತ್ಪರ್ಯ- ಇತರಥಾ ವಿಷ್ಣುಃ ನ ಚೇತ್ ।**

ಇತರಥಾ ಎಂದರೆ ಶ್ರೀಕೃಷ್ಣನು ವಿಷ್ಣುವಾಗದಿದ್ದರೆ ಎಂದರ್ಥ. (ಒಂದು ಧನು ಎಂದರೆ ನಾಲ್ಕು ಮೊಳಗಳು) 'ಸ್ವಮಹಿಮನಿಬಂಧನತ್ವೇನ ನ ಭಾವ್ಯಂ' ಈ ಎಲ್ಲ ಕಾರ್ಯಗಳು ಕೇವಲ ಪರಮಾತ್ಮಮಾತ್ರಮಹಾತ್ಮ್ಯನಿಮಿತ್ತಕಗಳಾಗಬಾರದಿತ್ತು. ಇದರಿಂದ (ಆಗಿವೆ) ಇತರರಿಂದ ಅಶಕ್ಯವಾದ ಸಮುದ್ರಪಾನ ಮುಂತಾದುವನ್ನು ವಿಷ್ಣು ಆಗದಿದ್ದರೂ ಅಗಸ್ತ್ಯಾದಿಗಳು ಮಾಡುವುದು ಕಂಡಿದೆ. ಆದ್ದರಿಂದ ಇದು ಅಸಾಧಾರಣವಲ್ಲ ಎಂಬ ಶಂಕೆ ಪರಿಹರಿಸಿದಂತಾಯಿತು. ಅಗಸ್ತ್ಯಾದಿಗಳ ಕರ್ಮಗಳು ವಿಷ್ಣುಮಹಿಮೆಯಿಂದ ಸಾಧ್ಯವಾಗಿವೆ. ಕೇವಲ ಅವರ ಮಹಿಮೆಯಿಂದಲ್ಲವೆಂದು ಭಾವ. ಆದ್ದರಿಂದಲೇ ಹಿಂದೆ 'ಪರೇಷಾಂ ತನ್ನಿಬಂಧನಂ' ಎಂಬ ಪ್ರಮಾಣಶೇಷವನ್ನು ಉದಾಹರಿಸಿರುವರು.

**ಯದ್ವೈ ವ್ರಜೇ ವ್ರಜಪಶೂನ್ ವಿಷತೋಯಪೀತಾನ್**
**ಗೋಪಾಂಸ್ತು ಜೀವಯದನುಗ್ರಹದೃಷ್ಟಿವೃಷ್ಟ್ಯಾ ।**

ಪರಶುರಾಮ, ದಶರಥರಾಮ ಇವರಿಂದ ಬೇರೆಯಾದ ಬಲರಾಮನು ಶೇಷಾವತಾರನು. ಆವನಲ್ಲಿ ರಾಮ ಎಂಬ ಹೆಸರುಳ್ಳ ಶ್ರೀಹರಿಯು ಶುಕ್ಲಕೇಶರೂಪದಿಂದ ಸನ್ನಿಹಿತನಾಗಿ ಜಗತ್ತನ್ನು ಸಂತೋಷಗೊಳಿಸಿದನು ಎಂದು ಬ್ರಾಹ್ಮಪುರಾಣದಲ್ಲಿದೆ.

ಎಲ್ಲರ ಕಾರ್ಯಗಳು ತಮ್ಮ ಸಾಮರ್ಥ್ಯದಿಂದಲೇ ಆಗುವವು ಕಾರಣ ಇದು ಶ್ರೀಕೃಷ್ಣನ ಅಸಾಧಾರಣ ಹೇಗೆಂದು ಹೇಳುವರು-

**ವಿಷ್ಣೋರ್ನಾನ್ಯೇನ ಕರ್ಮಾಣಿ ಪರೇಷಾಂ ತನ್ನಿಬಂಧನಮ್ ॥ -ಇತಿ ಮಾತ್ಸ್ಯೇ**

ಶ್ರೀವಿಷ್ಣುವಿನ ಕರ್ಮಗಳು ಇತರರ ಅಧೀನವಲ್ಲ, ಕೇವಲ ತನ್ನ ಮಾಹಾತ್ಮ್ಯ ನಿಮಿತ್ತಕವಾದವುಗಳಾಗಿವೆ. ಇತರರ ಕರ್ಮಗಳು ಶ್ರೀಹರಿಯ ಸಾಮರ್ಥ್ಯವೇ ನಿಮಿತ್ತವಾಗಿ ಉಳ್ಳವುಗಳು ಎಂದು ಮತ್ಸ್ಯಪುರಾಣದಲ್ಲಿದೆ.

ಈ ತಾತ್ಪರ್ಯದಿಂದ ಶೇಷಾವತಾರನಾದ ಬಲರಾಮನಲ್ಲಿ ಶುಕ್ಲಕೇಶಾತ್ಮಕ ಹರಿಯ ವಿಶೇಷ ಸನ್ನಿಧಾನವಿರುವುದರಿಂದ ಆ ಶ್ರೀಹರಿಯನ್ನೇ ಕೃಷ್ಣನ ಜೊತೆಗೆ ಗಣನೆ ಮಾಡಿದ್ದು. ಶೇಷಾವತಾರನಾದ ಬಲರಾಮನನ್ನಲ್ಲ ಎಂದು ತಿಳಿಯಬೇಕು. ಮತ್ತು 'ಆತ್ಮಮಹಿಮೋಪನಿಂಬಧನಂ' ಎಂದರೆ ತನ್ನ ಮಹಿಮೆಯ ಹೊರತು ಬೇರೇ ಕಾರಣವಿರಬಾರದು. ಇದು ಶ್ರೀಕೃಷ್ಣನಿಗೆ ಮಾತ್ರ ಇರುವುದು. ಉಳಿದವರಿಗೆ ತಮ್ಮ ಸಾಮರ್ಥದ ಜೊತೆಗೆ ಶ್ರೀಹರಿಯ ಸಾಮರ್ಥ್ಯ ಬೇಕೇ ಬೇಕು. ಆದ್ದರಿಂದ ಮಹಿಮಾಮಾತ್ರ ನಿಬಂಧನವಲ್ಲವೆಂದು ಭಾವ. ॥ ೨೬ ॥

**ತೋಕೇನ ಜೀವಹರಣಂ ಯದುಲೂಪಿಕಾಯಾಃ**
**ತ್ರೈಮಾಸಿಕಸ್ಯ ಚ ಪದಾ ಶಕಟೋಪವೃತ್ತಃ ।**
**ಯದ್ರಂಗತಾಂತರಗತೇನ ದಿವಿ ಸ್ಪೃಶೋರ್ವಾ**
**ಉನ್ಮೂಲನಂ ತ್ವಿತರರಥಾಽರ್ಜುನಯೋರ್ನ ಭಾವ್ಯಮ್ ॥ ೨೭ ॥**

**ತೋಕೇನ** ಅತ್ಯಂತ ಚಿಕ್ಕ ಬಾಲಕನಿಂದ, **ಉಲೂಪಿಕಾಯಾಃ** (ಊನ್ ಪ್ರಾಣಗಳನ್ನು ಲುಂಪತೀತಿ ಉಲೂಪಿಕಾ) ಬಾಲಕರ ತ್ರಾಣಹಾರಕಳಾದ ಪೂತನೆಯ, **ಜೀವಹರಣಂ** ಅವಳ ಸ್ತನಪಾನದಿಂದ ಪ್ರಾಣ ತೆಗೆದದ್ದು, **ಯತ್** ಯಾವ ಕರ್ಮ ಉಂಟೋ ಮತ್ತು, **ತ್ರೈಮಾಸಿಕಸ್ಯ** ಮೂರು ತಿಂಗಳು ಕೂಸಾದ ಕೃಷ್ಣನ, **ಪದಾ** ಪಾದದಿಂದ, **ಶಕಟಃ ಉಪವೃತ್ತಃ** ಶಕಟಾಸುರನು ನಾಶಮಾಡಲ್ಪಟ್ಟನು, **ಇತಿ ಯತ್** ಇದು ಏನಿದೆಯೋ, **ಯಚ್ಚ** ಮತ್ತು **ರಂಗತಾ** ಅಂಬೆಗಾಲಿಡುತ್ತಾ, **ಅಂತರಂಗತೇನ** ಮಧ್ಯದಲ್ಲಿ ಹೋಗುವುದರಿಂದ,

**ದಿವಿಸ್ಪೃಶೋಃ** ಸಾವಿರ ಧನುಸ್ಸಿಗಿಂತ ಮೇಲೆ ಹೋಗಿರುವ, ಅತಿ ಎತ್ತರವಾದ, **ಅರ್ಜುನಯೋಃ** ಅರ್ಜುನವೆಂಬ ಗಿಡಗಳನ್ನು, **ಉನ್ಮೂಲನಂ** ಕೆಡಹುವುದು, **ಇತರಥಾ** ಶ್ರೀಕೃಷ್ಣನು ವಿಷ್ಣುವಾಗದಿದ್ದರೇ, **ನ ಭಾವ್ಯಂ** ಸಾಧ್ಯವಾಗದು. ಈ ಕರ್ಮವು ಕೇವಲ ತನ್ನ ಸಾಮರ್ಥ್ಯದಿಂದ ಆಗಬಾರದಿತ್ತು. ಆಗಿದೆ ಆದ್ದರಿಂದ ಅವನು ವಿಷ್ಣುವೇ ಎಂದು ನಿರ್ಣಯಿಸಬಹುದು.

ಇಲ್ಲಿ 'ದಿವಿ ಸ್ಪೃಶೋಃ' ಎಂದು ಅರ್ಜುನವೃಕ್ಷಗಳಿಗೆ ಸ್ವರ್ಗಲೋಕವನ್ನು ಮುಟ್ಟುವ ಎಂದು ಹೇಳುವಂತೆ ತೋರುವುದು. ಅದು ಸಾಧ್ಯವಿಲ್ಲ ಕಾರಣ ತಾತ್ಪರ್ಯ ಹೇಳುವರು-

**ತಾತ್ಪರ್ಯ- ಸಹಸ್ರಧನುಷಸ್ತೂರ್ಧ್ವಂ ದ್ಯುಶಬ್ದೇನಾಽಪಿ ಭಣ್ಯತೇ ॥**

**-ಇತಿ ತಂತ್ರಮಾಲಾಯಾಂ**

ಒಂದು ಸಾವಿರ ಧನುಃ ಪರಿಮಿತ ಪ್ರದೇಶದ ಮೇಲಿನ ಪ್ರದೇಶವನ್ನು ಅಂತರಿಕ್ಷ ಶಬ್ದದಿಂದ ಮಾತ್ರವಲ್ಲದೇ ದ್ಯು ಎಂಬ ಶಬ್ದದಿಂದಲೂ ಕರೆಯಬಹುದು ಎಂದು ತಂತ್ರಮಾಲಾದಲ್ಲಿ ಹೇಳಿದೆ.

ಇತರಥಾ ಅಂದರೆ ಅಲ್ಲದೇ ಹೋದರೆ ಎಂದು ಅರ್ಥ. ಏನಲ್ಲದೇ ಹೊದರೆ ಎಂದು ತಿಳಿಯುವುದಿಲ್ಲ ಕಾರಣ ಹೇಳುವರು-

**ತಾತ್ಪರ್ಯ- ಇತರಥಾ ವಿಷ್ಣುಃ ನ ಚೇತ್ ।**

ಇತರಥಾ ಎಂದರೆ ಶ್ರೀಕೃಷ್ಣನು ವಿಷ್ಣುವಾಗದಿದ್ದರೆ ಎಂದರ್ಥ. (ಒಂದು ಧನು ಎಂದರೆ ನಾಲ್ಕು ಮೊಳಗಳು) 'ಸ್ವಮಹಿಮನಿಬಂಧನತ್ವೇನ ನ ಭಾವ್ಯಂ' ಈ ಎಲ್ಲ ಕಾರ್ಯಗಳು ಕೇವಲ ಪರಮಾತ್ಮಮಾತ್ರಮಹಾತ್ಮ್ಯನಿಮಿತ್ತಕಗಳಾಗಬಾರದಿತ್ತು. ಇದರಿಂದ (ಆಗಿವೆ) ಇತರರಿಂದ ಅಶಕ್ಯವಾದ ಸಮುದ್ರಪಾನ ಮುಂತಾದುವನ್ನು ವಿಷ್ಣು ಆಗದಿದ್ದರೂ ಅಗಸ್ತ್ಯಾದಿಗಳು ಮಾಡುವುದು ಕಂಡಿದೆ. ಆದ್ದರಿಂದ ಇದು ಅಸಾಧಾರಣವಲ್ಲ ಎಂಬ ಶಂಕೆ ಪರಿಹರಿಸಿದಂತಾಯಿತು. ಅಗಸ್ತ್ಯಾದಿಗಳ ಕರ್ಮಗಳು ವಿಷ್ಣುಮಹಿಮೆಯಿಂದ ಸಾಧ್ಯವಾಗಿವೆ. ಕೇವಲ ಅವರ ಮಹಿಮೆಯಿಂದಲ್ಲವೆಂದು ಭಾವ. ಆದ್ದರಿಂದಲೇ ಹಿಂದೆ 'ಪರೇಷಾಂ ತನ್ನಿಬಂಧನಂ' ಎಂಬ ಪ್ರಮಾಣಶೇಷವನ್ನು ಉದಾಹರಿಸಿರುವರು.

**ಯದ್ವೈ ವ್ರಜೇ ವ್ರಜಪಶೂನ್ ವಿಷತೋಯಪೀತಾನ್**
**ಗೋಪಾಂಸ್ತು ಜೀವಯದನುಗ್ರಹದೃಷ್ಟಿವೃಷ್ಟ್ಯಾ ।**

**ತಚ್ಛುದ್ಧಯೇಽತಿವಿಷವೀರ್ಯವಿಲೋಲಜಿಹ್ವ-**
**ಮುಚ್ಚಾಟಯಿಷ್ಯದುರಗಂ ವ್ಯಹರದ್ ಹ್ರದಿನ್ಯಾಮ್** **॥ ೨೮ ॥**

**ವ್ರಜೇ** ಗೋಕುಲದಲ್ಲಿ **ವಿಷತೋಯಪೀತಾನ್** ವಿಷಮಿಶ್ರವಾದ ನೀರನ್ನು ಪಾನ ಮಾಡಿದ, **ವ್ರಜಪಶೂನ್** ಗೋಕುಲದ ಆಕಳುಗಳನ್ನು, **ಗೋಪಾನ್** ಗೊಲ್ಲರನ್ನು, **ಅನುಗ್ರಹದೃಷ್ಟಿವೃಷ್ಟ್ಯಾ** ಕೃಪಾದೃಷ್ಟಿ ಎಂಬ ಮಳೆಯಿಂದ, **ಜೀವಯತ್** ಬದುಕಿಸಿದನು, **ತಚ್ಛುದ್ಧಯೇ** ಯಮುನಾ ಮಡುವಿನ ನಿರು ಶುದ್ಧವಾಗಲು, **ಅತಿವಿಷವೀರ್ಯ-ವಿಲೋಲಜಿಹ್ವಂ** ಬಹಳವಾದ ವಿಷದ ಸಾಮರ್ಥ್ಯದಿಂದ ಚಂಚಲವಾದ ನಾಲಿಗೆಯುಳ್ಳ **ಉರಗಂ** ಕಾಲಿಯ ನಾಗನನ್ನು, **ಉಚ್ಚಾಟಯಿಷ್ಯತ್** ಹೊರಹೊರಡಿಸುವವನಾಗಿ, **ಹ್ರದಿನ್ಯಾಂ** ಯಮುನಾನದಿಯಲ್ಲಿ, **ವ್ಯಹರತ್** ವಿಹಾರಮಾಡಿದನು, **ಇತಿ ಯತ್** ಎಂಬುದೇನಿದೆಯೋ, **ತತ್** ಅದು, **ಇತರಥಾ ನ ಭಾವ್ಯಂ** ಕೃಷ್ಣನು ವಿಷ್ಣು ಆಗದಿದ್ದರೆ ಸಾಧ್ಯವಿಲ್ಲವೆಂದು ಭಾವ. ॥ ೨೮ ॥

**ತತ್ಕರ್ಮ ದಿವ್ಯಮಿವ ಯನ್ನಿಶಿ ನಿಃಶಯಾನಂ**
**ದಾವಾಗ್ನಿನಾಽಽಶು ವಿಪಿನೇ ಪರಿದಹ್ಯಮಾನೇ ।**
**ಉನ್ನೇಷ್ಯತಿ ವ್ರಜಮಿತೋಽವಸಿತಾಂತಕಾಲಂ**
**ನೇತ್ರೇ ಪಿಧಾಯ್ಯ ಸಬಲೋಽನಧಿಗಮ್ಯವೀರ್ಯಃ** **॥೨೯॥**

**ವಿಪಿನೇ** ಅಡವಿಯು, **ದಾವಾಗ್ನಿನಾ** ಕಾಡುಗಿಚ್ಚಿನಿಂದ, **ಪರಿದಹ್ಯಮಾನೇ** ಸುತ್ತಲು ಸುಡುತ್ತಿರಲು, **ನಿಶಿ** ರಾತ್ರಿಯಲ್ಲಿ, **ನಿಃಶಯಾನಂ** ಕಾಲಿಯನನ್ನು ಹೊರಹಾಕಿದ ಮೇಲೆ ಯಮುನಾತೀರದಲ್ಲಿ ಮಲಗಿದ, **ಅವಸಿತಾಂತಕಾಲಂ** ಜನರಿಂದ ನಿಶ್ಚಯಿಸಲ್ಪಟ್ಟ ಮರಣಕಾಲ ಉಳ್ಳ **ವ್ರಜಂ** ಗೊ-ಗೊಪಾಲಕರನ್ನು, **ಇತಃ** ಈ ದಾವಾಗ್ನಿಯಿಂದ, **ನೇತ್ರೇ ಪಿಧಾಯ್ಯ** ಆ ಎಲ್ಲ ಗೋಪಾಲಕರ ಕಣ್ಣುಗಳನ್ನು ಮುಚ್ಚಿಸಿ, **ಸಬಲಃ** ಬಲರಾಮನಿಂದ ಸಹಿತನಾಗಿ, **ಅನಧಿಗಮ್ಯವೀರ್ಯಃ** ಯಾರಿಂದಲೂ ನೋಡಲಾಗದ ಸಾಮರ್ಥ್ಯ ಉಳ್ಳ ಶ್ರೀಕೃಷ್ಣನು, **ಆಶು** ಬೇಗನೇ, **ಉನ್ನೇಷ್ಯತಿ** ಪಾರು ಮಾಡುವನು.

ದಾವಾಗ್ನಿಪಾನಮಾಡುವ ತನ್ನ ಸಾಮರ್ಥ್ಯವನ್ನು ನೋಡುವ ಶಕ್ತಿ ಯಾರಿಗೂ ಇಲ್ಲವಾದ್ದರಿಂದ ಎಲ್ಲರ ಕಣ್ಣುಗಳನ್ನು ಮುಚ್ಚಿಸಿದನು ಎಂದು ತಿಳಿಯಬೇಕು. ಈ ವಿಷಯವನ್ನು ತಿಳಿಸುವುದಕ್ಕಾಗಿಯೇ 'ಅನಧಿಗಮ್ಯವೀರ್ಯಃ' ಎಂಬ ವಿಶೇಷಣವನ್ನು ಕೃಷ್ಣನಿಗೆ ನೀಡಿದ್ದಾರೆ ಎಂಬುದನ್ನು ಗಮನಿಸಬೇಕು.

ಇದು ಮುಂಜಾಟವಿಯಲ್ಲಿ ನಡೆದ ಘಟನೆ ಎಂದು ತಿಳಿಯಬೇಕು. ಇಲ್ಲದಿದ್ದರೆ 'ನಿಶಿ ನಿಃಶಯಾನಂ' ಎಂಬ ಮಾತಿನ ವಿರೋಧ ಬರುತ್ತದೆ.

**ಇತಿ ಯತ್** ಇದೇನಿದೆಯೋ, **ತತ್ಕರ್ಮ** ಎರಡು ಸಲ ದಾವಾಗ್ನಿ ಪಾನ ಮಾಡಿದ್ದು **ದಿವ್ಯಮಿವ** ಸ್ತುತ್ಯವಿದ್ದಂತೆ, ಅಂದರೆ ಶ್ರೀಕೃಷ್ಣನೂ ಸಹ ತನ್ನ ಕರ್ಮಗಳನ್ನು ತಾನೂ ಇದು ಅನನ್ಯಸಾಧ್ಯವೆಂದು ಹೇಳುವನು, ಆದರೇ ಫಲಾಪೇಕ್ಷೆಯಿಂದಲ್ಲ ಕಾರಣ ಸ್ತುತಿ ಇದ್ದಂತೆ ಎಂದು ಭಾವ. ಇಲ್ಲಿ ವಿಜಯಧ್ವಜರು ಈ ಶ್ಲೋಕಕ್ಕೆ ಮುಂದಿನ ತಾತ್ಪರ್ಯ (೩೧ನೆಯ ಶ್ಲೋಕದ್ದು) ಮನಸಿನಲ್ಲಿ ಇಟ್ಟುಕೊಂಡು ಹೀಗೆ ವ್ಯಾಖ್ಯಾನಿಸಿರುವರು-

**ಆಶು ಆಶುನಾ** ಸುತ್ತಲೂ ವ್ಯಾಪಿಸಿರುವ, **ದಾವಾಗ್ನಿನಾ** ಕಾಡುಗಿಚ್ಚಿನಿಂದ **ವಿಪಿನೇ** ಅಡವಿಯು, **ಪರಿದಹ್ಯಮಾನೇ** ಸುಡುತ್ತಿರಲು, **ನಿಶಿ** ಏನೂ ತಿಳಿಯದಿರುವಾಗ, **ನಿಃಶಯಾನಂ** ಕರ್ತವ್ಯಮೂಢರಾದ, **ಅವಸಿತಾಂತಕಾಲಂ** ನಿಶ್ಚಿತ ಮರಣಕಾಲ ಉಳ್ಳ **ವ್ರಜಂ** ಗೋಕುಲದ ಜನರನ್ನು, **ನೇತ್ರೇ ಪಿಧಾಯ** ಕಣ್ಣು ಮುಚ್ಚಿಸಿ, **ಇತಃ** ದಾವಾಗ್ನಿಯಿಂದ **ಉನ್ನೇಷ್ಯತಿ** ಪಾರು ಮಾಡುವನು. ಇದು ಇತರರಿಗೆ ಸ್ತುತ್ಯವೇ ತನಗೆ ಸ್ತುತ್ಯದಂತೆ.

ಈ ಶ್ಲೋದಲ್ಲಿಯ ದಿವ್ಯ ಎಂಬ ಪದವನ್ನು ಅನುವಾದ ಮಾಡಿ ದಿವು ಧಾತುವಿಗೆ ಅನೇಕ ಅರ್ಥವಿರುವುದರಿಂದ ಇಲ್ಲಿ ವಿವಕ್ಷಿತವಾದ ಅರ್ಥವನ್ನು ತಿಳಿಸುವರು-

ತಾತ್ಪರ್ಯ- ದಿವ್ಯಮಿವ ಸ್ತುತ್ಯಮಿವ । ತದಪೇಕ್ಷಯಾ । ಅನ್ಯೇಷಾಂ ಸ್ತುತ್ಯಮೇವ ಯತ್ ತಸ್ಯ ತಚ್ಚ ದಿವ್ಯಮಿವ ।

ಶ್ರೀಕೃಷ್ಣನು ಮಾಡಿದ ದಾವಾಗ್ನಿಪಾನಾದಿಗಳು ಶ್ರೀಕೃಷ್ಣನಿಗೆ ಸ್ತುತ್ಯದಂತೆ. ಶ್ರೀಕೃಷ್ಣನಿಂದ ಭಿನ್ನರಾದ ಬ್ರಹ್ಮಾದಿಗಳಿಗೆ ಕೃಷ್ಣನ ಕರ್ಮಗಳು ವಸ್ತುತಃ ಸ್ತುತ್ಯಗಳೇ ಆಗಿವೆ. ಅವೇ ಅವನಿಗೆ ಸ್ತುತ್ಯದಂತೆ ವಸ್ತುತಃ ಸ್ತುತ್ಯವಲ್ಲ.

ಸ್ತುತಿ ಎಂದರೆ ಫಲಾಪೇಕ್ಷೆಯಿಂದ ಉತ್ಕರ್ಷ ಹೇಳುವುದು. ಬ್ರಹ್ಮಾದಿಗಳು ಫಲಾಪೇಕ್ಷೆಯಿಂದ ಶ್ರೀಕೃಷ್ಣಪರಮಾತ್ಮನ ಉತ್ಕರ್ಷವನ್ನು ಹೇಳುತ್ತಾರೆ. ಆದ್ದರಿಂದ ದಾವಾಗ್ನಿಪಾನಾದಿಗಳು ಅವರಿಗೆ ಸ್ತುತ್ಯವೇ ಆಗಿವೆ. ಶ್ರೀಕೃಷ್ಣನು ತನ್ನ ಕರ್ಮ ಅನನ್ಯಸಾಧ್ಯವೆಂದು ತನ್ನ ಉತ್ಕರ್ಷವನ್ನೇ ಹೇಳಿಕೊಳ್ಳುತ್ತಾನೆಯೇ ಹೊರತು ಫಲಾಪೇಕ್ಷೆಯಿಂದಲ್ಲ. ಆದ್ದರಿಂದ ಶ್ರೀಕೃಷ್ಣನಿಗೆ ಈ ಕರ್ಮಗಳು ಸ್ತುತ್ಯದಂತೆ ಎಂದು ತಿಳಿಯಬೇಕು. ।। ೨೯ ।।

**ಗೃಹ್ಣೀತ ಯದ್ಯದುಪಬದ್ಧುಮಮುಷ್ಯ ಮಾತಾ**
**ಶುಲ್ಬಂ ಸುತಸ್ಯ ನ ತು ತತ್ತದಮುಷ್ಯ ಮಾತಿ ।**
**ಯಜ್ಜೃಂಭತೋಽಸ್ಯ ವದನೇ ಭುವನಾನಿ ಗೋಪೀ**
**ಸಂವೀಕ್ಷ್ಯ ಶಂಕಿತಮನಾಃ ಪ್ರತಿಬೋಧಿತಸ್ಯ ॥ ೩೦ ॥**

**ಅಮುಷ್ಯ** ಶ್ರೀಕೃಷ್ಣನ, **ಮಾತಾ** ತಾಯಿಯಾದ ಯಶೋದೆಯು, **ಸುತಸ್ಯ ಉಪಬದ್ಧುಂ** ಮಗನನ್ನು ಕಟ್ಟಲು, **ಶುಲ್ಬಂ** ಹಗ್ಗವನ್ನು, **ಯದ್ಯತ್ ಗೃಹ್ಣೀತ** ಯಾವ ಯಾವದನ್ನು ಸ್ವೀಕರಿಸಿದಳೋ, **ತತ್ ತತ್** ಅದೆಲ್ಲವೂ, **ಅಮುಷ್ಯ** ಮಗನಿಗೆ, **ನ ಮಾತಿ** ಸಾಕಾಗುವುದಿಲ್ಲ **ಇತಿ ಯತ್** ಎಂದು, **ಗೋಪೀ** ಯಶೋದೆಯು, **ಪ್ರತಿಬೋಧಿತಸ್ಯ** ನಿದ್ದೆಯಿಂದ ಎಬ್ಬಿಸಿದ ಆದ್ದರಿಂದಲೇ, **ಜೃಂಭತಃ** ಆಕಳಿಸುತ್ತಿರುವ, **ಅಸ್ಯ** ಶ್ರೀಕೃಷ್ಣನ, **ವದನೇ** ಮುಖದಲ್ಲಿ, **ಭುವನಾನಿ** ಹದಿನಾಲ್ಕು ಲೋಕಗಳನ್ನು, **ಸಂವೀಕ್ಷ್ಯ** ಚನ್ನಾಗಿ ನೋಡಿ, **ಶಂಕಿತಮನಾಃ ಅಭೂತ್** ಭೀತಳಾದಳು ಎಂಬ ಕರ್ಮವು, **ದಿವ್ಯಮಿವ** ಸ್ತುತ್ಯವಿದ್ದಂತೆ. ॥ ೩೦ ॥

**ನಂದಂ ಚ ಮೋಕ್ಷ್ಯತಿ ಭಯಾದ್ವರುಣಸ್ಯ ಪಾಶಾತ್**
**ಗೋಪಾನ್ ಬಿಲೇಷು ಪಿಹಿತಾನ್ಮಯಸೂನುನಾ ಚ ।**
**ಜಲ್ಪ್ಯಾವೃತಂ ನಿಶಿ ಶಯಾನಮತಿಶ್ರಮೇಣ**
**ಲೋಕೇ ವಿಕುಂಠ ಉಪಧಾಸ್ಯತಿ ಗೋಕುಲಂ ಸ್ಮ ॥ ೩೧ ॥**

**ವರುಣಸ್ಯ ಪಾಶಾತ್ ಭಯಾತ್** ವರುಣಪಾಶದಿಂದುಂಟಾದ ಭಯದಿಂದ, **ನಂದಂ ಮೋಕ್ಷ್ಯತಿ** ನಂದನನ್ನು ಮೋಚನ ಮಾಡುವನು, **ಮಯಸೂನುನಾ** ಮಯನ ಮಗನಾದ ವ್ಯೋಮನೆಂಬುವವನಿಂದ, **ಬಿಲೇಷು ಪಿಹಿತಾನ್** ಗುಹೆಯಲ್ಲಿ ಇರಿಸಲ್ಪಟ್ಟ **ಗೋಪಾನ್** ಗೊಲ್ಲರನ್ನು ರಕ್ಷಿಸುವನು, **ಜಲ್ಪ್ಯಾ** ಅನ್ಯಥಾಜ್ಞಾನಜನಕವಾದ ಕುಶಾಸ್ತ್ರಗಳಿಂದ, **ಆವೃತಂ** ಉಂಟಾದ ಸಂಶಯ-ವಿಪರೀತಜ್ಞಾನಗಳಿಂದ ತಿರೋಹಿತವಾದ ಯಥಾರ್ಥಜ್ಞಾನ ಉಳ್ಳ **ನಿಶಿ** ಅನಾದಿಯಾದ ಅವಿದ್ಯಾನಿಮಿತ್ತಕವಾದ ಸಂಸಾರದಲ್ಲಿ, **ಅತಿಶ್ರಮೇಣ** ವಿವಿಧ ದುಃಖಾನುಭವದಿಂದ, **ಶಯಾನಂ** ಮೋಕ್ಷಸಾಧನ ಅನುಷ್ಠಾನ ಮಾಡದಿರುವುದರಿಂದ ಮಲಗಿದ, **ಗೋಕುಲಂ** ಗೋಕುಲದಲ್ಲಿರುವ ಜನರನ್ನು, **ವಿಕುಂಠೇ ಲೋಕೇ** ವೈಕುಂಠಲೋಕದಲ್ಲಿ **ಉಪಧಾಸ್ಯತಿ** ಕಳಿಸುವನು, **ಇತಿ ಯತ್ ತದಪಿ ದಿವ್ಯಮಿವ** ಇದೂ ಸ್ತುತ್ಯವಾದುದೇ ಆಗಿದೆ.

ಜಲ್ಪ್ಯಾ ವೃತಂ ಎಂಬಲ್ಲಿಯ ಜಲ್ಪಿ ಶಬ್ದಾರ್ಥವನ್ನು ತಿಳಿಸುವರು-

**ತಾತ್ಪರ್ಯ- ಅನ್ಯಥಾಜ್ಞಾನಹೇತುರ್ಯಾ ವಾಕ್ ಸಾ ಜಲ್ಪಿಃ ಪ್ರಕೀರ್ತಿತಾ ||**

**-ಇತಿ ತಂತ್ರಮಾಲಾಯಾಮ್**

**ಯತ್ತು ಸರ್ವಾತ್ಮನಾಽಜ್ಞಾನಂ ನಿಶಾ ಸಾ ಪರಿಕೀರ್ತಿತಾ || -ಇತಿ ಕೌರ್ಮೇ**

ಮಿಥ್ಯಾಜ್ಞಾನಕ್ಕೆ ಕಾರಣಗಳಾದ ದುರ್ವಾದಿಗಳ ವಚನಗಳು (ಸಂಶಯ ವಿಪರ್ಯಯಗಳನ್ನು ಹುಟ್ಟಿಸುವುದು) ಜಲ್ಪಿ ಎನಿಸುತ್ತವೆ. ಎಂದು ತಂತ್ರಮಾಲಾದಲ್ಲಿ ಹೇಳಿದೆ.

ಸರ್ವಾತ್ಮನಾ ಅಜ್ಞಾನವು ನಿಶಾ ಎನಿಸುತ್ತದೆ. ಎಂದು ಕೂರ್ಮಪುರಾಣದಲ್ಲಿದೆ. ಇದು ನಿಶಿ ಶಯಾನಂ ಎಂಬಲ್ಲಿಯ ನಿಶಿ ಶಬ್ದದ ಪ್ರಕೃತೋಪಯುಕ್ತವಾದ ಅರ್ಥವು.

**ಗೋಪೈರ್ಮಖೇ ಪ್ರತಿಹತೇ ವ್ರಜವಿಪ್ಲವಾಯ**
**ದೇವೇಽಭಿವರ್ಷತಿ ಪಶೂನ್ ಕೃಪಯಾ ರಿರಕ್ಷುಃ ।**
**ಧರ್ತೋಚ್ಛಿಲೀಂಧ್ರಮಿವ ಸಪ್ತದಿನಾನಿ ಸಪ್ತ-**
**ವರ್ಷೋ ಮಹೀಧ್ರಮನಘೈಕಕರೇ ಸಲೀಲಮ್ || ೩೨ ||**

**ಹೇ ಅನಘ** ನಿರ್ದುಷ್ಟನಾದ ನಾರದನೇ, **ಮಖೇ** ತನಗಾಗಿ ಮಾಡಬೇಕಾದ ಯಜ್ಞವು, **ಗೋಪೈಃ** ಗೋಪಾಲರಿಂದ, **ಪ್ರತಿಹತೇ** ತಡೆಯುತ್ತಿರಲು, (ಇಂದ್ರೋದ್ದೇಶದಿಂದ ಮಾಡದಿರುವಾಗ) **ದೇವೇ** ಇಂದ್ರನು, **ವ್ರಜವಿಪ್ಲವಾಯ** ಗೋಕುಲವನ್ನು ನಾಶಮಾಡಲು **ಸಪ್ತದಿನಾನಿ** ಏಳುದಿನ, **ಅಭಿವರ್ಷತಿ ಸತಿ** ಭಾರಿ ಮಳೆಗರೆಯುತ್ತಿರಲು, **ಸಪ್ತವರ್ಷಃ** ಏಳು ವರ್ಷದ ಬಾಲಕನಾದ ಶ್ರೀಕೃಷ್ಣನು, **ಮಹೀಧ್ರಂ** ಗೋವರ್ಧನಪರ್ವತವನ್ನು, **ಸಲೀಲಂ** ಅನಾಯಾಸವಾಗಿ, **ಏಕಕರೇ** ಒಂದೇ ಕೈಯಲ್ಲಿ, ಒಂದೇ ಬೆರಳಿನಲ್ಲಿ **ಉಚ್ಛಿಲಿಂಧ್ರಮಿವ** ಛತ್ರಾಕದಂತೆ (ನಾಯಿಕೊಡೆಯಂತೆ) **ಕೃಪಯಾ** ದಯೆಯಿಂದ, **ಪಶೂನ್** ಆಕಳುಗಳನ್ನು **ರಿರಕ್ಷುಃ** ರಕ್ಷಿಸಲು ಇಚ್ಛಿಸಿ, **ಧರ್ತಾ** ಧರಿಸುವನು. || ೩೨ ||

**ಕ್ರೀಡನ್ವನೇ ನಿಶಿ ನಿಶಾಕರರಶ್ಮಿಗೌರ್ಯಾಂ**
**ರಾಸೋನ್ಮುಖಃ ಕಲಪದಾಯತಮೂರ್ಛಿತೇನ ।**
**ಉದ್ದೀಪಿತಸ್ಮರರುಜಾಂ ವ್ರಜಸದ್ವಧೂನಾಂ**
**ಹರ್ತುರ್ಹರಿಷ್ಯತಿ ಶಿರೋ ಧನದಾನುಗಸ್ಯ || ೩೩ ||**

**ನಿಶಾಕರರಶ್ಮಿಗೌರ್ಯಾಮ್** ಚಂದ್ರನ ಕಿರಣಗಳಿಂದ ಧವಲವಾದ, **ನಿಶಿ** ರಾತ್ರಿಯಲ್ಲಿ (ಬೆಳದಿಂಗಳು ಚಲ್ಲಿದ ರಾತ್ರಿಯಲ್ಲಿ) **ರಾಸೋನ್ಮುಖಃ** ರಾಸಕ್ರೀಡಾಭಿಮುಖನಾದ ಶ್ರೀಕೃಷ್ಣನು, **ವನೇ** ಅರಣ್ಯದಲ್ಲಿ **ಕ್ರೀಡನ್ ಸನ್** ಕ್ರಿಡಿಸುವವನಾಗಿ, **ಕಲಪದಾಯತ-ಮೂರ್ಛಿತೇನ** ಮಂಜುಲವಾದ ಪದಗಳುಳ್ಳ ದೀರ್ಘವಾದ ಸಪ್ತಸ್ವರಗಳ ಮೇಲನದಿಂದ ಕೂಡಿದ ಗಾಯನದಿಂದ, **ಉದ್ದೀಪಿತಸ್ಮರರುಜಾಂ** ಉತ್ಕೃಷ್ಟವಾಗಿ ಜ್ವಲಿತವಾದ ಕಾಮವೆಂಬ ರೋಗ ಉಳ್ಳ **ವ್ರಜಸದ್ವಧೂನಾಂ** ಗೋಕುಲಸ್ತ್ರೀಯರನ್ನು **ಹರ್ತುಃ** ಅಪಹರಿಸುವ, **ಧನದಾನುಗಸ್ಯ** ಕುಬೇರನ ಭೃತ್ಯನಾದ ಶಂಖಚೂಡನ, **ಶಿರಃ** ತಲೆಯನ್ನು **ಹರಿಷ್ಯತಿ** ಕತ್ತರಿಸುವನು. ।। ೩೩ ।।

'ಕಲಪದಾಯತಮೂರ್ಛಿತೇನ' ಎಂಬುದು ತತ್ಪುರುಷಸಮಾಸವಲ್ಲ ಕಿಂತು ಕರ್ಮಧಾರಯ ಎಂದು ತಿಳಿಸುವರು-

**ತಾತ್ಪರ್ಯ- 'ಕಲಪದಂ ಚ ಆಯತಂ ಚ'**

(ಚ ಶಬ್ದದ ನಂತರ ತತ್ ಎಂದು ಅಧ್ಯಾಹಾರ ಮಾಡಬೇಕು. ಆಯತಂ ಎಂದಾದ ಮೇಲೇ ಮೂರ್ಛಿತಂ ಚ ಎಂದೂ ಶೇಷಪೂರ್ತಿ ಮಾಡಬೇಕು. 'ವಿಶೇಷಣಂ ವಿಶೇಷ್ಯೇಣ ಬಹುಲಂ' ಎಂದು ಬಹುಲಗ್ರಹಣ ಮಾಡಿದ್ದರಿಂದ ವಿಶೇಷಣಗಳಿಗೆ ಸಮಾಸವೆಂದು ತಿಳಿಯಬೇಕು. ಅಂತು ಕಲಪದಂ ಚ ತತ್ ಆಯತಂ ಚ ಕಲಪದಾಯತಂ ಕಲಪದಾಯತಂ ಚ ತತ್ ಮೂರ್ಛಿತಂ ಚ ತೇನ ಎಂದು ವಿಗ್ರಹ.

ಇಲ್ಲಿ ಮೂರ್ಛಿತ ಪದದ ಪ್ರಕೃತೋಪಯುಕ್ತ ಅರ್ಥವನ್ನು ಪ್ರಮಾಣದಿಂದ ತಿಳಿಸುವರು-

**ಭಾ.ತಾ. 'ಸಪ್ತಸ್ವರಸಮಾಹಾರೋ ಮೂರ್ಛನೇತಿ ಪ್ರಕೀರ್ತಿತಾ' ಇತಿ ಗಾಂಧರ್ವೇ ।।**

'ಕಲಪದಾಯತಮುರ್ಛಿತೇನ' ಎಂಬುದಕ್ಕೆ ಮಂಜುಲವಾದ ಪದಗಳಿಂದ ಕೂಡಿದ ಮತ್ತು ದೀರ್ಘವಾದ ಸರ್ವಲಕ್ಷಣಗಳಿಂದ ಕೂಡಿದ ಏಳು ಸ್ವರಗಳ ಕೂಡುವಿಕೆ ಮೂರ್ಛನಾ ಎಂದು ಗಂಧರ್ವಶಾಸ್ತ್ರದಲ್ಲಿ ಹೇಳಿದ್ದರಿಂದ ಮೂರ್ಛಿತ ಎಂದರೆ ಸಪ್ತಸ್ವರಗಳಿಂದ ಕೂಡಿದ ಎಂದರ್ಥವೆಂದು ಭಾವ. ।। ೩೩ ।।

**ಯೇ ಚ ಪ್ರಲಂಬಖರದರ್ದುರಕೇಶ್ಯರಿಷ್ಟ-**
**ಮಲ್ಲೇಭಕಂಸಯವನಾಃ ಕುಜಪೌಂಡ್ರಕಾದ್ಯಾಃ ।**

**ಅನ್ಯೇऽಪಿ ಶಾಲ್ವಕಪಿಬಲ್ವಲದಂತವಕ್ತ್ರ-**
**ಸಪ್ತೋಕ್ಷಶಂಬರವಿಡೂರಥರುಗ್ಮಿಮುಖ್ಯಾಃ** ॥ ೩೪ ॥

**ಯೇ ವಾ ಮೃಧೇ ಸಮಿತಿಶಾಲಿನ ಆತ್ತಚಾಪಾಃ**
**ಕಾಂಭೋಜಮತ್ಸ್ಯಕುರುಸೃಂಜಯಕೈಕಯಾರ್ಣಾಃ ।**
**ಯಾಸ್ಯಂತ್ಯದರ್ಶನಮಿತಾಬಲಪಾರ್ಥಭೀಮ-**
**ವ್ಯಾಜಾಹ್ವಯೇನ ಹರಿಣಾ ನಿಲಯಂ ತದೀಯಮ್** ॥ ೩೫ ॥

**ಯೇ** ಯಾವ, **ಪ್ರಲಂಬಖರದರ್ದುರಕೇಶ್ಯರಿಷ್ಟಮಲ್ಲೇಭಕಂಸಯವನಾಃ** ಪ್ರಲಂಬಾಸುರ-ಧೇನುಕಾಸುರ-ಬಕಾಸುರ-ಕೇಶೀ-ಅರಿಷ್ಟ ಎಂಬ ಅಸುರರು, ಚಾಣೂರ-ಮುಷ್ಟಿಕರು-ಕುವಲಯಾಪೀಡ ಎಂಬ ಆನೆ, ಕಂಸ ಮತ್ತು ಕಾಲಯವನರು, **ಕುಜಪೌಂಡ್ರಕಾದ್ಯಾಃ** ನರಕಾಸುರ ಮತ್ತು ಪೌಂಡ್ರಕವಾಸುದೇವ ಮೊದಲಾದವರು, **ಅನ್ಯೇऽಪಿ** ಬೇರೆಯವರಾದ ಮೈಂದಾದಿಗಳು ಜರಾಸಂಧಾದಿಗಳು **ಶಾಲ್ವಕಪಿಬಲ್ವಲದಂತವಕ್ತ್ರ-ಸಪ್ತೋಕ್ಷಶಂಬರವಿಡೂರಥರುಕ್ಮಿಮುಖ್ಯಾಃ** ಶಾಲ್ವರಾಜ-ವಿವಿದ-ಬಲ್ವಲ-ದಂತವಕ್ತ್ರ-ಏಳು ಗೂಳಿಗಳು-ಶಂಬರಾಸುರ-ರುಕ್ಮಿ ಮೊದಲಾದವರು, ॥ ೩೪ ॥

**ಮೃಧೇ** ಕೌರವ-ಪಾಂಡವರ ಯುದ್ಧದಲ್ಲಿ, **ಸಮಿತಿಶಾಲಿನಃ** ಯುದ್ಧದಲ್ಲಿ ಶ್ಲಾಘನೀಯರಾದ, **ಆತ್ತಚಾಪಾಃ** ಧನುರ್ಧಾರಿಗಳಾದ ಕಾಂಭೋಜರು-ಮತ್ಸ್ಯರು-ರುರುಗಳು **ಸೃಂಜಯಕೈಕಯಾರ್ಣಾಃ** ಸೃಂಜಯ-ಕೈಕಯ ಮುಂತಾದವರು, **ಬಲಪಾರ್ಥಭೀಮವ್ಯಾಜಾ- ಹ್ವಯೇನ** ಬಲರಾಮ-ಅರ್ಜುನ-ಭೀಮ ಎಂಬವರಲ್ಲಿದ್ದು ಆ ಹೆಸರಿನ, **ಹರಿಣಾ** ಶ್ರೀಹರಿಯಿಂದ, **ಅದರ್ಶನಂ ಇತಾಃ** ಮರಣಹೊಂದಿ, **ತದೀಯಂ ನಿಲಯಂ ಯಾಂತಿ** ಶ್ರೀಹರಿಯ ವ್ಯಕ್ತಾವ್ಯಕ್ತಸ್ಥಾನಗಳಾದ ವೈಕುಂಠ-ನರಕ-ತಮಸ್ಸನ್ನು ಹೊಂದುವರು ಎಂದು ಭಾವ. ॥ ೩೫ ॥

ಪ್ರಲಂಬ-ಖರ-ಕಪಿ-ರುಕ್ಮಿ ಮುಂತಾದವರು ಬಲರಾಮನಿಂದ, ಕಾಂಭೋಜಾದಿಗಳು ಭೀಮ-ಅರ್ಜುನ-ದ್ರೋಣಾದಿಗಳಿಂದ, ಶಂಬರ ಪ್ರದ್ಯುಮ್ನನಿಂದ, ಯವನನು ಮುಚಕುಂದನಿಂದ ಕೊಲ್ಲಲ್ಪಟ್ಟರು. ಹರಿಯಿಂದ ಅಲ್ಲ ಎಂಬ ಶಂಕಗೆ ಉತ್ತರ. 'ಬಲಪಾರ್ಥಭೀಮವ್ಯಾಜೇನ' ಎಂಬುದು. ಇಲ್ಲಿ ಪ್ರದ್ಯುಮ್ನ-ಮುಚುಕುಂದ-ದ್ರೋಣಾದಿಗಳನ್ನು ಲಕ್ಷಣಯಾ ತೆಗೆದುಕೊಳ್ಳಬೇಕು.

೩೪-೩೫ನೆಯ ಶ್ಲೋಕದಲ್ಲಿ 'ತದೀಯನಿಲಯಂ ಯಾಸ್ಯಂತಿ' ಪ್ರಲಂಬಾದಿಗಳೆಲ್ಲರೂ ಹರಿಯ ಲೋಕಕ್ಕೆ ಹೋಗುತ್ತಾರೆ ಎಂದು ಹೇಳಿದ್ದಾರೆ. ಭಕ್ತರು ಭಗವಂತನ ಲೋಕಕ್ಕೆ ಹೋಗುತ್ತಾರೆ ಎಂದು ಹೇಳುವುದು ಯುಕ್ತವಾಗುತ್ತದೆ. ಆದರೆ ಭಗವಂತನ ದ್ವೇಷಿಗಳು, ಉದಾಸೀನರು ಭಗವಂತನ ಲೋಕಕ್ಕೆ ಸರ್ವಥಾ ಹೋಗಲಾರರು. ಆದ್ದರಿಂದ ಇಲ್ಲಿ ಹೇಳಿದ ವಿಷಯವು ಅಯುಕ್ತವಾಗಬೇಕಾದೀತು ಎಂದು ಶಂಕಿಸಿ ಪ್ರಮಾಣಪೂರ್ವಕ-ವಾಗಿಯೇ ಉತ್ತರವನ್ನು ಹೇಳುತ್ತಿದ್ದಾರೆ-

**ತಾತ್ಪರ್ಯ -ವಿದ್ವೇಷಿಣೋಽಪ್ಯುದಾಸೀನಾ ಭಕ್ತಾ ಅಪಿ ನ ಸಂಶಯಃ ।**
**ಹರೇರ್ಹಿ ಸದನಂ ಯಾಂತಿ ವ್ಯಕ್ತಂ ಭಕ್ತೈಸ್ತು ಗಮ್ಯತೇ ।**
**ಅವಕ್ತಹರಿಲೋಕತ್ವಾದನ್ಯೇಷಾಮನ್ಯಲೋಕತಾ ॥ -ಇತಿ ಬೃಹತ್ಸಂಹಿತಾಯಾಮ್**

ವಿದ್ವೇಷಿಗಳು, ಉದಾಸೀನರು, ಭಕ್ತರು ಈ ಮೂರು ಜನರು ಹರಿಯ ಸ್ಥಾನವನ್ನು ಹೊಂದುತ್ತಾರೆ. ಭಕ್ತಗಮ್ಯವಾದ ವೈಕುಂಠಕ್ಕೆ ಹರಿಸದನ ಎಂದು ಪ್ರಸಿದ್ಧಿ ಇದೆ. ದ್ವೇಷಿಗಮ್ಯತಮ ಆದಿಗಳಿಗೆ ಇಲ್ಲವಲ್ಲ ಎಂದರೆ, ತಮಸ್ಸನ್ನಾರಂಭಿಸಿ ಮುಕ್ತಿ-ಪರ್ಯಂತವಾಗಿಯೂ ಶ್ರೀಕೃಷ್ಣನ ಸದನಗಳೇ ಆಗಿವೆ. ಹಾಗಾದರೆ ಭಕ್ತರು ಹರಿಲೋಕಕ್ಕೆ ಅಭಕ್ತರು ಬೇರೆ ಲೋಕಕ್ಕೆ ಹೋಗುವರು ಎಂದು ಬೇರೆಡೆ ಹೇಳಿದೆಯಲ್ಲ ಎಂದರೆ ಅದರ ಅಭಿಪ್ರಾಯ ಹೀಗೆ, ಭಕ್ತರು ವ್ಯಕ್ತನಾಗಿರುವುದರಿಂದ ಶ್ರೀಹರಿಯ ಸ್ಥಾನವೆಂದು ಪ್ರಸಿದ್ಧವಾದ ವೈಕುಂಠಕ್ಕೆ ಹೋಗುವರು. ನರಕ-ತಮಸ್ಸುಗಳು ಅವ್ಯಕ್ತವಾಗಿ ಹರಿಯ ಆವಾಸಸ್ಥಾನವಾದುದರಿಂದ ಅನ್ಯಲೋಕಗಳೆಂದು ಪ್ರಸಿದ್ಧವಾಗಿವೆ. ಅವುಗಳಲ್ಲಿ ವಿದ್ವೇಷಿಗಳು ತಮಸ್ಸನ್ನು, ಉದಾಸೀನರು ನರಕವನ್ನು ಹೊಂದುವುದರಿಂದ ಅನ್ಯಲೋಕಪ್ರಾಪ್ತಿ ಎಂದು ಪ್ರಸಿದ್ಧಿ ಇದೆ. ಕೇವಲ ಹರಿಯ ಸ್ಥಾನ ಎಂಬರ್ಥಲ್ಲಿ ಹರಿಲೋಕಪ್ರಾಪ್ತಿ ಎಂದು ಹೇಳಿದ್ದೂ ಸರಿಯೇ ಎಂದು ಭಾವ. ಈ ರೀತಿಯಾಗಿ ಬೃಹತ್ಸಂಹಿತೆಯು ತಿಳಿಸುತ್ತದೆ.

**ವಿಜಯಧ್ವಜೀಯ ವಿಶೇಷ - ನಿಲಯಂ** ನಿತರಾಂ ಲೀಯತೇ ಸುಖಂ ಯಸ್ಮಿನ್ ತತ್ ನಿಲಯಂ, ಎಲ್ಲಿ ಸುಖವು ಇರುವುದಿಲ್ಲವೋ ಅಂತಹ ಅಂಧಂತಮಸ್ಸನ್ನು ದ್ವೇಷಿಗಳು ಹೊಂದುವರು ಎಂದು ಅರ್ಥ. ಅಥವಾ ನ್ಯಗ್ಭಾವರಯಂ ನೀಚಗತಿಯನ್ನು ಅಂದರೆ ತಮಸ್ಸನ್ನು ದ್ವೇಷಿಗಳು ಹೊಂದುವರು ಎಂದೂ ಅರ್ಥ ಮಾಡಿಕೊಳ್ಳಬಹುದು. 'ದಲಯೋರಭೇದಾತ್' ಎಂಬ ನಿಯಮವಿದ್ದುದರಿಂದ ನಿಲಯವೆಂದರೆ ನಿರಯ ಅರ್ಥಾತ್ ನರಕ ಎಂದು ಅರ್ಥ. ಇಂತಹ ನರಕವನ್ನು ಉದಾಸೀನರು ಹೊಂದುವರು.

'ನಿರ್ಯಗ್ಭಾವನಿಕಾಮಯೋಃ' ಎಂದಿರುವುದರಿಂದ ನಿಕಾಮ ಎಂದರೇ ಅಭೀಷ್ಟವೆಂದು ಅರ್ಥ. ರಯಗತೌ ಎಂದು ಧಾತು ಇರುವುದರಿಂದ ರಲಯೋರಭೇದಃ ಎಂಬ ನಿಯಮವಿರುವುದರಿಂದಲೂ ಲಯ ರಯ ಅಂದರೆ ಪ್ರಾಪ್ತಿ ಇರುವ ವೈಕುಂಠಾದಿಗಳನ್ನು ಹೊಂದುವರು.

'ಬಲಪಾರ್ಥಭೀಮವ್ಯಾಜಾಹ್ವಯೇನ' ಎಂಬುದಕ್ಕೆ ಈ ನಾಮಗಳು ವ್ಯಾಜಾಹ್ವಯ ಎಂದರೆ ಕಪಟನಾಮಗಳು ಎಂದು ಅರ್ಥ ತೋರುತ್ತದೆ. ಆದ್ದರಿಂದ ಸರಿಯಾದ ಅರ್ಥವನ್ನು ತಾತ್ಪರ್ಯದಿಂದ ಹೇಳುವರು-

**ತಾತ್ಪರ್ಯ-ರಾಮಭೀಮಾರ್ಜುನಾದೀನಿ ವಿಷ್ಣೋರ್ನಾಮಾನಿ ಸರ್ವಶಃ ।**
**ರಮಣಾಭಯವರ್ಣಾದ್ಯಾಃ ಶಬ್ದವೃತ್ತೇರ್ಹಿ ಹೇತವಃ ।**

**ಹರಿರ್ಹಿ ತತ್ರ ತತ್ರಸ್ಥೋ ರಮಣಾದೀನ್ ಕರೊತ್ಯಜಃ ।**
**ಅತಸ್ತಸ್ಯೈವ ನಾಮಾನಿ ವ್ಯಾಜಾದನ್ಯಗತಾನಿ ತು ।**
**ವ್ಯವಹಾರಪ್ರವೃತ್ತ್ಯರ್ಥಂ ದುಷ್ಟಾನಾಂ ಮೋಹನಾಯ ಚ ॥ -ಇತಿ ಸ್ಕಾಂದೇ**

ರಮಣಕರ್ತೃತ್ವ-ಭಯರಾಹಿತ್ಯ-ಶುಕ್ಲವರ್ಣ ಇದೇ ಮೊದಲಾದ (ಪ್ರಕೃಷ್ಟದ್ಯುತಿ-ಮೇಯತ್ವ ಪ್ರದ್ಯುಮ್ನ) ರಾಮಾದಿಶಬ್ದಗಳ ಪ್ರವೃತ್ತಿಗೆ ನಿಮಿತ್ತವಾಗಿವೆ. ಈ ನಿಮಿತ್ತಗಳು ಶ್ರೀಹರಿಯಲ್ಲಿಯೇ ಮುಖ್ಯವಾಗಿರುವುದರಿಂದ ಬಲರಾಮ-ಭೀಮ-ಅರ್ಜುನ ಮುಂತಾದ ಎಲ್ಲ ನಾಮಗಳು ಶ್ರೀಹರಿಯಲ್ಲಿಯೇ ಮುಖ್ಯವಾದವುಗಳು. ಉತ್ಪತ್ತಿರಹಿತನಾದ ಶ್ರೀಹರಿಯು ಆ ಬಲರಾಮಾದಿಗಳಲ್ಲಿ ವಿಶೇಷತಃ ಸನ್ನಿಹಿತನಾಗಿದ್ದು ಕ್ರಿಡಾದಿಗಳನ್ನು ಮಾಡುವನು.

ಆದ್ದರಿಂದ ಮುಖ್ಯವಾಗಿ ಶ್ರೀಹರಿಯನ್ನೇ ಹೇಳಿಕೊಡುವ ರಾಮಾದಿನಾಮಗಳು ವ್ಯವಹಾರ ಉಂಟಾಗಲು ಮತ್ತು ದುಷ್ಟರನ್ನು ಮೋಹಿಸುವುದಕ್ಕಾಗಿಯೂ ಬಲರಾಮಾದಿಗಳನ್ನು ಹೇಳಿಕೊಡುತ್ತವೆ ಎಂದು ತಿಳಿಯಬೇಕು. ಹೀಗೆ ಸ್ಕಂದಪುರಾಣವು ತಿಳಿಸುತ್ತದೆ.

ಅವ್ಯಕ್ತಾಧಿಕರಣನ್ಯಾಯದಿಂದ ಸ್ವಾಧೀನರಾದದ್ದರಿಂದ ಶರೀರಸ್ಥಾನೀಯರಾದ ಬಲರಾಮಾದಿಗಳಲ್ಲಿದ್ದು ತಾನೇ ರಮಣಾದಿಗಳನ್ನು ಮಾಡುವನು ಕಾರಣ ಅವನ ಮುಖ್ಯ ನಾಮಗಳನ್ನೇ, ವ್ಯಾಜಾತ್ ಶರೀರಸ್ಥಾನೀಯರೆಂಬ ನಿಮಿತ್ತದಿಂದ ಅವರ ನಾಗಮಳೆಂದು ಭಗವಂತನೇ ಮಾಡಿರುವನು. (ಬಲಭೀಮೇಷು ವ್ಯಾಜೇನ ಪ್ರವರ್ತಿತಾ ಆಹ್ವಯಾಃ ಯಸ್ಯ ಸಃ ಎಂದು ವಿಗ್ರಹ ಸೂಚಿತವಾಗುವುದು.

ವ್ಯಾಸಾವತಾರ ಮತ್ತು ಆ ಅವತಾರದ ಕಾರ್ಯಗಳನ್ನು ಹೇಳುವರು-

**ಕಾಲೇನ ಮೀಲಿತದೃಶಾಮವಮೃಶ್ಯ ನೃಣಾಂ**
**ಸ್ತೋಕಾಯುಷಾಂ ಸ್ವನಿಗಮೋ ಬತ ದೂರಪಾರಃ ।**
**ಆವಿರ್ಹಿತಸ್ತ್ವನುಯುಗಂ ಸ ಹಿ ಸತ್ಯವತ್ಯಾಂ**
**ವೇದದ್ರುಮಂ ವಿಟಪಶೋ ವಿಭಜಿಷ್ಯತಿ ಸ್ಮ ॥ ೩೬ ॥**

**ಕಾಲೇನ** ದ್ವಾಪರಯುಗದ ಮಹಿಮೆಯಿಂದ, **ಮೀಲಿತದೃಶಾಮ್** ತತ್ತ್ವಜ್ಞಾನವನ್ನು ಕಳೆದುಕೊಂಡ, **ಸ್ತೋಕಾಯುಷಾಮ್** ಅಲ್ಪಾಯುಷಿಗಳಾದ, **ನೃಣಾಮ್** ಜನರಿಗೆ, **ಸ್ವನಿಗಮಃ** ತನ್ನ ವಿಷಯಕವಾದ ವೇದರಾಶಿಯು, **ದೂರಪಾರಃ ಬತ** ದುರ್ಗಮವಾದ ಕೊನೆಯುಳ್ಳದ್ದು ಎಂದು, **ವಿಮೃಶ್ಯ** ತಿಳಿದು, **ಸಃ** ಶ್ರೀಹರಿಯು, **ಸತ್ಯವತ್ಯಾಮ್** ಸತ್ಯವತಿಯಲ್ಲಿ **ಅನುಯುಗಮ್** ಮೂರು-ಏಳು-ಹದಿನಾರು-ಇಪ್ಪತ್ತೈದು-ಇಪ್ಪಂತೆಂಟನೆಯ ಮಹಾಯುಗಾಂತರ್ಗತವಾದ ದ್ವಾಪರಯುಗಗಳಲ್ಲಿ **ಆವಿರ್ಹಿತಃ** ಅವತರಿಸಿದವನಾಗಿ, **ವೇದದ್ರುಮಮ್** ವೇದವೆಂಬ ಗಿಡವನ್ನು, **ವಿಟಪಶಃ** ಶಾಖೋಪಶಾಖೆಗಳಾಗಿ, **ವಿಭಜಿಷ್ಯತಿ** ವಿಭಾಗ ಮಾಡುವನು. ॥ ೩೬ ॥

ಇಲ್ಲಿ 'ಅನುಯುಗಮ್' ಎಂಬುದಕ್ಕೆ ಪ್ರತಿಯೊಂದು ಯುಗದಲ್ಲಿ ಎಂದು ಅರ್ಥ ತೋರುವುದು. ಆದ್ದರಿಂದ ಪ್ರಮಾಣದಿಂದ ವಾಖ್ಯಾನಿಸುವರು-

**ತಾತ್ಪರ್ಯ- ತೃತೀಯೇ ಸಪ್ತಮೇ ಚೈವ ಷೋಡಶೇ ಪಂಚವಿಂಶಕೇ ।**
**ಅಷ್ಟಾವಿಂಶೇ ಯುಗೇ ಕೃಷ್ಣಃ ಸತ್ಯವತ್ಯಾಮಜಾಯತ ।**
**ವ್ಯಾಸಾಚಾರ್ಯಸ್ತು ಪೂರ್ವೇಷು ಚರಮೇ ಸ್ವಯಮೇವ ತು ।**
**ವಿವ್ಯಾಸ ವೇದಾನ್ ಚಕ್ರೇ ಚ ಭಾರತಂ ವೇದಸಮ್ಮಿತಮ್ ॥ -ಇತಿ ಚ**

ವೈವಸ್ವತ ಮನ್ವಂತರದ ೩,೭,೧೬,೨೫,೨೮ ನೆಯ ಮಹಾಯಗಗಳಲ್ಲಿ ಸೇರಿದ ದ್ವಾಪರಯುಗಗಳಲ್ಲಿ ಶ್ರೀಹರಿಯು ಸತ್ಯವತೀದೇವಿಯಲ್ಲಿ ವ್ಯಾಸಾಚಾರ್ಯನಾಗಿ ಅಂದರೆ ವೇದವಿಸ್ತಾರ ಮಾಡುವವರಿಗೆ ಗುರುಗಳಾಗಿಯೂ ೨೮ ನೆಯ ಮಹಾಯುಗದಲ್ಲಿ ಸೇರಿದ ದ್ವಾಪರಯುಗದಲ್ಲಿ ಸತ್ಯವತಿದೇವಿಯಲ್ಲಿ ವೇದವ್ಯಾಸನಾಗಿ ಅವತರಿಸಿದನು. ಮೊದಲಿನ ನಾಲ್ಕು ಯುಗಗಳಲ್ಲಿ ಕೇವಲ ವೇದಗಳನ್ನು ವಿಸ್ತರಿಸುವವರಿಗೆ ತಾನು ಆಚಾರ್ಯನಾದನು. ಕೊನೆಯ ಯುಗದಲ್ಲಿ ತಾನೇ ವೇದಗಳನ್ನು ಹಿಂದಿನವರಿಗಿಂತ ವಿಶೇಷವಾಗಿ ವಿಸ್ತರಿಸಿದನು. ಮತ್ತು ವೇದಾರ್ಥನಿರ್ಣಾಯಕವಾದ ವೇದಸಂವಾದಿಯಾದ ಭಾರತವನ್ನು ರಚಿಸಿದನು. ಎಂದೂ ಸ್ಕಂದಪುರಾಣದಲ್ಲಿ ಇದೆ. ॥೩೬॥

ದುರ್ಜನ ಮೋಹಕ ಶಾಸ್ತ್ರ ಮಾಡುವ ವಿಷಯದಲ್ಲಿ ವ್ಯಾಸರಿಗೆ ಬುದ್ಧ ಸಾಮ್ಯ ಉಂಟು ಎಂದು ತಿಳಿಸಲು ಮಧ್ಯದಲ್ಲಿ ಬುದ್ಧಾವತಾರಕ್ಕಿಂತಲೂ ಮೊದಲು ವ್ಯಾಸಾವತಾರವನ್ನು ಹೇಳಿದ್ದಾರೆ ಎಂದು ತಿಳಿಯಬೇಕು. (ಯಾದವಾರ್ಯರು)

ಮುಂದಿನ ಮನ್ವಂತರಗಳಲ್ಲಿಯೂ ವ್ಯಾಸಾವಾತಾರವಿದೆ. ಆದ್ದರಿಂದ ವಿರೋಧವಿಲ್ಲ ಎಂಬ ಅಭಿಪ್ರಾಯದಿಂದ ಕೃಷ್ಣಾವತಾರಕ್ಕಿಂತ ಮೊದಲೇ ಆದ ವ್ಯಾಸಾವತಾರವನ್ನು ಕೃಷ್ಣಾವತಾರದ ನಂತರ ಹೇಳಿದ್ದಾರೆ. (ವಿಜಯಧ್ವಜರು) ।। ೩೬ ।।

*ಬುದ್ಧಾವತಾರ ಮತ್ತು ಆದರ ಕಾರ್ಯವನ್ನು ಹೇಳುವರು-*

**ದೇವದ್ವಿಷಾಂ ನಿಗಮವರ್ತ್ಮನಿ ವಿಷ್ಠಿತಾನಾಂ**
**ಪೂರ್ಭಿರ್ಮಯೇನ ವಿಹಿತಾಭಿರದೃಶ್ಯಮೂರ್ತಿಃ ।**
**ಲೋಕಾನ್ ಘ್ನತಾಂ ಮತಿವಿಮೋಹಮತಿಪ್ರಲೋಭಂ**
**ವೇಷಂ ವಿಧಾಯ ಯದಭಾಷತ ಔಪಧರ್ಮ್ಯಮ್ ।। ೩೭ ।।**

**ಅದೃಶ್ಯಮೂರ್ತಿಃ** ಅಜ್ಞೇಯಸ್ವರೂಪನಾದ ಶ್ರೀಹರಿಯು, **ಮಯೇನ ವಿಹಿತಾಭಿಃ** ಮಯನಿಂದ ನಿರ್ಮಿತವಾದ, **ಪೂರ್ಭಿಃ** ಊರುಗಳಿಂದ, **ಲೋಕಾನ್ ಘ್ನತಾಂ** ಜನರನ್ನು ಸಂಹರಿಸುವ ರುದ್ರದೇವರಿಂದ ಹತರಾದ, **ದೇವದ್ವಿಷಾಂ** ಅಸುರರ, ಮತ್ತೆ ಬ್ರಾಹ್ಮಣರಾಗಿ ಜನಿಸಿ, **ನಿಗಮವರ್ತ್ಮನಿ** ವೇದವಿಹಿತವಾದ ಕರ್ಮಗಳನ್ನು ಅನುಷ್ಠಾನಮಾಡುವಲ್ಲಿ **ವಿಷ್ಠಿತಾನಾಂ** ವಿಶೇಷವಾಗಿ ಸ್ಥಿರರಾದವರ, **ಮತಿವಿಮೋಹಂ** ಬುದ್ಧಿಯ ಭ್ರಂಶ ಮಾಡುವ, **ಅತಿಪ್ರಲೋಭಂ** ಅತ್ಯಂತ ವಂಚಕವಾದ, **ವೇಷಂ ವಿಧಾಯ** ಬಾಲಕವೇಷವನ್ನು ಧರಿಸಿ **ಯತ್ ಔಪಧರ್ಮ್ಯಂ** ಯಾವುದು ಪಾಷಂಡಧರ್ಮ-ಪ್ರತಿಪಾದಕವಾಗಿದೆಯೋ ಅಂತಹ ಶಾಸ್ತ್ರವನ್ನು **ತತ್ ಭಾಷತ** ಧರ್ಮಾಭಾಸಪ್ರತಿಪಾದಕವಾದ ಸೂತ್ರಭಾಷ್ಯದಿಗಳನ್ನು ಮಾಡಿದನೆಂದರ್ಥ. ।। ೩೭ ।।

*ಕಲ್ಕಿಯ ಆವತಾರ, ಮತ್ತು ಕಾರ್ಯಗಳನ್ನು ಹೇಳುವರು-*

**ಯರ್ಹ್ಯಾಲಯೇಷ್ವಪಿ ಸತಾಂ ನ ಕಥಾ ಹರೇಃ ಸ್ಯುಃ**
**ಪಾಷಂಡಿನೋ ದ್ವಿಜಜನಾಃ ವೃಷಲಾ ನೃದೇವಾಃ ।**
**ಸ್ವಾಹಾಸ್ವಧಾವಷಡಿತಿ ಸ್ಮ ಗಿರೋ ನ ಯತ್ರ**
**ಶಾಸ್ತಾ ಭವಿಷ್ಯತಿ ಕಲೇರ್ಭಗವಾನ್ಯುಗಾಂತೇ ।। ೩೮ ।।**

**ಯರ್ಹಿ** ಯಾವಾಗ, **ಸತಾಂ ಆಲಯೇಷ್ವಪಿ** ಸಜ್ಜನರ ಮನೆಗಳಲ್ಲಿಯೂ, **ಹರೇಃ ಕಥಾಃ ನ ಸ್ಯುಃ** ಶ್ರೀಹರಿಯ ಕಥೆಗಳು ನಡೆಯಲಾರವೋ, **ದ್ವಿಜಜನಾಃ** ಬ್ರಾಹ್ಮಣ-ಕ್ಷತ್ರಿಯ-ವೈಶ್ಯರು **ಪಾಷಂಡಿನಃ** ಪಾಷಂಡಧರ್ಮವನ್ನು ಅನುಸರಿಸುವರೋ, **ವೃಷಲಾಃ** ಶೂದ್ರರು, **ನೃದೇವಾಃ** ರಾಜರಾಗುವರೋ, **ಯತ್ರ** ಯಾವ ಕಾಲದಲ್ಲಿ **ಸ್ವಾಹಾ** ದೇವತೆಗಳಿಗೆ ಆಹುತಿ, **ಸ್ವಧಾ** ಪಿತೃಗಳಿಗೆ ಶ್ರಾದ್ಧಾದಿಗಳು, **ವಷಟ್** ಹೋಮದಲ್ಲಿ ಆಹುತಿ ಹಾಕುವ, **ಗಿರಃ ನ ಸ್ಮ** ಮಾತುಗಳು ಇಲ್ಲದಂತಾಗುವವೋ, **ತಸ್ಮಿನ್ ಯುಗಾಂತೇ** ಅಂತಹ ಕಲಿಯುಗದ ಕೊನೆಗೆ, **ಕಲೇಃ ಶಾಸ್ತಾ ಭವಿಷ್ಯತಿ** ಕಲಿಯ ನಿಗ್ರಹ ಮಾಡುವವನಾಗುವನು. 'ಕಲೇಃ ಕಾತ್ಕಾರತಃ ಏವ ಕಲ್ಕಿಃ' ಎಂದು ಹೇಳಿದ್ದರಿಂದ ಕಲ್ಕಿಶಬ್ದವಾಚ್ಯನಾದ ಭಗವಂತ ಅವತರಿಸುವನೆಂದರ್ಥ. ।। ೩೮ ।।

ಸೃಷ್ಟ್ಯಾದಿಕಾರ್ಯಭೇದದಿಂದ ಶ್ರೀಹರಿಯ ವಿಭೂತಿರೂಪಗಳ ಸ್ಥಾನಗಳನ್ನು ಹೇಳುವರು-

**ಸರ್ಗೇ ತು ಯೋಽಹಮೃಷಯೋ ನವ ಯೇ ಪ್ರಜೇಶಾಃ**
**ಸ್ಥಾನೇಽಥ ಧರ್ಮಮಖಮನ್ವಮರಾವನೀಶಾಃ ।**
**ಅಂತೇ ತ್ವಧರ್ಮಹರಮನ್ಯುವಶಾಸುರಾದ್ಯಾಃ**
**ಮಾಯಾವಿಭೂತಯ ಇಮಾಃ ಪುರುಶಕ್ತಿಭಾಜಃ ।। ೩೯ ।।**

**ಸರ್ಗೇ** ಸೃಷ್ಟಿಮಾಡುವುದಕ್ಕಾಗಿ, **ಯಃ ಅಹಮ್** ಯಾವನು ಜಗದುತ್ಪಾದಕನೆಂದು ಪ್ರಸಿದ್ಧನಾದವನೋ, **ಯೇ ಚ ಋಷಯಃ** ಮರೀಚಿಮುಂತಾದ ಋಷಿಗಳು, **ಯೇ ಚ ನವ ಪ್ರಜೇಶಾಃ** ಕರ್ದಮ ಮುಂತಾದ ಒಂಭತ್ತು ಪ್ರಜಾಪತಿಗಳು ಇರುವರೋ, **ಅಂತೇ** ಸಂಹಾರಮಾಡುವುದಕ್ಕಾಗಿ, **ಅಧರ್ಮಹರಮನ್ಯುವಶಾಸುರಾದ್ಯಾಃ** ಅಧರ್ಮ-ರುದ್ರ-ಕ್ರೋಧವಶರೆಂಬ ದೈತ್ಯರು, **ಪುರುಶಕ್ತಿಭಾಜಃ** ಪೂರ್ಣಶಕ್ತಿಯುಳ್ಳವರು. **ಸ್ಥಾನೇ ಅಥ** ಸೃಷ್ಟ್ಯನಂತರ ಸ್ಥಿತಿಗಾಗಿ, **ಧರ್ಮಮಖಮನ್ವಮರಾವನೀಶಾಃ** ಧರ್ಮ-ಯಜ್ಞ-ಮನುಗಳು-ದೇವತೆಗಳು ಮತ್ತು ರಾಜರುಗಳು, **ಮಾಯಾವಿಭೂತಯಃ** ವಿಭೂತಿಸ್ಥಾನಗಳು.

ಭಗವಂತನು ಸೃಷ್ಟ್ಯಾದಿಗಳಲ್ಲಿ ಬ್ರಹ್ಮಾದಿಗಳನ್ನು ನಿಮಿತ್ತ ಮಾಡುತ್ತಾನೆ. ಅಂದಮಾತ್ರಕ್ಕೆ ದೇವರಿಗೆ ಶಕ್ತಿ ಇಲ್ಲವೆಂದಲ್ಲ. ಕಿಂತು ಆಯಾ ದೇವತೆಗಳಿಗೆ ಕೀರ್ತಿಯನ್ನು ಕೊಡುವುದಕ್ಕಾಗಿಯೇ ಹೀಗೆ ಮಾಡುತ್ತಾನೆ. ಈ ವಿಷಯವನ್ನು 'ಪುರುಶಕ್ತಿಭಾಜಃ' ಎಂಬ ವಿಶೇಷಣವು ತಿಳಿಸುತ್ತದೆ.

ಇಲ್ಲಿ 'ಮಾಯಾವಿಭೂತಯಃ' ಎಂದರೆ ಅವಿದ್ಯಾಕಲ್ಪಿತವಿಭೂತಿಗಳೆಂದು ಅರ್ಥ ತೋರುತ್ತದೆ. ಇದನ್ನು ನಿವಾರಿಸಲು ಪ್ರಮಾಣದಿಂದ ಎರಡು ರೀತಿಯಲ್ಲಿ ವ್ಯಾಖ್ಯಾನಿಸುವರು-

**ತಾತ್ಪರ್ಯ- ಹರೀಚ್ಛಯಾ ವಿಭೂತಿರ್ಯಾ ಬ್ರಹ್ಮಾದೀನಾಂ ಸದಾ ಭವೇತ್ ।**
**ಇಚ್ಛಯಾ ವಾ ಬಹುವಿಧಸ್ತೇಷು ವಿಷ್ಣುಃ ಸ್ವಯಂ ಸ್ಥಿತಃ ।**
**ಅತೋ ಮಾಯಾವಿಭೂತಿತ್ವಂ ತೇಷಾಂ ಮತ್ಸ್ಯಾದಿಕಾಃ ಸ್ವಯಮ್ ॥ -ಇತ್ಯಧ್ಯಾತ್ಮೇ**

ಬ್ರಹ್ಮಾದಿಗಳಿಗೆ ಯಾವ ಐಶ್ವರ್ಯವಿದೆಯೋ ಅದು ಶ್ರೀಹರಿಯ ಇಚ್ಛೆಯಿಂದಲೇ ಯಾವಾಗಲೂ ಉಂಟಾಗುವುದು. ಅಥವಾ ತನ್ನ ಇಚ್ಛೆಯಿಂದಲೇ ಬಹುರೂಪ ಉಳ್ಳವನಾಗಿ ತಾನೇ ಅವರಲ್ಲಿರುವನು. ಆದ ಕಾರಣ ಬ್ರಹ್ಮಾದಿಗಳನ್ನು ಮಾಯಾ-ವಿಭೂತಿಗಳೆನ್ನುತ್ತಾರೆ. ಮತ್ಸ್ಯ-ಕೂರ್ಮಾದಿಗಳು ಸಾಕ್ಷಾತ್ ವಿಷ್ಣುವಿನ ಸ್ವರೂಪಾವತಾರಗಳೇ ಎಂದು ಅಧ್ಯಾತ್ಮದಲ್ಲಿದೆ.

೧. ಮಾಯಯಾ ಹರೀಚ್ಛಯಾ ವಿಭೂತಿಃ ಐಶ್ವರ್ಯಂ ಯೇಷಾಂ ತೇ ಮಾಯಾವಿಭೂತಯಃ ।

೨. ಮಾಯಯಾ ಹರೀಚ್ಛಯಾ ಹರೇಃ ವಿವಿಧಾ ಭೂತಿಃ ಭವನಂ ಯೇಷು ತೇ ಮಾಯಾವಿಭೂತಯಃ ।

೩. ಮಾಯಯಾ ಸ್ವೇಚ್ಛಯಾ ವಿಭೂತಯಃ ವಿವಿಧಭವನರೂಪಾಃ

ಹೀಗೆ ವಿಗ್ರಹಗಳು ಸೂಚಿತವಾಗಿವೆ. ॥ ೩೯ ॥

*ಇದನ್ನು ನಾನು ಸಂಕ್ಷೇಪವಾಗಿ ಹೇಳಿದ್ದೇನೆ ವಿಸ್ತಾರವಾಗಿ ಹೇಳಲು ಯಾರೂ ಸಮರ್ಥರಲ್ಲ ಎಂಬ ಅಭಿಪ್ರಾಯದಿಂದ ಈ ವಿಷಯದಲ್ಲಿ 'ವಿಷ್ಣೋರ್ನು ಕಂ' ಎಂಬ ಮಂತ್ರವೇ ಪ್ರಮಾಣ ಎಂದು ಅರ್ಥತಃ ಅನುವಾದ ಮಾಡುವರು.*

**ವಿಷ್ಣೋರ್ನು ವೀರ್ಯಗಣನಾಂ ಕತಮೋಽರ್ಹತೀಹ**
**ಯಃ ಪಾರ್ಥಿವಾನ್ಯಪಿ ಕವಿರ್ವಿಮಮೇ ರಜಾಂಸಿ ।**
**ಚಸ್ಕಂಭ ಯಃ ಸ್ವರಭಸಾ ಸ್ಖಲಿತಂ ತ್ರಿಪೃಷ್ಠಂ**
**ಯಸ್ಮಾತ್ ನಿಶಾಮ್ಯ ಸದನಾದುರು ಕಂಪಮಾನಮ್ ॥ ೪೦ ॥**

**ಯಃ** ಯಾವನು, **ಯತ್** ಯಾವಕಾರಣ, **ಸ್ವರಭಸಾ** ತನ್ನ ಪಾದಗಳ ವೇಗದಿಂದ, **ಸ್ಖಲಿತಂ** ಚಲಿಸಲ್ಪಟ್ಟ **ತ್ರಿಪೃಷ್ಠಂ** ಸತ್ಯಲೋಕವನ್ನು, **ಸದನಾತ್** ಲೋಕವೆಂಬ ಮನೆಯ

ಚಲನ ನಿಮಿತ್ತ, **ಉರುಕಂಪಮಾನಂ** ಬಹಳವಾಗಿ ನಡಗುವ, **ಮಾಂ** ನನ್ನನ್ನು **ನಿಶಾಮ್ಯ** ನೋಡಿ, **ಚಸ್ಕಂಭ** ಸ್ತಂಭಿಸಿದನೋ (ಬೀಳದಂತೆ ತಡೆದನೋ) ಅಂತಹ, **ವಿಷ್ಣೋಃ** ಶ್ರೀಹರಿಯ, **ವೀರ್ಯಗಣನಾಂ** ಪರಾಕ್ರಮಗಳ ಎಣಿಕೆಯನ್ನು, **ಯಃ ಕವಿಃ ಅಪಿ** ಯಾವ ಜ್ಞಾನಿಯೂ, **ಇಹ** ಭೂಮಿಯಲ್ಲಿ, **ಪಾರ್ಥಿವಾನಿ ರಜಾಂಸಿ** ಪೃಥಿವಿಯ ಕಣಗಳನ್ನು **ವಿಮಮೇ** ಎಣಿಸುವನೋ, **ಸಃ ಅಪಿ** ಅಂಥವನು ಸಹ, **ಕತಮೋ ನು** ಜ್ಞಾನಿಗಳ ಮಧ್ಯದಲ್ಲಿ ಯಾವನು ತಾನೇ, **ಅರ್ಹತಿ** ಮಾಡಲು ಸಮರ್ಥನಾಗುವನು ಯಾರೂ ಇಲ್ಲ ಎಂದು ಭಾವ.

> ವಿಷ್ಣೋರ್ನು ಕಂ ವೀರ್ಯಾಣಿ ಪ್ರವೋಚಂ ಯಃ ಪಾರ್ಥಿವಾನಿ ವಿಮಮೇ ರಜಾಂಸಿ ।
> ಯೋ ಅಸ್ಕಭಾಯದುತ್ತರಂ ಸಧಸ್ಥಂ ವಿಚಕ್ರಮಾಣಸ್ತ್ರೇಧೋರುಗಾಯಃ ॥

**ಯಃ** ಯಾವ ವಿಷ್ಣುವು, **ತ್ರೇಧಾ ವಿಚಕ್ರಮಾಣಃ** ಮೂರು ಹೆಜ್ಜೆಗ್ಗಳನ್ನಿಟ್ಟು, **ಉತ್ತರಂ** ಮೇಲಿರುವ ಸತ್ಯಲೋಕವನ್ನು, **ಸಧಸ್ಥಂ** ಅಲ್ಲಿರುವ ಬ್ರಹ್ಮಸಹಿತವಾಗಿ, **ಅಸ್ಕಭಾಯತ್** ಸ್ತಂಭಿಸಿದನೋ, **ವಿಷ್ಣೋಃ ವೀರ್ಯಾಣಿ** ಅಂತಹ ಹರಿಯ ಪರಾಕ್ರಮಗಳನ್ನು, **ನು** ಸಂಪೂರ್ಣವಾಗಿ, **ಕಂ** ಕಃ ಯಾವನು, **ಪ್ರವೋಚಂ** ಹೇಳುವನು? ಯಾರೂ ಹೇಳಲಾರನು. **ಯಃ** ಯಾವನು, **ಪಾರ್ಥಿವಾನಿ ರಜಾಂಸಿ ವಿಮಮೇ** ಪೃಥಿವಿಯ ಕಣಗಳನ್ನು ಏಣಿಸುವನೋ, ಅವನು ಕೂಡಾ, **ನ ಪ್ರವೋಚಂ** ಹೇಳಲಾರ. ॥ ೪೦ ॥

*ಕೈಮುತ್ಯದಿಂದ ಅನಂತತ್ವವನ್ನು ಹೇಳುವರು-*

**ನಾಽಂತಂ ವಿದಾಮ್ಯಹಮಮೀ ಮುನಯಃ ಪ್ರಜೇಶಾಃ**
**ಮಾಯಾಬಲಸ್ಯ ಪುರುಷಸ್ಯ ಕುತೋ ಪರೇ ಯೇ ।**
**ಗಾಯನ್ ಗುಣಾನ್ ದಶಶತಾನನ ಆದಿದೇವಃ**
**ಶೇಷೋಽಧುನಾಽಪಿ ಸಮವಸ್ಯತಿ ನಾಽಸ್ಯ ಪಾರಮ್ ॥ ೪೧ ॥**

**ಪುರುಷಸ್ಯ** ಶ್ರೀಹರಿಯ, **ಮಾಯಾಬಲಸ್ಯ** ಇಚ್ಛಾಸಾಮರ್ಥ್ಯದ, **ಅಂತಂ** ಕೊನೆಯನ್ನು **ಅಹಮ್** ನಾನು, **ನ ವಿದಾಮಿ** ತಿಳಿಯಲಾರೆನು, **ಅಮೀ ಮುನಯಃ** ಮರೀಚ್ಯಾದಿ ಋಷಿಗಳು, **ಪ್ರಜೇಶಾಃ** ಕರ್ದಮಾದಿ ಪ್ರಜಾಪತಿಗಳು, **ನ ಅಂತಂ ವಿದುಃ** ಕೊನೆ ತಿಳಿಯಲಾರರು, **ದಶಶತಾನನಃ** ಸಾವಿರ ಮುಖ ಉಳ್ಳ, **ಆದಿದೇವಃ ಶೇಷಃ** ಆದಿದೇವನಾದ ಶೇಷನೂ ಸಹ, **ಅಸ್ಯ** ಶ್ರೀಹರಿಯ, **ಗುಣಾನ್** ಗುಣಗಳನ್ನು, **ಗಣಯನ್** ಎಣಿಸುತ್ತ, **ಅಧುನಾಽಪಿ** ಈಗಲೂ, **ಪಾರಂ ನ ಸಮವಸ್ಯತಿ** ನಿಶ್ಚಯಿಸಲಾರನು, **ಪರೇ**

**ಯೇ ಕುತಃ** ಬೇರೆಯವರು ತಿಳಿಯಲಾರರು ಎಂದು ಹೇಳಬೇಕಿಲ್ಲ. ಸಾವಿರ ಮುಖವಿರುವುದರಿಂದ ನಾಲ್ಕು ಮುಖದ ಬ್ರಹ್ಮನಿಗಿಂತಲೂ ಶೇಷನಿಗೆ ಹೆಚ್ಚು ಜ್ಞಾನವಿರುವುದರಿಂದ ಹರಿಯ ಪಾರ ತಿಳಿಯಬಹುದೆಂಬ ಅಜ್ಞರ ಅಭಿಪ್ರಾಯದಿಂದ ಈ ಮಾತನ್ನು ಹೇಳಿರುವರು. ಇವನು ಸಾಮಾನ್ಯರಾದ ನಾಗಗಳಲ್ಲಿ ಒಬ್ಬನಲ್ಲ ಎಂದು ತಿಳಿಸಲು ಆದಿದೇವ ಎಂದಿದ್ದಾರೆ.

ಈ ಶ್ಲೋಕದಲ್ಲಿ 'ಅಮೀ ಮುನಯಃ' ಮುಂತಾದ ಕಡೆಗೆ ಕ್ರಿಯಾಪದವಿಲ್ಲ. ಕ್ರಿಯಾಪದ ಅಧ್ಯಾಹಾರ ಮಾಡಿ ಅನ್ವಯ ತಿಳಿಸುವರು-

**ತಾತ್ಪರ್ಯ- ವಿದುರ್ನಾಂತಮ್ । ಅನಂತತ್ವಾತ್ ।**

ಶ್ರೀಹರಿಯ ಗುಣಗಳು ಅನಂತವಾದುದರಿಂದ ಅವುಗಳ ಕೊನೆಯನ್ನು ಯಾರೂ ತಿಳಿಯಲಾರರು. ।। ೪೧ ।।

ಯಾರೂ ತಿಳಿಯುವುದಿಲ್ಲವೆಂದಾದರೆ ಅಧಿಕಾರಿಗಳಿಗೆ ಮುಕ್ತಿಯಾಗುವುದು ಹೇಗೆ ಎಂದರೆ ಅವನ ಪ್ರಸಾದದಿಂದಲೇ ಎಂದು ಹೇಳುವರು-

**ಯೇಷಾಂ ಸ ಏವ ಭಗವಾನ್ ದಯಯೇದನಂತಃ**
**ಸರ್ವಾತ್ಮನಾಽಶ್ರಿತಪದೋ ಯದಿ ನಿರ್ವ್ಯಲೀಕಮ್ ।**
**ತೇ ವೈ ವಿದಂತ್ಯತಿರಂತಿ ಚ ದೇವಮಾಯಾಂ**
**ನೈಷಾಂ ಮಮಾಽಹಮಿತಿ ಧೀಃ ಶ್ವಸೃಗಾಲಭಕ್ಷ್ಯೇ ।। ೪೨ ।।**

**ಶ್ವಸೃಗಾಲಭಕ್ಷ್ಯೇ** ನಾಯಿ-ನರಿಗಳು ತಿನ್ನಲು ಯೋಗ್ಯವಾದ ದೇಹದಲ್ಲಿ, **ಯೇಷಾಂ** ಯಾರಿಗೆ, **ಮಮ ಅಹಂ ಇತಿ ಧೀಃ ನ ಅಸ್ತಿ** ನನ್ನದು ನಾನು ಎಂಬ ಬುದ್ಧಿ ಇಲ್ಲವೋ **ತೇ** ಅವರು, **ಯದಿ** ಯಾವಾಗ, **ನಿರ್ವ್ಯಲೀಕಂ** ನಿಷ್ಕಪಟವಾಗಿ, **ಸರ್ವಾತ್ಮನಾ** ಎಲ್ಲ ರೀತಿಯಿಂದ ಮನೋವಾಕ್ಕಾಯಕರ್ಮಗಳಿಂದ, **ಆಶ್ರಿತಪದಃ** ಹರಿಚರಣವನ್ನಾಶ್ರಯಿಸುವನೋ, **ತರ್ಹಿ** ಆವಾಗ, **ಭಗವಾನ್ ಅನಂತಃ** ಐಶ್ವರ್ಯಶಾಲಿಯಾದ ಶ್ರೀಹರಿಯು, **ಯೇಷಾಂ** ಯಾರ ಮೇಲೆ, **ದಯಯೇತ್** ದಯ ಮಾಡುವನೋ, **ತೇ ವೈ** ಅವರೇ, **ದೇವಮಾಯಾಂ ವಿದಂತಿ** ಕ್ರಿಡಾದಿಗುಣವಿಶಿಷ್ಟನಾದ ಹರಿಯ ಮಾಹಾತ್ಮ್ಯವನ್ನು ತಿಳಿಯುತ್ತಾರೆ, **ಸಂಸಾರಂ ಅತಿತರಂತಿ ಚ** ಸಂಸಾರವನ್ನು ಕೂಡ ದಾಟುತ್ತಾರೆ. ಅಘಟಿತಘಟಕಶಕ್ತಿಯಿಂದ ಅವ್ಯಕ್ತಸ್ವಭಾವನಾದರೂ ವ್ಯಕ್ತನಾಗುವನು ಎಂದು ಅನಂತ ಶಬ್ದದಿಂದ ಸೂಚಿತವಾಗುತ್ತದೆ. ಇಲ್ಲಿ ಚ ಶಬ್ದದಿಂದ ಅತಿತರಂತಿ ಎಂಬಲ್ಲಿಯೂ

ದೇವಮಾಯಾಂ ಎಂಬುದೇ ಕರ್ಮವೆಂದು ತೋರುವುದು. ಕಾರಣ ಬೇರೆ ಕರ್ಮವನ್ನು ಅಧ್ಯಾಹಾರಮಾಡಿ ಅನ್ವಯ ತಿಳಿಸುವರು-

**ತಾತ್ಪರ್ಯ- ದೇವಮಾಯಾಂ ವಿದಂತಿ । ಸಂಸಾರಂ ಅತಿತರಂತಿ ಚ ।**

ಪರಮಾತ್ಮನ ಮಹಿಮೆಯನ್ನು ತಿಳಿಯುತ್ತಾರೆ. ಸಂಸಾರವನ್ನು ದಾಟುತ್ತಾರೆ. ॥೪೨॥

*ಶ್ರೀಹರಿಯ ಪ್ರಸಾದದಿಂದ ಅವನ ಮಾಹಾತ್ಮ್ಯ ತಿಳಿದವರಾರೆಂದು ಹೇಳುವರು-*

**ವೇದಾಽಹಮಂಗ ಪರಮಸ್ಯ ಹಿ ಯೋಗ್ಯಮಾಯಾಂ**
**ಯೂಯಂ ಭವಶ್ಚ ಭಗವಾನಥ ದೈತ್ಯವರ್ಯಃ ।**
**ಪತ್ನೀ ಮನೋಃ ಸ ಚ ಮನುಃ ತದಪತ್ಯಭೂತಾಃ**
**ಪ್ರಾಚೀನಬರ್ಹಿ ಋಭುರಂಗ ಉತ ಧ್ರುವಶ್ಚ ॥ ೪೩ ॥**

**ಹೇ ಅಂಗ** ನಾರದನೇ, **ಪರಮಸ್ಯ** ಶ್ರೀಹರಿಯ, **ಯೋಗಮಾಯಾಂ** ಸ್ವರೂಪಸಾಮರ್ಥ್ಯವನ್ನು, **ಅಹಂ** ನಾನು, **ವೇದ** ತಿಳಿದಿರುವೆನು, **ಯೂಯಂ** ನೀವೆಲ್ಲ (ನಾರದ-ಸನಕಾದಿಗಳು) **ವೇತ್ಥ** ತಿಳಿದಿರುವಿರಿ, **ಭಗವಾನ್ ಭವಶ್ಚ** ಪೂಜ್ಯರಾದ ರುದ್ರದೇವರು, **ಅಥ** ಮತ್ತು, **ದೈತ್ಯವರ್ಯಃ** ಪ್ರಹ್ಲಾದನು, **ಮನೋಃ ಪತ್ನೀ** ಸ್ವಾಯಂಭುವ ಮನುವಿನ ಹೆಂಡತಿಯಾದ ಶತರೂಪಾದೇವಿಯು, **ಸ ಚ ಮನುಃ** ಆ ಸ್ವಾಯಂಭುವ ಮನುವು, **ತದಪತ್ಯಭೂತಾಃ** ಅವನ ಮಕ್ಕಳು-ಮೊಮ್ಮಕ್ಕಳು, **ಪ್ರಾಚಿನಬರ್ಹಿಃ** ಪ್ರಾಚೀನಬರ್ಹಿಯು, **ಋಭುಃ** ಋಭುವು, **ಅಂಗಃ** ವೇನನ ತಂದೆಯಾದ ಅಂಗನು, **ಉತ** ಮತ್ತು, **ಧ್ರುವಃ** ಧ್ರುವರಾಜನು, ಇವರೆಲ್ಲ ಶ್ರೀಹರಿಯನ್ನು ಅವನ ಪ್ರಸಾದದಿಂದ ತಿಳಿದಿದ್ದಾರೆ.

(ದುಷ್ಟಜನ ಮೋಹನಕ್ಕಾಗಿ ಶ್ರೀಹರಿಯ ಸ್ವರೂಪಾಂಶರಾದ ದತ್ತ ಮತ್ತು ಉಪ್ರೇಂದ್ರರನ್ನು ಜ್ಞಾನಿಗಳಲ್ಲಿ ಗಣನೆ ಮಾಡಿದ್ದಾರೆ. ಅಥವಾ ಉಪ ಸಮೀಪದಲ್ಲಿ ಇಂದ್ರಃ ವಿಷ್ಣುವು ಯಾವನಿಗಿರುವನೋ ಅವನು ಉಪೇಂದ್ರ ಎಂದರೆ ಬ್ರಹ್ಮ. ಅವನಿಂದ ದತ್ತರಾದವರು ಶುಕಾಚಾರ್ಯರು. ಉಪೇಂದ್ರದತ್ತ ಎಂಬುದು ಸಮಸ್ತ ಪದ. ಶುಕಾಚಾರ್ಯರಿಗೆ ಬ್ರಹ್ಮರಾತ ಎಂಬ ಹೆಸರು ಇದೆ.)

**ಇಕ್ಷ್ವಾಕುರೈಲಮುಚುಕುಂದವಿದೇಹಗಾಧಿ-**
**ರಘ್ವಂಬರೀಷಸಗರಾ ಗಯನಾಹುಷಾದ್ಯಾಃ ।**

**ಮಾಂಧಾತ್ರಲರ್ಕಶತಧನ್ವನರಂತಿದೇವ-**
**ದೇವವ್ರತಾ ಬಲಿರಮೂರ್ತರಯೋ ದಿಲೀಪಃ ॥ ೪೪ ॥**

**ಇಕ್ಷ್ವಾಕುಃ** ಇಕ್ಷ್ವಾಕು, ಐಲ ಇಲಾಪುತ್ರನಾದ ಪುರೂರವರಾಜನು, **ಮುಚುಕುಂದ** ಮುಚುಕುಂದನು, **ವಿದೇಹ** ಜನಕರಾಜನು, **ಗಾಧಿ** ಗಾಧಿರಾಜ **ರಘು** ರಘುರಾಜ **ಅಂಬರೀಷ** ಅಂಬರೀಷನು, **ಸಗರ** ಸಗರನು, **ಗಯ** ಗಯನು, **ನಾಹುಷಾದ್ಯಾಃ** ನಹುಷನ ಮಗನಾದ ಯಯಾತಿಯೇ ಮುಂತಾದವರು, **ಮಾಂಧಾತ್ರಲರ್ಕಶತಧನ್ವ-ನರಂತಿದೇವದೇವವ್ರತಾಃ** ಮಾಂಧಾತಾ-ಅಲರ್ಕ-ಶತಧನ್ವ-ರಂತಿದೇವ ಇವರಿಂದ ಸಹಿತನಾದ ದೇವವ್ರತನು (ಭೀಷ್ಮಾಚಾರ್ಯ) **ಬಲಿಃ** ಬಲಿಚಕ್ರವರ್ತಿಯು **ಅಮೂರ್ತರಯಃ** ದಿಲೀಪರಾಜನು, ॥ ೪೪ ॥

**ಸೌಭರ್ಯುದಂಕಶಿಬಿದೇವಲಪಿಪ್ಪಲಾದಾಃ**
**ಸಾರಸ್ವತೋದ್ಧವಪರಾಶರಭೂರಿಷೇಣಾಃ ।**
**ಯೇಽನ್ಯೇ ವಿಭೀಷಣಹನೂಮದುಪೇಂದ್ರ**
**ದತ್ತಪಾರ್ಥಾರ್ಷ್ಟಿಷೇಣ ವಿದುರಶ್ರುತದೇವಮುಖ್ಯಾಃ ॥ ೪೫ ॥**

ಸೌಭರಿಋಷಿ ಉದಂಕ ಋಷಿ , ಶಿಬಿರಾಜ, ದೇವಲ ಋಷಿ, ಪಿಪ್ಪಲಾದ ಸಾರಸ್ವತ, ಉದ್ಧವ, ಪರಾಶರ ಋಷಿ, ಭೂರಿಷೇಣ, ವಿಭೀಷಣ, ಹನುಮಂತ, ಉಪೇಂದ್ರ, ದತ್ತ, (ಶುಕ) ಅರ್ಜುನ, ಆರ್ಷ್ಟಿಷೇಣ, ವಿದುರ, ಶ್ರುತದೇವ ಮೊದಲಾದವರು ಶ್ರೀಹರಿಯ ಅನುಗ್ರಹ ವಿಶೇಷದಿಂದ ಭಗವಂತನ ಮಹಿಮೆಯನ್ನು ತಿಳಿದಿದ್ದಾರೆ. ಸಂಸಾರ ದಾಟುತ್ತಾರೆ.

**ತೇ ವೈ ವಿದಂತ್ಯತಿತರಂತಿ ಚ ದೇವಮಾಯಾಂ**
**ಸ್ತ್ರೀಶೂದ್ರಹೂಣಶಬರಾ ಅಪಿ ಪಾಪಜೀವಾಃ ।**
**ಯದ್ಯದ್ಭುತಕ್ರಮಪರಾಯಣಶೀಲಶಿಕ್ಷಾಃ**
**ತಿರ್ಯಗ್ಜನಾ ಅಪಿ ಕಿಮು ಶ್ರುತಧಾರಣಾ ಯೇ ॥ ೪೬ ॥**

**ಪಾಪಜೀವಾ ಅಪಿ** ಪಾಪಯೋನಿಯಲ್ಲಿ ಜನಿಸಿದ ಜೀವರೂ ಕೂಡ, **ಸ್ತ್ರೀಶೂದ್ರಹೂಣಶಬರಾಃ** ಸ್ತ್ರೀಯರು-ಶೂದ್ರರು-ಹೂಣರು-ಶಬರರು ಕೂಡ, **ಯದಿ** ಯಾವಾಗ, **ಅದ್ಭುತಕ್ರಮಪರಾಯಣಶೀಲಶಿಕ್ಷಾಃ** ಆಶ್ಚರ್ಯಕರವಾದ ಪಾದ ವಿಕ್ಷೇಪ ಉಳ್ಳ ಶ್ರೀಹರಿಯನ್ನು ಆಶ್ರಯಿಸುವ ಸ್ವಭಾವವಿರುವ ಭಗವಂತನ ಜ್ಞಾನಿಗಳು, **ತಿರ್ಯಗ್ಜನಾಃ**

**ಅಪಿ** ಜರಿತಾರಿ ಮುಂತಾದ ಪಕ್ಷಿಗಳು ಕೂಡ, **ದೇವಮಾಯಾಂ ವಿದಂತಿ ತರಂತಿ** ದೇವರ ಸಾಮರ್ಥ್ಯವನ್ನು ತಿಳಿದು ಸಂಸಾರವನ್ನು ದಾಟುತ್ತಾರೆ. **ಕಿಮು ಯೇ ಶ್ರುತಧಾರಣಾಃ** ಧ್ಯಾನಾದಿಗಳನ್ನು ಮಾಡುವವರು ಮುಕ್ತರಾಗುವರೆಂದು ಹೇಳಬೇಕೇ? ಅವಶ್ಯವಾಗಿ ಮುಕ್ತರಾಗುತ್ತಾರೆ ಎಂದು ತಾತ್ಪರ್ಯ.

**ತಾತ್ಪರ್ಯ- ತತ್ಪರಾಯಣಾಃ ತಚ್ಛೀಲಾಃ ತಚ್ಛಿಕ್ಷಾಃ ।**

ಶ್ರೀಹರಿಯನ್ನೇ ಆಶ್ರಯಿಸಿದವರು ಶ್ರೀಹರಿಯ ಶಾಸ್ತ್ರ ಶ್ರವಣಮಾಡುವ ಸ್ವಭಾವ ಉಳ್ಳವರು ಶ್ರೀಹರಿಯ ಮಹಿಮೆ ಹೇಳುವ ಶಾಸ್ತ್ರಗಳ ಅಭ್ಯಾಸಮಾಡಿದವರು ಎಂದರ್ಥ.

**ಶಶ್ವತ್ ಪ್ರಶಾಂತಮಭಯಂ ಪ್ರತಿಬೋಧಮಾತ್ರಂ**
**ಶುದ್ಧಂ ಸಮಂ ಸದಸತಃ ಪರಮಾತ್ಮತತ್ತ್ವಮ್ ।**
**ಶಬ್ದೋ ನ ಯತ್ರ ಪುರುಕಾರಕವಾನ್ ಕ್ರಿಯಾರ್ಥೋ**
**ಮಾಯಾ ಪರೈತ್ಯಭಿಮುಖೇ ಚ ವಿಲಜ್ಜಮಾನಾ** ॥ ೪೭ ॥

**ಯತ್** ಯಾವುದು, **ಶಶ್ವತ್** ಸರ್ವದಾ ಏಕಪ್ರಕಾರವಾಗಿರುವ, **ಪ್ರಶಾಂತಮ್** ಪ್ರಕೃಷ್ಟ ಪೂರ್ಣಸುಖರೂಪವಾದ, **ಪ್ರತಿಬೋಧಮಾತ್ರಮ್** ಜಡಾಮಿಶ್ರಜ್ಞಾನ ರೂಪವಾದ, **ಶುದ್ಧಮ್** ರಾಗಾದಿದೋಷ ದೂರವಾದುದು, **ಸಮಮ್** ಎಲ್ಲ ಕಡೆಯಲ್ಲಿ ಏಕಪ್ರಕಾರವಾದ, **ಸದಸತಃ ಪರಮ್** ಕಾರ್ಯಸಹಿತವಾದ ಕಾರಣದಿಂದ ವಿಲಕ್ಷಣವಾದ, **ಶಬ್ದಃ** ವೇದಾದಿಗಳು **ಯತ್ರ** ಯಾವನಿಂದ, **ಪುರು** ಸಾಕಲ್ಯೇನ, **ಕಾರಕವಾನ್ ನ** ಕರ್ಮಕಾರಕ ಉಳ್ಳದ್ದಾಗಿಲ್ಲ (ಸಂಪೂರ್ಣಪ್ರತಿಪಾದಕವಲ್ಲವೆಂದರ್ಥ) **ಕ್ರಿಯಾರ್ಥಃ ಅಪಿ** ಧಾತ್ವಾದಿಗಳಿಂದ ಲಬ್ಧವಾದ ಅರ್ಥ ಉಳ್ಳದ್ದಾದರೂ ಪದಸಮನ್ವಯದಿಂದ ಪ್ರವೃತ್ತವಾದರೂ ಪೂರ್ಣಪ್ರತಿಪಾದಿಸುವುದಿಲ್ಲ, **ಮಾಯಾ** ಬಂಧಕಪ್ರಕೃತಿಯು, **ಅಭಿಮುಖೇ** ಹರಿಯ ಅನುಗ್ರಹದೃಷ್ಟಿಗೆ ವಿಷಯನಾದ ಭಕ್ತನಲ್ಲಿ ಇರಲು, **ವಿಲಜ್ಜಮಾನಾ** ನಾಚಿದವಳಂತೆ, **ಪರೈತಿ** ದೂರಸರಿಯುವುದೋ, **ತತ್** ಅದು, **ಆತ್ಮತತ್ತ್ವಮ್** ಪರಮಾತ್ಮನ ಸ್ವರೂಪವು.

ಇಲ್ಲಿ 'ಪ್ರಶಾಂತಮ್' ಎಂದರೆ ನಿರ್ವ್ಯಾಪಾರನೆಂದು 'ಆತ್ಮತತ್ತ್ವಮ್' ಎಂದರೆ ಜೀವ ಸ್ವರೂಪನೆಂದೂ 'ಶಬ್ದಃ ಕಾರಕವಾನ್ ನ' ಎಂದರೇ ಶಬ್ದಾವಾಚ್ಯನೆಂದು ಅರ್ಥ ತೋರುವುದು. ಆದ್ದರಿಂದ ಈ ಶಬ್ದಗಳನ್ನು ವ್ಯಾಖ್ಯಾನಿಸುವರು-

ತಾತ್ಪರ್ಯ- ಅವ್ಯಕ್ತಾದ್ಯನಹಮ್ಮಾನಾದಾತ್ಮತತ್ತ್ವಂ ಹರಿಃ ಸ್ಮೃತಃ ।
ಅಶಬ್ದಶ್ಚಾಪ್ರಸಿದ್ಧತ್ವಾತ್ ಶಾಂತಃ ಪೂರ್ಣಸುಖತ್ವತಃ ॥ -ಇತಿ ಬ್ರಹ್ಮತರ್ಕೇ

ಜೀವರಂತೆ ಅವ್ಯಕ್ತಾದ್ಯಾತ್ಮಕವಾದ ಪ್ರಪಂಚದಲ್ಲಿ ಮಮತೆ ಇಲ್ಲದಿರುವುದರಿಂದ ಶ್ರೀಹರಿಯು ಆತ್ಮತತ್ತ್ವ ಎನಿಸುತ್ತಾನೆ. ಸಂಪೂರ್ಣವಾಗಿ ತಿಳಿಯಲು ಅಶಕ್ಯನಾದುದರಿಂದ ಅಶಬ್ದವೆನಿಸುತ್ತಾನೆ. ಪೂರ್ಣಸುಖ ಸ್ವರೂಪನಾದುದರಿಂದ ಶಾಂತನೆನಿಸುತ್ತಾನೆ. ಹೀಗೆಂದು ಎಂದು ಬ್ರಹ್ಮತರ್ಕದಲ್ಲಿದೆ. ॥ ೪೭ ॥

*ಜ್ಞಾನಿಗಳ ಸಂಸಾರತ್ಯಾಗರೂಪವಾದ ತರಣವನ್ನು ದೃಷ್ಟಾಂತದಿಂದ ಉಪಪಾದಿಸುತ್ತಾರೆ-*

**ತದ್ವೈ ಪದಂ ಭಗವತಃ ಪರಮಸ್ಯ ಪುಂಸೋ**
**ಬ್ರಹ್ಮೇತಿ ಯದ್ವಿದುರಜಸ್ರಸುಖಂ ವಿಶೋಕಮ್ ।**
**ಸಮ್ಯಙ್ ನಿಶಾಮ್ಯ ಯತತೋ ಯಮಲೋಕಹೇತುಂ**
**ಜಹ್ಯುಃ ಸುಧಾಮಿವ ನಿಪಾನಖನಿತ್ರಮಿಂದ್ರಃ** ॥ ೪೮ ॥

**ಯಥಾ** ಹೇಗೆ, **ಇಂದ್ರಃ** ಇಂದ್ರನು, **ಸುಧಾಮ್** ಅಮೃತವನ್ನು, **ನಿಶಾಮ್ಯ** ನೋಡಿ, **ನಿಪಾನಖನಿತ್ರಮ್** ಬಾವಿತೋಡುವ ಗುದ್ದಲಿಯನ್ನು ಬಿಡುವನೋ, ಅಥವಾ, **ಇಂದ್ರಃ** ಧನಿಕನು, **ಅಮೃತಮ್** ಸಿಹಿನೀರನ್ನು **ನಿಶಾಮ್ಯ** ನೋಡಿ, ಗುದ್ದಲಿಯನ್ನು ಬಿಡುವನೋ ಹಾಗೆ, **ಯತಯಃ** ಶ್ರವಣಾದಿಪ್ರಯತ್ನಗಳನ್ನು ಮಾಡುವವರು, **ಅಜಸ್ರಸುಖಮ್** ನಿತ್ಯಸುಖ ಉಳ್ಳ **ವಿಶೋಕಮ್** ಶೋಕರರಹಿತನಾದ, **ಯತ್** ಯಾರನ್ನು, **ಬ್ರಹ್ಮೇತಿ ವಿದುಃ** ಬ್ರಹ್ಮನೆಂದು ತಿಳಿದರೋ, ಪೂರ್ವಜ್ಞಾನಿಗಳು **ತತ್** ಆ, **ಪರಮಸ್ಯ ಪುಂಸಃ** ಭಗವಂತನ, **ಪದಂ** ಸ್ವರೂಪವನ್ನು, **ಸಮ್ಯಕ್ ನಿಶಾಮ್ಯ** ತನ್ನ ಯೋಗ್ಯತಾನುಸಾರ ಚೆನ್ನಾಗಿ ತಿಳಿದು, **ಯಮಲೋಕಹೇತುಮ್** ಯಮಲೋಕಕ್ಕೆ ಕಾರಣವಾದ ಸಂಸಾರವನ್ನು, **ಜಹ್ಯುಃ** ಬಿಡುವರು.

*ಜ್ಞಾನಿಗಳಿಗೆ ಮೋಕ್ಷೇತರಪುರುಷಾರ್ಥಗಳನ್ನೂ ಭಗವಂತನೇ ಕೊಡುವನು ಎಂದು ಹೇಳುವರು-*

**ಸ ಶ್ರೇಯಸಾಮಪಿ ವಿಭುರ್ಭಗವಾನ್ಯತೋಽಸ್ಯ**
**ಭಾವಸ್ವಭಾವವಿಹಿತಸ್ಯ ಸತಃ ಪ್ರಸಿದ್ಧಿಃ ।**
**ದೇಹೇ ಸ್ವಧಾತುವಿಗಮೇ ತು ವಿಶೀರ್ಯಮಾಣೇ**
**ವ್ಯೋಮೇವ ತತ್ರ ಪುರುಷೋ ನ ವಿಶೀರ್ಯತೇಽಜಃ** ॥ ೪೯ ॥

**ಸಃ** ಜ್ಞಾನಿಗಳಿಂದ ಅಪರೋಕ್ಷೀಕೃತನಾದ ಭಗವಂತನು, **ಶ್ರೇಯಸಾಂ ಅಪಿ** ಕೇವಲ ಮೋಕ್ಷವನ್ನಷ್ಟೇ ಅಲ್ಲ ಅವರ ಎಲ್ಲ ಅಭೀಷ್ಟಗಳನ್ನೂ, **ವಿಭುಃ** ಕೊಡುವವನು, **ಯತಃ** ಯಾವ ಕಾರಣ, **ಭಾವಸ್ವಭಾವವಿಹಿತಸ್ಯ ಸತಃ ಪ್ರಸಿದ್ಧಃ** ಸ್ವಾಭಾವಿಕ ಭಕ್ತಿಯುಳ್ಳವನಾಗಿ ಜನಿಸಿದ ಆದ್ದರಿಂದಲೇ ಸಜ್ಜನನಿಗೆ ಪ್ರತ್ಯಕ್ಷನಾದವನು **ಅಸ್ಯ** ಭಗವದ್ದಯಾಪಾತ್ರನಾದ-ವನಿಗೆ ಎಲ್ಲವನ್ನೂ ಕೊಡುವನು ಕಾಮನಿಮಿತ್ತ ಭಕ್ತಿಯುಳ್ಳವನಿಗೆ ಜ್ಞಾತನಾಗಿದ್ದರೆ ಅವನ ಕಾಮಿತವಾದ ಒಂದನ್ನೇ ಕೊಡುತ್ತಿದ್ದನು ಆಜನ್ಮಸಿದ್ಧ ಸ್ವಭಾವ ಭಕ್ತನಿಂದ ಜ್ಞಾತನಾದರೆ ಒಂದೇ ಹೇಗೆ ಕೊಡುವನು ಎಲ್ಲವನ್ನೂ ಕೊಡುವನು ಎಂದು ಭಾವ. ಇನ್ನು ದೇಹದ ಜೊತೆಗೆ ನಷ್ಟನಾದ ಜೀವನಿಗೆ ಅದರಲ್ಲಿಯೇ ಇದ್ದು ನಷ್ಟವಾದ ಹರಿಯು ಹೇಗೆ ಆಮುಷ್ಮಿಕ ಪುರುಷಾರ್ಥ ಕೊಡುವನು ಎಂದರೆ ಹೇಳುವರು, **ಸ್ವಧಾತುವಿಗಮೇ** ತನಗೆ ಕಾರಣಗಳಾದ ಭೂತಗಳು ಬೇರೆಯಾಗಿ ಹೋದಾಗ, **ದೇಹೇ** ದೇಹವು **ವಿಶೀರ್ಯಮಾಣೇ** ನಾಶವಾಗುತ್ತಿರಲು, **ತತ್ರ** ದೇಹದಲ್ಲಿರುವ, **ಅಜಃ** ಸ್ವರೂಪಲಾಭರೂಪ ಉತ್ಪತ್ತಿರಹಿತನಾದ, ಯಾವ ತರಹದ ಉತ್ಪತ್ತಿಯೂ ಇಲ್ಲದ, **ಪುರುಷಃ** ಜೀವನು ಶ್ರೀಹರಿಯು, **ನ ವಿಶೀರ್ಯತೇ** ನಾಶವಾಗಲಾರನು.

ಇಲ್ಲಿ 'ಭಾವಸ್ವಭಾವವಿಹಿತಸ್ಯ' 'ಸತಃ' ಎಂಬ ಶಬ್ದಗಳಿಗೆ ಅರ್ಥವನ್ನು ಹೇಳುವರು.

**ತಾತ್ಪರ್ಯ- ಭಾವಸ್ವಭಾವೋ ಭಕ್ತಿಸ್ವಭಾವಃ । ತೇನ ನಿರ್ಮಿತಸ್ಯ ಸತ್ಪುರುಷಸ್ಯ ಪ್ರಸಿದ್ಧಃ । 'ಭಾವೋ ಭಕ್ತಿಃ ಪ್ರಣಾಮಶ್ಚ ಪ್ರಾವಣ್ಯಮಪಿ ಚಾದರಃ' ಇತ್ಯಭಿಧಾನಾತ್ ।**

**ಭಾವಸ್ವಭಾವಃ** ಸ್ವಾಭಾವಿಕಭಕ್ತಿಯಿಂದ ಕೂಡಿದ, ಶ್ರೀಹರಿಯ ದಯಾಪಾತ್ರನಾದ ಸತ್ಪುರುಷನಿಗೆ ಶ್ರೀಹರಿಯು ಪ್ರತ್ಯಕ್ಷನಾಗುತ್ತಾನೆ. ಅವನಿಗೆ ಶ್ರೇಯಸ್ಸುಗಳನ್ನು ಕೊಡುತ್ತಾನೆ. ಭಾವ-ಭಕ್ತಿ-ಪ್ರಣಾಮ-ಪ್ರಾವಣ್ಯ-ಆದರ ಇವು ಪರ್ಯಾಯ ಪದಗಳು ಎಂದು ಅಭಿಧಾನವಿರುವುದರಿಂದ ಭಾವಶಬ್ದಕ್ಕೆ ಭಕ್ತಿ ಎಂದರ್ಥ. 'ದೇವದೇವ ನಮಸ್ತುಭ್ಯಂ' ಎಂದಾರಂಭಿಸಿ ಪ್ರಶ್ನೆ-ಪ್ರತಿವಚನಗಳಿಂದ ಹೇಳಿದ್ದನ್ನು ಉಪಸಂಹರಿಸುವರು.

**ಸೋಽಯಂ ತೇಽಭಿಹಿತಸ್ತಾತ ಭಗವಾನ್ವಿಶ್ವಭಾವನಃ ।**
**ಸಮಾಸೇನ ಹರೇರ್ನಾನ್ಯಮನ್ಯಸ್ಮಾತ್ ಸದಸಚ್ಚ ಯತ್** ॥ ೫೦ ॥

**ತಾತ** ನಾರದನೇ, **ವಿಶ್ವಭಾವನಃ** ಜಗದುತ್ಪಾದಕನಾದ, **ಭಗವಾನ್** ಷಡ್ಗುಣಗಳಿಂದ ಪೂರ್ಣನಾದ, **ಸಃ ಅಯಂ** ಶ್ರೀಹರಿಯು, **ತೇ** ನಿನಗೆ, **ಸಮಾಸೇನ** ಸಂಕ್ಷೇಪವಾಗಿ, **ಅಭಿಹಿತಃ** ಹೇಳಲ್ಪಟ್ಟಿರುವನು, **ಅನ್ಯಸ್ಮಾತ್** ಮತ್ತೊಬ್ಬರ ಅಧೀನವಾದ ಸತ್ತಾದಿಗಳಿಲ್ಲದ್ದರಿಂದ

ಜಗತ್ತಿನಿಂದ ಭಿನ್ನನಾದ, **ಹರೇಃ** ಪರಮಾತ್ಮನಿಂದ, **ಯತ್ ಸದಸತ್** ಕಾರ್ಯ-ಕಾರಣ ಪ್ರಪಂಚವೇನಿದೆಯೋ ಅದು, **ಅನನ್ಯತ್** ಅವನ ಅಧೀನವಾದ ಸತ್ತಾದಿಗಳುಳ್ಳದ್ದಾದ್ದರಿಂದ ಅಭಿನ್ನವಾಗಿದೆ.

ಜಗತ್ತಿನಿಂದ ಭಿನ್ನನಾಗಿದ್ದಾನೆ ಪರಮಾತ್ಮ. ಇಂತಹ ಶ್ರೀಹರಿಯಿಂದ ಕಾರ್ಯ-ಕಾರಣರೂಪವಾದ ಪ್ರಪಂಚವು ಅಭಿನ್ನವಾಗಿದೆ ಎಂದು ಹೇಳುತ್ತಿದ್ದಾರೆ. ಹೀಗೆ ಹೇಳುವುದು ವಿರುದ್ಧವಾಗಿದೆ ಎಂದು ಶಂಕೆ ಬರುತ್ತದೆ. ಇದನ್ನು ಪರಿಹರಿಸಲು ಇಲ್ಲಿ ವಿವಕ್ಷಿತವಾದ ಅನ್ಯ ಶಬ್ದಾರ್ಥವನ್ನು ಹೇಳುತ್ತಿದ್ದಾರೆ-

**ತಾತ್ಪರ್ಯ- ಸತ್ತಾದಿರ್ಯತ್ ಸ್ವತೋ ವಿಷ್ಣೋಸ್ತಸ್ಮಾದನ್ಯಃ ಸ ಸರ್ವತಃ ।**
**ಯತ್ಸತ್ತಾದಿರತೋಽನ್ಯಸ್ಯ ನಾನ್ಯತ್ವಂ ಭೇದಿನೋಽಪಿ ತು ॥ -ಇತಿ ಬ್ರಹ್ಮಾಂಡೇ**

ಜಗತ್ತಿನ ಸತ್ತಾ-ಪ್ರತೀತಿ-ಪ್ರವೃತ್ತಿಗಳು ಸ್ವಂತತ್ರನಾದ ಶ್ರೀಹರಿಯಿಂದಲೇ ಉಂಟಾಗುತ್ತವೆ. ಶ್ರೀಹರಿಯ ಸತ್ತಾದಿಗಳು ಜಗತ್ತಿನ ಸತ್ತಾದಿಗಳಂತೆ ಅನ್ಯಾಧೀನಗಳಲ್ಲ. ಆದುದರಿಂದ ಶ್ರೀಹರಿಯು ಎಲ್ಲ ಜಗತ್ತಿನಿಂದ ವಿಲಕ್ಷಣನಾಗಿದ್ದಾನೆ. ಜಗತ್ತಿನ ಸತ್ತಾದಿಗಳು ಶ್ರೀಹರಿಯ ಅಧೀನ- ವಾಗಿವೆ. ಆದ್ದರಿಂದ ವಸ್ತುತಃ ಜಗತ್ತು ಶ್ರೀಹರಿಯಿಂದ ಭಿನ್ನವಾಗಿದ್ದರೂ ಶ್ರೀಹರಿಯ ಅಧೀನವೇ ಆದ ಸತ್ತಾದಿಗಳಿರುವುದರಿಂದ ಅನನ್ಯವೆಂದು ಹೇಳಲ್ಪಡುತ್ತದೆ. ಹೀಗೆಂದು ಬ್ರಹ್ಮಾಂಡ ಪುರಾಣ ತಿಳಿಸುತ್ತದೆ.

*ಈ ರೀತಿ ನಾರದರಿಗೆ ಶ್ರೀಹರಿಯ ಮಾಹಾತ್ಮ್ಯವನ್ನು, ಸಾಕ್ಷಾದವತಾರಗಳನ್ನು, ವಿಭೂತಿ ರೂಪಗಳನ್ನೂ ಉಪದೇಶಮಾಡಿ ಭಗವತ್ಸಂಪ್ರದಾಯಾಗತವಾದುದರಿಂದ ಈ ವಿಷಯವು ಅಂತ್ಯಂತಶ್ರದ್ಧೇಯವೆಂದು ತಿಳಿಸುತ್ತ ನಾರದರು ಮಾಡಬೇಕಾದುದನ್ನು ಹೇಳುವರು-*

**ಇದಂ ಭಾಗವತಂ ನಾಮ ಯಸ್ಮೈ ಭಗವತೋದಿತಮ್ ।**
**ಸಂಗ್ರಹೋಽಯಂ ವಿಭೂತೀನಾಂ ತದೇತದ್ವಿಪುಲೀಕುರು ॥ ೫೧ ॥**

**ಯತ್** ಯಾವುದು, **ಮೇ** ನನಗೆ, **ಭಗವತಾ** ಶ್ರೀಹರಿಯಿಂದ, **ಉದಿತಂ** ಹೇಳಲ್ಪಟ್ಟಿತ್ತೋ ಮತ್ತು, **ವಿಭೂತೀನಾಂ ಸಂಗ್ರಹಃ ಅಯಂ** ಶ್ರೀಹರಿಯ ವಿಶೇಷಸನ್ನಿಧಾನ ಪಾತ್ರರಾದ ಬ್ರಹ್ಮಾದಿಗಳ ವರಾಹಾದಿರೂಪಗಳ ಮತ್ತು ಶ್ರೀಹರಿಯ ಮಾಹಾತ್ಮ್ಯಗಳ ಸಂಕ್ಷೇಪವಾಗಿರುವ, **ಇದಂ** ಇದು, **ಭಾಗವತಂ ನಾಮ** ಭಾಗವತವೆಂದು ಪ್ರಸಿದ್ಧವಾಗಿದೆ, **ತದೇತತ್** ನನ್ನಿಂದ ಹೇಳಲ್ಪಟ್ಟ ಇದನ್ನು, **ವಿಪುಲೀಕುರು** ವೇದವ್ಯಾಸದೇವರಿಗೆ ಪ್ರಾರ್ಥಿಸಿ ಅವರಿಂದ ಈ ವಿಷಯವನ್ನು ಪ್ರತಿಪಾದಿಸುವ ಪುರಾಣ ಮಾಡಿಸಿ ಲೋಕದಲ್ಲಿ ವಿಸ್ತರಿಸು.

*ವ್ಯಾಸರಿಗೆ ಪ್ರಾರ್ಥಿಸುವ ರೀತಿಯನ್ನು ತಿಳಿಸುವರು-*

**ಯಥಾ ಹರೌ ಭಗವತಿ ನೃಣಾಂ ಭಕ್ತಿರ್ಭವಿಷ್ಯತಿ ।**
**ಸರ್ವಾತ್ಮನ್ಯಖಿಲಾಧಾರ ಇತಿ ಸಂಕಲ್ಪ್ಯ ವರ್ಣಯ** ॥ ೫೨ ॥

**ನೃಣಾಂ** ಜನರಿಗೆ, **ಸರ್ವಾತ್ಮನಿ** ಸರ್ವಸ್ವಾಮಿಯಾದ, **ಸರ್ವಾಧಾರೇ** ಎಲ್ಲರಿಗೂ ಆಶ್ರಯನಾದ, **ಭಗವತಿ** ಷಡ್ಗುಣಶಾಲಿಯಾದ, **ಹರೌ** ಪರಮಾತ್ಮನಲ್ಲಿ, **ಭಕ್ತಿಃ** ಪ್ರೇಮಾತಿಶಯವು, **ಯಥಾ** ಹೇಗೆ ಅಥವಾ ಏನು ಹೇಳುವುದರಿಂದ, **ಭವಿಷ್ಯತಿ** ಉಂಟಾಗುವುದೋ, **ತಥಾ** ಹಾಗೆ, ಶ್ರೀಹರಿಮಾಹಾತ್ಮ್ಯವನ್ನೂ, ಭಕ್ತಿರಸೋಪೇತವಾದ ವರ್ಣನೆಗಳನ್ನು, **ಸಂಕಲ್ಪ್ಯ** ಬುದ್ಧಿಯಲ್ಲಿ ಇಟ್ಟುಕೊಂಡು, **ವರ್ಣಯ** ವಿಜ್ಞಾಪನೆ ಮಾಡು. ಭಕ್ತಿಜನಕವಾದ ಪುರಾಣವನ್ನು ರಚಿಸಿರಿ ಎಂದು ಪ್ರಾರ್ಥಿಸಿಕೋ ಎಂದು ಭಾವ. ॥ ೫೨ ॥

*ಭಕ್ತಿಯಿಂದೇನು ಪ್ರಯೋಜನ ಭಕ್ತಿಯಿಂದ ಯಾವ ಪ್ರಯೋಜನವೂ ಇಲ್ಲ. ಹಾಗೇನಾದರೂ ಪ್ರಯೋಜನವಿದ್ದರೇ ಭಕ್ತಿಯು ಹುಟ್ಟುವಂತೆ ಪುರಾಣವನ್ನು ರಚಿಸಿರಿ ಎಂದು ವಿಜ್ಞಾಪಿಸಬಹುದು ಎಂಬ ಶಂಕೆಗೆ ಈ ಶ್ಲೋಕವು ಉತ್ತರವಾಗಿದೆ-*

**ನೃಜನ್ಮನಿ ನ ತುಷ್ಯೇತ ಕಿಂ ಫಲಂ ಯಮನಶ್ವರೇ ।**
**ಕೃಷ್ಣೇ ಯದ್ಯಪವರ್ಗೇಶೇ ಭಕ್ತಿಃ ಸ್ಯಾನ್ನಾನಪಾಯಿನೀ** ॥ ೫೩ ॥

**ಯದಿ** ಒಂದು ವೇಳೆ, **ಅಪವರ್ಗೇಶೇ** ಮುಕ್ತಿಗೆ ಒಡೆಯನಾದ, **ಕೃಷ್ಣೇ** ಶ್ರೀಕೃಷ್ಣನಲ್ಲಿ, **ಅನಪಾಯಿನೀ** ನಿತ್ಯವಾದ, **ಭಕ್ತಿಃ** ಭಕ್ತಿಯು, **ನ ಸ್ಯಾತ್** ಆಗದಿದ್ದಲ್ಲಿ, **ಯಮನಶ್ವರೇ** ಯಮನಿಂದ ನಾಶವಾಗುವ, **ನೃಜನ್ಮನಿ** ಮನುಷ್ಯಜನ್ಮದಲ್ಲಿ, **ನ ತುಷ್ಯೇತ** ತೃಪ್ತಿಪಡಬಾರದು, ಏಕೆಂದರೆ, **ನೃಜನ್ಮನಃ ಕಿಂ ಫಲಂ** ಮನುಷ್ಯ ಜನ್ಮಕ್ಕೆ ಏನು ಫಲ. ಏನೂ ಇಲ್ಲವೆಂದು ಭಾವ.

ಇಲ್ಲಿ ಕಿಂ ಫಲಂ ಎಂದು ಆಕ್ಷೇಪಿಸಿದ್ದು ಸರಿಯಲ್ಲ, ವಿಷಯಭೋಗರೂಪವಾದ ಫಲ ಇದೆಯಲ್ಲ ಎಂದರೆ ಆಕ್ಷೇಪೋಕ್ತಿಯ ಅಭಿಪ್ರಾಯವನ್ನು ಹೇಳುವರು-

ತಾತ್ಪರ್ಯ- ಆಕ್ಷಿಪ್ಯತೇ ಕಿಮಿತ್ಯೇತದ್ಯತೋಽಲ್ಪಫಲತಾ ಭವೇತ್ ।
ವಸ್ತುನೋ ಯಸ್ಯ ಚಾಲ್ಪತ್ವಂ ಪುಂಸೋ ವಾ ನೇತಿ ಚೋಚ್ಯತೇ ॥
-ಇತಿ ಪ್ರಕಾಶಸಂಹಿತಾಯಾಂ ॥

ಯಾವ ಸಾಧನದಿಂದ ಅಲ್ಪವಾದ ಫಲ ಉಂಟಾಗುವುದೋ ಆ ಸಾಧನವು ಸಾಧನವೇ ಅಲ್ಲವೆಂದು ಹೇಳಲ್ಪಡುತ್ತದೆ. ಯಾವ ಫಲಕ್ಕೆ ಅಲ್ಪತ್ವವು ಉಂಟೋ ಆ ಫಲ ಫಲವಲ್ಲವೆಂದು ಹೇಳಲ್ಪಡುವುದು. ಯಾವ ಸಾಧನಗಳನ್ನು ಅನುಷ್ಠಾನ ಮಾಡುವ ಮನುಷ್ಯನಿಗೆ ಅಲ್ಪತ್ವವು ಇದೆಯೋ ಆತನು ಸಾಧಕನೇ ಅಲ್ಲವೆಂದು ಹೇಳಲ್ಪಡುತ್ತಾನೆ. ಹೀಗೆಂದು ಪ್ರಕಾಶಸಂಹಿತೆಯು ತಿಳಿಸುತ್ತದೆ. ।। ೫೩ ।।

*ವರ್ಣಾಶ್ರಮಾಚಾರಾದಿಗಳಿಂದಲೇ ಮೋಕ್ಷವಾಗುವಾಗ ಭಕ್ತಿ ಏಕೆ ಎಂದರೆ ಹೇಳುವರು-*

**ಕಿಂ ಸ್ಯಾದ್ವರ್ಣಾಶ್ರಮಾಚಾರೈಃ ಕಿಂ ದಾನೈಃ ಕಿಂ ತಪಃಶ್ರುತೈಃ ।**
**ಸರ್ವಾಘಘ್ನೋತ್ತಮಶ್ಲೋಕೇ ನ ಚೇತ್ ಭಕ್ತಿರಧೋಕ್ಷಜೇ ।। ೫೪ ।।**

**ಸರ್ವಾಘಘ್ನೋತ್ತಮಶ್ಲೋಕೇ** ಎಲ್ಲ ಪಾಪಗಳನ್ನು ನಾಶ ಮಾಡುವ ಕೀರ್ತಿ ಉಳ್ಳ **ಅಧೋಕ್ಷಜೇ** ಶ್ರೀಹರಿಯಲ್ಲಿ, **ಭಕ್ತಿಃ ನ ಚೇತ್** ಭಕ್ತಿ ಇಲ್ಲವಾದರೇ, **ವರ್ಣಾಶ್ರಮಾಚಾರೈಃ** ಅವರವರ ಬ್ರಾಹ್ಮಣಾದಿವರ್ಣಗಳಿಗೆ ಬ್ರಹ್ಮಚರ್ಯಾದ್ಯಾಶ್ರಮಗಳಿಗೆ ವಿಹಿತವಾದ ಆಚಾರಗಳಿಂದ **ಕಿಂ ಸ್ಯಾತ್** ಏನಾಗುವುದು, **ದಾನೈಃ ಕಿಂ** ದಾನದಿಂದೇನಾಗುವುದು, **ತಪಃಶ್ರುತೈಃ ಕಿಂ** ತಪಸ್ಸಿನಿಂದ, ಶ್ರವಣಾದಿಗಳಿಂದ ಏನು ಪ್ರಯೋಜನ? ಭಕ್ತಿರಹಿತವಾದ ದಾನಾದಿಗಳಿಂದ ಪ್ರಾಪ್ಯವಾಗುವ ಫಲವು ಅಲ್ಪವಾಗಿದೆ. ಆದ್ದರಿಂದ ಪ್ರಕೃತವಾದ ಆಕ್ಷೇಪವು ಯುಕ್ತವೇ ಆಗಿದೆ. ಭಕ್ತಿಯಿಂದಲೇ ಮಹಾಫಲ ಹೊರತು ದಾನಾದಿಗಳಿಂದ ಅಲ್ಲವೆಂದು ಭಾವ. ।। ೫೪ ।।

**ಮಾಯಾಂ ವರ್ಣಯತೋಽಮುಷ್ಯ ಈಶ್ವರಸ್ಯಾನುಮೋದತಃ ।**
**ಶೃಣ್ವತಃ ಶ್ರದ್ಧಯಾ ನಿತ್ಯಂ ಮಾಯಯಾಽತ್ಮಾ ನ ಮುಹ್ಯತಿ ।। ೫೫ ।।**

**ಅಮುಷ್ಯ ಈಶ್ವರಸ್ಯ** ಈ ಭಗವಂತನ, **ಮಾಯಾಂ** ಮಾಹಾತ್ಮ್ಯವನ್ನು, **ವರ್ಣಯತಃ** ಗುರುಮುಖದಿಂದ ಕೇಳಿ ತಿಳಿದು ಶಿಷ್ಯರಿಗೆ ಹೇಳುವವನ ಹಾಗು, **ಅನುಮೋದತಃ** ಹೇಳಿದ ಮಾಹಾತ್ಮ್ಯವನ್ನು ಅನುಮೋದಿಸುವವನ, (ಅಂಗಿಕರಿಸುವವನ ಶ್ರದ್ದೆಯಿಂದ) **ಶ್ರದ್ಧಯಾ ನಿತ್ಯಂ ಶೃಣ್ವತಃ** ವ್ಯಾಖ್ಯಾನ ಮಾಡಲಾಗದೇ ಕೊನೆವರೆಗೆ ಕೇಳುವುದರಲ್ಲೇ ಆಸಕ್ತನಾದ ಮನುಷ್ಯನ, **ಆತ್ಮಾ** ಮನಸ್ಸು, **ಮಾಯಯಾ ನ ಮುಹ್ಯತಿ** ಬಂಧಕಶಕ್ತಿಯಿಂದ, ಕೈವಲ್ಯಾದಿರೂಪವಾದ ಮಾಯಾದಿಂದ ಅಹಂಕಾರ-ಮಮಕಾರಗಳಿಂದ ಭ್ರಮಿಸಲಾರನೆಂದರ್ಥ. ।। ೫೫ ।।

।। ಇಲ್ಲಿಗೆ ಏಳನೆಯ ಅಧ್ಯಾಯ ಸಮಾಪ್ತವಾಯಿತು ।।

# ಅಥ ಅಷ್ಟಮೋऽಧ್ಯಾಯಃ

**ಸಾರಾಂಶ**

ಪರೀಕ್ಷಿತನ ವಿಶಿಷ್ಟವಾದ ಪ್ರಶ್ನೆಗಳು ಈ ಅಧ್ಯಾಯದಲ್ಲಿವೆ. ಶುಕಾಚಾರ್ಯರಿಗೆ ವಿನಂತಿಸಿಕೊಳ್ಳುತ್ತಾನೆ ಪರೀಕ್ಷಿತ. ಸ್ವಾಮಿನ್ ನಾನು ಕೇಳುವ ಪ್ರಶ್ನೆಗಳು ಈ ರೀತಿಯಾಗಿವೆ. ಜೀವನಿಗೆ ಸ್ವಾಭಾವಿಕವಾಗಿ ಜಡವಾದ ಶರೀರವಿಲ್ಲ. ಜಡಶರೀರದ ಪ್ರಾಪ್ತಿಗೆ ಶ್ರೀಹರಿಯ ಇಚ್ಛೆಯೊಂದೇ ಕಾರಣವೋ ಮತ್ತೇನಾದರೂ ಕಾರಣವಿದೆಯೋ? ಶ್ರೀಹರಿಯ ನಾಭಿಕಮಲದಿಂದ ಜನಿಸಿದ ಬ್ರಹ್ಮದೇವರು ಯಾರ ಅನುಗ್ರಹದಿಂದ ಸೃಷ್ಟಿಯನ್ನು ಮಾಡುತ್ತಾರೆ? ಪಾದ್ಮಕಲ್ಪದಲ್ಲಿ ನಾಭಿಕಮಲದಿಂದ ಜನಿಸಿದ ಬ್ರಹ್ಮದೇವರು ತಮಗೆ ಜನಕವಾದ ಪರಮಾತ್ಮನ ರೂಪವನ್ನು ಯಾವ ಪ್ರಕಾರದಿಂದ ದರ್ಶನಮಾಡಿಕೊಂಡರು? ಸೃಷ್ಟ್ಯಾದ್ಯಷ್ಟಕರ್ತೃವಾದ ಪರಮಾತ್ಮನು ತನ್ನ ಇಚ್ಛಾರೂಪವಾದ ಆವರಣಶಕ್ತಿಯನ್ನು ಅಡಗಿಸಿಕೊಂಡು ಎಲ್ಲಿ ಮಲಗಿದ್ದನು? ಬ್ರಹ್ಮದೇವರ ದಿನದ ಪರಿಮಾಣವೆಷ್ಟು? ಮನ್ವಂತರಕಾಲ, ವಾರಾಹಕಲ್ಪಗಳ ಪರಿಮಾಣವೆಷ್ಟು? ಕಾಲವನ್ನು ತಿಳಿಯುವುದು ಹೇಗೆ? ಕಾಲಕೃತವಾದ ಆಯುಷ್ಯವನ್ನು ತಿಳಿಯುವುದು ಹೇಗೆ? ಕರ್ಮದ ವಿಧಾನಗಳು ಎಷ್ಟು ವಿಧ? ಕರ್ಮಗಳ ಸಂಗ್ರಹ ಯಾರಲ್ಲಿ ಇರುತ್ತದೆ? ಕರ್ಮಗಳನ್ನು ಸ್ವೀಕರಿಸುವವರು ಯಾರು? ಸತ್ತ್ವಾದಿಗುಣಗಳ ಮಹತ್ತತ್ತ್ವಾದ್ಯಭಿಮಾನಿಗಳ ಸಾಮರ್ಥ್ಯವೇನು? ಭೂ-ಪಾತಾಲ-ದಿಕ್-ಆಕಾಶ-ಗ್ರಹ-ನಕ್ಷತ್ರ-ಪರ್ವತ-ನದೀ-ಸಮುದ್ರ ಮತ್ತು ದ್ವೀಪಗಳ ಪರಿಮಿತಿ ಇವುಗಳಲ್ಲಿ ವಾಸಮಾಡುವ ಪ್ರಾಣಿಗಳ ಉತ್ಪತ್ತಿ ಹೇಗೆ ಆಗುತ್ತದೆ? ಬ್ರಹ್ಮಾಂಡದ ಪರಿಮಾಣವೆಷ್ಟು? ಬ್ರಹ್ಮಾಂಡದ ಒಳಗೆ ಹೊರಗೆ ವ್ಯಾಪಿಸಿದ ಪರಮಾಣ್ವಾದಿಪರಮಮಹತ್ತ್ವಪರ್ಯಂತವಾದ ಪರಮಾತ್ಮನ ರೂಪಗಳ ಪರಿಮಾಣವೇನು? ಮರೀಚಿ-ಕರ್ದಮಾದಿಗಳ ಚರಿತ್ರೆ ಯಾವರೀತಿಯಾದದ್ದು? ವರ್ಣಾಶ್ರಮಗಳ ವಿಶೇಷವಾದ ನಿರ್ಣಯ ಹೇಗೆ? ಯುಗಗಳು ಎಷ್ಟು? ಶ್ರೀಹರಿಯ

ಅವತಾರಗಳ ಚರಿತ್ರೆಗಳು ಯಾವರೀತಿಯಾಗಿವೆ? ಯುಗಗಳಲ್ಲಿಯ ಧರ್ಮಗಳು ಯಾವು ? ರಾಜರ ಧರ್ಮಗಳು, ಆಪದ್ಧರ್ಮಗಳು ಯಾವು? ಮಹದಾದಿತತ್ತ್ವಗಳ ಸಂಖ್ಯೆ ಅವುಗಳ ಲಕ್ಷಣವೇನು? ಶ್ರೀಹರಿಯ ಆರಾಧನಾವಿಧಿ, ಯಮನಿಯಮಾದಿ-ಭಕ್ತಿಯೋಗದ ವಿಧಾನ, ಯೋಗಾಭ್ಯಾಸಿಗಳು ಪಡೆಯುವ ಅಣಿಮಾದಿಸಿದ್ಧಿಗಳು, ಅವುಗಳ ಸ್ವರೂಪ, ವೇದೋಕ್ತವಾದ ಧರ್ಮಗಳ, ಭಾರತೇತಿಹಾಸಗಳ ಉತ್ಪತ್ತಿಯ ಕ್ರಮ ಹೇಗೆ? ಸ್ವತಂತ್ರನಾದ ಶ್ರೀಹರಿ ತನ್ನ ಅಧೀನವಾದ ಚಿದಚಿತ್ ಪ್ರಕೃತಿಯಿಂದ ಸೃಷ್ಟಿಮುಂತಾದ ಕಾರ್ಯಗಳನ್ನು ಮಾಡಿ ಕ್ರೀಡಿಸುವ ಬಗೆ ಹೇಗೆ? ಈ ಎಲ್ಲ ವಿಷಯಗಳನ್ನು ತಿಳಿಯುವ ಅಪೇಕ್ಷೆ ನನಗಿದೆ. ಈ ವಿಷಯಗಳನ್ನೇ ಕೇಳುವ ಉತ್ಸಾಹ ನನಗಿದೆ. ಈ ರೀತಿಯಾಗಿ ಪರೀಕ್ಷಿತನು ಯಾವ ಪ್ರಶ್ನೆಗಳನ್ನು ಕೇಳಿದನೋ ಆ ಎಲ್ಲ ಪಶ್ನೆಗಳಿಗೆ ಅನುಕ್ರಮವಾಗಿ ಉತ್ತರ ಕೊಡಲು ಶ್ರೀಶುಕಾಚಾರ್ಯರು ಪ್ರಾರಂಭಿಸಿದರು.

*ಈ ಅಧ್ಯಾಯದಲ್ಲಿ ಪರೀಕ್ಷಿನ್ಮಹಾರಾಜನು ಶುಕಾಚಾರ್ಯರನ್ನು ಕುರಿತು ಭಾಗವತಪುರಾಣ ಪ್ರತಿ ಪಾದ್ಯವನ್ನು ಕೇಳುವನು. ಮೊದಲಿಗೆ ನಾರದರು ಬ್ರಹ್ಮದೇವರ ಆಜ್ಞೆಯನ್ನು ಹೇಗೆ ಪಾಲಿಸಿದರು ಎಂದು ಪ್ರಶ್ನಿಸುವನು-*

ರಾಜೋವಾಚ-

**ಬ್ರಹ್ಮಣಾ ಚೋದಿತೋ ಬ್ರಹ್ಮನ್ ಗುಣಾಖ್ಯಾನೇऽಗುಣಸ್ಯ ಚ ।**
**ಯಸ್ಮೈ ಯಸ್ಮೈ ಯಥಾ ಪ್ರಾಹ ನಾರದೋ ದೇವದರ್ಶನಃ ॥ ೧ ॥**

**ಹೇ ಬ್ರಹ್ಮನ್** ಶುಕಾಚಾರ್ಯರೇ, **ಬ್ರಹ್ಮಣಾ** ಚತುರ್ಮುಖನಿಂದ, **ಚೋದಿತಃ** ಪ್ರೇರಿತರಾದ, **ದೇವದರ್ಶನಃ** ದೇವತೆಯಂತೆ ಕಾಣುವ, **ನಾರದಃ** ನಾರದರು, **ಅಗುಣಸ್ಯ** ಸತ್ತ್ವಾದಿಗುಣಶೂನ್ಯನಾದ ಅಥವಾ ಪ್ರಧಾನನಾದ ಶ್ರೀಹರಿಯ, **ಗುಣಾಖ್ಯಾನೇ** ಗುಣಗಳನ್ನು ಹೇಳಲು, **ಯಸ್ಮೈ ಯಸ್ಮೈ** ಯಾರು ಯಾರಿಗೆ, (ವೇದವ್ಯಾಸದೇವರನ್ನು ಬಿಟ್ಟು) **ಯಥಾ ಪ್ರಾಹ** ಹೇಗೆ ಹೇಳಿದರು. ॥ ೧ ॥

**ಏತದ್ವೇದಿತುಮಿಚ್ಛಾಮಿ ತತ್ತ್ವಂ ವೇದವಿದಾಂ ವರ ।**
**ಹರೇರದ್ಭುತವೀರ್ಯಸ್ಯ ಕಥಾ ಲೋಕಸುಮಂಗಲಾಃ ॥ ೨ ॥**

**ವೇದವಿದಾಂ ವರ** ವೇದಜ್ಞಾನಿಗಳಲ್ಲಿ ಶ್ರೇಷ್ಠರಾದ ಶುಕರೇ, **ಏತತ್** ಮೇಲೆ ಹೇಳಿದ್ದನ್ನು, **ತತ್ತ್ವಂ** ಯಥಾವತ್ತಾಗಿ, **ವೇದಿತುಂ** ತಿಳಿಯಲು, **ಇಚ್ಛಾಮಿ** ಇಚ್ಛಿಸುವೆನು,

**ಅದ್ಭುತವೀರ್ಯಸ್ಯ** ಆಶ್ಚರ್ಯಕರವಾದ ಸಾಮರ್ಥ್ಯ ಉಳ್ಳ, **ಹರೇಃ** ಪರಮಾತ್ಮನ, **ಲೋಕಸುಮಂಗಲಾಃ** ಜಗತ್ತಿಗೆ ಕಲ್ಯಾಣಕರಗಳಾದ, **ಕಥಾಃ** ಚರಿತೆಯನ್ನು ॥ ೨ ॥

**ಪ್ರಥಯಸ್ವ ಮಹಾಭಾಗ ಯಥಾಽಹಮಖಿಲಾತ್ಮನಿ ।**
**ಕೃಷ್ಣೇ ನಿವೇಶ್ಯ ನಿಸ್ಸಂಗಂ ಮನಸ್ತ್ಯಕ್ಷ್ಯೇ ಕಲೇವರಮ್ ॥ ೩ ॥**

**ಹೇ ಮಹಾಭಾಗ** ಭಾಗ್ಯಶಾಲಿಗಳಾದ ಶುಕಾಚಾರ್ಯರೇ, **ಅಹಂ** ನಾನು, **ಅಖಿಲಾತ್ಮನಿ** ಸರ್ವಾಂತರ್ಯಾಮಿಯಾದ, **ಕೃಷ್ಣೇ** ಶ್ರೀಕೃಷ್ಣನಲ್ಲಿ, **ನಿಸ್ಸಂಗಂ** ವಿಷಯಾಸಕ್ತಿಶೂನ್ಯವಾದ, **ಮನಃ** ಮನಸ್ಸನ್ನು, **ನಿವೇಶ್ಯ** ತೊಡಗಿಸಿ, **ಕಲೇವರಂ ತ್ಯಕ್ಷ್ಯೇ** ದೇಹವನ್ನು ಬಿಡುವೆನೊ, **ಯಥಾ ತಥಾ ಪ್ರಥಯಸ್ವ** ವೇದವ್ಯಾಸರು ಹೇಳಿದಂತೆ ವಿವರಿಸಿರಿ. ॥ ೩ ॥

**ಶೃಣ್ವತಃ ಶ್ರದ್ಧಯಾ ನಿತ್ಯಂ ಗೃಣತಶ್ಚ ಸ್ವಚೇಷ್ಟಿತಮ್ ।**
**ಕಾಲೇನಾಽನತಿದೀರ್ಘೇಣ ಭಗವಾನ್ವಿಶತೇ ಹೃದಿ ॥ ೪ ॥**

**ಶ್ರದ್ಧಯಾ** ಆಸ್ತಿಕ್ಯಬುದ್ಧಿಯಿಂದ, **ನಿತ್ಯಂ** ಯಾವಾಗಲೂ, **ಶೃಣ್ವತಃ** ಹರಿಕಥಾಶ್ರವಣ ಮಾಡುವವರಿಗೆ, **ಸ್ವಚೇಷ್ಟಿತಂ ಗೃಣತಃ** ತನ್ನ ವ್ಯಾಪಾರಗಳನ್ನು ಹೇಳುವವರಿಗೆ, **ಅನತಿದೀರ್ಘೇಣ ಕಾಲೇನ** ಬಹಳ ತಡ ಮಾಡದೇ, **ಭಗವಾನ್** ಶ್ರೀಹರಿಯು, **ಹೃದಿ** ಹೃದಯದಲ್ಲಿ, **ವಿಶತೇ** ಪ್ರವೇಶಮಾಡುವನು. ॥ ೪ ॥

**ಪ್ರವಿಷ್ಟಃ ಕರ್ಣರಂಧ್ರೇಣ ಸ್ವಾನಾಂ ಭಾವಸರೋರುಹಮ್ ।**
**ಧುನೋತಿ ಶಮಲಂ ಕೃಷ್ಣಃ ಸಲಿಲಸ್ಥಂ ಯಥಾ ಶರತ್ ॥ ೫ ॥**

**ಶರತ್** ಶರದೃತುವು, **ಸಲಿಲಸ್ಥಂ** ನೀರಿನಲ್ಲಿರುವ, **ಶಮಲಂ** ಕೊಳೆಯನ್ನು, **ಯಥಾ** ಹೇಗೆ, **ಧುನೋತಿ** ಸ್ವಚ್ಛ ಮಾಡುವುದೋ **ತಥಾ** ಹಾಗೆ, **ಸ್ವಾನಾಂ** ಭಕ್ತರ, **ಭಾವಸರೋರುಹಂ** ಹೃದಯಕಮಲವನ್ನು, **ಕೃಷ್ಣಃ** ಶ್ರೀಕೃಷ್ಣನು, **ಶಮಲಂ ಧುನೋತಿ** ಪಾಪವನ್ನು ಕಳೆಯುವನು. ॥ ೫ ॥

**ಧೌತಾತ್ಮಾ ಪುರುಷಃ ಕೃಷ್ಣಪಾದಮೂಲಂ ನ ಮುಂಚತಿ ।**
**ಮುಕ್ತಸರ್ವಪರಿಕ್ಲೇಶಃ ಪಾಂಥಃ ಸ್ವಶರಣಂ ಯಥಾ ॥ ೬ ॥**

**ಪಾಂಥಃ** ಹಾದಿಕಾರನು ಅಂದರೆ ಪ್ರವಾಸ ಮಾಡಿ ಮನೆಗೆ ಬಂದವನು, **ಸ್ವಶರಣಂ** ತನ್ನ ಮನೆಯನ್ನು, **ಯಥಾ** ಹೇಗೆ, **ನ ಮುಂಚತಿ** ಬಿಡಲಾರನೋ, **ತಥಾ** ಹಾಗೆ, **ಧೌತಾತ್ಮಾ ಪುರುಷಃ** ಶುದ್ಧವಾದ ಮನಸ್ಸುಳ್ಳ ವ್ಯಕ್ತಿಯು, **ಕೃಷ್ಣಪಾದಮೂಲಂ ನ ಮುಂಚತಿ** ಶ್ರೀಕೃಷ್ಣನ ಚರಣವನ್ನು ಬಿಡಲಾರನು. ॥ ೬ ॥

*ಈ ರೀತಿ ಹರಿಕಥಾಶ್ರವಣವು ಪುರುಷಾರ್ಥಸಾಧನವೆಂದು ಉಪಪಾದಿಸಿ ಸಂದಿಗ್ಧವಾದ ವಿಷಯಗಳನ್ನು ಕೇಳುವನು-*

**ಯದಧಾತುಮತೋ ಬ್ರಹ್ಮನ್ ದೇಹಾರಂಭೋऽಸ್ಯ ಧಾತುಭಿಃ ।**
**ಯದೃಚ್ಛಯಾ ಹೇತುನಾ ವಾ ಭವಂತೋ ಜಾನತೇ ಯಥಾ ॥ ೭ ॥**

**ಬ್ರಹ್ಮನ್** ಶುಕಾಚಾರ್ಯರೇ, **ಅಧಾತುಮತಃ** ಚಿದ್ರೂಪನಾದ, ಪಂಚಭೂತಾತ್ಮಕ ದೇಹ ಭಿನ್ನನಾದ, **ಅಸ್ಯ** ಈ ಜೀವನಿಗೆ, **ಧಾತುಭಿಃ ದೇಹಾರಂಭಃ** ಪೃಥಿವ್ಯಾದಿಗಳಿಂದ ದೇಹೋತ್ಪತ್ತಿಯು, **ಯದೃಚ್ಛಯಾ** ಕೇವಲ ಶ್ರೀಹರಿಯ ಇಚ್ಛೆಯಿಂದಲೋ, **ಹೇತುನಾ ವಾ** ಬೇರೆ ಅನಾದಿಯಾದ ಯಾವುದಾದರೂ ಕಾರಣದಿಂದಲೋ, **ಭವಂತಃ** ತಾವು, **ಯಥಾ ಜಾನತೇ** ಯಥಾವತ್ತಾಗಿ ತಿಳಿದಿರುವಿರಿ. (ಇದ್ದಂತೆ ತಿಳಿದಿರುವಿರಿ) ಆದ್ದರಿಂದ ಅದನ್ನು ನಮಗೆ ಹೇಳಿರಿ.

ಸ್ವತಃ ಜ್ಞಾನರೂಪನಾದ ಜೀವನಿಗೆ ಭೌತಿಕದೇಹ ಬರಲು ಈಶ್ವರೇಚ್ಛೆಯಲ್ಲದೇ ಪ್ರಧಾನ ಕಾರಣ ಯಾವುದಾದರೂ ಇದೆಯೋ ಇಲ್ಲವೋ ಎಂದು ಪ್ರಶ್ನಾಭಿಪ್ರಾಯ.

*ಜೀವನ ವಿಷಯದಲ್ಲಿ ಕೇಳಿ ಈಶ್ವರನ ವಿಷಯದಲ್ಲಿ ಕೇಳುವನು-*

**ಆಸೀದ್ಯದುದರಾತ್ಪದ್ಮಂ ಲೋಕಸಂಸ್ಥಾನಲಕ್ಷಣಮ್ ।**
**ಯಾವಾನಯಂ ವೈ ಪುರುಷಃ ಇಯತ್ತಾವಯವೈಃ ಪೃಥಕ್ ।**
**ತಾವಾನಸಾವಿತಿ ಪ್ರೋಕ್ತಸ್ತಥಾವಯವವಾನಿವ ॥ ೮ ॥**

**ಲೋಕಸಂಸ್ಥಾನಲಕ್ಷಣಂ** ಹದಿನಾಲ್ಕುಲೋಕಾತ್ಮಕವಾದ (ಪದ್ಮವೇ ಲೋಕಗಳಾಗಿ ಪರಿಣಮಿಸುವುದು) **ಪದ್ಮಂ** ಕಮಲವು, **ಯದುದರಾತ್** ಮಹಾಪ್ರಲಯದಲ್ಲಿ ಲಕ್ಷ್ಮೀದೇವಿಗೆ ಸಹಾಯಕನಾಗಿ ಮಲಗಿದ ನಾರಾಯಣನೇ ಸೃಷ್ಟೀಚ್ಛೆಯಿಂದ ಪರಮಪುರುಷನಾಗಿ ಅವತರಿಸಿ ತತ್ತ್ವಗಳನ್ನು ಸೃಷ್ಟಿ ಮಾಡಿ, ಬ್ರಹ್ಮಾಂಡವನ್ನು ಸೃಷ್ಟಿಸಿ, ಆ ತತ್ತ್ವಗಳೊಡನೆ ಅಂಡವನ್ನು ಪ್ರವೇಶ ಮಾಡಿ, ಅಂಡೋದಕದಲ್ಲಿ ಶೇಷಪರ್ಯಂಕದಲ್ಲಿ ಮಲಗಿದ ಯಾವನ ಉದರದಿಂದ, (ನಾಭಿಯ ದ್ವಾರಾ) **ಆಸೀತ್** ಹುಟ್ಟಿತೋ, **ಅಸೌ** ಈ ಈಶ್ವರನು, **ಪೃಥಕ್** ಪ್ರತ್ಯೇಕವಾಗಿ **ಇಯತ್ತಾವಯವೈಃ** ಪರಿಚ್ಛಿನ್ನ ಪರಿಮಾಣ ಉಳ್ಳ ಅವಯವಗಳಿಂದ, **ಅಯಂ** ಪ್ರಸಿದ್ಧನಾದ ಲೌಕಿಕಪುರುಷನು, **ಯಾವಾನ್** ಯಾವ ಆಕಾರದಲ್ಲಿರುವನೋ, **ತಾವಾನ್** ಅದೇ ಆಕಾರ ಉಳ್ಳವನು, **ತಥಾ ಅವಯವವಾನಿವ** ಅವನಂತೆ ಅವಯವ ಉಳ್ಳವನು ಎಂದು, **ಪ್ರೋಕ್ತಃ** ಹೇಳಲ್ಪಟ್ಟಿರುವನು.

ಆದ್ದರಿಂದ ಜೀವನಂತೆ ಈಶ್ವರನಿಗೂ ದೇಹ ಇದೆ ಎಂದು ನಿವೇ ಹೇಳಿದ್ದರಿಂದ ಈಶ್ವರನಲ್ಲಿ ಏನು ವಿಶೇಷ ಎಂದು ಪ್ರಶ್ನಾಶಯ. ದೇವರಲ್ಲಿರುವ ವಿಶೇಷವನ್ನೂ ನೀವೇ ಹೇಳಿರುವಿರಿ ಎಂದು ತಿಳಿಸಲು 'ಆಸೀದ್ಯದುದರಾತ್ ಪದ್ಮಂ' ಎಂದು ಹೇಳಿರುವರು. ಆದ್ದರಿಂದ ಸಂಶಯ ಬರುವುದೆಂದು ಭಾವ.

**ವಿಜಯಧ್ವಜೀಯ ಪ್ರಕಾರ-** ಯಾವನ ಉದರದಿಂದ ಪದ್ಮ ಜನಿಸಿತೋ ಅವನೇ ಬ್ರಹ್ಮಾಂಡದೊಳಗೆ ವೈರಾಜನೆಂಬ ಹೆಸರಿನಿಂದ ಅವತರಿಸಿದನು. **ಅಯಂ ಪುರುಷಃ** ಅಂಡಕೋಶವು ಪುರುಷಾಕಾರನಾದ ಭಗವದ್ರೂಪದಿಂದ ಅಧಿಷ್ಠಿತವಾದುದರಿಂದ ಪುರುಷ ಎಂದು ಹೇಳಲ್ಪಡುವುದು. ಪಾತಾಲಾದಿಗಳಿಂದ ಪರಿಮಿತಿಯುಳ್ಳ ಅವಯವಗಳಿಂದ ಎಷ್ಟಿರುವನೋ **ಅಸೌ ಅಪಿ** ವೈರಾಜಪುರುಷನು ಕೂಡಾ, **ತಾವಾನ್** ಅಷ್ಟೇ ಪರಿಮಾಣ ಉಳ್ಳವನು ಎಂದು ಹೇಳಲ್ಪಟ್ಟಿರುವನು. **ತಥಾ ಅವಯವವಾನಿವ** ಬ್ರಹ್ಮಾಂಡದೊಳಗಿರುವುದರಿಂದ ಅದರಿಂದ ಭಿನ್ನರಾದರೂ ಅದರಂತೆ ಅವಯವ ಉಳ್ಳವನಂತೆ ಎಂದು ಅನ್ವಯ. ॥ ೮ ॥

*ಮತ್ತೊಂದು ವಿಶೇಷವನ್ನು ಹಿಂದೆ ಹೇಳಿದ್ದನ್ನು ಅನುವಾದ ಮಾಡುವರು-*

**ಅಜಃ ಸೃಜತಿ ಭೂತಾನಿ ಭೂತಾತ್ಮಾ ಯದನುಗ್ರಹಾತ್ ।**
**ದದೃಶೇ ಯೇನ ತದ್ರೂಪಂ ನಾಭಿಪದ್ಮಸಮುದ್ಭವಃ** ॥ ೯ ॥

**ಭೂತಾತ್ಮಾ** ತನ್ನಿಂದ ಸೃಷ್ಟವಾದ ಕಾರ್ಯಗಳಲ್ಲಿ ವ್ಯಾಪ್ತನಾದ, **ಅಜಃ** ಅಕಾರವಾಚ್ಯನಾದ ಶ್ರೀಹರಿಯಿಂದ ಜನಿಸಿದ ಬ್ರಹ್ಮನು, **ಯದನುಗ್ರಹಾತ್** ಯಾವ ಈಶ್ವರನ ಅನುಗ್ರಹದಿಂದ, **ಸೃಜತಿ** ಸೃಷ್ಟಿಸುವನೋ, **ನಾಭಿಪದ್ಮಸಮುದ್ಭವಃ** ಪಾದ್ಮಕಲ್ಪದಲ್ಲಿ ಪರಮಾತ್ಮನ ನಾಭಿ ಕಮಲದಿಂದ ಜನಿಸಿದ ವಿರಿಂಚನು ತನಗೆ ಕಾರಣನಾದ ಪದ್ಮನಾಭನನ್ನೂ, **ಯೇನ ದದೃಶೇ** ಯಾವನ ಅನುಗ್ರಹದಿಂದ ಯಾವ ರೀತಿಯಾಗಿ ನೋಡಿದನೋ, **ತದ್ರೂಪಂ** ಆ ರೂಪವನ್ನು **ವದ** ಹೇಳು. ಎಂದು ಅನ್ವಯ.

ಅಂದರೆ ಇವೇ ಮೊದಲಾದ ವಿಶೇಷಗಳು ಈಶ್ವರನಿಗೂ ಜೀವನಂತೆ ದೇಹವಿದ್ದರೇ ಹೇಗೆ ಉಪಪನ್ನವಾಗುವವು. ಈಶ್ವರನಿಗೆ ಜೀವನಂತೆ ಕೈಕಾಲು ತಲೆಯುಳ್ಳ ದೇಹವಿದ್ದರೂ ಜೀವಸಾಮ್ಯವಿಲ್ಲ. ಅವನ ದೇಹ ಅಪ್ರಾಕೃತವಾದುದು ಎಂದು ಮುಂದೆ ನಿರೂಪಿಸುವರು ಅದೇ ಇದಕ್ಕೆ ಉತ್ತರವೆಂದು ಭಾವ. ॥ ೯ ॥

ಮತ್ತೆ ಪ್ರಶ್ನಿಸುವನು-

**ಸ ಚಾಽಪಿ ಯತ್ರ ಪುರುಷೋ ವಿಶ್ವಸ್ಥಿತ್ಯುದ್ಭವಾಪ್ಯಯಃ ।**
**ಮುಕ್ತ್ವಾಽಽತ್ಮಮಾಯಾಂ ಮಾಯೇಶಃ ಶೇತೇ ಸರ್ವಗುಣಾಶ್ರಯಃ ॥ ೧೦ ॥**

**ಸ ಚಾಽಪಿ ಪುರುಷಃ** ಯಾವನ ಅನುಗ್ರಹದಿಂದ ಯಾವ ರೀತಿಯಾಗಿ ಅವನ ರೂಪವನ್ನು ನೋಡಿದವನೂ ಸಹ, **ಯತ್ರ** ಯಾವ ಲೋಕದಲ್ಲಿ, **ಸರ್ವಗುಣಾಶ್ರಯಃ** ಜ್ಞಾನಾನಂದಾದಿ ಎಲ್ಲ ಗುಣಗಳಿಗೆ ಆಶ್ರಯನಾದ, **ಮಾಯೇಶಃ** ಲಕ್ಷ್ಮೀಪತಿಯಾದ, **ವಿಶ್ವಸ್ಥಿತ್ಯುದ್ಭವಾಪ್ಯಯಃ** ಜಗತ್ತಿನ ಸೃಷ್ಟಿ-ಸ್ಥಿತಿ-ಲಯಗಳನ್ನು ಮಾಡುವವನು, **ಆತ್ಮಮಾಯಾಂ ಮುಕ್ತ್ವಾ** ತನ್ನ ಬಂಧಕಶಕ್ತಿಯನ್ನು ಬಿಟ್ಟು ಅಂದರೆ ಅಲ್ಲಿರುವ ಜೀವರನ್ನೂ ಬಂಧಮುಕ್ತರನ್ನಾಗಿ ಮಾಡಿ, **ಶೇತೇ** ಮಲಗುವನೋ, **ತಂ** ಆ ಪುರುಷನನ್ನು, ಆ ಪ್ರಕಾರವನ್ನು, ಆ ಲೋಕವನ್ನು, **ಉದಾಹರ್ತುಮರ್ಹಸಿ** ಹೇಳಲು ಯೋಗ್ಯನಾಗಿರುವಿ. ಎಂದು ೨೪ ನೆಯ ಶ್ಲೋಕದಲ್ಲಿ ಅನ್ವಯ. ॥ ೧೦ ॥

ಮತ್ತೊಂದು ಪ್ರಶ್ನೆ-

**ಪುರುಷಾವಯವೈರ್ಲೋಕಾಃ ಸಪಾಲಾಃ ಪೂರ್ವಕಲ್ಪಿತಾಃ ।**
**ಲೋಕೈರಮುಷ್ಯಾವಯವಾಃ ಸಪಾಲೈರಿತಿ ಶುಶ್ರುಮಃ ॥೧೧॥**

**ಸಪಾಲಾಃ** ಪಾಲಕರಿಂದ ಸಹಿತವಾದ, **ಲೋಕಾಃ** ಎಲ್ಲ ಲೋಕಗಳು, ಬ್ರಹ್ಮಾಂಡಾಂತರ್ಗತವಾದ ಎಲ್ಲ ಪದಾರ್ಥಗಳು, **ಪುರುಷಾವಯವೈಃ** ಬ್ರಹ್ಮಾಂಡಾಂತರ್ಗತವಾದ ವೈರಾಜನ ಅವಯಗಳಿಂದ, **ಪೂರ್ವಕಲ್ಪಿತಾಃ** (ಯಸ್ಯೇಹಾವಯವೈಃ) ಮುಂತಾಗಿ ಹಿಂದೆಯೇ ಜನಿಸಿವೆ ಎಂದು ಹೇಳಲ್ಪಟ್ಟವೆ. ಅದನ್ನು ತಿಳಿಸು. **ಅಮುಷ್ಯ** ವೈರಾಜನ, **ಅವಯವಾಃ** ಅವಯವಗಳು, **ಸಪಾಲೈಃ ಲೋಕೈಃ ಕಲ್ಪಿತಾಃ** 'ಪಾತಾಲಮೇತಸ್ಯ' ಮುಂತಾಗಿ ಲೋಕಗಳೇ ಅವಯವಗಳೆಂದು ಧಾರಣಮಾಡಬೇಕೆಂದು ಹೇಳಲ್ಪಟ್ಟಿದೆ.

ಸರಿಯಾಗಿ ತಿಳಿಸದೇ ಹೋದರೆ ಧಾರಣಾ ಮಾಡಲಾಗದು. ಆದ್ದರಿಂದ ಅದನ್ನು ಹೇಳುವುದು ಆವಶ್ಯಕ. ಮೇಲ್ನೋಟಕ್ಕೆ ಅವಯವದಿಂದ ಲೋಕೋತ್ಪತ್ತಿ ಅವಯವವೇ ಲೋಕ ಎಂಬುದು ಅನ್ಯೋನ್ಯಾಶ್ರಯದಂತೆ ಕಾಣುವುದು. ಕಾರಣ ಹಿಂದೆ ಹೇಳಿದ್ದನ್ನೇ ಜ್ಞಾಪಿಸುವರು-

ತಾತ್ಪರ್ಯ - ನಿಜಾವಯವೇಭ್ಯಃ ಸೃಷ್ಟಾಃ । ಬಾಹ್ಯಾವಯವಾಃ ಲೋಕೈಃ ಕಲ್ಪ್ಯಂತೇ ।

ಶ್ರೀಹರಿಯ ಸ್ವರೂಪಗಳಾದ ಪಾದಾದಿ ಅವಯಗಳಿಂದ ೧೪ ಲೋಕಗಳು ಸೃಷ್ಟವಾಗಿವೆ. ಬ್ರಹ್ಮಾಂಡದಲ್ಲಿರುವ ಪಾತಾಲಾದಿ ಸತ್ಯಲೋಕಪರ್ಯಂತ ೧೪ ಲೋಕಗಳು ಅವನ ಪ್ರತಿಮಾದ ಅವಯವಗಳು ಎಂದು ತಿಳಿಯಬೇಕು. ಇದನ್ನು 'ಪಾತಲವಮೇತಸ್ಯ' ಎಂಬಲ್ಲಿ ಹೇಳಿದೆ. 'ಯಸ್ಯೇಹಾವಯವೈಃ' ಎಂಬಲ್ಲಿ ಸ್ವರೂಪಾವಯವಗಳ ವಿವಕ್ಷಾ ಇದೆ. ಆದ್ದರಿಂದ ಯಾವ ವಿರೋಧವೂ ಇಲ್ಲವೆಂದು ಭಾವ. ।। ೧೧ ।।

*ಮತ್ತೆ ತಿಳಿಯದ ಅನೇಕ ಅರ್ಥಗಳನ್ನು ಪ್ರಶ್ನಿಸುವನು-*

**ಯಾವಾನ್ ಕಲ್ಪೋ ವಿಕಲ್ಪೋ ವಾ ಯಥಾ ಕಾಲೋಽನುಮೀಯತೇ ।**
**ಭೂತಭವ್ಯಭವಚ್ಛಬ್ದ ಆಯುರ್ಮಾನಂ ಚ ಯತ್ಸತಮ್ ।। ೧೨ ।।**

**ಕಲ್ಪಃ** ದ್ವಿಪರಾರ್ಧಾಖ್ಯವಾದ ಬ್ರಹ್ಮಕಲ್ಪವು, **ಯಾವಾನ್** ಎಷ್ಟು, **ವಿಕಲ್ಪಃ** ದೈನಂದಿನಕಲ್ಪವು, ಮನ್ವಾದಿ ಕಲ್ಪವು, **ಭೂತಭವ್ಯಭವಚ್ಛಬ್ದಃ** ಭೂತ-ಭವ್ಯ-ಭವತ್ ಎಂಬ ಶಬ್ದ ಉಳ್ಳ ಅಂದರೆ ಅತೀತ-ಅನಾಗತ-ವರ್ತಮಾನ ಕಾಲವು, **ಯಥಾ ಅನುಮೀಯತೇ** ಯಥಾವತ್ತಾಗಿ ತಿಳಿಯುವದು ಹೇಗೆ? **ಆಯುರ್ಮಾನಂ ಚ ಯತ್ಸತಂ** ಆಯುಷ್ಯದ ಪ್ರಮಾಣ ಯಾವ ಕಾಲದಿಂದ ಮಾಡಲ್ಪಟ್ಟಿದೆ. ।। ೧೨ ।।

**ಕಾಲಸ್ಯಾನುಗತಿರ್ಯಾ ತು ಲಕ್ಷ್ಯತೇಽಣ್ವೀ ಮಹತ್ಯಪಿ ।**
**ಯಾವತೀಃ ಕರ್ಮಗತಯೋ ಯಾದೃಶೀರ್ದ್ವಿಜಸತ್ತಮ ।। ೧೩ ।।**

**ಹೇ ದ್ವಿಜಸತ್ತಮ** ಬ್ರಾಹ್ಮಣಶ್ರೇಷ್ಠರಾದ ಶುಕಾಚಾರ್ಯರೇ, **ಅಣ್ವೀ** ಪರಮಾಣು ರೂಪವಾದ ಅಥವಾ, **ಮಹತೀ** ಪರಮಮಹತ್ತಾದ, **ಕಾಲಸ್ಯ** ಕಾಲದ, **ಯಾ ಅನುಗತಿಃ** ಪ್ರವೃತ್ತಿ ಎನಿದೆಯೋ, **ಸಾ** ಅದು, **ಕಥಂ ಲಕ್ಷ್ಯತೇ** ಹೇಗೆ ತಿಳಿಯುವುದು, **ಕರ್ಮಗತಯಃ ಯಾವತೀಃ ಯಾದೃಶೀಃ** ಕರ್ಮಫಲಗಳು ಎಷ್ಟು ಯಾವ ರೀತಿಯಾಗಿವೆ? ।। ೧೩ ।।

**ಯಸ್ಮಿನ್ ಕರ್ಮಸಮಾವಾಪೋ ಯಥಾ ಯೇನೋಪಗೃಹ್ಯತೇ ।**
**ಗುಣಾನಾಂ ಗುಣಿನಾಂ ಚೈವ ಪರಿಮಾಣಂ ಸುವಿಸ್ತರಮ್ ।। ೧೪ ।।**

**ಯಸ್ಮಿನ್** ಯಾವ ಜೀವರಲ್ಲಿ, **ಕರ್ಮಸಮಾವಾಪಃ** ಕರ್ಮಗಳ ಸಂಗ್ರಹವು, **ಯಥಾ** ಹೇಗೆ, **ಯೇನ** ಯಾರಿಂದ, **ಉಪಗೃಹ್ಯತೇ** ಸ್ವೀಕರಿಸಲ್ಪಡುವುದು, ಸಂಗ್ರಹಕರ್ತಾ ಯಾರು ಎಂದು ಪ್ರಶ್ನಾರ್ಥ. ಅಂದರೆ ಕರ್ಮ ಮಾಡುವವರು ಯಾರು ಎಂದೇ ಭಾವ.

**ಗುಣಾನಾಂ** ಸತ್ತ್ವಾದಿಗುಣಗಳ, **ಗುಣಿನಾಂ** ಮಹದಾದಿಜೀವರ, **ಪರಿಮಾಣಂ** ಪರಿಮಿತಿಯನ್ನು ಸಾಮರ್ಥ್ಯವನ್ನು **ಸುವಿಸ್ತರಂ** ವಿಸ್ತಾರವಾಗಿ ಹೇಳಿರಿ ಎಂದನ್ವಯ.

ಯಾರಲ್ಲಿ ಕರ್ಮಸಂಗ್ರಹ ಮತ್ತು ಆ ಕರ್ಮ ಯಾವ ನಿಯಾಮಕನಿಂದ ಹೇಗೆ ಸ್ವೀಕರಿಸಲ್ಪಡುತ್ತವೆ. ಎಂಬ ಪ್ರಶ್ನೆಗಳಿಗೆ ಉತ್ತರ ಮುಂದೆ ಎಲ್ಲಿ ಹೇಳಿದೆ ತಿಳಿಯುವುದಿಲ್ಲ ಆದ್ದರಿಂದ ಉತ್ತರ ಹೇಳಿದ ಸ್ಥಳಗಳನ್ನು ತಿಳಿಸುವರು-

**ತಾತ್ಪರ್ಯ- 'ಜಿವೇ ಕರ್ಮಸಮಾವಾಪಃ । ಪರಮೇಶ್ವರೇಣ ಗೃಹ್ಯತೇ । ಗುಣಿನಾಂ ಮಹದಾದಿಜೀವಾನಾಂ ಸಾಮರ್ಥ್ಯೇ ಪರಿಮಾಣಮ್ । ದೇವಾಸುರೇಭ್ಯೋ ಮಘವಾನ್ ಇತ್ಯಾದಿ ॥**

ಜೀವನು ಶ್ರೀಹರಿಯ ಸೇವಾರೂಪಕರ್ಮ ಮಾಡುತ್ತಾನೆ. ಅದನ್ನು ಶ್ರೀಹರಿಯು ತನ್ನ ಪೂಜಾರೂಪವಾಗಿ ತೆಗೆದುಕೊಳ್ಳುತ್ತಾನೆ. ಎಂಬ ವಿಷಯವು ಎಲ್ಲಿ ಉಕ್ತವಾಗಿದೆಯೋ ಅದೇ ಈ ಎರಡು ಪ್ರಶ್ನೆಗೆ ಉತ್ತರ ಸ್ಥಾನ ಎಂದು ಭಾವ) **ಗುಣಾನಾಂ** ಮಹದಾದಿಕಾರ್ಯಗಳ ಪರಿಮಾಣವನ್ನು ತೃತೀಯಸ್ಕಂಧದಲ್ಲಿ ಹೇಳಿದೆ.

ಗುಣಿಗಳು ಯಾರು ? ಯಾವ ವಿಷಯದಲ್ಲಿ ಪರಿಮಾಣವು ? ಎಲ್ಲಿ ಹೇಳಿದೆ ? ಎಂದರೆ ಉತ್ತರ ಹೇಳುವರು 'ಗುಣಿನಾಂ' ಎಂದು. **ಗುಣಿನಾಂ** ಮಹತ್ತತ್ವಾದ್ಯಭಿಮಾನಿಗಳಾದ ಬ್ರಹ್ಮಾದಿಜೀವರಿಗೆ ಸಾಮರ್ಥ್ಯವಿಷಯಕವಾದ ತಾರತಮ್ಯದಿಂದಿರುವ ಪರಿಮಿತಿಯು 'ದೇವಾಸುರೇಭ್ಯೋ' ಮುಂತಾಗಿ ೫ನೇ ಸ್ಕಂಧದಲ್ಲಿ ಹೇಳಲ್ಪಡುತ್ತದೆ.

ಗುಣ ಎಂದರೆ ಶಬ್ದಾದಿಗಳು, ಗುಣಿ ಎಂದರೆ ಆಕಾಶಾದಿಗಳು ಎಂಬ ವ್ಯಾಖ್ಯಾನ ಸರಿಯಲ್ಲ. ಅವುಗಳ ಪ್ರಮಾಣ ಹೇಳಿಲ್ಲ. ಅಲ್ಲದೇ 'ದೇವಾಸುರೇಭ್ಯೋ' ಎಂದು ಬ್ರಹ್ಮಾದಿಗಳ ಸಾಮರ್ಥ್ಯದ ವಿಷಯದಲ್ಲಿ ಪ್ರಮಾಣವಿದೆ. ಆದ್ದರಿಂದ ನಮ್ಮ ವ್ಯಾಖ್ಯಾನವೇ ಸರಿ ಎಂದು ಭಾವ. ॥ ೧೪ ॥

**ಭೂಪಾತಾಲಕಕುಬ್ವ್ಯೋಮಗ್ರಹನಕ್ಷತ್ರಭೂಭೃತಾಮ್ ।**
**ಸರಿತ್ಸಮುದ್ರದ್ವೀಪಾನಾಂ ಸಂಭವಂ ಚೈತದೋಕಸಾಮ್ ॥ ೧೫ ॥**

**ಭೂ** ಭೂಮಿ, **ಪಾತಾಲ** ಪಾತಾಲ, **ಕಕುಬ್** ದಿಕ್ಕು, **ವ್ಯೋಮ** ಆಕಾಶ, **ಗ್ರಹ** ಸೂರ್ಯಾದಿಗಳು, **ನಕ್ಷತ್ರ** ಅಶ್ವಿನ್ಯಾದಿಗಳು, **ಭೂಭೃತಾಂ** ಪರ್ವತಗಳ, **ಸರಿತ್** ನದಿಗಳು, **ಸಮುದ್ರ** ಸಮುದ್ರ, **ದ್ವೀಪಾನಾಮ್** ಮತ್ತು ದ್ವೀಪಗಳ ಪರಿಮಾಣವನ್ನು, **ಏತದೋಕಸಾಂ** ಭೂಮ್ಯಾದಿಗಳೇ ಮನೆಯಾಗಿ ಉಳ್ಳವರ, **ಸಂಭವಂ** ಉತ್ಪತ್ತಿಯನ್ನು

**ಪ್ರಮಾಣಮಂಡಕೋಶಸ್ಯ ಬಾಹ್ಯಾಭ್ಯಂತರವಸ್ತುನಃ ।**
**ಮಹತಾಂ ಚಾನುಚರಿತಂ ವರ್ಣಾಶ್ರಮವಿನಿರ್ಣಯಮ್ ॥ ೧೬ ॥**

**ಅಂಡಕೋಶಸ್ಯ** ಬ್ರಹ್ಮಾಂಡದ, **ಪ್ರಮಾಣಂ** ಪರಿಮಿತಿಯನ್ನು, **ಬಾಹ್ಯಾಂಭ್ಯಂತರವಸ್ತುನಃ** ಹೊರಗೆ ಒಳಗೆ ಇರುವ ಶ್ರೀಹರಿಯ, (ಪರಮಾಣ್ವಾದಿ ಪರಮಮಹತ್ತಾದ ರೂಪಗಳ) ಪರಿಮಾಣವನ್ನು, **ಮಹತಾಂ** ಮರೀಚಿ-ಕರ್ದಮ ಮುಂತಾದವರ, **ಅನುಚರಿತಂ** ಚರಿತ್ರೆಯನ್ನು, **ವರ್ಣಾಶ್ರಮವಿನಿರ್ಣಯಮ್** ವರ್ಣಗಳ-ಆಶ್ರಮಗಳ ವಿಶೇಷನಿರ್ಣಯವನ್ನು, ॥ ೧೬ ॥

**ಅವತಾರಾನುಚರಿತಂ ಯದಾಶ್ಚರ್ಯತಮಂ ಹರೇಃ ।**
**ಯುಗಾನಿ ಯುಗಮಾನಂ ಚ ಧರ್ಮೋ ಯಶ್ಚ ಯುಗೇ ಯುಗೇ ॥ ೧೭ ॥**

**ಹರೇಃ** ಶ್ರೀಹರಿಯ, **ಯದಾಶ್ಚರ್ಯತಮಂ** ಇತರರಿಗೆ ಅತ್ಯಾಶ್ಚರ್ಯವನ್ನುಂಟು ಮಾಡುವ, **ಅವತಾರಾನುಚರಿತಂ** ಅವತಾರಗಳ ಚರಿತ್ರೆಯನ್ನು, **ಯುಗಾನಿ** ಯುಗಗಳನ್ನು, **ಯುಗಮಾನಂ** ಯುಗಗಳ ಪರಿಮಾಣವನ್ನು, **ಯುಗೇ ಯುಗೇ ಯಃ ಧರ್ಮಃ** ಪ್ರತಿಯೊಂದು ಯುಗದ ಧರ್ಮವು ಯಾವುದು ಅದನ್ನು ಕೂಡಾ, ॥ ೧೭ ॥

**ನೃಣಾಂ ಸಾಧಾರಣೋ ಧರ್ಮಃ ಸವಿಶೇಷಶ್ಚ ಯಾದೃಶಃ ।**
**ಶ್ರೇಣೀನಾಂ ರಾಜರ್ಷೀಣಾಂ ಚ ಧರ್ಮಃ ಕೃಚ್ಛ್ರೇಷು ಜೀವತಾಮ್ ॥ ೧೮ ॥**

**ನೃಣಾಂ** ಜನರ, **ಸಾಧಾರಣಃ ಧರ್ಮಃ** ಎಲ್ಲ ವರ್ಣಾಶ್ರಮಗಳಿಗೂ ಸಮಾನವಾದ ಧರ್ಮ ಯಾವುದು, **ಸವಿಶೇಷಃ ಯಾದೃಶಃ** ಬ್ರಾಹ್ಮಣಾದಿಗಳಿಗೆ ಮತ್ತು ಯತ್ಯಾದಿಗಳಿಗೆ ವಿಹಿತವಾದ ವಿಶೇಷವಾದ ಧರ್ಮಗಳು ಯಾವು, **ಶ್ರೇಣೀನಾಂ** ಅಂಗರಕ್ಷಕರ, **ಚ** ಮತ್ತು, **ರಾಜರ್ಷೀಣಾಂ** ಪ್ರಿಯವ್ರತಾದಿಗಳ, **ಕೃಚ್ಛ್ರೇಷು ಜೀವತಾಂ** ಆಪತ್ತಿನಲ್ಲಿ ಜೀವಿಸುವವರ, **ಧರ್ಮಃ** ಧರ್ಮವು ಯಾವುದು ?

ಶ್ರೇಣಿಗಳೆಂದರೆ ಯಾರು ? ಅವರ ಧರ್ಮ ಎಲ್ಲಿ ಹೇಳಿದೆ ? ಎಂಬುದನ್ನು ತಿಳಿಸುವರು-

ತಾತ್ಪರ್ಯ- ಶ್ರೇಣೀನಾಂ ಅಂಗರಕ್ಷಕಾನಾಂ ಯುದ್ಧೇಷು ಉಚ್ಯತೇ ।

ಶ್ರೇಣಿಗಳೆಂದರೆ ಅಂಗರಕ್ಷಕರು. ಅವರ ಧರ್ಮವನ್ನು ಮುಂದೆ ಯುದ್ಧಗಳನ್ನು ಹೇಳುವಾಗ ಹೇಳುವರು. ಅದೇ ಇದಕ್ಕೆ ಉತ್ತರವೆಂದು ಭಾವ.

**ತತ್ತ್ವಾನಾಂ ಪರಿಸಂಖ್ಯಾನಂ ಲಕ್ಷಣಂ ಹೇತುಲಕ್ಷಣಮ್ ।**
**ಪುರುಷಾರಾಧನವಿಧಿಂ ಯೋಗಸ್ಯಾಧ್ಯಾತ್ಮಿಕಸ್ಯ ಚ ॥ ೧೯ ॥**

**ತತ್ತ್ವಾನಾಂ** ಪ್ರಕೃತ್ಯಾದಿಗಳ, **ಪರಿಸಂಖ್ಯಾನಂ** ಗಣನೆಯನ್ನು, **ಲಕ್ಷಣಂ** ಸ್ವರೂಪವನ್ನು, **ಹೇತುಲಕ್ಷಣಂ** ಪರಬ್ರಹ್ಮನ ಲಕ್ಷಣವನ್ನು, **ಪುರುಷಾರಾಧನವಿಧಿಂ** ವಿಷ್ಣುವಿನ ಪೂಜಾ ಪ್ರಕಾರವನ್ನು, **ಆಧ್ಯಾತ್ಮಿಕಸ್ಯ ಯೋಗಸ್ಯ ಚ** ಪರಮಾತ್ಮನ ಸಂಬಂಧಿಯಾದ ಧ್ಯಾನದ ರೀತಿಯನ್ನು ಹೇಳಿರಿ.

ಇಲ್ಲಿ ಹೇತುಲಕ್ಷಣ ಎಂದರೇನು? ಎಲ್ಲಿ ಹೇಳಿದೆ? ಎಂದು ತಿಳಿಯುವುದಿಲ್ಲ ಆದ್ದರಿಂದ ಅದನ್ನು ತಿಳಿಸುವರು-

ತಾತ್ಪರ್ಯ- ಹೇತುಲಕ್ಷಣಂ ಬ್ರಹ್ಮಲಕ್ಷಣಮ್ ।

ಹೇತುಶಬ್ದದಿಂದ ಜಗಜ್ಜನ್ಮಾದಿಕಾರಣನಾದುದರಿಂದ ಬ್ರಹ್ಮನು ಹೇಳಲ್ಪಡುವನು. ಅವನ ಲಕ್ಷಣ 'ಸ್ಥಿತ್ಯುದ್ಭವಪ್ರಲಯಹೇತುರಹೇತುರಸ್ಯ' ಮುಂತಾಗಿ ಹೇಳಲ್ಪಡುವುದು ಹೇತುಲಕ್ಷಣವೆಂದು ಭಾವ.

**ಯೋಗೇಶ್ವರೈಶ್ವರ್ಯಗತಿಂ ಲಿಂಗಭಂಗಂ ಚ ಯೋಗಿನಾಮ್ ।**
**ವೇದೋಪವೇದಧರ್ಮಾಣಾಮಿತಿಹಾಸಪುರಾಣಯೋಃ ॥ ೨೦ ॥**

**ಯೋಗೇಶ್ವರೈಶ್ವರ್ಯಗತಿಂ** ಯೋಗೇಶ್ವರರ ಅಣಿಮಾದಿ ಅಷ್ಟಐಶ್ವರ್ಯಪ್ರಾಪ್ತಿಯನ್ನು, **ಯೋಗಿನಾಂ** ಯೋಗಿಗಳ, **ಲಿಂಗಭಂಗಂ ಚ** ಕೊನೆಯ ಶರೀರತ್ಯಾಗವನ್ನು, **ವೇದ** ಋಗಾದಿಗಳು, **ಉಪವೇದ** ಆಯುರ್ವೇದಾದಿಗಳು, **ಧರ್ಮಾಣಾಂ** ಧರ್ಮಶಾಸ್ತ್ರಗಳ, **ಇತಿಹಾಸಪುರಾಣಯೋಃ** ಇತಿಹಾಸ-ಪುರಾಣಗಳ, ॥ ೨೦ ॥

ಇಲ್ಲಿ ಯೋಗಿಗಳ ಲಿಂಗಭಂಗ ಎಂದರೆ ಚರಮಶರೀರತ್ಯಾಗ. ಅದನ್ನು 'ಸ್ಥಿರಂ ಸುಖಂ ಚಾಸನಂ' ಎಂದು ಹಿಂದೆಯೇ ಹೇಳಿ ಆಗಿದೆ. ಕಾರಣ ಪ್ರಶ್ನ ವ್ಯರ್ಥ ಎನಿಸುವುದು ಅದಕ್ಕೆ ಉತ್ತರಿಸುವರು-

ತಾತ್ಪರ್ಯ- ಯೋಗತೋ ಲಿಂಗಭಂಗಃ ಪೂರ್ವೋಕ್ತಃ । ಪಾನೇನ ತೇ ದೇವೇತ್ಯಾದಿ ಪಶ್ಚಾತ್

ಯೋಗಿಗಳು ಎರಡುವಿಧರಾಗಿದ್ದಾರೆ. ೧. ಯಮ-ನಿಯಮ ಮೊದಲಾದ ಯೋಗಾಭ್ಯಾಸವೇ ಪ್ರಧಾನವಾಗಿ ಉಳ್ಳವರು, ೨. ಭಕ್ತಿಪೂರ್ವಕ ಶ್ರವಣಾದ್ಯಭ್ಯಾಸವೇ ಪ್ರಧಾನವಾಗಿ ಉಳ್ಳವರು. ಇವರಲ್ಲಿ ಮೊದಲನೆಯವರಿಗೆ 'ಸ್ಥಿರಂ ಸುಖಂ ಚಾಸನಂ'

ಇತ್ಯಾದಿಗಳಿಂದ ಹೇಳಿದ ಯೋಗದಿಂದ ಚರಮದೇಹತ್ಯಾಗವು ಪೂರ್ವದಲ್ಲಿ ಉಕ್ತವಾಗಿದೆ. ಆದ ಕಾರಣ ಈ ಪ್ರಶ್ನೆಯು ಎರಡನೆಯ ಯೋಗಿಗಳ ಲಿಂಗಭಂಗ-ವಿಷಯಕವಾಗಿದೆ. ಇದಕ್ಕೆ ಉತ್ತರವನ್ನು 'ಪಾನೇನ ತೇ ದೇವಕಥಾಸುಧಾಯಾಃ' ಇತ್ಯಾದಿವಚನಗಳಿಂದ ಮುಂದೆ ಹೇಳುವರು ಎಂದು ಭಾವ.

**ಸಂಭವಃ ಸರ್ವಭೂತಾನಾಂ ವಿಕ್ರಮಃ ಪ್ರತಿಸಂಕ್ರಮಃ ।**
**ಇಷ್ಟಾಪೂರ್ತಸ್ಯ ಕಾಮ್ಯಾನಾಂ ತ್ರಿವರ್ಗಸ್ಯ ಚ ಯೋ ವಿಧಿಃ ॥ ೨೦ ॥**

**ಸಂಭವಃ** ವೇದ-ಉಪವೇದ-ಇತಿಹಾಸ-ಪುರಾಣ-ವರ್ಣಾಶ್ರಮಧರ್ಮಗಳ **ಯಥಾಸಂಭವಂ** ಯಾವುದಕ್ಕೆ ಯಾವುದು ಸಾಧ್ಯವೋ ಅದು ಉದ್ಧಾರ ಅಥವಾ ಉತ್ಪತ್ತಿ, **ಸರ್ವಭೂತಾನಾಂ** ಎಲ್ಲ ಪ್ರಾಣಿಗಳ ಉತ್ಪತ್ತಿ, **ವಿಕ್ರಮಃ** ವಿವಿಧ ಚರಿತ್ರೆಗಳು, (ವಿಶಿಷ್ಟಸ್ಥಿತಿಗಳು) **ಪ್ರತಿಸಂಕ್ರಮಃ** ಸಂಹಾರ, **ಇಷ್ಟ** ಯಾಗಾದಿಗಳ, **ಪೂರ್ತಸ್ಯ** ಭಾವಿ-ಕೆರೆಗಳನ್ನು ಕಟ್ಟಿಸುವುದರ, **ಕಾಮ್ಯಾನಾಂ** ಸಕಾಮಕರ್ಮಗಳಾದ ಕಾರೀರ್ಯಾದಿಗಳ, **ತ್ರಿವರ್ಗಸ್ಯ** ಧರ್ಮಾರ್ಥಕಾಮಗಳ, **ಯಃ ವಿಧಿಃ** ರೀತಿಯನ್ನು,

**ಯೋ ವಾಽನುಶಾಯಿನಾಂ ಸರ್ಗಃ ಪಾಖಂಡಸ್ಯ ಚ ಸಂಭವಃ ।**
**ಆತ್ಮನೋ ಬಂಧಮೋಕ್ಷೌ ಚ ವ್ಯವಸ್ಥಾನಂ ಸ್ವರೂಪತಃ ॥ ೨೨ ॥**

**ಅನುಶಾಯಿನಾಂ** ಕರ್ಮಾನುಸಾರವಾಗಿ ಗರ್ಭವಾಸ ಮಾಡುವವರ, **ಸರ್ಗಂ** ಸೃಷ್ಟಿಯು **ಪಾಖಂಡಸ್ಯ ಸಂಭವಃ** ಪಾಷಂಡಿಗಳ ಉತ್ಪತ್ತಿ, **ಆತ್ಮನಃ** ಜೀವನ, **ಬಂಧಮೋಕ್ಷೌ** ಬಂಧ ಮತ್ತು ಬಂಧಧ್ವಂಸರೂಪವಾದ ಮೋಕ್ಷ, **ಸ್ವರೂಪತಃ ವ್ಯವಸ್ಥಾನಂ** ಸ್ವರೂಪಾನಂದಾನುಭವ ಮಾಡುತ್ತ ಇರುವುದು ಎಂಬ ಮೋಕ್ಷ ॥ ೨೨ ॥

**ಯಥಾಽತ್ಮತಂತ್ರೋ ಭಗವಾನ್ ವಿಕ್ರೀಡತ್ಯಾತ್ಮಮಾಯಯಾ ।**
**ವಿಸೃಜ್ಯ ಚ ಯಥಾ ಮಾಯಾಮುದಾಸ್ತೇ ಸಾಕ್ಷಿವದ್ವಿಭುಃ ॥ ೨೩ ॥**

**ಆತ್ಮತಂತ್ರಃ** ಸ್ವತಂತ್ರನಾದ, **ಭಗವಾನ್** ಶ್ರೀಹರಿಯು, **ಆತ್ಮಮಾಯಯಾ** ತನ್ನ ಇಚ್ಛೆಯಿಂದ, ತನ್ನ ಅಧೀನವಾದ ಚೇತನಪ್ರಕೃತಿ ಅಚೇತನಪ್ರಕೃತಿಗಳಿಂದ, **ಯಥಾ ವಿಕ್ರೀಡತಿ** ಜಗತ್ಸೃಷ್ಟ್ಯಾದಿಗಳಿಂದ ಯಾವರೀತಿಯಾಗಿ ಕ್ರೀಡಿಸುವನೋ ಮತ್ತು ತನ್ನ ಇಚ್ಛೆಯಿಂದ ತನ್ನ ಅಧೀನವಾದ ಪ್ರಕೃತ್ಯಾದಿಗಳಿಂದ ಜೀವನನ್ನು ಬಂಧಿಸಿ ವಿಶೇಷವಾಗಿ ಕ್ರೀಡಿಸುವನೋ ಅಂದರೆ ಜೀವನನ್ನು ಸಂಸಾರದಲ್ಲಿರಿಸುವನೋ, **ಮಾಯಾಂ** ತನ್ನ ಅಧೀನವಾದ ಪ್ರಕೃತ್ಯಾದಿರೂಪವಾದ ಮಾಯೆಯನ್ನು **ಮಾಯಯಾ** ಸ್ವರೂಪೇಚ್ಛೆಯಿಂದ,

**ವಿಸೃಜ್ಯ** ಮೋಚನ ಮಾಡಿ, **ಉದಾಸ್ತೇ** ಪ್ರಕೃತಿಗೆ ಬಂಧನಕಾರಣತ್ವವನ್ನು ಮತ್ತೆ ಕೊಡಲಾರನು, **ಸಾಕ್ಷಿವತ್** ನಿಂತು ನೋಡುವ ಪುರುಷನಂತೆ ನಿರ್ಲೇಪನಾದ ಶ್ರೀಹರಿಯು, **ಆತ್ಮಮಾಯಯಾ** ತನ್ನ ಇಚ್ಛೆಯಿಂದ, **ವಿಕ್ರೀಡತಿ** ಮುಕ್ತನಾದ ಜೀವನಲ್ಲಿದ್ದು ಮುಕ್ತನನ್ನೂ ವಿಶೇಷವಾಗಿ ಸಂತೋಷಪಡಿಸುವನು.

ಇಲ್ಲಿ ಮಾಯಾ ಎಂದರೆ ಅನಿರ್ವಾಚ್ಯವಾದ ಅವಿದ್ಯಾ ಅಲ್ಲವೆಂದು ತಿಳಿಸುವುದಕ್ಕಾಗಿ ಮಾಯಾ ಶಬ್ದದ ಅರ್ಥವನ್ನು ತಿಳಿಸುವ ಶ್ರುತಿಯನ್ನು ಉದಾಹರಿಸುತ್ತಿದ್ದಾರೆ-

**ತಾತ್ಪರ್ಯ- 'ದ್ವೇಧಾ ವಾವ ಆತ್ಮಮಾಯಾ ತದ್ರೂಪಾ ತದ್ವಶಾ ಚೇತಿ । ತದ್ವಶಯಾ ಸಂಸಾರಯತಿ । ಸ್ವರೂಪಯಾ ವಿಮೋಚಯತ್ಯುದಾಸ್ತೇ ತದ್ವಶಾಂ ವಿಮುಕ್ತಸ್ಯ ಇತರಯಾ ಏನಂ ರಮಯತಿ ಏಷ ಆತ್ಮಾ ಏಷ ಆನಂದಃ' ।। -ಇತಿ ಸೌಕರಾಯಣಶ್ರುತಿಃ**

ಪರಮಾತ್ಮನ ಮಾಯೆಯು ಎರಡುವಿಧವಾಗಿದೆ. ಒಂದು ಪರಮಾತ್ಮನ ಇಚ್ಛಾರೂಪವಾಗಿದೆ. ಮತ್ತೊಂದು ಶ್ರೀಹರಿಯ ಅಧೀನವಾದ ಪ್ರಕೃತ್ಯಾದಿರೂಪವಾಗಿದೆ. ಎರಡನೆಯದಾದ ಪ್ರಕೃತ್ಯಾದಿಗಳಿಂದ ಜೀವನಿಗೆ ಸಂಸಾರವನ್ನು ಹೊಂದಿಸುತ್ತಾನೆ. ತನ್ನ ಸ್ವರೂಪ ಭೂತವಾದ ಇಚ್ಛೆಯಿಂದ ಜೀವನನ್ನು ಸಂಸಾರದಿಂದ ಬಿಡುಗಡೆ ಮಾಡುತ್ತಾನೆ. ಮುಕ್ತಜೀವರಿಗೆ ನಿಯಾಮಕನಾದ ಶ್ರೀಹರಿಯು ತನ್ನ ಅಧೀನವಾದ, ಬಂಧಕವಾದ, ಪ್ರಕೃತ್ಯಾದಿರೂಪವಾದ, ಮಾಯೆಗೆ ಮುಕ್ತರ ವಿಷಯದಲ್ಲಿ ಬಂಧನಶಕ್ತಿಯನ್ನು ಕೊಡುವುದಿಲ್ಲ, ತನ್ನ ಇಚ್ಛಾರೂಪಮಾಯೆಯಿಂದ ಈ ಮುಕ್ತಜೀವನನ್ನು ಸಂತೋಷಗೊಳಿಸುತ್ತಾನೆ. ಸ್ವಯಂ ಶ್ರೀಹರಿಯು ವ್ಯಾಪ್ತನು, ಆನಂದರೂಪನು ಎಂದು ಸೌಕರಾಯಣಶ್ರುತಿಯಲ್ಲಿ ಹೇಳಿದೆ. ।। ೨೩ ।।

**ಸರ್ವಮೇತಚ್ಚ ಭಗವಾನ್ ಪೃಚ್ಛತೋ ಮೇಽನುಪೂರ್ವಶಃ ।**
**ತತ್ತ್ವತೋಽರ್ಹಸ್ಯುದಾಹರ್ತುಂ ಪ್ರಪನ್ನಾಯ ಮಹಾಮುನೇ ।। ೨೪ ।।**

**ಹೇ ಮಹಾಮುನೇ** ಶುಕಮುನಿಗಳೇ, **ಪ್ರಪನ್ನಾಯ** ಶರಣಾಗತನಾದ, **ಪೃಚ್ಛತಃ** ಪ್ರಶ್ನೆ ಮಾಡಿದ, **ಮೇ** ನನಗೆ, **ಭಗವಾನ್** ಪೂಜ್ಯರಾದ ನೀವು, **ಅನುಪೂರ್ವಶಃ** ಕ್ರಮವಾಗಿ, (ಯಾವುದನ್ನು ಮೊದಲು ಹೇಳಬೇಕೆಂದು ತೋರುವುದೋ ಆ ರೀತಿಯಾಗಿ) **ಏತತ್ ಸರ್ವಂ** ನಾನು ಕೇಳಿದ ಎಲ್ಲವನ್ನು, **ಚ** ಕೇಳದಿದ್ದುದನ್ನೂ, **ತತ್ತ್ವತಃ** ಯಥಾರ್ಥವಾಗಿ, **ಉದಾಹರ್ತುಂ ಅರ್ಹಸಿ** ಹೇಳಲು ಯೋಗ್ಯರಾಗಿರುವಿರಿ. ।। ೨೪ ।।

*ಮಹಾಮುನಿಗಳಾದ ಬೃಹಸ್ಪತ್ಯಾದಿಗಳಂತೆ ವಿಪ್ರಲಂಭಕತ್ವವು ಸಂಭಾವಿತವಾಗಿದೆ. ಅದೂ ನಿಮ್ಮಲ್ಲಿ ಇಲ್ಲ ಎಂದು ಹೇಳುವನು-*

**ಅತ್ರ ಪ್ರಮಾಣಂ ಹಿ ಭವಾನ್ ಪರಮೇಷ್ಠೀ ಯಥಾತ್ಮಭೂಃ ।**
**ಅಪರೇ ಹ್ಯನುತಿಷ್ಠಂತಿ ಪೂರ್ವೇಷಾಂ ಪೂರ್ವಜೈಃ ಕೃತಮ್ ॥ ೨೫ ॥**

**ಹಿ** ಯಾವಕಾರಣ, **ಪೂರ್ವೇಷಾಂ** ಮರೀಚಿ ಮೊದಲಾದವರಿಗಿಂತಲೂ, **ಪೂರ್ವಜೈಃ** ಮೊದಲಿಗೆ ಜನಿಸಿದ ಬ್ರಹ್ಮಾದಿಗಳಿಂದ, **ಕೃತಂ** ಮಾಡಲ್ಪಟ್ಟ ಶಾಸ್ತ್ರಾರ್ಥವನ್ನು, **ಅಪರೇ** ಬೇರೆ ಋಷಿಗಳು, **ಅನುತಿಷ್ಠಂತಿ** ಆಚರಿಸುವವರು ಆದಕಾರಣ, **ಪರಮೇಷ್ಠೀ** ಬ್ರಹ್ಮದೇವರು **ಪ್ರಮಾಣಂ** ಆಪ್ತರು. ಪರಮೇಷ್ಠಿಯು ಆಪ್ತನಾಗದೇ ಹೋದರೆ ಎಲ್ಲ ಶಿಷ್ಟರು ವಿರೋಧವಿಲ್ಲದೇ ಸರ್ವಾನುಮತದಿಂದ ಅನುಷ್ಠಾನ ಮಾಡುತ್ತಿರಲಿಲ್ಲ, ಆದ್ದರಿಂದ ಪರಮೇಷ್ಠಿಯು ಪ್ರಮಾಣ. **ಯಥಾ** ಹೇಗೆ, **ಆತ್ಮಭೂಃ** ಪರಮಾತ್ಮನ ಪುತ್ರರಾದ ಬ್ರಹ್ಮದೇವರು, **ಪ್ರಮಾಣಂ** ಎಲ್ಲ ವಿಷಯದಲ್ಲಿ ಆಪ್ತರಾಗಿರುವರೋ, **ತಥಾ** ಹಾಗೆ, **ಭವಾನ್** ವ್ಯಾಸಪುತ್ರರಾದ ತಾವು, **ಅತ್ರ** ನಾನು ಕೇಳಿದ ವಿಷಯದಲ್ಲಿ, **ಪ್ರಮಾಣಂ** ಆಪ್ತರೇ ಆಗಿದ್ದೀರಿ, ವಂಚಕರಲ್ಲ.

ಪೂರ್ವಾರ್ಧದಲ್ಲಿ ದೃಷ್ಟಾಂತ-ದಾರ್ಷ್ಟಾಂತಿಕ ಹೇಳಿದ ಮೇಲೆ ಉತ್ತರಾರ್ಧ ವ್ಯರ್ಥ ಎಂದರೆ ಬ್ರಹ್ಮದೇವರಿಗೆ ಸರ್ವಶಾಸ್ತ್ರಾರ್ಥದಲ್ಲಿ ಆಪ್ತತ್ವವನ್ನು ಸಮರ್ಥನ ಮಾಡಲು ಅದರ ಉಪಯೋಗವೆಂದು ಹೇಳುವರು-

**ತಾತ್ಪರ್ಯ- ಯಸ್ಮಾದನುತಿಷ್ಠಂತಿ ತಸ್ಮಾತ್ ಪರಮೇಷ್ಠೀ ಪ್ರಮಾಣಮ್ ।**

ಯಾವ ಕಾರಣದಿಂದ ಬ್ರಹ್ಮಾದಿಗಳು ಮಾಡಿದ ಶಾಸ್ತ್ರಾರ್ಥವನ್ನು ಮರೀಚ್ಯಾದಿಗಳು ಅನುಷ್ಠಾನಮಾಡುವರೋ ಆದಕಾರಣ ಚತುರ್ಮುಖನು ಆಪ್ತನು.

*ಉಪವಾಸವಿರುವ ನಿನ್ನ ಮನಆದಿ ಇಂದ್ರಿಯಗಳು ದುರ್ಬಲವಾಗುತ್ತವೆ. ಆವಾಗ ನಾನು ಮಾಡಿದ ಉಪದೇಶ ಅರಣ್ಯರೋದನದಂತೆ ವ್ಯರ್ಥವಾಗುತ್ತದೆ. ಉಪದಿಷ್ಟವಾದ ತತ್ತ್ವಗಳ ಅವಧಾರಣ ಮಾಡಿಕೊಳ್ಳಲು ಮನಆದಿ ಇಂದ್ರಿಯಗಳು ಸಮರ್ಥವಾಗುವುದಿಲ್ಲ. ಆದ್ದರಿಂದ ಹೇಗೆ ಮಾಡುವುದು ಎಂಬ ಶಂಕೆಯನ್ನು ಪರಿಹರಿಸುತ್ತಿದ್ದಾರೆ-*

**ನ ಮೇಽಸವಃ ಪರಾಯಂತಿ ಬ್ರಹ್ಮನ್ನನಶನಾದಮೀ ।**
**ಪಿಬತೋಽಚ್ಯುತಪೀಯೂಷಂ ತ್ವದ್ವಾಕ್ಯಾಬ್ಧಿ ವಿನಿಃಸೃತಮ್ ॥ ೨೬॥**

**ತ್ವದ್ವಾಕ್ಯಾತ್** ನಿಮ್ಮ ವಾಕ್ಯದಿಂದ, **ವಿನಿಃಸೃತಂ** ಹೊರಟ, **ಅಚ್ಯುತಪೀಯೂಷಂ** ಶ್ರೀಹರಿಯ ಕಥಾಮೃತವನ್ನು, **ಪಿಬತಃ** ಪಾನ ಮಾಡುವ, **ಮೇ** ನನ್ನ, **ಅಸವಃ** ಇಂದ್ರಿಯಗಳು, **ಅನಶನಾತ್** ಉಪವಾಸದಿಂದ, **ನ ಪರಾಯಂತಿ** ವ್ಯಾಕುಲವಾಗುವುದಿಲ್ಲ ॥ ೨೬ ॥

*ಮುನಿಗಳ ಮಧ್ಯದಲ್ಲಿ ರಾಜನು ಶುಕಮುನಿಗಳಿಗೆ ಕೇಳಿದ ಪ್ರಶ್ನೆಗೆ ಶುಕಾಚಾರ್ಯರು ಏನುತ್ತರ ಕೊಟ್ಟರು ಎಂಬ ಶೌನಕರ ಶಂಕೆಯನ್ನು ಸೂತರು ಪರಿಹರಿಸುವರು-*

**ಸೂತ ಉವಾಚ-**

**ಸ ಉಪಾಮಂತ್ರಿತೋ ರಾಜ್ಞಾ ಕಥಾಯಾಮಿತಿ ಸತ್ಪತೇಃ ।**
**ಬ್ರಹ್ಮರಾತೋ ಭೃಶಂ ಪ್ರೀತೋ ವಿಷ್ಣುರಾತೇನ ಸಂಸದಿ ॥ ೨೭ ॥**

**ಸಂಸದಿ** ಸಭೆಯಲ್ಲಿ, **ರಾಜ್ಞಾ ವಿಷ್ಣುರಾತೇನ** ರಾಜನಾದ ಪರೀಕ್ಷಿತನಿಂದ, **ಸತ್ಪತೇಃ** ಬ್ರಹ್ಮಾದಿಗಳಿಗೆ ಪತಿಯಾದ ಶ್ರೀಹರಿಯ, **ಕಥಾಯಾಮ್** ಕಥೆಯನ್ನು ಹೇಳುವ ವಿಷಯದಲ್ಲಿ, **ಇತಿ** ಈ ರೀತಿಯಾಗಿ, **ಉಪಾಮಂತ್ರಿತಃ** ಪ್ರಶ್ನಿಸಲ್ಪಟ್ಟ, **ಸಃ ಬ್ರಹ್ಮರಾತಃ** ಬ್ರಹ್ಮದೇವರಿಂದ ದತ್ತರಾದ ಆ ಶುಕಾಚಾರ್ಯರು, **ಭೃಶಂ ಪ್ರೀತಃ** ಬಹಳ ಸಂತುಷ್ಟರಾಗಿ,

ಈ ಶ್ಲೋಕದಲ್ಲಿ **ವಿಷ್ಣು** ಕೃಷ್ಣರೂಪಿಯಾದ ವಿಷ್ಣುವಿನಿಂದ, **ರಾತ** ಕೊಡಲ್ಪಟ್ಟದ್ದರಿಂದ ವಿಷ್ಣುರಾತ ಎಂಬ ಹೆಸರು ಪ್ರಸಿದ್ಧವಾಗಿದೆ. ಆದ್ದರಿಂದ ಆ ಶಬ್ದಕ್ಕೆ ನಿಮಿತ್ತ ಹೇಳದೇ ಶುಕಾಚಾರ್ಯರಿಗೆ ಬ್ರಹ್ಮರಾತ ಎಂದು ಹೆಸರು ಬರಲು ಕಾರಣ ತಿಳಿಸುವರು-

ತಾತ್ಪರ್ಯ- ಬಾಲೋಽಪಿ ಸ ಗುರುತ್ವೇನ ಮುನಿಭ್ಯೋ ಬ್ರಹ್ಮಣಾ ಯತಃ ।
ದತ್ತೋಽತೋ ಬ್ರಹ್ಮರಾತೋಽಪಿ ನಾಮ ವೈಯಾಸಕೇರಭೂತ್ ॥ -ಇತಿ ಬ್ರಾಹ್ಮೇ

ಆ ಶುಕಾಚಾರ್ಯರು ಬಾಲಕರಾಗಿರುವಾಗಲೇ ಚತುರ್ಮುಖಬ್ರಹ್ಮನಿಂದ ಮುನಿಗಳಿಗೆ ಗುರುಗಳನ್ನಾಗಿ ಕೊಡಲ್ಪಟ್ಟರು. ಆದ್ದರಿಂದ ವ್ಯಾಸಪುತ್ರರಾದ ಶುಕಾಚಾರ್ಯರಿಗೆ ಬ್ರಹ್ಮರಾತ ಎಂಬ ಹೆಸರು ಪ್ರಸಿದ್ಧವಾಯಿತು. ಹೀಗೆ ಬ್ರಾಹ್ಮಪುರಾಣವು ತಿಳಿಸುತ್ತದೆ.

**ಆಹ ಭಾಗವತಂ ನಾಮ ಪುರಾಣಂ ಬ್ರಹ್ಮಸಮ್ಮಿತಮ್ ।**
**ಬ್ರಹ್ಮಣೇ ಭಗವತ್ಪ್ರೋಕ್ತಂ ಬ್ರಹ್ಮಕಲ್ಪ ಉಪಾಗತೇ ॥ ೨೮ ॥**

**ಬ್ರಹ್ಮಸಮ್ಮಿತಂ** ವೇದಸಂವಾದಿಯಾದ, ವೇದಸಮಾನವಾದ, **ಬ್ರಹ್ಮಣೇ** ಪುನ್ನಾಮಕ ಬ್ರಹ್ಮನಿಗೆ, **ಬ್ರಹ್ಮಕಲ್ಪೇ ಉಪಾಗತೇ** ಮತ್ತೊಬ್ಬ ಬ್ರಹ್ಮನ ಉತ್ಪತ್ತಿಯ ಸಮಯವು ಬಂದಾಗ, ಅಂದರೆ ಆದಿಸೃಷ್ಟಿಯ ಉಪಕ್ರಮಕಾಲದಲ್ಲಿ, **ಭಗವತ್ಪ್ರೋಕ್ತಂ** ವಾಸುದೇವನಿಂದ ಹೇಳಲ್ಪಟ್ಟ, ಅದನ್ನೇ ಚತುರ್ಮುಖನಿಗೆ ಪದ್ಮನಾಭನಿಂದ ಉಪದಿಷ್ಟವಾದ, **ಭಾಗವತಂ ನಾಮ ಪುರಾಣಂ ಆಹ** ಭಾಗವತವೆಂದು ಪ್ರಸಿದ್ಧವಾದ ಪುರಾಣವನ್ನು ಹೇಳಿದರು.

'ಬ್ರಹ್ಮಾ ಪೂರ್ವಂ ಪೃಷ್ಟೇಷ್ವರ್ಥೇಷು ಆಪ್ತಃ ತದ್ವಿಷಯೇ ಪರಮಾಪ್ತತಮೇನ ಭಗವತೋಪದಿಷ್ಟತ್ವಾತ್' ಬ್ರಹ್ಮದೇವರು ಹಿಂದೆ ಕೇಳಿದ ವಿಷಯದಲ್ಲಿ ಆಪ್ತರು ಆ ವಿಷಯದಲ್ಲಿ ಪರಮಾಪ್ತನಾದ ಭಗವಂತನಿಂದ ಉಪದೇಶ ಪಡೆದಿದ್ದರಿಂದ. ಎಂಬ ಅನುಮಾನವೂ ಸೂಚಿತವಾಗಿದೆ. ॥ ೨೮ ॥

ಈ ಶ್ಲೋಕದಲ್ಲಿ ಬ್ರಹ್ಮಕಲ್ಪ ಎಂಬ ಶಬ್ದಕ್ಕೆ ವಿವಕ್ಷಿತವಾದ ಅರ್ಥವನ್ನು ಪ್ರಮಾಣದಿಂದ ತಿಳಿಸುವರು-

**ತಾತ್ಪರ್ಯ- ಯತ್ರ ಬ್ರಹ್ಮಾಂತರೋತ್ಪತ್ತಿಃ ಬ್ರಹ್ಮಕಲ್ಪಃ ಸ ಈರಿತಃ ॥ -ಇತಿ ಚ**

ಯಾವ ಕಾಲದಲ್ಲಿ ಮೊದಲಿನ ಬ್ರಹ್ಮನಿಗೆ ಮುಕ್ತಿಯಾದ ಮೇಲೆ, ಮತ್ತೊಬ್ಬ ಬ್ರಹ್ಮನ ಉತ್ಪತ್ತಿಯಾಗುತ್ತದೋ ಅದು ಬ್ರಹ್ಮಕಲ್ಪವೆನಿಸುತ್ತದೆ. ಎಂದು ಬ್ರಾಹ್ಮಪುರಾಣದಲ್ಲಿದೆ.

*ರಾಜನು ಕೇಳಿದ ಪ್ರಶ್ನೆಗೆ ಉತ್ತರ ಕೊಡದೇ ಭಾಗವತಪುರಾಣ ಹೇಳುವುದು ಅಸಂಗತ ಎಂದರೆ ಹೇಳುವರು-*

**ಯದ್ಯತ್ಪರೀಕ್ಷಿದೃಷಭಃ ಪಾಂಡೂನಾಮನುಪೃಚ್ಛತಿ ।**
**ಆನುಪೂರ್ವ್ಯೇಣ ತತ್ಸರ್ವಮಾಖ್ಯಾತುಮುಪಚಕ್ರಮೇ ॥ ೨೯ ॥**

**ಪಾಂಡೂನಾಂ ಋಷಭಃ ಪರೀಕ್ಷಿತ್** ಪಾಂಡುಕುಲದಲ್ಲಿ ಶ್ರೇಷ್ಠನಾದ ಪರೀಕ್ಷಿತನು, **ಯದ್ಯತ್** ಯಾವ ಯಾವ ವಿಷಯವನ್ನು, **ಅನುಪೃಚ್ಛತಿ** ಪ್ರಶ್ನಿಸುವನೋ, **ತತ್ಸರ್ವಂ** ಅದೆಲ್ಲವನ್ನು, **ಆನುಪೂರ್ವ್ಯೇಣ ಆಖ್ಯಾತುಂ** ಕ್ರಮವಾಗಿ ಹೇಳುವುದಕ್ಕಾಗಿಯೇ **ಉಪಚಕ್ರಮೇ** ಭಾಗವತವನ್ನು ಪ್ರಾರಂಭಿಸಿದರು.

ಅಂದರೆ ಭಾಗವತವನ್ನು ಹೇಳುವ ಮೂಲಕ ರಾಜನ ಪ್ರಶ್ನೆಗಳಿಗೆ ಉತ್ತರಿಸಿದರು. ಆದ್ದರಿಂದ ಭಾಗವತ ಹೇಳಿದ್ದು ಅಸಂಗತವಲ್ಲವೆಂದು ಭಾವ. ॥ ೨೯ ॥

॥ ಇಲ್ಲಿಗೆ ಎಂಟನೆಯ ಅಧ್ಯಾಯ ಸಮಾಪ್ತವಾಯಿತು ॥

# ಅಥ ನವಮೋಽಧ್ಯಾಯಃ

**ಸಾರಾಂಶ**

ಪರೀಕ್ಷಿತನು ಮಾಡಿದ ಪ್ರಶ್ನೆಗಳಿಗೆ ಶುಕಾಚಾರ್ಯರು ಉತ್ತರ ನೀಡುತ್ತಿದ್ದಾರೆ. ಜೀವನಿಗೆ ಜಡವಾದ ಶರೀರವಿಲ್ಲ. ಪರಮಾತ್ಮನ ಇಚ್ಛೆಗೆ ಅನುಗುಣವಾಗಿ ಪ್ರಕೃತಿಯಿಂದ ಜಡವಾದ ಶರೀರವೂ ಆ ಶರೀರದ ಮೇಲೆ ಅಭಿಮಾನವೂ ಬರುತ್ತದೆ. ಜೀವನು ಮಾಡಬೇಕಾದ ಸಾಧನೆಗಳು ಸಂಪೂರ್ಣವಾದ ಮೇಲೆ ಪರಮಾತ್ಮನ ಪ್ರಸಾದದಿಂದ ಈ ದೇಹಗೇಹಗಳಲ್ಲಿಯ ಅಭಿಮಾನವನ್ನು ಕಳೆದುಕೊಳ್ಳುತ್ತಾನೆ. ನಾನು-ನನ್ನದು ಎಂಬ ಅಭಿಮಾನಗಳು ದೂರವಾದಾಗಲೇ ಭಗವಂತನ ಅತ್ಯರ್ಥಪ್ರಸಾದದಿಂದ ಮುಕ್ತನಾಗುತ್ತಾನೆ.

ಭಗವಂತನ ನಾಭಿಕಮಲದಲ್ಲಿ ಜನಿಸಿದ ಬ್ರಹ್ಮದೇವರು ನಾಭಿಯಲ್ಲಿ ಸ್ಥಿತರಾಗಿ ಈ ಪ್ರಪಂಚವನ್ನು ಹೇಗೆ ಸೃಷ್ಟಿಮಾಡಬೇಕೆಂದು ಯೋಚಿಸಿದರು. ಅವರಿಗೆ ಮೊದಲಿಗೆ ಏನೂ ತಿಳಿಯಲಿಲ್ಲ. ಆವಾಗಲೇ ತಪ ತಪ ಎಂದು ಸೂಚಿಸುತ್ತಾ ಆಕಾಶವಾಣಿ ಯಾಯಿತು. ಈ ಧ್ವನಿ ಯಾರದೆಂದು ಸುತ್ತಲೂ ನೋಡಿದರು. ಹುಡುಕಾಡಿದರು. ಕಮಲದ ನಾಲದಲ್ಲಿಯೂ ಹುಡುಕಿದರು. ಎಲ್ಲಿಯೂ ಯಾರೂ ಕಾಣಲಿಲ್ಲ. ನಂತರ ಆಕಾಶವಾಣಿಯ ಆದೇಶದಂತೆ ತಪಸ್ಸನ್ನು ಮಾಡಿದರು. ದಿವ್ಯವಾದ ಸಾವಿರವರ್ಷಗಳ ವರೆಗೆ ಅವರ ತಪಸ್ಸು ನಿರ್ವಿರಾಮವಾಗಿ ಸಾಗಿತು. ಬ್ರಹ್ಮದೇವರ ಈ ತಪಸ್ಸಿಗೆ ಮೆಚ್ಚಿದ ಭಗವಂತ ಪ್ರತ್ಯಕ್ಷನಾದ. ಮುಕ್ತಲೋಕಗಳನ್ನು ಭಗವಂತ ಬ್ರಹ್ಮದೇವರಿಗೆ ತೋರಿಸಿದ. ಅಲ್ಲಿ ರಜಸ್ತಮೋಗುಣಗಳು ಇರುವುದಿಲ್ಲ. ರಜಸ್ತಮೋಗುಣಗಳಿಂದ ಮಿಶ್ರಿತವಾದ ಸತ್ತ್ವಗುಣವೂ ಅಲ್ಲಿ ಇರುವುದಿಲ್ಲ. ಕಾಲಕೃತವಾದ ಜರಾಮರಣಗಳಿಗೆ ಅಲ್ಲಿ ಅವಕಾಶವಿಲ್ಲ. ಅಲ್ಲಿರುವವರೆಲ್ಲರೂ ವೈಷ್ಣವರೇ ಆಗಿರುತ್ತಾರೆ. ಎಲ್ಲರೂ ದೇವರಂತೆ

ಚತುರ್ಭುಜಗಳಿಂದ ಯುಕ್ತರಾಗಿರುತ್ತಾರೆ. ಸುಂದರವಾದ ಅವಯವಗಳಿಂದ ಯುಕ್ತರಾಗಿರುತ್ತಾರೆ. ಪ್ರಿಯರಾದ ಸ್ತ್ರೀಯರಿಂದ ಸಹಿತರಾಗಿರುತ್ತಾರೆ. ಅಲ್ಲಿ ಲಕ್ಷ್ಮೀದೇವಿಯು ಶ್ರೀಹರಿಯ ಪಾದಸೇವೆಯನ್ನು ಮಾಡುತ್ತಾ ಇರುತ್ತಾಳೆ. ಪಾರ್ಷದರಿಂದ ಸಹಿತನಾದ ಶ್ರೀಹರಿಯನ್ನು ಬ್ರಹ್ಮದೇವರು ಅಲ್ಲಿ ಕಾಣುತ್ತಾರೆ. ಉದ್ರಿಕ್ತವಾದ ಆನಂದದಿಂದ ಉಕ್ಕಿ ಹರಿಯುವ ಆನಂದಬಾಷ್ಪಗಳಿಂದ ಪರಮತ್ಮನ ಪಾದಕಮಲಗಳಿಗೆ ಎರಗುತ್ತಾನೆ. ಅಂಗಲಾಚಿ ಬೇಡುತ್ತಾನೆ. ಪರಮಾತ್ಮನ್ ! ನಿನ್ನ ಇಚ್ಛೆಗೆ ಅನುಗುಣವಾಗಿ ಜಗತ್ತನ್ನೆಲ್ಲ ಸೃಷ್ಟಿಸಿ ಸಂರಕ್ಷಿಸಿ ಸಂಹರಿಸುತ್ತಾ ಕ್ರೀಡಿಸುವ ನಿನ್ನ ಲೀಲೆಗಳನ್ನು ತಿಳಿಯಲು ಬಯಸಿದ್ದೇನೆ. ನಿನ್ನ ಅನುಜ್ಞೆಗೆ ಬದ್ಧನಾಗಿಯೇ ನಾನು ಸೃಷ್ಟಿಕಾರ್ಯವನ್ನು ಮಾಡುತ್ತೇನೆ. ಆ ಕರ್ಮ ನನಗೆ ಬಂಧಕವಾಗಬಾರದು. ಮತ್ತು ಈ ಐಶ್ವರ್ಯದಿಂದ ನನ್ನಲ್ಲಿ ಅಹಂಕಾರ ಬರಬಾರದು.

ಬ್ರಹ್ಮದೇವರ ಮಾತುಗಳನ್ನು ಆಲಿಸಿ ದೇವರು ಹೇಳುತ್ತಾನೆ. ಮುಮುಕ್ಷುಸಾಮಾನ್ಯವಾದ ಜ್ಞಾನವನ್ನು ಆಯಾ ಅಧಿಕಾರಿಗಳು ವಿಶೇಷವಾಗಿ ತಮ್ಮ ತಮ್ಮ ಯೋಗ್ಯತೆಗೆ ಅನುಗುಣವಾಗಿ ತಿಳಿಯಬೇಕಾದ ವಿಜ್ಞಾನವನ್ನೂ ನಾನು ನಿನಗೆ ಉಪದೇಶಿಸುತ್ತೇನೆ.

ಪರಮಾತ್ಮ ಮಾತ್ರ ಸ್ವತಂತ್ರನಾಗಿದ್ದಾನೆ. ಜೀವರೆಲ್ಲರೂ ಅಸ್ವತಂತ್ರರಾಗಿದ್ದಾರೆ. ಸ್ಥಿತಿಕಾಲದಲ್ಲಿ ಜೀವರಿಗೆ ಸ್ವಾತಂತ್ರ್ಯ ಇದೆ ಎಂದು ತೋರುತ್ತದೆ ಮಾತ್ರ. ಇದು ವಾಸ್ತವವಲ್ಲ. ಮೊದಲಿಗೂ ಜೀವರು ಸ್ವತಂತ್ರರಲ್ಲ. ಕೊನೆಗೂ ಸ್ವತಂತ್ರರಲ್ಲ. ಮಧ್ಯದ ಸ್ಥಿತಿಕಾಲದಲ್ಲಿ ಮಾತ್ರ ಜೀವರಿಗೆ ಸ್ವಾತಂತ್ರ್ಯ ಹೇಗೆ ಬರಲು ಸಾಧ್ಯ. ಆದ್ದರಿಂದ ಯಾವಾಗಲೂ ಸ್ವತಂತ್ರನಾದವನು ಪರಮಾತ್ಮ ಮಾತ್ರ ಎಂದು ಇದರಿಂದ ಸಿದ್ಧವಾಗುತ್ತದೆ. ಪ್ರಪಂಚದಲ್ಲಿ ಪರಮಾತ್ಮ ಇದ್ದಾನೆ. ಆದರೂ ಪ್ರಪಂಚದಿಂದ ದೇವರಿಗೆ ಯಾವುದೇ ರೀತಿಯಾದ ಪ್ರಯೋಜನವಿಲ್ಲದಿರುವುದರಿಂದ ದೇವರು ಪ್ರಪಂಚದಲ್ಲಿ ಇಲ್ಲ ಎಂದು ಶಾಸ್ತ್ರಗಳು ಹೇಳುತ್ತವೆ.

*ಚತುರ್ಮುಖನಿಗೆ ಭಗವಂತನ ಅನುಗ್ರಹದಿಂದ ಭಗವಲ್ಲೋಕದರ್ಶನ ಮತ್ತು ಭಗವಂತನ ಸ್ವರೂಪದರ್ಶನ, ಪ್ರಕೃತಿ-ಜೀವರುಗಳಿಗೆ ಭಗವದಧೀನತ್ವ ಮುಂತಾದ ಮಾಹಾತ್ಮ್ಯ ವರ್ಣನದಿಂದ ಹೃದಯ ಕರಗುವುದಕ್ಕೆ ಕಾರಣವಾದದ್ದು ಭಕ್ತಿಯೇ ಆದ್ದರಿಂದ ಹರಿಯಲ್ಲಿ ಭಕ್ತಿ ಮಾಡಬೇಕೆಂದು ಈ ಅಧ್ಯಾಯದಲ್ಲಿ ಹೇಳುವರು.*

*ಮೊದಲಿಗೆ 'ಯದಧಾತುಮತಃ...' ಎಂಬ ಪ್ರಶ್ನೆಗೆ ಉತ್ತರಿಸುವರು-*

**ಶ್ರೀಶುಕ ಉವಾಚ -**

**ಆತ್ಮಮಾಯಾಮೃತೇ ರಾಜನ್ ಪರಸ್ಯಾನುಭವತ್ಮನಃ ।**
**ನ ಘಟೇತಾರ್ಥಸಂಬಂಧಃ ಸ್ವಪ್ನೇ ದ್ರಷ್ಟುರಿವಾಂಜಸಾ** ॥೧॥

**ರಾಜನ್** ಪರೀಕ್ಷಿತನೇ, **ಅನುಭವಾತ್ಮನಃ** ಸ್ವಾಭಾವಿಕವಾಗಿ ನಿತ್ಯಚಿದ್ರೂಪನಾದ, **ಪರಸ್ಯ** ಸ್ವಾಭಾವಿಕವಾಗಿ ಧಾತುಶಬ್ದವಾಚ್ಯ ಅರ್ಥಗಳಾದ ಪ್ರಕೃತ್ಯಾದಿಗಳಿಂದ ಭಿನ್ನವಾದ ಆದ್ದರಿಂದಲೇ ದೇಹರಹಿತನಾದ ಜೀವನಿಗೆ, **ಅರ್ಥಸಂಬಂಧಃ** ದೇಹಾದಿರೂಪವಾದ ಅರ್ಥಸಂಬಂಧವು, **ಆತ್ಮಮಾಯಾಂ** ಭಗವಂತನ ಇಚ್ಛೆ ಮತ್ತು ಅವನ ಅಧೀನವಾದ ಸತ್ತ್ವಾದಿಗುಣರೂಪವಾದ ಪ್ರಕೃತಿಯನ್ನೂ, **ಋತೇ** ಬಿಟ್ಟು ಅದಿಲ್ಲದೇ, **ಸ್ವಪ್ನೇ** ಸ್ವಪ್ನಾವಸ್ಥೆಯಲ್ಲಿ, **ದ್ರಷ್ಟುಃ** ಕನಸು ಕಾಣುವ ಜೀವನಿಗೆ, **ಅಂಜಸಾ** ಸತ್ಯವಾದ, **ಅರ್ಥಸಂಬಂಧಃ** ದೇಹಾದಿಸಂಬಂಧವಾಗಲಿ ಆನೆ-ಕುದುರೆ ಮುಂತಾದ ಪದಾರ್ಥಗಳ ದರ್ಶನವು, **ಆತ್ಮಮಾಯಾಂ** ಭಗವದಿಚ್ಛೆ ಮತ್ತು ತ್ರಿಗುಣಪ್ರಕೃತಿಯನ್ನು **ಋತೇ** ಇಲ್ಲದೇ, **ನ ಘಟೇತ** ಆಗುವುದಿಲ್ಲವೋ ಹಾಗೆ, **ನ ಘಟೇತ** ಆಗಲಾರದು.

ಇದರಿಂದ ಸ್ವತಃ ಅಶರೀರನಾದ ಜೀವನಿಗೆ ಶರೀರಸಂಬಂಧವಾಗಲು ಈಶ್ವರೇಚ್ಛೇಯು ಮುಖ್ಯಕಾರಣ. ಪ್ರಕೃತ್ಯಾದಿಗಳು ಭಗವದಧೀನವಾಗಿ ಕಾರಣವಾಗಿವೆ. ಮುಖ್ಯವಾಗಿ ಅಲ್ಲ ಎಂದು ಉತ್ತರಿಸಿದಂತಾಯಿತು.

ಇಲ್ಲಿ 'ಪರಸ್ಯ' ಎಂಬುದಕ್ಕೆ ಪರಮಾತ್ಮ ಎಂದು ಅರ್ಥ ತೋರುತ್ತದೆ. ಆದ್ದರಿಂದ ಪ್ರಾಸಂಗಿಕವಾದ ಅರ್ಥವನ್ನು ಆಚಾರ್ಯರು ತಿಳಿಸುತ್ತಾರೆ-

ತಾತ್ಪರ್ಯ- ಪರಸ್ಯ ಅರ್ಥವ್ಯತಿರಿಕ್ತಸ್ಯ । ಯದಧಾತುಮತಃ ಇತ್ಯಸ್ಯ ಹಿ ಉತ್ತರಮ್ ।

ಅಜ್ಞಾನ-ವಿಪರೀತಜ್ಞಾನ ಬರದಿರಲಿ ಎಂದು ಮೂರು ಶ್ಲೋಕಗಳನ್ನು ಪ್ರಮಾಣದಿಂದ ವ್ಯಾಖ್ಯಾನಿಸುವರು-

ಅಶರೀರಸ್ಯ ಜೀವಸ್ಯ ಶರೀರೋತ್ಪತ್ತಿಕಾರಣಮ್ ।
ಈಶ್ವರೇಚ್ಛಾ ಪ್ರಾಥಮಿಕೀ ತಾಂ ವಿನಾ ನ ಹಿ ಕಶ್ಚನ ॥

ದ್ವಿತಿಯಾ ಪ್ರಕೃತಿಃ ಪ್ರೋಕ್ತಾ ತದ್ರೂಪಾ ಹಿ ಗುಣಾಸ್ತ್ರಯಃ ।
ತೇಷಾಂ ಸಂಪಾತಜೋ ಭಾವೋ ಮಮಾಹಮಿತಿ ಯಾ ಮತಿಃ ॥

**ದೇಹಾತ್ಪರಸ್ಯ ದೇಹಿತ್ವಮಹಂಭಾವಮೃತೇ ಕುತಃ ।**
**ಯಥಾ ರಜಸ್ತಮೋಭಾವ್ಯೈರ್ವಿನಾ ಸ್ವಪ್ನೋ ನ ಜಾಯತೇ ॥**

**ನಿದ್ರಾಕಾಮಾದ್ಯಭಾವೇನ ತದ್ವದ್ದೇಹಃ ಕ್ವ ತಾನ್ವಿನಾ ।**
**ತಸ್ಮಾತ್ ಪ್ರಕೃತ್ಯೈವ ಪುಮಾನ್ ಮಾನುಷಾದಿವಿಕಾರಯಾ ॥**

**ಮಾನುಷಾದಿರಿವಾಭಾತಿ ನಿತ್ಯಚೈತನ್ಯರೂಪವಾನ್ ।**
**ಯದಾ ಸ್ವರೂಪಂ ಜಾನಾತಿ ಕಾಲಪ್ರಕೃತಿವರ್ಜಿತಮ್ ।**
**ವಾಸುದೇವಪ್ರಸಾದೇನ ತದಾ ಮುಕ್ತೋ ಭವತ್ಯಸೌ ॥ -ಇತಿ ಭವಿಷ್ಯತ್ಪುರಾಣೇ**

ಪರಸ್ಯ ಎಂದರೆ ಶರೀರದಿಂದ ಬೇರೆಯಾದ ಜೀವನಿಗೆ ಎಂದರ್ಥ. (ಪರಮಾತ್ಮನೆಂದೇಕೆ ಅಲ್ಲ ಜಿವನೇ ಯಾಕೆ ಎಂದರೆ) 'ಯದಧಾತುಮತಃ' ಎಂಬ ಜೀವವಿಷಯಕವಾದ ಪ್ರಶ್ನೆಗೆ ಉತ್ತರ ಕೊಡಲು ಈ ಶ್ಲೋಕವು ಪ್ರವೃತ್ತವಾಗಿರುವುದರಿಂದ ಪರಸ್ಯ ಎಂಬ ಶಬ್ದವು ಜೀವನನ್ನೇ ತಿಳಿಸುತ್ತದೆ. ಇಲ್ಲವಾದರೆ ಪ್ರಶ್ನೆಗೂ ಉತ್ತರಕ್ಕೂ ಸಂಬಂಧವಿಲ್ಲವೆಂದಾಗುತ್ತದೆ. ಬಾಹ್ಯಶರೀರ- ದಿಂದ ಭಿನ್ನನಾಗಿದ್ದಾನೆ ಜೀವ. ಇವನ ಬಾಹ್ಯಶರೀರದ ಜನನಕ್ಕೆ ಈಶ್ವರೇಚ್ಛೆಯೇ ಪ್ರಧಾನವಾಗಿ ಕಾರಣವಾಗಿದೆ. ಈಶ್ವರೇಚ್ಛೆಯಿಲ್ಲದೇ ಯಾವ ಕಾರ್ಯವೂ ಆಗಲಾರದು. ಜೀವರ ಶರೀರೋತ್ಪತ್ತಿಗೆ ಪ್ರಕೃತಿಯು ಕೂಡಾ ಕಾರಣವಾಗಿದೆ. ಇದು ಅಮುಖ್ಯಕಾರಣ. ಈ ಪ್ರಕೃತಿ ಶ್ರೀಹರಿಗೆ ಅಧೀನವಾಗಿದೆ.

ಸತ್ತ್ವ-ರಜಸ್ಸು-ತಮಸ್ಸು ಎಂಬ ಮೂರು ಗುಣಗಳು ಪ್ರಕೃತಿಯ ಸ್ವರೂಪವಾಗಿವೆ. ನನ್ನದು ನಾನು ಎಂಬ ಬುದ್ಧಿ ಏನಿದೆಯೋ ಅದು ಸತ್ತ್ವಾದಿಗುಣಗಳ ಸಂಬಂಧದಿಂದುಂಟಾದ ಕಾರ್ಯವಿಶೇಷವು ದೇಹದಿಂದ ಭಿನ್ನನಾದ ಜೀವನಿಗೆ ಅಹಂಭಾವವಿಲ್ಲದೇ ದೇಹವಿದೆ ಎಂಬುದು ಹೇಗೆ ಕೂಡುವುದು. ಆದಕಾರಣ ಸತ್ತ್ವಾದಿಗುಣಕಾರ್ಯವಾದ ಅಹಂಕಾರವು ಶರೀರಸಂಬಂಧಕ್ಕೆ ಕಾರಣವಾಗಿದೆ ಎಂದು ತಿಳಿಯಬೇಕು. ರಾಜಸ-ತಾಮಸ-ಸಾತ್ತ್ವಿಕ ಪದಾರ್ಥಗಳ ಅನುಭವದಿಂದುಂಟಾದ ಸಂಸ್ಕಾರ ಅದೃಷ್ಟ ಇವುಗಳಿಲ್ಲದಿರುವುದರಿಂದ ಸಾತ್ತ್ವಿಕ-ರಾಜಸ-ತಾಮಸ ಪದಾರ್ಥಗಳಿಲ್ಲದೇ ಬಾಹ್ಯೇಂದ್ರಿಯವಾಸನಾರೂಪವಾದ ಸ್ವಾಪ್ನಪದಾರ್ಥವು ಹೇಗೆ ಉಂಟಾಗುವುದಿಲ್ಲವೋ ಹಾಗೆಯೇ ಸತ್ತ್ವಾದಿಗುಣವಿಲ್ಲದೇ ಜೀವನಿಗೆ ದೇಹ ಉಂಟಾಗುವುದಿಲ್ಲ. ಸತ್ತ್ವಾದಿಗುಣಗಳ ಸಂಬಂಧದ್ವಾರಾ ಪ್ರಕೃತಿಯು ದೇಹಕ್ಕೆ ಕಾರಣವಾಗಿರುವುದರಿಂದ ನಿತ್ಯಚೈತನ್ಯಸ್ವರೂಪನಾದ ಜೀವನು ಮನುಷ್ಯ-ದೇವ-ದಾನವ ಮೊದಲಾದ ದೇಹರೂಪದಿಂದ ವಿಕಾರ ಹೊಂದಿದ ಪ್ರಕೃತಿಯಿಂದಲೇ ಮನುಷ್ಯ ಮೊದಲಾದ ಬಹುರೂಪಗಳುಳ್ಳವನಂತೆ ತೋರುತ್ತಾನೆ.

ಮನುಷ್ಯನು ಶ್ರೀಹರಿಯ ಅನುಗ್ರಹದಿಂದ ಕಾಲ-ಪ್ರಕೃತಿ ವಿಕಾರದಿಂದ ವಿರಹಿತವಾದ ತನ್ನ ನಿಜಸ್ವರೂಪವನ್ನು ಯಾವಾಗ ತಿಳಿಯುತ್ತಾನೋ ಆಗ ಮುಕ್ತನಾಗುತ್ತಾನೆ ಎಂದು ಭವಿಷ್ಯತ್ಪುರಾಣದಲ್ಲಿದೆ. ।। ೧ ।।

ಸ್ವತಃ ಅಶರೀರನಾದ ಜೀವನಿಗೆ ಪ್ರಕೃತಿಗುಣದಿಂದ ಹೇಗೆ ನಾನಾವಿಧ ದೇಹ ಬರುವುದು ಎಂದರೆ ಹೇಳುವರು-

**ಬಹುರೂಪ ಇವಾಽಽಭಾತಿ ಮಾಯಯಾ ಬಹುರೂಪಯಾ ।**
**ರಮಮಾಣೋ ಗುಣೇಷ್ವಸ್ಯಾ ಮಮಾಽಹಮಿತಿ ಮನ್ಯತೇ ।। ೨ ।।**

**ಅಸ್ಯಾಃ** ಪ್ರಕೃತಿಯ, **ಗುಣೇಷು** ಕಾರ್ಯಗಳಾದ ದೇಹಗಳಲ್ಲಿ, **ರಮಮಾಣಃ** ವಿಹಿತ-ನಿಷಿದ್ಧ ಕರ್ಮ ಮಾಡುವವನು ಅದೇಕೆಂದರೆ, ಯತಃ ಯಾವ ಕಾರಣ, **ಮಮ ಅಹಂ ಇತಿ ಮನ್ಯತೇ** ನಾನು ನನ್ನದು ಎಂದು ಅಭಿಮಾನ ಮಾಡುವನೋ ಆ ಅಭಿಮಾನಕ್ಕೂ ಕಾರಣ, **ಅಸ್ಯಾ ಗುಣೇಷು ಮಿಲಿತೇಷು ಸ್ತತ್ಸು** ಅಂದರೆ ಈಶ್ವರೇಚ್ಛೆಯಿಂದ ಅನಾದಿಕಾಲದಿಂದ ತನಗೆ ಸಂಬದ್ಧವಾದ ಪ್ರಕೃತಿಕಾರ್ಯವಾದ ಸತ್ತ್ವಾದಿಗುಣಾತ್ಮಕವಾದ ಲಿಂಗದೇಹದಲ್ಲಿ ಇರುವವನಾಗಿ ಸೃಷ್ಟಿಕಾಲದಲ್ಲಿ ಮಹದಹಂಕಾರವು ಪಂಚಭೂತ ಉಪಾದಾನಕವಾದ ನಾನಾವಿಧಗಳಾದ ದೇಹಗಳಲ್ಲಿ, ಸತ್ತ್ವಾದಿಗುಣಸಂಬಂಧದಿಂದ ಬಂದ ನಾನು ನನ್ನದು ಎಂಬ ಕರ್ತೃತ್ವಾಭಿಮಾನ-ಸ್ವಾಮಿತ್ವಾಭಿಮಾನಗಳಿಂದ ವಿಹಿತ-ನಿಷಿದ್ಧಾಚರಣೆ ಮಾಡಿ ಮತ್ತೆ, **ಬಹುರೂಪಯಾ ಮಾಯಯಾ ಬಹುರೂಪ ಇವಾಭಾತಿ** ದೇವ-ದಾನವ-ಮಾನವ ಶರೀರರೂಪವಾಗಿ ವಿಕೃತವಾದ ಪ್ರಕೃತಿಯಿಂದ ಬಹುರೂಪನಾಗಿ ತೋರುವನು. ।। ೨ ।।

ಅಸ್ವಾಭಾವಿಕವಾದ ಬಂಧವನ್ನು ಯಾವ ಸಾಧನದಿಂದ ಕಳೆದುಕೊಳ್ಳುವನು ಎಂದು ಹೇಳುವರು-

**ಯರ್ಹಿ ಚಾಽಯಂ ಮಹಿತ್ವೇ ಸ್ವೇ ಪರಸ್ಮಿನ್ ಕಾಲಮಾಯಯೋಃ ।**
**ರಮತೇ ಗತಸಮ್ಮೋಹಸ್ತ್ಯಕ್ತ್ವೋದಾಸ್ತೇ ತದೋಭಯಮ್ ।। ೩ ।।**

**ಅಯಂ** ಈ ಜೀವನು, **ಯರ್ಹಿ** ಯಾವಾಗ, **ಕಾಲಮಾಯಯೋಃ ಪರಸ್ಮಿನ್** ಕಾಲ ಮತ್ತು ಪ್ರಕೃತಿಯ ವಿಕಾರಶೂನ್ಯವಾದ, **ಸ್ವೇ** ತನ್ನದೇ ಆದ, **ಮಹಿತ್ವೇ** ಜ್ಞಾನಾನಂದಾತ್ಮಕವಾದ ತನ್ನ ಸ್ವರೂಪದ ವಿಷಯದಲ್ಲಿ **ರಮತೇ** ಶ್ರೀಹರಿಯ ಪ್ರಸಾದದಿಂದ ತಿಳಿದುಕೊಳ್ಳುವನೋ, **ತದಾ** ಆವಾಗ, **ಉಭಯಂ** ಕಾಲ-ಪ್ರಕೃತಿ

ಶರೀರವನ್ನು **ತ್ಯಕ್ತ್ವಾ ಉದಾಸ್ತೇ** ಬಿಟ್ಟು ಮತ್ತೆ ಅದನ್ನು ಪಡೆಯಲಾರನು, ಏಕೆಂದರೆ, **ಗತಸಮ್ಮೋಹಃ** ಆ ಶರೀರಾಪಾದಕಾವಾದ ಅಹಂಕಾರ-ಮಮಕಾರಗಳನ್ನು ತೊರೆದಿರುವನು. ಅಷ್ಟೇ ಅಲ್ಲದೇ, **ಸ್ವೇ ಮಹಿತ್ವೇ ರಮತೇ** ತನ್ನ ಸ್ವರೂಪಾನಂದವನ್ನನುಭವಿಸುವನು. ।।೩।।

ಜೀವನು ಮೇಲೆ ಹೇಳಿದಂತೆ ತನ್ನ ಸ್ವರೂಪವನ್ನು ಯಾವ ಸಾಧನದಿಂದ ತಿಳಿಯುತ್ತಾನೆ? ಭಾಗವತಶ್ರವಣದಿಂದ ಎಂದರೆ ಆದರ ಪ್ರಾಮಾಣ್ಯದಲ್ಲಿ ಜೀವನಿಗೆ ವಿಶ್ವಾಸವಿರುವುದಿಲ್ಲ. ಮತ್ತು ನಾನು ಕೇಳಿದ ಬೇರೆ ಪ್ರಶ್ನೆಗಳಿಗೆ ಏನು ಉತ್ತರ ಎಂಬ ರಾಜನ ಮಾನಸಿಕ ಶಂಕೆಯನ್ನು ಪರಿಹರಿಸುವರು-

**ಆತ್ಮತತ್ತ್ವವಿಶುದ್ಧ್ಯರ್ಥಂ ಯದಾಹ ಭಗವಾನೃತಮ್ ।**
**ಬ್ರಹ್ಮಣೇಽದರ್ಶಯದ್ರೂಪಮವ್ಯಲೀಕವ್ರತಾದೃತಃ ॥ ೪ ॥**

**ಆತ್ಮತತ್ತ್ವವಿಶುದ್ಧ್ಯರ್ಥಂ** ಜೀವ ಮತ್ತು ಈಶ್ವರನು ಅನಾರೋಪಿತವಾದ ಜ್ಞಾನಾನಂದ- ಸ್ವರೂಪತ್ವದ ದೇಹಾದಿಭಿನ್ನತಯಾ ನಿಶ್ಚಯಕ್ಕಾಗಿ, **ಯತ್** ಯಾವ ಭಾಗವತ ಪುರಾಣವನ್ನು, **ಭಗವಾನ್** ನಾರಾಯಣಾವತಾರಿಗಳಾದ ವ್ಯಾಸರು, **ಆಹ** ಹೇಳಿದರೋ, **ತತ್** ಅದು, **ಋತಂ** ಪ್ರಮಾಣವು, **ಯತಃ ಪ್ರಮಾಣಂ ಅತಃ** ಪ್ರಮಾಣವಾದ ಕಾರಣ ಆ ಪುರಾಣವನ್ನೇ ನಿನ್ನ ಪ್ರಶ್ನೆಗೆ ಉತ್ತರವಾಗಿ ಹೇಳುವೆನು, ಮೊದಲಿಗೆ ಪಾದ್ಮಕಲ್ಪ ಹೇಳಲು 'ದದೃಶೇ ಯೇನ ತದ್ರೂಪಂ' ಎಂಬ ಪ್ರಶ್ನೆಗೆ ಉತ್ತರಾರ್ಧದಿಂದ ಉತ್ತರಿಸುವರು. **ಸಃ ಆದಿದೇವಃ** ಭಗವಂತನು, **ಅವ್ಯಲೀಕವ್ರತಾದೃತಃ** ಅತ್ಯಂತ ಭಗವತ್ಪ್ರಿಯಕರವಾದ ತಪಸ್ಸಿನಿಂದ ಭಕ್ತಿವಿಷಯನಾಗಿ, **ರೂಪಂ** ತನ್ನ ರೂಪವನ್ನು **ಅದರ್ಶಯತ್** ತೋರಿಸಿದನು.

ಈ ಶ್ಲೋಕವು ಸಾಕಾಂಕ್ಷವಾಗಿದೆ ಆದ್ದರಿಂದ ಅಪೇಕ್ಷಿತ ಅಧ್ಯಾಹಾರ ಮಾಡಿ ಯೋಜಿಸುವರು-

ತಾತ್ಪರ್ಯ- ಯತೋ ಭಗವದುಕ್ತಂ ಪ್ರಮಾಣಮತಃ ತದುಕ್ತಂ ಪುರಾಣಂ ತ್ವತ್ಪ್ರಶ್ನಾನಾಮುತ್ತರತ್ವೇನ ವಕ್ಷ್ಯೇ ॥

ಶ್ರೀ ಮನ್ನಾರಾಯಣನು ಶ್ರೀವೇದವ್ಯಾಸರೂಪದಿಂದ ಹೇಳಿದ ಭಾಗವತವು ಪ್ರಮಾಣವಾದ ಕಾರಣ ವೇದವ್ಯಾಸರು ಹೇಳಿದ ಭಾಗವತಪುರಾಣವನ್ನು ನಿನ್ನ ಪ್ರಶ್ನೆಗಳಿಗೆ ಉತ್ತರವಾಗಿ ಹೇಳುವೆನು. ।। ೪ ।।

ಇದನ್ನೇ ವಿವರಿಸುವರು-

**ಸ ಆದಿದೇವೋ ಭಜತಾಂ ಪರೋ ಗುರುಃ**
**ಸ್ವಧಿಷ್ಣ್ಯಮಾಸ್ಥಾಯ ಸಿಸೃಕ್ಷಯೈಕ್ಷತ ।**
**ತಾಂ ನಾಧ್ಯಗಚ್ಛದ್ ದೃಶಮತ್ರ ಸಮ್ಮತಾಂ**
**ಪ್ರಪಂಚನಿರ್ಮಾಣವಿಧಿರ್ಯಯಾ ಭವೇತ್ ॥ ೫ ॥**

**ಭಜತಾಂ** ಸೇವಿಸುವ ಸನಕಾದಿಮುನಿಗಳಿಗೆ, **ಪರಃ ಗುರುಃ** ಉತ್ತಮಗುರುವಾದ, **ಸಃ ಆದಿದೇವಃ** ಬ್ರಹ್ಮದೇವನು, **ಸ್ವಧಿಷ್ಣ್ಯಂ** ತನ್ನ ಸ್ಥಾನವಾದ ನಾಭಿಪದ್ಮಕರ್ಣಿಕಾದಲ್ಲಿ **ಆಸ್ಥಾಯ** ಕುಳಿತು, **ಸಿಸೃಕ್ಷಯಾ** ಸೃಷ್ಟೀಚ್ಛೆಯಿಂದ, **ಐಕ್ಷತ್** ಆಲೋಚಿಸಿದನು. **ಯಯಾ** ಯಾವ ದೃಷ್ಟಿಯಿಂದ, **ಪ್ರಪಂಚನಿರ್ಮಾಣವಿಧಿಃ** ಪ್ರಪಂಚವನ್ನು ನಿರ್ಮಿಸುವ ಪ್ರಕಾರವು, **ಭವೇತ್** ಆಗುವುದೋ, **ತಾಂ** ಅಂತಹ, **ಅತ್ರ** ಪ್ರಪಂಚನಿರ್ಮಾಣದಲ್ಲಿ **ಸಮ್ಮತಾಂ** ಅವ್ಯಭಿಚಾರಿಯಾದ, **ದೃಶಂ** ಜ್ಞಾನವನ್ನು, **ನ ಅಧ್ಯಗಚ್ಛತ್** ಪಡೆಯಲಿಲ್ಲ. ॥ ೫ ॥

**ಸಂಚಿಂತಯನ್ ದ್ವ್ಯಕ್ಷರಮೇಕದಾಂಭಸ್ಯು-**
**ಪಾಶೃಣೋದ್ ದ್ವಿರ್ಗದಿತಂ ವಚೋ ವಿಭುಃ ।**
**ಸ್ಪರ್ಶೇಷು ಯಚ್ಚೋಡಶಮೇಕವಿಂಶಂ**
**ನಿಷ್ಕಿಂಚನಾನಾಂ ನೃಪ ಯದ್ಧನಂ ವಿದುಃ ॥ ೬ ॥**

**ಹೇ ನೃಪಾಃ** ಪರೀಕ್ಷಿತನೇ, **ವಿಭುಃ** ಬ್ರಹ್ಮದೇವರು, **ಸಂಚಿಂತಯನ್** ಸೃಷ್ಟಿವಿಷಯಕವಾದ ಜ್ಞಾನವು ನನಗೆ ಹೇಗಾದೀತು ಎಂದು ವಿಚಾರ ಮಾಡುತ್ತ, **ನಿಷ್ಕಿಂಚನಾನಾಂ** ಎಲ್ಲ ಧನವನ್ನು ಪರಿತ್ಯಾಗ ಮಾಡಿದ ಪರಮಹಂಸರಿಗೆ, **ಯತ್** ಯಾವುದು, **ಧನಂ** ಧನವೆಂದು ತಿಳಿದಿರುವರೊ, ಯಾವುದರಿಂದ ಅವರಿಗೆ ತಪೋಧನರೆಂದು ಲೋಕದಲ್ಲಿ ಪ್ರಸಿದ್ಧಿ ಇದೆಯೋ ಅದನ್ನು ತಿಳಿಸುವ, **ಸ್ಪರ್ಶೇಷು** ವರ್ಗೀಯವರ್ಣಗಳಲ್ಲಿ **ಯತ್ ಷೋಡಶಂ** ಹದಿನಾರನೆಯದಾದ ತಕಾರ ಮತ್ತು, **ಏಕವಿಂಶಂ** ಇಪತ್ತೊಂದನೆಯದಾದ ಪಕಾರವನ್ನು, **ಏಕದಾ** ಒಂದು ಸಲ, (ಕಾಲದಲ್ಲಿ) **ದ್ವಿರ್ಗದಿತಂ** ಎರಡು ಸಲ ಹೇಳಿದ, **ವಚಃ** ಮಾತನ್ನು, **ಅಂಭಸಿ** ನೀರಿನಲ್ಲಿ **ಉಪಾಶೃಣೋತ್** ಕೇಳಿದರು, ತಪ ತಪ ಎಂಬ ಎರಡು ಸಲ ಹೇಳಿದ ವಿಧಿವಾಕ್ಯವನ್ನು ಕೇಳಿಸಿಕೊಂಡರು. ॥ ೬ ॥

**ನಿಶಮ್ಯ ತದ್ವಕ್ತೃದಿದೃಕ್ಷಯಾ ದಿಶೋ**
**ವಿಲೋಕ್ಯ ತತ್ರಾನ್ಯದಪಶ್ಯಮಾನಃ ।**

**ಸ್ವಧಿಷ್ಣ್ಯಮಾಸ್ಥಾಯ ವಿಮೃಶ್ಯ ತದ್ಧಿತಂ**
**ತಪಸ್ಯುಪಾದಿಷ್ಟ ಇವಾದಧೇ ಮನಃ** ॥ ೭ ॥

**ಬ್ರಹ್ಮಾ** ಬ್ರಹ್ಮದೇವರು, **ತತ್** ಆ ಎರಡಕ್ಷರಗಳನ್ನು **ನಿಶಮ್ಯ** ಕೇಳಿ, **ವಕ್ತೃದಿದೃಕ್ಷಯಾ** ಆ ಮಾತನ್ನು ಹೇಳಿದವರನ್ನು ನೋಡುವ ಇಚ್ಛೆಯಿಂದ, **ದಿಶಃ** ಹತ್ತೂ ದಿಕ್ಕುಗಳನ್ನು **ವಿಲೋಕ್ಯ** ನೋಡಿ, **ತತ್ರ** ಆ ದಿಕ್ಕುಗಳಲ್ಲಿ **ಅನ್ಯದಪಶ್ಯಮಾನಃ** ಬೇರೆ ಯಾರನ್ನೂ ಕಾಣದೇ, **ತತ್** ಆ ತಪಸ್ಸು, **ಆತ್ಮನಃ** ತನಗೆ, **ಹಿತಂ** ಹಿತಸಾಧನವೆಂದು, **ವಿಮೃಶ್ಯ** ವಿಚಾರಮಾಡಿ, **ತಪಸಿ** ತಪಸ್ಸು ಮಾಡಲು, **ಉಪಾದಿಷ್ಟ ಇವ** ಆಜ್ಞಪ್ತನಾದವನಂತೆ, **ಸ್ವಧಿಷ್ಣ್ಯಂ ಆಸ್ಥಾಯ** ಕಮಲಕರ್ಣಿಕಾದಲ್ಲಿ ಕುಳಿತು, **ತಪಸಿ ಮನ ಆದಧೇ** ತಪಸ್ಸು ಮಾಡಲು ಮನಸ್ಸು ಮಾಡಿದರು.

ಪದ್ಮನಾಲನಾಡಿಗಳಲ್ಲಿ ಹುಡಿಕಿ ಯಾರೂ ಕಾಣದಾದಾಗ ಮತ್ತೆ ತಮ್ಮ ಸ್ಥಳಕ್ಕೆ ಬಂದರು. ನನ್ನ ತಂದೆಯು ಪ್ರಪಂಚವನ್ನು ನಿರ್ಮಾಣ ಮಾಡಲು ತಪಸ್ಸು ಮಾಡೆಂದು ನನಗೆ ಆಜ್ಞಾಪಿಸಿದ್ದಾರೆ ಎಂದಾಲೊಚಿಸಿ ತಪಸ್ಸು ಮಾಡುವ ನಿರ್ಧಾರ ಮಾಡಿದರು ಎಂದು ಭಾವ. ॥ ೭ ॥

**ದಿವ್ಯಂ ಸಹಸ್ರಾಬ್ದಮಮೋಘದರ್ಶನೋ**
**ಜಿತಾನಿಲಾತ್ಮಾ ವಿಜಿತೋಭಯೇಂದ್ರಿಯಃ ।**
**ಅತಪ್ಯತ ಸ್ಮಾಖಿಲಲೋಕತಾಪನಂ**
**ತಪಸ್ತಪೀಯಾನ್ ತಪತಾಂ ಸಮಾಹಿತಃ** ॥ ೮ ॥

**ಅಮೋಘದರ್ಶನಃ** ಸಫಲವಾದ ಜ್ಞಾನ ಉಳ್ಳ, **ಜಿತಾನಿಲಾತ್ಮಾ** ವಾಯು ಮತ್ತು ಮನಸ್ಸನ್ನು ವಶಮಾಡಿಕೊಂಡ, **ವಿಜಿತೋಭಯೇಂದ್ರಿಯಃ** ಜ್ಞಾನೇಂದ್ರಿಯಗಳನ್ನು ಕರ್ಮೇಂದ್ರಿಯಗಳನ್ನೂ ವಶಮಾಡಿಕೊಂಡ, **ತಪತಾಂ ತಪೀಯಾನ್** ತಪಸ್ಸು ಮಾಡುವವರಲ್ಲಿ ಉತ್ತಮೋತ್ತಮನಾದ ಚತುರ್ಮುಖನು, **ಸಮಾಹಿತಃ** ಏಕಾಗ್ರಚಿತ್ತನಾಗಿ, **ಅಖಿಲಲೋಕತಾಪನಂ** ಎಲ್ಲ ಲೋಕಪ್ರಕಾಶಕನಾದ, **ತಪಃ** ಜ್ಞಾನರೂಪನಾದ ಪರಬ್ರಹ್ಮನನ್ನು, **ದಿವ್ಯಂ ಸಹಸ್ರಾಬ್ದಂ** ದೇವತೆಗಳ ಸಾವಿರ ವರ್ಷಪರ್ಯಂತ, **ಅತಪ್ಯತ ಸ್ಮ** ತಪಸ್ಸು ಮಾಡಿದರು, ಧ್ಯಾನ ಮಾಡಿದರು.

ಈ ಶ್ಲೋಕದಲ್ಲಿ 'ತಪಃ ಅತಪ್ಯತ' ಎಂದರೆ ತಪಸ್ಸಿನ ತಪಸ್ಸು ಮಾಡಿದನೆಂದು ತೋರುವುದು ಕಾರಣ ತಪಃ ಶಬ್ದವನ್ನು ವ್ಯಾಖ್ಯಾನಿಸುವರು-

**ತಾತ್ಪರ್ಯ- ತಪೋ ಬ್ರಹ್ಮ।**

ತಪಃಶಬ್ದವು ಬ್ರಹ್ಮವಾಚಕವಾಗಿದೆ ಎಂಬ ವಿಷಯದಲ್ಲಿ ಶ್ರೌತಪ್ರಯೋಗವನ್ನು ತೋರಿಸುವರು-

**ತಪಸೋಽಧ್ಯಜಾಯತ ಇತಿ ಶ್ರುತೇಃ।**

'ಅಖಿಲಲೋಕತಾಪನಂ' ಎಂಬುದಕ್ಕೆ ಎಲ್ಲಲೋಕಕ್ಕೆ ಸಂತಾಪಕರ ಎಂದರ್ಥ ಕಾಣುವುದು ಆದ್ದರಿಂದ ವ್ಯಾಖ್ಯಾನಿಸುವರು-

**ಅಖಿಲಲೋಕಪ್ರಕಾಶನಂ ಯತ್ತದಾಲೋಚಯಾಮಾಸ।**

ಅತಪ್ಯತ ಎಂದರೆ ಸಂತಾಪಗೊಂಡನೆಂದರ್ಥವಲ್ಲ ಎಂದು ತಿಳಿಸಿದಂತಾಯಿತು. ತಪಶ್ಶಬ್ದೋಕ್ತನಾದ ಬ್ರಹ್ಮನಿಗೆ ವಿಷಯತ್ವ ತಿಳಿಸಲು ತತ್ ಎಂದಿದ್ದಾರೆ. ಆಲೋಚನಕ್ಕೆ ಕಾಲವಿಶೇಷ ತಿಳಿಸಲು ತದಾ ಎಂದಿದ್ದಾರೆ.

ತಪತಾಂ ತಪಸ್ವೀ ಎಂದು ನಿರ್ಧಾರಣದಿಂದಲೇ ಉತ್ತಮತ್ವವು ಸಿದ್ಧವಾದಾಗ ಮತ್ತೆ ಉತ್ತಮತ್ವವಾಚಕವಾದ ಈಯಸುನ್ ಪ್ರತ್ಯಯವು ವ್ಯರ್ಥ ಎಂದರೆ ಅಭಿಪ್ರಾಯ ಹೇಳುವರು-

**ತಪತಾಂ ತಪೀಯಾನ್ ಇತ್ಯನೇನ ಅತ್ಯುತ್ತಮೋತ್ತಮತ್ವಮುಕ್ತಂ ಭವತಿ।**

ಈ ವಿಷಯದಲ್ಲಿ ಪ್ರಮಾಣ ಹೇಳುವರು-

**ಮಹಾನ್ ಮಹೀಯಸಾಮಾದಿಂ ಬ್ರೂಯಾದತ್ಯುತ್ತಮೋತ್ತಮಮ್।**
**ಯತ್ರಾಧಿಕಂ ವದೇತ್ಕಿಂಚಿತ್ ಜ್ಞೇಯೋಽರ್ಥಸ್ತತ್ರ ಚಾಽಧಿಕಃ॥ -ಇತಿ ವ್ಯಾಸನಿರುಕ್ತೇ**

ತಪಃ ಶಬ್ದ ಬ್ರಹ್ಮವಾಚಕವಾದರೂ ಇಲ್ಲಿ ಅದನ್ನೇ ಏಕೆ ಸ್ವೀಕರಿಸಬೇಕು ಎಂದರೆ ಸ್ಮ ಶಬ್ದದಿಂದ ಸೂಚಿತವಾದ ಸ್ಮೃತಿಸಮಾಖ್ಯಾವನ್ನು ತೋರಿಸುವರು-

**ತಪೋರೂಪಂ ಪರಂ ಬ್ರಹ್ಮ ಬ್ರಹ್ಮಾಽಚಿಂತಯದಂಜಸಾ॥ -ಇತಿ ಷಾಡ್ಗುಣ್ಯೇ**

ತಾತ್ಪರ್ಯದ ಭಾವಾರ್ಥ- ಭಾರೀ ಪ್ರಕಾಶರೂಪನಾದ ಪರಬ್ರಹ್ಮನಿಂದ ಕರ್ಮವು, ಜಗತ್ತು ಉಂಟಾಯಿತು ಎಂಬ ಶ್ರುತಿ ಇರುವುದರಿಂದ ಭಾಗವತದಲ್ಲಿಯ ತಪಃ ಎಂಬ ಶಬ್ದಕ್ಕೆ ಜ್ಞಾನರೂಪನಾದ ಪರಬ್ರಹ್ಮನೆಂದರ್ಥ. ಎಲ್ಲ ಲೋಕಗಳನ್ನು ಪ್ರಕಾಶ-ಗೊಳಿಸುವವನು. **ತತ್** ಎಂದು ತತ್ ಶಬ್ದವಾಚ್ಯನಾದ ಪರಬ್ರಹ್ಮನನ್ನು, ತಪ ತಪ ಎಂಬ ಎರಡಕ್ಷರ ಕೇಳಿದ ನಂತರವೇ ಧ್ಯಾನ ಮಾಡಿದನು.

'ತಪತಾಂ ತಪೀಯಾನ್' ಎಂಬುದರಿಂದ ಇಂದ್ರಾದಿಗಳಿಂದ ಉತ್ತಮರಾದ ರುದ್ರಾದಿಗಳಿಗಿಂತಲೂ ಚತುರ್ಮುಖಬ್ರಹ್ಮನಿಗೆ ಉತ್ತಮತ್ವ ಹೇಳಲ್ಪಟ್ಟಿದೆ. 'ಮಹೀಯಸಾಂ ಮಹಾನ್' ಮುಂತಾದ ಶಬ್ದವು ಉತ್ತಮೋತ್ತಮನನ್ನು ಹೇಳುವುದು.

ವೇದದಲ್ಲಿ ಆಗಲಿ, ವೇದಾನುಸಾರಿಗ್ರಂಥಗಳಲ್ಲಿ ಆಗಲಿ, ಯಾವುದಾದರು ಶಬ್ದರೂಪವು ಆಕಾಂಕ್ಷಿತವಾದ ಅರ್ಥಕ್ಕಿಂತ ಹೆಚ್ಚಾಗಿದ್ದರೆ, ಅಂತಹ ಸ್ಥಳದಲ್ಲಿ ಅರ್ಥವೂ ಅಧಿಕವೆಂದು ತಿಳಿಯತಕ್ಕದ್ದು ಎಂದು ವ್ಯಾಸನಿರುಕ್ತದಲ್ಲಿ ಹೇಳಿದೆ. ಜ್ಞಾನರೂಪನಾದ ಪರಬ್ರಹ್ಮನನ್ನು ಚತುರ್ಮುಖನು ಚೆನ್ನಾಗಿ ಧ್ಯಾನಿಸಿದನು. ಎಂದು ಷಾಡ್ಗುಣ್ಯದಲ್ಲಿ ಹೇಳಿದೆ.

ಮಹಚ್ಛಬ್ದವು ಉತ್ತಮವಾಚಕವಾಗಿದೆ. ಈಯಸುನ್ ಪ್ರತ್ಯಯದಿಂದ ಅತ್ಯುತ್ತಮತ್ವ ನಿರ್ಧಾರಣದಿಂದ ಅದಕ್ಕಿಂತಲೂ ಉತ್ತಮತ್ವವು ಹೇಳಲ್ಪಟ್ಟಿದೆ ಎಂದು ಭಾವ.

ಇದರಂತೆ 'ತಪತಾಂ ತಪೀಯಾನ್' ಎಂಬಲ್ಲಿ ತಿಳಿಯಬೇಕು. ।। ೮ ।।

*'ಸ ಚಾಽಪಿ ಯತ್ರ ಪುರುಷಃ' ಎಂಬ ಪ್ರಶ್ನೆಗೆ ಉತ್ತರ-*

**ತಸ್ಮೈ ಸ್ವಲೋಕಂ ಭಗವಾನ್ ಸಭಾಜಿತಃ**
**ಸಂದರ್ಶಯಾಮಾಸ ಪರಂ ನ ಯತ್ಪದಮ್ ।**
**ವ್ಯಪೇತಸಂಕ್ಲೇಶವಿಮೋಹಸಾಧ್ವಸಂ**
**ಸಂದೃಷ್ಟವದ್ಭಿರ್ವಿಬುಧೈರಭಿಷ್ಟುತಮ್** ।। ೯ ।।

**ಸಭಾಜಿತಃ** ಪೂಜಿತನಾದ, **ಭಗವಾನ್** ಶ್ರೀಹರಿಯು, **ತಸ್ಮೈ** ಬ್ರಹ್ಮದೇವರಿಗೆ, **ಸಂದೃಷ್ಟವದ್ಭಿಃ** ಅಪರೋಕ್ಷಜ್ಞಾನಿಗಳಿಂದ, **ಅಭಿಷ್ಟುತಂ** ಮುಖ್ಯವಾಗಿ ಸ್ತುತಿಸಲ್ಪಟ್ಟ **ವ್ಯಪೇತ ಸಂಕ್ಲೇಶವಿಮೋಹಸಾಧ್ವಸಮ್** ಅವಿದ್ಯಾ-ಅಸ್ಮಿತ-ರಾಗ-ದ್ವೇಷ-ಅಭಿನಿವೇಶ ಎಂಬ ಐದು ಸಂಕ್ಲೇಶಗಳು, ವಿಮೋಹ-ಮೌಢ್ಯ-ಸಾಧ್ವಸ-ಭಯ ಇವುಗಳಿಂದ ರಹಿತವಾದ, **ಯತ್** ಯಾವುದಕ್ಕಿಂತಲೂ, **ಪರಂ ಪದಂ ನ** ಉತ್ತಮವಾದ ಸ್ಥಾನ ಮತ್ತೊಂದು ಇಲ್ಲವೋ ಅಂತಹ, **ಸ್ವಲೋಕಂ** ತನ್ನ ಲೋಕವನ್ನು **ಸಂದರ್ಶಯಾಮಾಸ** ತೋರಿಸಿದನು. ।।೯।।

ಇಲ್ಲಿ 'ಯತ್ ಪರಂ ನ' ಎಂದರೆ ಯಾವುದು ಉತ್ತಮವಲ್ಲವೋ ಎಂದರ್ಥ ತೋರುವುದು. ಆದ್ದರಿಂದ ವ್ಯಾಖ್ಯಾನಿಸುವರು-

**ತಾತ್ಪರ್ಯ- ಯತ್ ಯತಃ, 'ಯತ್ತದಿತ್ಯಾದಯಃ ಶಬ್ದಾಃ ಪಂಚಮ್ಯಂತಾಃ ಪ್ರಕೀರ್ತಿತಾಃ' ಇತಿ ಚ । ಮಾಯಾತೀತತ್ವಾತ್ ।**

'ಯತ್ಪದಂ' ಎಂಬಲ್ಲಿಯ ಯತ್ ಶಬ್ದಕ್ಕೆ ಯಾವ ಲೋಕಕ್ಕಿಂತ ಎಂದರ್ಥ ಈ ವಿಷಯದಲ್ಲಿ ಪ್ರಮಾಣ. ಯತ್-ತತ್ ಮೊದಲಾದ ಶಬ್ದಗಳು ಪಂಚಮೀವಿಭಕ್ತಿಯ ಅರ್ಥ ಉಳ್ಳವುಗಳಾಗಿವೆ. ಎಂದು ಹೇಳಲ್ಪಟ್ಟಿದೆ. ಇದೇ ಉತ್ತಮ ಯಾಕೆ ಎಂದರೆ ಮಾಯಾತೀತವಾದ್ದರಿಂದ ಎಂದು ಉತ್ತರಿಸಿದರು. ಅಂದರೆ ಅಪ್ರಾಕೃತವಾದ್ದರಿಂದ ಎಂದು ತಿಳಿಯಬೇಕು. ॥ ೯ ॥

*ಆ ಲೋಕವನ್ನೇ ಐದು ಶ್ಲೋಕಗಳಿಂದ ವರ್ಣಿಸುವರು -*

**ನ ವರ್ತತೇ ಯತ್ರ ರಜಸ್ತಮಸ್ತಯೋಃ**
**ಸತ್ತ್ವಂ ಚ ಮಿಶ್ರಂ ನ ಚ ಕಾಲವಿಕ್ರಮಃ ।**
**ನ ಯತ್ರ ಮಾಯಾ ಕಿಮುತಾಽಪರೇ ಹರೇ**
**ರನುವ್ರತಾ ಯತ್ರ ಸುರಾಸುರಾರ್ಚಿತಾಃ ॥ ೧೦ ॥**

**ಯತ್ರ** ಯಾವ ಲೋಕದಲ್ಲಿ, **ರಜಃ** ರಜೋಗುಣವು, **ತಮಃ** ತಮೋಗುಣವು, **ತಯೋಃ ಮಿಶ್ರಂ** ರಜೋಗುಣ-ತಮೋಗುಣಗಳ ಜೊತೆಗೆ ಪಠಿತವಾದ, **ಸತ್ತ್ವಂ** ಸತ್ತ್ವಗುಣವು, ನ ಇರುವುದಿಲ್ಲವೊ ಅಂದರೆ ಬಂಧಕವಾಗಿ ವ್ಯಾಪಾರ ಮಾಡುವುದಿಲ್ಲವೋ, **ಕಾಲವಿಕ್ರಮಃ** ಕಾಲ ಸಾಮರ್ಥ್ಯದಿಂದಾಗುವ ಉತ್ಪತ್ತಿ-ನಾಶ-ವೃದ್ಧಿ-ಕ್ಷಯಗಳೆಂಬ ಭಾವವಿಕಾರಗಳು, **ನಚ** ಇರುವುದಿಲ್ಲವೋ, **ಯತ್ರ** ಎಲ್ಲಿ **ಮಾಯಾ ನ** ಪ್ರಕೃತಿಯೇ ಇಲ್ಲವೋ, **ಕಿಮುತ ಅಪರೇ** ಮಹದಾದಿಗಳು ಇಲ್ಲವೆಂದೇನು ಹೇಳುವುದು. **ಯತ್ರ** ಎಲ್ಲಿ **ಸುರಾಸುರಾರ್ಚಿತಾಃ** ದೇವತೆಗಳಿಂದ, ಸಜ್ಜನರಾದ ಅಸುರರಿಂದ ಪೂಜಿತರಾದ, **ಹರೇಃ ಅನುವ್ರತಾಃ** ಶ್ರೀಹರಿಯ ಅನುಚರರು ಇರುವರು. ॥ ೧೦ ॥

**ಶ್ಯಾಮಾವದಾತಾಃ ಶತಪತ್ರಲೋಚನಾಃ**
**ಪಿಶಂಗವಸ್ತ್ರಾಃ ಸುರುಚಃ ಸುಪೇಶಸಃ ।**
**ಸರ್ವೇ ಚತುರ್ಬಾಹವ ಉನ್ಮಿಷನ್ಮಣಿ-**
**ಪ್ರವೇಕನಿಷ್ಕಾಭರಣಾಃ ಸುವರ್ಚಸಃ ॥ ೧೧ ॥**

**ಶ್ಯಾಮಾವದಾತಾಃ** ಇಂದ್ರನೀಲದಂತೆ ಕಪ್ಪಾದ, ನಿರ್ಮಲರಾದ, **ಶತಪತ್ರಲೋಚನಾಃ** ಕಮಲದಂತೆ ಕಣ್ಣುಳ್ಳ, **ಪಿಶಂಗವಸ್ತ್ರಾಃ** ಹಳದಿಯ ಉಡುಪುಗಳುಳ್ಳ, **ಸುರುಚಃ** ಒಳ್ಳೆಯ

ಕಾಂತಿಯುಳ್ಳ, **ಸುಪೇಶಸಃ** ಒಳ್ಳೆಯ ಸೌಂದರ್ಯ ಉಳ್ಳ, **ಸರ್ವೇ** ಎಲ್ಲರೂ, **ಚತುರ್ಬಾಹವಃ** ನಾಲ್ಕು ಕೈಯುಳ್ಳವರು, **ಉನ್ಮಿಷನ್ಮಣಿಪ್ರವೇಕನಿಷ್ಕಾಭರಣಾಃ** ಪ್ರಕಾಶಮಾನವಾದ ರತ್ನಶ್ರೇಷ್ಠಗಳುಳ್ಳ ಬಂಗಾರದಿಂದ ಮಾಡಿದ ಹಾರಾಭರಣಗಳುಳ್ಳ **ಸುವರ್ಚಸಃ** ಒಳ್ಳೆಯ ಬಲವುಳ್ಳ, **ಹರೇರನುವ್ರತಾಃ ಯತ್ರ** ಎಂದು ಅನ್ವಯ ಮಾಡಿಕೊಳ್ಳಬೇಕು. ।।೧೧।।

**ಪ್ರವಾಲವೈದೂರ್ಯಮೃಣಾಲವರ್ಚಸಾಂ**
**ಪರಿಸ್ಫುರತ್‌ಕುಂಡಲಮೌಲಿಮಾಲಿನಾಮ್ ।**
**ಭ್ರಾಜಿಷ್ಣುಭಿರ್ಯಃ ಪರಿತೋ ವಿರಾಜತೇ**
**ಲಸದ್ವಿಮಾನಾವಲಿಭಿರ್ಮಹಾತ್ಮನಾಮ್ ।**
**ವಿದ್ಯೋತಮಾನಪ್ರಮದೋತ್ತಮಾಭಿಃ**
**ಸ ವಿದ್ಯುದಭ್ರಾವಲಿಭಿರ್ಯಥಾ ನಭಃ** ॥ ೧೨ ॥

ಯಾವ ಲೋಕವು, **ಪ್ರವಾಲವೈದೂರ್ಯಮೃಣಾಲವರ್ಚಸಾಂ** ಹವಳದಂತೆ, ವೈಡೂರ್ಯದಂತೆ, ಕಮಲದಂತೆ, ಕಾಂತಿ ಉಳ್ಳ **ಪರಿಸ್ಫುರತ್** ಅತ್ಯಂತ ಹೊಳೆಯುವ, **ಕುಂಡಲಮೌಲಿಮಾಲಿನಾಮ್** ಕುಂಡಲ-ಕೀರಿಟ-ಮಾಲೆಗಳುಳ್ಳ, **ಮಹಾತ್ಮನಾಮ್** ಜ್ಞಾನಿಗಳ, **ವಿದ್ಯೋತಮಾನಪ್ರಮದೋತ್ತಮಾಭಿಃ** ಪ್ರಕಾಶಮಾನರಾದ ಉತ್ತಮಸ್ತ್ರೀಯರುಳ್ಳ **ಲಸದ್ವಿಮಾನಾವಲಿಭಿಃ** ಪ್ರಕಾಶಮಾನವಾದ ವಿಮಾನಗಳ ಸಾಲುಗಳಿಂದ ಅಥವಾ, ಪ್ರಕಾಶ ಮಾನರಾದ ಸ್ತ್ರೀಯರಿಂದ, **ಭ್ರಾಜಿಷ್ಣುಭಿಃ** ಶೋಭಿಸುವ ವಿಮಾನಗಳಿಂದ, ಹೀಗೂ ಅರ್ಥ, **ನಭಃ** ಆಕಾಶವು, **ವಿದ್ಯುದಭ್ರಾವಲಿಭಿಃ ಯಥಾ** ಮಿಂಚಿನಿಂದ ಕೂಡಿದ ಮೋಡಗಳಿಂದ ಹೇಗೋ ಹಾಗೆ, **ಯಃ** ಯಾವ ಶ್ವೇತದ್ವಿಪವು, **ಪರಿತಃ** ಸುತ್ತಲು, **ವಿರಾಜತೇ** ಶೋಭಿಸುವುದೋ, ಇಲ್ಲಿ ಪ್ರಮದೋತ್ತಮರೇ ಮಿಂಚು ಎಂದು, ವಿಮಾನಗಳೇ ಮೋಡವೆಂದು ತಿಳಿಯಬೇಕು. ॥ ೧೨ ॥

**ಶ್ರೀರ್ಯತ್ರ ರೂಪಿಣ್ಯುರುಗಾಯಪಾದಯೋಃ**
**ಕರೋತಿ ಮಾನಂ ಬಹುಧಾ ವಿಭೂತಿಭಿಃ ।**
**ಪ್ರೇಂಖಶ್ರಿತಾ ಯಾ ಕುಸುಮಾಕರಾನುಗೈಃ**
**ವಿಗೀಯಮಾನಾ ಪ್ರಿಯಕರ್ಮ ಗಾಯತೀ** ॥ ೧೩ ॥

**ಯತ್ರ** ಎಲ್ಲಿ, **ಶ್ರೀಃ** ಲಕ್ಷ್ಮೀದೇವಿಯು, **ರೂಪಿಣೀ** ಪ್ರತ್ಯಕ್ಷಳಾಗಿ, **ಕುಸಾಮಾಕರಾನುಗೈಃ** ವಸಂತನ ಅನುಚರರಾದ ಭೃಂಗ-ಕೊಗಿಲೆಗಳಿಂದ, **ವಿಗೀಯಮಾನಾ** (ಇವುಗಳ

ಆಕಾರದಲ್ಲಿ ಇರುವ ಬ್ರಹ್ಮಾದಿಗಳಿಂದ) ವಿವಿಧವಾಗಿ ಗಾನ ಮಾಡಲ್ಪಟ್ಟವಳಾಗಿ, **ಪ್ರಿಯಕರ್ಮ ಗಾಯತೀಂ** ಗಂಡನ ವ್ಯಾಪರಗಳನ್ನು ಹಾಡುತ್ತ, **ಪ್ರೇಂಖಶ್ರಿತಾಃ** ತೂಗುಮಂಚದಲ್ಲಿರುವ, **ಯಾಃ** ಯಾವ ಮೂರ್ತಿಗಳಿರುವವೋ, **ತಾಭಿಃ ವಿಭೂತಿಭಿಃ** ತನ್ನ ಮೂರ್ತಿಗಳಿಂದ **ಉರುಗಾಯಪಾದಯೋಃ** ಬ್ರಹ್ಮಾದಿಗಳಿಂದ ಸ್ತುತ್ಯವಾದ ಶ್ರೀಹರಿಯ ಪಾದಗಳಿಗೆ, **ಬಹುಧಾ ಮಾನಂ ಕರೋತಿ** ಅನೇಕ ರೀತಿಯಿಂದ ಪೂಜಿಸುವಳು.

ಇಲ್ಲಿ 'ಪ್ರೇಂಖಶ್ರಿತಾಯಾಃ' ಎಂಬುದು ಷಷ್ಠ್ಯಂತವಾದರೆ ಅನ್ವಯವಾಗಲಾರದು. ಆದ್ದರಿಂದ ವಿವಕ್ಷಿತ ಪದಚ್ಛೇದ ತೋರಿಸಿ ಅನ್ವಯವನ್ನೂ ತೋರಿಸುವರು-

**ತಾತ್ಪರ್ಯ- ಪ್ರೇಂಖಶ್ರಿತಾಃ ಯಾಃ ವಿಭೂತಯಃ ।**

ಯಾವ ಲಕ್ಷ್ಮಿಯ ರೂಪಗಳು ತೂಗು ಮಂಚವನ್ನಾಶ್ರಯಿಸಿರುವವೋ ಅವುಗಳಿಂದ ಕೂಡಿಕೊಂಡು ಎಂದು ಅನ್ವಯಾರ್ಥ. ॥ ೧೩ ॥

**ದದರ್ಶ ತತ್ರಾಽಖಿಲಸಾತ್ವತಾಂ ಪತಿಂ**
**ಶ್ರಿಯಃಪತಿಂ ಯಜ್ಞಪತಿಂ ಜಗತ್ಪತಿಮ್ ।**
**ಸುನಂದನಂದಪ್ರಬಲಾರ್ಹಣಾದಿಭಿಃ**
**ಸ್ವಪಾರ್ಷದಮುಖ್ಯೈಃ ಪರಿಸೇವಿತಂ ವಿಭುಮ್ ॥ ೧೪ ॥**

**ತತ್ರ** ಆ ಶ್ವೇತದ್ವೀಪದಲ್ಲಿ, **ಅಖಿಲಸಾತ್ವತಾಂ ಪತಿಮ್** ಎಲ್ಲ ಮುಕ್ತರಿಗೆ ಒಡೆಯನಾದ, **ಶ್ರಿಯಃಪತಿಮ್** ಲಕ್ಷ್ಮೀಪತಿಯಾದ, **ಯಜ್ಞಪತಿಮ್** ಯಜ್ಞಫಲಪ್ರದನಾದ, **ಜಗತ್ಪತಿಮ್** ಜಗದೊಡೆಯನಾದ, **ಸುನಂದನಂದಪ್ರಬಲಾರ್ಹಣಾದಿಭಿಃ ಸ್ವಪಾರ್ಷದಮುಖ್ಯೈಃ** ತನ್ನ ದ್ವಾರಪಾಲಕರಲ್ಲಿ ಮುಖ್ಯರಾದ ಮುಕ್ತರಾದ ಸುನಂದ, ನಂದ, ಪ್ರಬಲ ಮೊದಲಾದವರಿಂದ ಪೂಜಾಸಾಮಗ್ರಿಗಳಿಂದ, **ಪರಿಸೇವಿತಮ್** ಸೇವಿಸಲ್ಪಟ್ಟ **ವಿಭುಂ** ವ್ಯಾಪ್ತನಾದ ಶ್ರೀಹರಿಯನ್ನು, **ದದರ್ಶ** ಬ್ರಹ್ಮದೇವರು ನೋಡಿದರು. ॥ ೧೪ ॥

ಇಲ್ಲಿ 'ಸಾತ್ವತಾಂ ಪತಿಂ' ಎಂಬುದಕ್ಕೆ ಯಾದವರ ಸ್ವಾಮಿ ಎಂದರ್ಥವಾಗುವುದು. ಕಾರಣ ಸಾತ್ವತಶಬ್ದದ ಅರ್ಥವನ್ನು ಹೇಳುವರು. ಮತ್ತು ಅಮುಕ್ತರಾದ ಸುನಂದ-ನಂದಾದಿಸೇವ್ಯತ್ವ ಮುಕ್ತಸ್ವಾಮಿಗೆ ಹೇಗೆ ಎಂಬುದಕ್ಕೂ ಉತ್ತರಿಸುವರು-

**ತಾತ್ಪರ್ಯ- ಸತ್ವಂ ತು ಶೋಭನತ್ವಂ ಸ್ಯಾತ್ ತದ್ಯುಕ್ತಾಃ ಸಾತ್ವತಾ ಮತಾಃ ॥ -ಇತ್ಯಧ್ಯಾತ್ಮೇ**

ಕಾಂತಿಯುಳ್ಳ, **ಸುಪೇಶಸಃ** ಒಳ್ಳೆಯ ಸೌಂದರ್ಯ ಉಳ್ಳ, **ಸರ್ವೇ** ಎಲ್ಲರೂ, **ಚತುರ್ಬಾಹವಃ** ನಾಲ್ಕು ಕೈಯುಳ್ಳವರು, **ಉನ್ಮಿಷನ್ಮಣಿಪ್ರವೇಕನಿಷ್ಕಾಭರಣಾಃ** ಪ್ರಕಾಶಮಾನವಾದ ರತ್ನಶ್ರೇಷ್ಠಗಳುಳ್ಳ ಬಂಗಾರದಿಂದ ಮಾಡಿದ ಹಾರಾಭರಣಗಳುಳ್ಳ **ಸುವರ್ಚಸಃ** ಒಳ್ಳೆಯ ಬಲವುಳ್ಳ, **ಹರೇರನುವ್ರತಾಃ ಯತ್ರ** ಎಂದು ಅನ್ವಯ ಮಾಡಿಕೊಳ್ಳಬೇಕು. ||೧೧||

**ಪ್ರವಾಲವೈದೂರ್ಯಮೃಣಾಲವರ್ಚಸಾಂ**
**ಪರಿಸ್ಫುರತ್‌ಕುಂಡಲಮೌಲಿಮಾಲಿನಾಮ್ ।**
**ಭ್ರಾಜಿಷ್ಣುಭಿರ್ಯಃ ಪರಿತೋ ವಿರಾಜತೇ**
**ಲಸದ್ವಿಮಾನಾವಲಿಭಿರ್ಮಹಾತ್ಮನಾಮ್ ।**
**ವಿದ್ಯೋತಮಾನಪ್ರಮದೋತ್ತಮಾಭಿಃ**
**ಸ ವಿದ್ಯುದಭ್ರಾವಲಿಭಿರ್ಯಥಾ ನಭಃ** **|| ೧೨ ||**

ಯಾವ ಲೋಕವು, **ಪ್ರವಾಲವೈದೂರ್ಯಮೃಣಾಲವರ್ಚಸಾಂ** ಹವಳದಂತೆ, ವೈಡೂರ್ಯದಂತೆ, ಕಮಲದಂತೆ, ಕಾಂತಿ ಉಳ್ಳ **ಪರಿಸ್ಫುರತ್** ಅತ್ಯಂತ ಹೊಳೆಯುವ, **ಕುಂಡಲಮೌಲಿಮಾಲಿನಾಮ್** ಕುಂಡಲ-ಕಿರಿಟ-ಮಾಲೆಗಳುಳ್ಳ, **ಮಹಾತ್ಮನಾಮ್** ಜ್ಞಾನಿಗಳ, **ವಿದ್ಯೋತಮಾನಪ್ರಮದೊತ್ತಮಾಭಿಃ** ಪ್ರಕಾಶಮಾನರಾದ ಉತ್ತಮಸ್ತ್ರೀಯರುಳ್ಳ **ಲಸದ್ವಿಮಾನಾವಲಿಭಿಃ** ಪ್ರಕಾಶಮಾನವಾದ ವಿಮಾನಗಳ ಸಾಲುಗಳಿಂದ ಅಥವಾ, ಪ್ರಕಾಶ ಮಾನರಾದ ಸ್ತ್ರೀಯರಿಂದ, **ಭ್ರಾಜಿಷ್ಣುಭಿಃ** ಶೋಭಿಸುವ ವಿಮಾನಗಳಿಂದ, ಹೀಗೂ ಅರ್ಥ, **ನಭಃ** ಆಕಾಶವು, **ವಿದ್ಯುದಭ್ರಾವಲಿಭಿಃ ಯಥಾ** ಮಿಂಚಿನಿಂದ ಕೂಡಿದ ಮೋಡಗಳಿಂದ ಹೇಗೋ ಹಾಗೆ, **ಯಃ** ಯಾವ ಶ್ವೇತದ್ವಿಪವು, **ಪರಿತಃ** ಸುತ್ತಲು, **ವಿರಾಜತೇ** ಶೋಭಿಸುವುದೋ, ಇಲ್ಲಿ ಪ್ರಮದೋತ್ತಮರೇ ಮಿಂಚು ಎಂದು, ವಿಮಾನಗಳೇ ಮೋಡವೆಂದು ತಿಳಿಯಬೇಕು. || ೧೨ ||

**ಶ್ರೀರ್ಯತ್ರ ರೂಪಿಣ್ಯುರುಗಾಯಪಾದಯೋಃ**
**ಕರೋತಿ ಮಾನಂ ಬಹುಧಾ ವಿಭೂತಿಭಿಃ ।**
**ಪ್ರೇಂಖಶ್ರಿತಾ ಯಾ ಕುಸುಮಾಕರಾನುಗೈಃ**
**ವಿಗೀಯಮಾನಾ ಪ್ರಿಯಕರ್ಮ ಗಾಯತೀ** **|| ೧೩ ||**

**ಯತ್ರ** ಎಲ್ಲಿ, **ಶ್ರೀಃ** ಲಕ್ಷ್ಮೀದೇವಿಯು, **ರೂಪಿಣೀ** ಪ್ರತ್ಯಕ್ಷಳಾಗಿ, **ಕುಸಾಮಾಕರಾನುಗೈಃ** ವಸಂತನ ಅನುಚರರಾದ ಭೃಂಗ-ಕೊಗಿಲೆಗಳಿಂದ, **ವಿಗೀಯಮಾನಾ** (ಇವುಗಳ

ಆಕಾರದಲ್ಲಿ ಇರುವ ಬ್ರಹ್ಮಾದಿಗಳಿಂದ) ವಿವಿಧವಾಗಿ ಗಾನ ಮಾಡಲ್ಪಟ್ಟವಳಾಗಿ, **ಪ್ರಿಯಕರ್ಮ ಗಾಯತೀಂ** ಗಂಡನ ವ್ಯಾಪರಗಳನ್ನು ಹಾಡುತ್ತ, **ಪ್ರೇಂಖಶ್ರಿತಾಃ** ತೂಗುಮಂಚದಲ್ಲಿರುವ, **ಯಾಃ** ಯಾವ ಮೂರ್ತಿಗಳಿರುವವೋ, **ತಾಭಿಃ ವಿಭೂತಿಭಿಃ** ತನ್ನ ಮೂರ್ತಿಗಳಿಂದ **ಉರುಗಾಯಪಾದಯೋಃ** ಬ್ರಹ್ಮಾದಿಗಳಿಂದ ಸ್ತುತ್ಯವಾದ ಶ್ರೀಹರಿಯ ಪಾದಗಳಿಗೆ, **ಬಹುಧಾ ಮಾನಂ ಕರೋತಿ** ಅನೇಕ ರೀತಿಯಿಂದ ಪೂಜಿಸುವಳು.

ಇಲ್ಲಿ 'ಪ್ರೇಂಖಶ್ರಿತಾಯಾಃ' ಎಂಬುದು ಷಷ್ಠ್ಯಂತವಾದರೆ ಅನ್ವಯವಾಗಲಾರದು. ಆದ್ದರಿಂದ ವಿವಕ್ಷಿತ ಪದಚ್ಛೇದ ತೋರಿಸಿ ಅನ್ವಯವನ್ನೂ ತೋರಿಸುವರು-

**ತಾತ್ಪರ್ಯ- ಪ್ರೇಂಖಶ್ರಿತಾಃ ಯಾಃ ವಿಭೂತಯಃ ।**

ಯಾವ ಲಕ್ಷ್ಮಿಯ ರೂಪಗಳು ತೂಗು ಮಂಚವನ್ನಾಶ್ರಯಿಸಿರುವವೋ ಅವುಗಳಿಂದ ಕೂಡಿಕೊಂಡು ಎಂದು ಅನ್ವಯಾರ್ಥ. ॥ ೧೩ ॥

**ದದರ್ಶ ತತ್ರಾಽಖಿಲಸಾತ್ವತಾಂ ಪತಿಂ**
**ಶ್ರಿಯಃಪತಿಂ ಯಜ್ಞಪತಿಂ ಜಗತ್ಪತಿಮ್ ।**
**ಸುನಂದನಂದಪ್ರಬಲಾರ್ಹಣಾದಿಭಿಃ**
**ಸ್ವಪಾರ್ಷದಮುಖ್ಯೈಃ ಪರಿಸೇವಿತಂ ವಿಭುಮ್ ॥ ೧೪ ॥**

**ತತ್ರ** ಆ ಶ್ವೇತದ್ವೀಪದಲ್ಲಿ, **ಅಖಿಲಸಾತ್ವತಾಂ ಪತಿಮ್** ಎಲ್ಲ ಮುಕ್ತರಿಗೆ ಒಡೆಯನಾದ, **ಶ್ರಿಯಃಪತಿಮ್** ಲಕ್ಷ್ಮೀಪತಿಯಾದ, **ಯಜ್ಞಪತಿಮ್** ಯಜ್ಞಫಲಪ್ರದನಾದ, **ಜಗತ್ಪತಿಮ್** ಜಗದೊಡೆಯನಾದ, **ಸುನಂದನಂದಪ್ರಬಲಾರ್ಹಣಾದಿಭಿಃ ಸ್ವಪಾರ್ಷದಮುಖ್ಯೈಃ** ತನ್ನ ದ್ವಾರಪಾಲಕರಲ್ಲಿ ಮುಖ್ಯರಾದ ಮುಕ್ತರಾದ ಸುನಂದ, ನಂದ, ಪ್ರಬಲ ಮೊದಲಾದವರಿಂದ ಪೂಜಾಸಾಮಗ್ರಿಗಳಿಂದ, **ಪರಿಸೇವಿತಮ್** ಸೇವಿಸಲ್ಪಟ್ಟ **ವಿಭುಂ** ವ್ಯಾಪ್ತನಾದ ಶ್ರೀಹರಿಯನ್ನು **ದದರ್ಶ** ಬ್ರಹ್ಮದೇವರು ನೋಡಿದರು. ॥ ೧೪ ॥

ಇಲ್ಲಿ 'ಸಾತ್ವತಾಂ ಪತಿಂ' ಎಂಬುದಕ್ಕೆ ಯಾದವರ ಸ್ವಾಮಿ ಎಂದರ್ಥವಾಗುವುದು. ಕಾರಣ ಸಾತ್ವತಶಬ್ದದ ಅರ್ಥವನ್ನು ಹೇಳುವರು. ಮತ್ತು ಅಮುಕ್ತರಾದ ಸುನಂದ-ನಂದಾದಿಸೇವ್ಯತ್ವ ಮುಕ್ತಸ್ವಾಮಿಗೆ ಹೇಗೆ ಎಂಬುದಕ್ಕೂ ಉತ್ತರಿಸುವರು-

**ತಾತ್ಪರ್ಯ- ಸತ್ವಂ ತು ಶೋಭನತ್ವಂ ಸ್ಯಾತ್ ತದ್ಯುಕ್ತಾಃ ಸಾತ್ವತಾ ಮತಾಃ ॥ -ಇತ್ಯಧ್ಯಾತ್ಮೇ**

**ಮುಕ್ತೈಃ ಸ್ವಪಾರ್ಷದೈಃ ಪೂರ್ವೈಃ ಬ್ರಹ್ಮಾದ್ಯೈಶ್ಚೈವ ಸಂಯುತಮ್ ।**
**ಬ್ರಹ್ಮಾ ದದರ್ಶ ತಪಸಾ ಭಗವಂತಂ ಹರಿಂ ಪ್ರಭುಮ್ ॥ -ಇತಿ ಗಾರುಡೇ**

ಸತ್ವವೆಂದರೆ ಶೋಭನತ್ವವು ಅಂದರೆ ಮುಕ್ತತ್ವವು ಅದರಿಂದ ಕೂಡಿದವರು (ಮುಕ್ತರು) ಸಾತ್ವತರು ಎಂದು ಅಧ್ಯಾತ್ಮದಲ್ಲಿ ಹೇಳಿದೆ. ಪದ್ಮದಲ್ಲಿ ಕುಳಿತು ತಪಸ್ಸು ಮಾಡಿದ ಚತುರ್ಮುಖನು ಹಿಂದಿನ ಕಲ್ಪದಲ್ಲಿ ಮುಕ್ತರಾದ ಸುನಂದ-ನಂದ-ಪ್ರಬಲ ಮುಂತಾದ ದ್ವಾರ ಪಾಲಕರಿಂದಲೂ ಹಿಂದೆ ಮುಕ್ತರಾದ ಬ್ರಹ್ಮಾದಿಗಳಿಂದಲೂ ಕೂಡಿದ ಸರ್ವೇಶ್ವರನಾದ ಶ್ರೀಹರಿಯನ್ನು ನೋಡಿದನು. ॥ ೧೪ ॥

**ಭೃತ್ಯಪ್ರಸಾದಾಭಿಮುಖಂ ದೃಗಾಸವೈಃ**
**ಪ್ರಸನ್ನಹಾಸಾರುಣಲೋಚನಾನನಮ್ ।**
**ಕಿರೀಟಿನಂ ಕುಂಡಲಿನಂ ಚತುರ್ಭುಜಂ**
**ಪೀತಾಂಶುಕಂ ವಕ್ಷಸಿ ಲಕ್ಷಿತಂ ಶ್ರಿಯಾ ॥ ೧೫ ॥**

**ಮುಕ್ತೈಃ** ಮುಕ್ತರಿಂದ, **ದೃಗಾಸವೈಃ** ಅಮೃತದೃಷ್ಟಿಗಳಿಂದ, **ಭೃತ್ಯಪ್ರಸಾದಾಭಿಮುಖಮ್** ಸೇವಕರಿಗೆ ಅನುಗ್ರಹಿಸಲು ಅಭಿಮುಖವಾಗಿರುವನೆಂದು ತಿಳಿದು ಬರುವ, **ಪ್ರಸನ್ನಹಾಸಾರುಣ ಲೋಚನಾನನಂ** ಪ್ರಸನ್ನತೆಯ ನಗು, ಕೆಂಪಾದ ಕಣ್ಣುಗಳಿಂದ ಕೂಡಿದ ಮುಖ ಉಳ್ಳ, **ಕಿರೀಟಿನಂ** ಕಿರೀಟವನ್ನು ಧರಿಸಿದ, **ಕುಂಡಲಿನಂ** ಕಿವಿಯಲ್ಲಿ ಕುಂಡಲಗಳನ್ನು ಹಾಕಿಕೊಂಡ, **ಚತುರ್ಭುಜಂ** ನಾಲ್ಕು ಕೈಗಳುಳ್ಳ, **ಪೀತಾಂಶುಕಂ** ಪಿತಾಂಬರಧಾರಿಯಾದ, **ವಕ್ಷಸಿ** ಹೃದಯದಲ್ಲಿರುವ, **ಶ್ರಿಯಾ** ಲಕ್ಷ್ಮೀದೇವಿಯಿಂದ, **ಲಕ್ಷಿತಂ** ಇತರರಿಂದ ವ್ಯಾವರ್ತಿತನಾದವನನ್ನು ನೋಡಿದನು. ಶ್ರೀವತ್ಸವಕ್ಷಸ್ತ್ವವು ಶ್ರೀಹರಿಯ ಅಸಾಧಾರಣಧರ್ಮವೆಂದು ಭಾವ. ॥ ೧೫ ॥

**ಅಧ್ಯರ್ಹಣೀಯಾಸನಮಾಸ್ಥಿತಂ ವಿಭುಂ**
**ವೃತಂ ಚತುಷ್ಷೋಡಶಪಂಚಶಕ್ತಿಭಿಃ ।**
**ಯುಕ್ತಂ ಭಗೈಃ ಸ್ವೈರಿತರತ್ರ ಚಾಽಧ್ರುವೈಃ**
**ಸ್ವ ಏವ ಧಾಮನ್ರಮಮಾಣಮೀಶ್ವರಮ್ ॥ ೧೬ ॥**

**ಅಧ್ಯರ್ಹಣೀಯಾಸನಮ್** ಅಧಿಕವಾಗಿ ಪೂಜ್ಯವಾದ ಅನಂತನೆಂಬ ಯೋಗಪೀಠದಲ್ಲಿ **ಆಸ್ಥಿತಂ** ಕುಳಿತಿರುವ, **ಚತುಃಷೋಡಶಪಂಚಶಕ್ತಿಭಿಃ** 'ಇಚ್ಛಾ ಜ್ಞಾನಂ ಕ್ರಿಯಾ ಸತ್ಯಂ' ಎಂದು ಪ್ರಮಾಣದಲ್ಲಿ ಹೇಳಿದ ಇಚ್ಛಾದಿ ನಾಲ್ಕು ಶಕ್ತಿಗಳು ಮತ್ತು 'ಮೋಚಕಾಶ್ಚೈವ

ಸೂಕ್ಷ್ಮಾ ಚ ತಥಾ ಸೂಕ್ಷ್ಮಾಮೃತಾಪಿ ಚ । ಜ್ಞಾನಾಮೃತಾ ಧ್ಯಾಯನೀ ಚ ವ್ಯಾಪಿನೀ ವ್ಯೋಮರೂಪಿಣೀ । ಅನಂತಾ ಚೈವ ಸಂಪ್ರೋಕ್ತಾ ಮೋಚಕಾದ್ಯಾಶ್ಚ ಶಕ್ತಯಃ ।। ಎಂಬ ಪ್ರಮಾಣದಲ್ಲಿ ಹೇಳಿದ ಎಂಟು ಮೋಚಕಾದಿಶಕ್ತಿಗಳು ಮತ್ತು 'ಅಣಿಮಾ ಲಘಿಮಾ ಚೈವ ಗರಿಮಾ ಮಹಿಮಾ ತಥಾ । ಪ್ರಾಪ್ತಿಃ ಪ್ರಾಕಾಮ್ಯಮೀಶತ್ವಂ ವಶಿತ್ವಂ ಚಾಽಷ್ಟ ಸಿದ್ಧಯಃ ।। ಎಂದು ಹೇಳಿದ ಎಂಟು ಸಿದ್ಧಿಗಳು ಹೀಗೆ ಒಟ್ಟು ಹದಿನಾರು ಶಕ್ತಿಗಳಿಂದ ಅಥವಾ ವಾಸುದೇವಾದಿ ನಾಲ್ಕು ಕೇಶವಾದಿ ಹನ್ನೆರಡು ಹೀಗೆ ಹದಿನಾರು, ಕೃದ್ಧೋಲ್ಕ ವಿರೋಲ್ಕ ದ್ಯೂಲ್ಕ ಸಹಸ್ರೋಲ್ಕ ಮಹೋಲ್ಕ ಎಂಬ ಐದು ಅಥವಾ ವಿಮಲಾ, ಉತ್ಕರ್ಷಿಣೀ, ಜ್ಞಾನಾ, ಕ್ರಿಯಾ, ಯೋಗಾ, ಎಂಬ ಐದು ಶಕ್ತಿಗಳಿಂದ, ಮತ್ತು ಪ್ರಹ್ವೀ, ಸತ್ಯಾ, ಈಶಾ, ಅನುಗ್ರಹಾ ಎಂಬ ನಾಲ್ಕು ಅಥವಾ ಆತ್ಮಾ, ಅಂತರಾತ್ಮಾ, ಜ್ಞಾನಾತ್ಮಾ, ಪರಮಾತ್ಮಾ ಎಂಬ ನಾಲ್ಕು ಶಕ್ತಿಗಳಿಂದ **ವೃತಂ** ಸುತ್ತುವರಿದ, **ಸ್ವೈಃ** ಸ್ವರೂಪಭೂತವಾದ, **ಇತರತ್ರ** ಬೇರೆಯವರಲ್ಲಿ, **ಅಧ್ರುವೈಃ** ಅನಿತ್ಯವಾದ, **ಭಗೈಃ** ಐಶ್ವರ್ಯಾದಿ ಷಡ್ಗುಣಗಳಿಂದ, **ಯುಕ್ತಂ** ಕೂಡಿದ, **ಸ್ವಧಾಮನ್ ಏವ** ತನ್ನ ಸ್ವರೂಪದಲ್ಲೇ, **ರಮಮಾಣಂ** ಸಂತೋಷಿಸುವ, **ಈಶ್ವರಂ** ಪರಮಾತ್ಮನನ್ನು **ದದರ್ಶ** ನೋಡಿದನು.

ಇಲ್ಲಿ 'ಚತುಃಷೋಡಶಪಂಚಶಕ್ತಿಭಿಃ ವೃತಂ' ಎಂಬುದಕ್ಕೆ ಪ್ರಕೃತಿ-ಪುರುಷ-ಮಹತ್-ಅಹಂಕಾರ ಹೀಗೆ ನಾಲ್ಕು, ಷೋಡಶ ಎಂದರೆ ಹನ್ನೊಂದು ಇಂದ್ರಿಯಗಳು ಹಾಗು ಪಂಚಮಹಾಭೂತಗಳು ಹೀಗೆ ಹದಿನಾರು ಶಕ್ತಿಗಳಿಂದ ಮತ್ತು ಪಂಚತನ್ಮಾತ್ರಾಗಳೆಂಬ ಐದು ಶಕ್ತಿಗಳಿಂದ ಕೂಡಿದ ಎಂಬ ವ್ಯಾಖ್ಯಾನ ಪ್ರಮಾಣವಿರುದ್ಧ ಎಂಬ ಅಭಿಪ್ರಾಯದಿಂದ ಪ್ರಮಾಣದಿಂದ ಇಲ್ಲಿ ವಿವಕ್ಷಿತ ಶಕ್ತಿಗಳನ್ನು ತಿಳಿಸುವರು-

**ತಾತ್ಪರ್ಯ- 'ಇಚ್ಛಾದ್ಯಾ ಮೋಚಿಕಾದ್ಯಾಶ್ಚ ಅಣಿಮಾದ್ಯಾಶ್ಚ ಶಕ್ತಯಃ । ಪ್ರದಿಷ್ಟಾ ವಾಸುದೇವಾದ್ಯಾ ದಾಮೋದರಪರಾಸ್ತಥಾ । ಅಂಗಾನಿ ವಿಮಲಾದ್ಯಾಸ್ತು ಪ್ರಹ್ವ್ಯಾದ್ಯಾತ್ಮಾದಿಕಾ ಮತಾಃ । ಏವಂ ಷೊಡಶಭಿಶ್ಚೈವ ಪಂಚಭಿಶ್ಚ ಹರಿಃ ಸ್ವಯಮ್ । ಚತುರ್ಭಿಶ್ಚ ವೃತೋ ನಿತ್ಯಂ ತತ್ಸ್ವರೂಪಾಶ್ಚ ಶಕ್ತಯಃ ।। -ಇತಿ ಭಾಗವತತಂತ್ರೇ**

ಇಚ್ಛಾ, ಜ್ಞಾನ, ಕ್ರಿಯಾ, ಬಲ, ಎಂಬ ನಾಲ್ಕು ಶಕ್ತಿಗಳು ಮೋಚಿಕಾ, ಸೂಕ್ಷ್ಮಾ, ಸೂಕ್ಷ್ಮಾಮೃತಾ, ಜ್ಞಾನಾಮೃತಾ, ಧ್ಯಾಯಿನೀ, ವ್ಯಾಪಿನೀ, ವ್ಯೋಮರೂಪಿಣೀ, ಅನಂತಾ, ಹೀಗೆ ಎಂಟು ಮತ್ತು ಅಣಿಮಾ, ಗರಿಮಾ, ಮಹಿಮಾ, ಲಘಿಮಾ, ಪ್ರಾಪ್ತಿ, ಪ್ರಕಾಮ್ಯ, ಈಶಿತ್ವ ವಶಿತ್ವ ಎಂಬ ಎಂಟು ಸಿದ್ಧಿಗಳು ಹೀಗೆ ೧೬ ಶಕ್ತಿಗಳು ಅಥವಾ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಅನಿರುದ್ಧ ಕೇಶವಾದಿ ದಾಮೋದರಾಂತ ಹನ್ನೆರಡು ಹೀಗೆ

೧೬ ಶಕ್ತಿಗಳು, ೫ ಅಂಗಗಳು ಅಥವಾ ವಿಮಲಾ, ಉತ್ಕರ್ಷಿಣೀ, ಜ್ಞಾನಾ, ಕ್ರಿಯಾ ಯೋಗಾ, ಎಂಬ ೫ ಶಕ್ತಿಗಳು ಪ್ರಹ್ವೀ, ಸತ್ಯಾ, ಈಶಾನಾ, ಅನುಗ್ರಹಾ, ಎಂಬ ನಾಲ್ಕು ಹೀಗೆ ಶ್ರೀಹರಿಯು ೧೬ ಶಕ್ತಿಗಳಿಂದಲೂ ೫ ಶಕ್ತಿಗಳಿಂದಲೂ ಆತ್ಮಾ, ಅಂತರಾತ್ಮಾ, ಪರಮಾತ್ಮಾ, ಜ್ಞಾನಾತ್ಮಾ ಎಂಬ ೪ ನಾಲ್ಕು ಶಕ್ತಿಗಳಿಂದಲೂ ಸದಾ ಕೂಡಿದವನು ಆ ಶಕ್ತಿಗಳು ಶ್ರೀಹರಿಗೆ ಆವರಣ ಮಾತ್ರವಲ್ಲ ಶ್ರೀಹರಿಯ ಸ್ವರೂಪಗಳೇ ಎಂದು ಭಾಗವತತಂತ್ರದಲ್ಲಿದೆ. ॥ ೧೬ ॥

**ತದ್ದ ರ್ಶನಾಹ್ಲಾದಪರಿಪ್ಲುತಾಂತರೋ**
**ಹೃಷ್ಯತ್ತನುಃ ಪ್ರೇಮಭರಾಶ್ರುಲೋಚನಃ ।**
**ನನಾಮ ಪಾದಾಂಬುಜಮಸ್ಯ ವಿಶ್ವಸೃಕ್**
**ಯತ್ಪಾರಮಹಂಸ್ಯೇನ ಪಥಾऽಧಿಗಮ್ಯತೇ ॥ ೧೭ ॥**

**ತದ್ದರ್ಶನಾಹ್ಲಾದಪರಿಪ್ಲುತಾಂತರಃ** ಭಗವಂತನ ದರ್ಶನದಿಂದ ಉಂಟಾದ ಸಂತೋಷದಿಂದ ಆರ್ದ್ರವಾದ ಅಂತಃಕರಣ ಉಳ್ಳ **ಹೃಷ್ಯತ್ತನುಃ** ರೋಮಾಂಚಿತವಾದ ದೇಹ ಉಳ್ಳ **ಪ್ರೇಮಭರಾಶ್ರುಲೋಚನಃ** ಭಕ್ತಿಯ ಉದ್ರೇಕದಿಂದ ಬಂದ ನೀರಿನಿಂದ ತುಂಬಿದ ಕಣ್ಣುಗಳುಳ್ಳ **ವಿಶ್ವಸೃಕ್** ಬ್ರಹ್ಮದೇವರು, **ಯತ್** ಯಾವುದು, **ಪಾರಮಹಂಸ್ಯೇನ ಪಥಾ** ಸನ್ಯಾಸಿಗಳಿಗೆ ಸಂಬದ್ಧವಾದ ಜ್ಞಾನಮಾರ್ಗದಿಂದ, **ಅಧಿಗಮ್ಯತೇ** ಹೊಂದಲ್ಪಡುವುದೋ ಅಂತಹ, **ಅಸ್ಯ** ಶ್ರೀಹರಿಯ, **ಪಾದಾಂಬುಂಜಂ** ಪಾದಕಮಲವನ್ನು **ನನಾಮ** ನಮಸ್ಕರಿಸಿದನು. ॥ ೧೭ ॥

**ತಂ ಪ್ರೀಯಮಾಣಂ ಸಮುಪಸ್ಥಿತಂ ಕವಿಂ**
**ಪ್ರಜಾವಿಸರ್ಗೇ ನಿಜಶಾಸನಾರ್ಹಣಮ್ ।**
**ಬಭಾಷ ಈಷತ್ಸ್ಮಿತಶೋಚಿಷಾ ಗಿರಾ**
**ಪ್ರಿಯಃ ಪ್ರಿಯಂ ಪ್ರೀತಮನಾಃ ಕರೇ ಸ್ಪೃಶನ್ ॥ ೧೮ ॥**

**ಪ್ರಜಾವಿಸರ್ಗೇ ಸಮುಪಸ್ಥಿತಂ** ಸೃಷ್ಟಿಮಾಡಲು ಉದ್ಯುಕ್ತನಾದ, **ಪ್ರೀಯಮಾಣಂ** ಸಂತುಷ್ಟನಾದ, **ಕವಿಂ** ಆದಿಕವಿಯಾದ, **ತಂ** ಬ್ರಹ್ಮನನ್ನು ಕುರಿತು, **ಪ್ರಜಾವಿಸರ್ಗೇ** ಪ್ರಜಾಸೃಷ್ಟಿಮಾಡಲು, **ನಿಜಶಾಸನಾರ್ಹಣಂ** ತನ್ನ ಆಜ್ಞೆಗೆ ಯೋಗ್ಯನಾದ ಬ್ರಹ್ಮನಿಗೆ, **ಪ್ರೀತಮನಾಃ** ಸಂತುಷ್ಟ ಮನಸ್ಸುಳ್ಳ **ಪ್ರಿಯಃ** ಪ್ರೀತ್ಯಾಸ್ಪದನಾದ ಶ್ರಿಹರಿಯು, **ಪ್ರಿಯಂ** ಪ್ರೀತಿ ಪಾತ್ರನಾದ ಬ್ರಹ್ಮನನ್ನು **ಕರೇ ಸ್ಪೃಶನ್** ಕೈಹಿಡಿದು, **ಈಷತ್ಸ್ಮಿತಶೋಚಿಷಾ** ಮಂದಹಾಸದಿಂದ ಶೋಭಿಸುವ, **ಗಿರಾ** ಮಾತುಗಳಿಂದ, **ಬಭಾಷೇ** ಹೇಳಿದನು.

'ಕರೇ ಸ್ಪೃಶನ್' ಎಂಬ ಮಾತು ಬ್ರಹ್ಮದೇವರ ಮೇಲೆ ಅತಿಶಯವಾದ ಪ್ರೀತಿ ತನಗಿದೆ ಎಂಬುದನ್ನು ಸೂಚಿಸುತ್ತದೆ. 'ಈಷದ್ ಬಭಾಷೇ ಎಂದನ್ವಯ ಮಾಡಿದರೆ ಕಡಿಮೆ ಶಬ್ದಗಳಿಂದ ಅತಿಶಯವಾದ ಅರ್ಥವನ್ನು ಹೇಳಿದನು ಎಂಬ ಅರ್ಥವು ಬರುತ್ತದೆ.

ಭಗವಾನುವಾಚ -

**ತ್ವಯಾऽಹಂ ತೋಷಿತಃ ಸಮ್ಯಗ್ವೇದಗರ್ಭ ಸಿಸೃಕ್ಷಯಾ ।**
**ಚಿರಂ ಭೃತೇನ ತಪಸಾ ದುಸ್ತೋಷಃ ಕೂಟಯೋಗಿನಾಮ್ ॥ ೧೯ ॥**

**ಹೇ ವೇದಗರ್ಭ** ಹೇ ಬ್ರಹ್ಮನೇ, **ಕೂಟಯೋಗಿನಾಂ** ಕಪಟಿಗಳಾದ ಯೋಗಿಗಳಿಗೆ, **ದುಸ್ತೋಷಃ** ಸಂತೋಷಪಡಿಸಲಾಗದ, **ಅಹಂ** ನಾನು, **ಸಿಸೃಕ್ಷಯಾ** ಸೃಷ್ಟಿಸಬೇಕೆಂಬ ಇಚ್ಛೆಯಿಂದ, **ಚಿರಂ** ಬಹುಕಾಲ, **ಭೃತೇನ** ಮಾಡಲ್ಪಟ್ಟ **ತಪಸಾ** ತಪಸ್ಸಿನಿಂದ, **ತ್ವಯಾ** ಅಧಿಕಾರಿಯಾದ ನಿನ್ನಿಂದ, **ತೋಷಿತಃ** ಸಂತೋಷಪಡಿಸಲ್ಪಟ್ಟಿದ್ದೇನೆ. ॥ ೧೯ ॥

**ವರಂ ವರಯ ಭದ್ರಂ ತೇ ವರೇಶಂ ಮಾऽಭಿವಾಂಛಿತಮ್ ।**
**ಸರ್ವಶ್ರೇಯಃಪರಿಶ್ರಾಮಃ ಪುಂಸಾಂ ಮದ್ದರ್ಶನಾವಧಿಃ ॥ ೨೦ ॥**

**ತೇ** ನಿನಗೆ, **ಭದ್ರಂ** ಕಲ್ಯಾಣವಾಗಲಿ, **ವರೇಶಂ** ವರಗಳಿಗೆ ನಿಯಾಮಕನಾದ, **ಮಾ** ನನ್ನನ್ನು, **ಅಭಿವಾಂಛಿತಂ ವರಂ** ಇಷ್ಟವಾದ ವರವನ್ನು, **ವರಯ** ಕೇಳು, **ಪುಂಸಾಂ** ಜನರಿಗೆ, **ಸರ್ವಶ್ರೇಯಃಪರಿಶ್ರಾಮಃ** ಎಲ್ಲ ಫಲಗಳಿಗಾಗಿ ಪಡುವ ಸಾಧನಾಯಾಸವು, **ಮದ್ದರ್ಶನಾವಧಿಃ** ನನ್ನ ದರ್ಶನವೇ ಅವಧಿಯಾಗಿ ಉಳ್ಳದ್ದು. ನನ್ನ ದರ್ಶನವಾದರೇ ಎಲ್ಲ ಪುರುಷಾರ್ಥಗಳ ಪ್ರಾಪ್ತಿಯಾಗುವುದು ಎಂದು ಭಾವ. ॥ ೨೦ ॥

**ಮನೀಷಿತಾನುಭಾವೋऽಯಂ ಮಮ ಲೋಕಾವಲೋಕನಮ್ ।**
**ಯದುಪಶ್ರುತ್ಯ ರಹಸಿ ಚಕರ್ಥ ಪರಮಂ ತಪಃ ॥ ೨೧ ॥**

**ಯತ್** ಯಾವ, **ಮಮ** ನನ್ನ, **ಲೋಕಾವಲೋಕನಂ** ಪ್ರತ್ಯಕ್ಷವಾಗಿ ನೋಡುವುದೇನಿದೆಯೋ, **ತತ್** ಅದು, ರಹಸಿ ಏಕಾಂತದಲ್ಲಿ, **ಯದುಪಶ್ರುತ್ಯ** ಯಾವ ನನ್ನ ಎರಡಕ್ಷರದ ಮಾತನ್ನು ಕೇಳಿ ನೀನು, **ಪರಮಂ ತಪಃ ಚಕರ್ಥ** ಶ್ರೇಷ್ಠವಾದ ತಪಸ್ಸನ್ನೇನು ಮಾಡಿರುವಿಯೋ, **ಮನೀಷಿತಾನುಭಾವಃ ಅಯಂ** ನನ್ನಿಂದ ಆಜ್ಞಪ್ತವಾದ ತಪಸ್ಸಿನ ಮಹಿಮೆ ಇದು. ॥ ೨೧ ॥

**ತಾತ್ಪರ್ಯ- ಮನೀಷಿತಂ ತಪಃ ।**

ಮನೀಷಿತ ಎಂದರೆ ಶ್ರೀಹರಿಯ ಗುಣಗಳ ಧ್ಯಾನರೂಪವಾದ ತಪಸ್ಸು ಎಂದು ಅರ್ಥ. ॥ ೨೧ ॥

*ತಪಸ್ಸನ್ನೇನು ಮಾಡಿರುವೆಯೋ ಅದೂ ನಿನ್ನ ಸ್ವಂತ ಬುದ್ಧಿಯಿಂದಲ್ಲ ಎಂದು ಹೇಳುವನು-*

**ಪ್ರತ್ಯಾದಿಷ್ಟಂ ಮಯಾ ತತ್ರ ತ್ವಯಿ ಕರ್ಮವಿಮೋಹಿತೇ ।**
**ತಪೋ ಮೇ ಹೃದಯಂ ಸಾಕ್ಷಾದಾತ್ಮಾऽಹಂ ತಪಸೋऽನಘ ॥ ೨೨ ॥**

**ಸೃಜಾಮಿ ತಪಸೈವೇದಂ ಗ್ರಸಾಮಿ ತಪಸಾ ಪುನಃ ।**
**ಬಿಭರ್ಮಿ ತಪಸಾ ವಿಶ್ವಂ ವೀರ್ಯಂ ಮೇ ದುಸ್ತರಂ ತಪಃ ॥ ೨೩ ॥**

**ಹೇ ಅನಘ** ಆಲಸ್ಯಾದಿ ದೋಷರಹಿತನೇ, **ತ್ವಯಿ** ನೀನು, **ಕರ್ಮವಿಮೋಹಿತೇ** ಕಾರ್ಯ ವಿಷಯದಲ್ಲಿ ಹೀಗೆಯೇ ಇದನ್ನು ಮಾಡಬೇಕೆಂಬ ಜ್ಞಾನರಹಿತನಾಗಿರಲು, **ತತ್ರ** ಆಗ, **ತದಪಿ** ಅದೂ ಕೂಡಾ, **ಮಯಾ** ನನ್ನಿಂದ, **ಪ್ರತ್ಯಾದಿಷ್ಟಂ** ನಿನ್ನನ್ನು ಕುರಿತು ಹೇಳಲ್ಪಟ್ಟಿತು. **ತಪಃ** ಜ್ಞಾನವು, **ಮೇ** ನನಗೆ, **ಸಾಕ್ಷಾತ್ ಹೃದಯಂ** ಸರ್ವದಾ ಪ್ರಿಯವು, ಏಕೆಂದರೆ, **ತಪಸಃ (ಸಕಾಶಾತ್) ಅಹಂ ಆತ್ಮಾ** ಅಧಿಕಾರಿಗಳಿಂದ ಜ್ಞಾನಂದಿಂದಲೇ ಹೊಂದಲ್ಪಡುವವನು. ಮತ್ತೊಂದು ಕಾರಣ, **ಇದಂ** ಈ ಪ್ರಪಂಚವನ್ನು, **ತಪಸಾ ಏವ** ಜ್ಞಾನದಿಂದಲೇ, **ಸೃಜಾಮಿ** ಸೃಷ್ಟಿಸುವೆನು, **ಪುನಃ** ಮತ್ತೆ, **ತಪಸಾ** ಜ್ಞಾನದಿಂದ, **ಗ್ರಸಾಮಿ** ಸಂಹರಿಸುವೆನು, **ತಪಸಾ ಬಿಭರ್ಮಿ** ಜ್ಞಾನದಿಂದಲೇ ಪಾಲಿಸುವೆನು, **ದುಸ್ತರಂ** ಅಪಾರವಾದ, **ಮೇ ವೀರ್ಯಂ** ನನ್ನ ಸಾಮರ್ಥ್ಯ ಮೊದಲಾದವುಗಳು, **ತಪಃ** ಜ್ಞಾನರೂಪಗಳೇ ಆಗಿವೆ. ॥ ೨೨-೨೩ ॥

೨೨ನೆಯ ಶ್ಲೋಕದಲ್ಲಿ 'ಕರ್ಮವಿಮೋಹಿತೇ' ಎಂಬುದಕ್ಕೆ ಕರ್ಮವಿಷಯಕವಾದ ಭ್ರಾಂತಿ ಬಂದಾಗ ಎಂದು ಅರ್ಥ ತೋರುವುದು. ಆದ್ದರಿಂದ ಕರ್ಮ ಮತ್ತು ವಿಮೋಹಿತ ಶಬ್ದಾರ್ಥ ತಿಳಿಸುವರು-

**ತಾತ್ಪರ್ಯ- ಕರ್ಮವಿಮೋಹಿತೇ ಇದಂ ಕಾರ್ಯಮಿತ್ಯಜಾನತಿ ।**

ಕರ್ಮವಿಮೋಹಿತೇ ಎಂಬುದಕ್ಕೆ ಇದನ್ನು ಹೀಗೆ ಮಾಡಬೇಕು ಎಂದು ಜ್ಞಾನವಿಲ್ಲದಿರಲು ಎಂದರ್ಥ.

ತಪಸ್ಸೇ ತನ್ನ ಮನೀಷಿತವೇಕೆ ಎಂಬುದನ್ನು ಒಂದೂವರಿ ಶ್ಲೋಕದಿಂದ ಹೇಳುವರು. ಆದರಲ್ಲಿ ಹೃದಯಶಬ್ದದ ಪ್ರಕೃತಸಂಗತವಾದ ಅರ್ಥವಿದಾಗಿದೆ-

**ಹೃದಯಂ ಪ್ರಿಯಮ್ । 'ಪ್ರಿಯಂ ಹೃದಯಮುದ್ರಿಕ್ತಂ ಕಾಂತಮಿತ್ಯಭಿಧೀಯತೇ' ಇತ್ಯಭಿಧಾನಾತ್ ।**

'ಹೃದಯಂ' ಎಂದರೆ ಪ್ರಿಯವಾದುದು ಎಂದರ್ಥ. ಪ್ರಿಯವಾದುದು ಹೃದಯ, ಉದ್ರಿಕ್ತ, ಕಾಂತ ಈ ಶಬ್ದಗಳಿಂದ ಹೇಳಲ್ಪಡುತ್ತದೆ. ಹೀಗೆ ಅಭಿಧಾನವಿದೆ.

ಒಂದೂವರಿ ಶ್ಲೋಕಾರ್ಥವನ್ನು ಪ್ರಮಾಣದಿಂದ ತಿಳಿಸುವರು-

**ತಪಃ ಪ್ರಿಯಂ ಸದಾ ವಿಷ್ಣೋಸ್ತಪಸೈವಾಪ್ಯತೇ ಹರಿಃ ।**
**ಸ್ವಯಂ ಚ ತಪಸೈವೇದಂ ಬಿಭರ್ತಿ ಜ್ಞಾನಮೇವ ಹಿ ।**

**ತಪಃಶಬ್ದಾಭಿಧಂ ಪ್ರೋಕ್ತಂ ಜ್ಞಾನರೂಪೋ ಹರಿರ್ಯತಃ ।**
**ಜ್ಞಾನವಿರ್ಯೋ ಜ್ಞಾನಬಲೋ ಜ್ಞಾನಾನಂದ ಉದಾಹೃತಃ ।।-ಇತಿ ಬೃಹಸ್ಸಂಹಿತಾಯಾಮ್**

ಶ್ರೀಹರಿಯು ಜ್ಞಾನದಿಂದಲೇ ಅಧಿಕಾರಿಗಳಿಂದ ಹೊಂದಲ್ಪಡುವುದರಿಂದ ವಿಷ್ಣುವಿಗೆ ಸದಾ ಜ್ಞಾನವೇ ಪ್ರಿಯವಾಗಿದೆ. ಶ್ರೀಹರಿಯು ತಾನು ಜ್ಞಾನದಿಂದಲೇ ಜಗತ್ತನ್ನು ಧರಿಸುತ್ತಾನೆ ಮತ್ತು ಪೋಷಿಸುತ್ತಾನೆ. ಜ್ಞಾನವೇ ಮುಖ್ಯವಾಗಿ ತಪಃಶಬ್ದದಿಂದ ವಾಚ್ಯವಾಗಿದೆ. ಶ್ರೀಹರಿಯು ಜ್ಞಾನ ಸ್ವರೂಪನು. ಜ್ಞಾನಸ್ವರೂಪವಾದ ಪರಾಕ್ರಮ ಉಳ್ಳವನು. ಪರಾಕ್ರಮಕ್ಕೆ ಸಾಧನವಾದ ಜ್ಞಾನರೂಪವಾದ ಶಕ್ತಿಯುಳ್ಳವನು. ಜ್ಞಾನಸ್ವರೂಪವಾದ ಆನಂದ ಉಳ್ಳವನು ಎಂದು ಹೇಳಲ್ಪಡುತ್ತಾನೆ. ಎಂದು ಬೃಹತ್ಸಂಹಿತೆಯಲ್ಲಿ ಹೇಳಿದೆ.

ಇದರಿಂದ ವೀರ್ಯಾದಿಗಳು ಸೃಷ್ಟ್ಯಾದಿಗಳಿಗೆ ಕಾರಣ ಎಂದು ಬೇರೆ ಕಡೆಗೆ ಹೇಳಿರುವುದರಿಂದ 'ತಪಸೈವ' ಎಂದು ಹೇಗೆ ಹೇಳಿದ್ದು ಎಂಬ ಸಂಶಯಕ್ಕೆ ಆಸ್ಪದವಿಲ್ಲ. ವೀರ್ಯಾದಿಗಳೂ ಜ್ಞಾನರೂಪಗಳೇ ಆಗಿವೆ. ಎಂದು ತಿಳಿಸಿದಂತಾಯಿತು. ।।೨೨-೨೩।।

ಬ್ರಹ್ಮೋವಾಚ-

**ಭಗವನ್ ಸರ್ವಭೂತಾನಾಮಧ್ಯಕ್ಷೋऽವಸ್ಥಿತೋ ಗುಹಾಮ್ ।**
**ವೇದ ಹ್ಯಪ್ರತಿರುದ್ಧೇನ ಪ್ರಜ್ಞಾನೇನ ಚಿಕೀರ್ಷಿತಮ್ ।। ೨೪ ।।**

**ಹೇ ಭಗವನ್** ಪರಮಾತ್ಮನೇ, **ಸರ್ವಭೂತಾನಾಂ ಅಧ್ಯಕ್ಷಃ** ಎಲ್ಲ ಪ್ರಾಣಿಗಳನ್ನು ಪ್ರತ್ಯಕ್ಷ ಕಾಣುವವನು, **ಗುಹಾಂ ಅವಸ್ಥಿತಃ** ಹೃದಯ ಗುಹೆಯಲ್ಲಿ ಇದ್ದು, **ಸರ್ವಭೂತಾನಾಂ** ಎಲ್ಲರ, **ಚಿಕೀರ್ಷಿತಂ** ಅಪೇಕ್ಷಿತವನ್ನು, **ಅಪ್ರತಿರುದ್ಧೇನ** ತಡೆ ಇಲ್ಲದ, **ಪ್ರಜ್ಞಾನೇನ** ಜ್ಞಾನದಿಂದ, **ವೇದ** ತಿಳಿದಿರುವಿ. **ಹಿ** ಯಾವ ಕಾರಣ, ಆದ ಕಾರಣ ನನ್ನ ಇಷ್ಟವನ್ನೂ ಯದ್ಯಪಿ ತಿಳಿದಿರುವಿ ಆದರೂ, ।। ೨೪ ।।

**ಅಥಾಽಪಿ ನಾಥಮಾನಾಯ ನಾಥ ನಾಥಯ ನಾಥಿತಮ್ ।**
**ಪರಾವರೇ ಯಥಾ ರೂಪೇ ಜಾನೀಯಾಂ ತೇ ತ್ವರೂಪಿಣಃ ।। ೨೫ ।।**

**ಅಥಾಽಪಿ** ಆದರೂ, **ನಾಥಮಾನಾಯ** ಪ್ರಾರ್ಥಿಸುವ ನನ್ನ, **ನಾಥಿತಂ** ಪ್ರಾರ್ಥಿತವನ್ನು **ನಾಥಯ** ಕೊಡು, ಅದೇನೆಂದರೆ, **ಹೇ ನಾಥ** ಸ್ವಾಮಿಯೇ, **ಅರೂಪಿಣಃ** ಪ್ರಾಕೃತರೂಪವಿಲ್ಲದ, **ತೇ** ನಿನ್ನ **ಪರಾವರೇ ರೂಪೇ** ಸ್ವತಂತ್ರವಾದ ಮತ್ತು ಅವನ ಅಧೀನವಾದ ಜೀವಜಡಾತ್ಮಕ ಎರಡು ರೂಪಗಳನ್ನು, **ಯಥಾ** ಯಾವ ರೀತಿಯಾಗಿ, **ಜಾನೀಯಾಂ** ತಿಳಿಯುವೆನೋ, ಅಂತಹ ಬುದ್ಧಿಯನ್ನು ಕೊಡು ಎಂದು ಮುಂದೆ ಅನ್ವಯ. (ಪರರೂಪಕ್ಕೆ ಸ್ವಾತಂತ್ರ್ಯ ಅಪರರೂಪಕ್ಕೆ ಅಸ್ವಾತಂತ್ರ್ಯವನ್ನು ಯಾವರೀತಿ ತಿಳಿಯುವನೋ ಅಂತಹ ಜ್ಞಾನ ನೀಡು ಎಂದು ಭಾವ. ।। ೨೫ ।।

**ಯಥಾಽತ್ಮಮಾಯಾಯೋಗೇನ ನಾನಾಶಕ್ತ್ಯುಪಬೃಂಹಿತಃ ।**
**ವಿಲುಂಪನ್ ವಿಸೃಜನ್ ಗೃಹ್ಣನ್ ಬಿಭ್ರದಾತ್ಮಾನಮಾತ್ಮನಾ ।। ೨೬ ।।**

**ಕ್ರೀಡಸ್ಯಮೋಘಸಂಕಲ್ಪ ಊರ್ಣನಾಭಿಃ ಯಥೋರ್ಣುತೇ ।**
**ತಥಾ ತದ್ವಿಷಯಾಂ ಧೇಹಿ ಮನೀಷಾಂ ಮಯಿ ಮಾಧವ ।। ೨೭ ।।**

**ಯಥಾ** ಹೇಗೆ, **ಊರ್ಣನಾಭಿಃ** ಜೇಡರ ಹುಳವು, **ಊರ್ಣಂ ಊರ್ಣುತೇ** ದಾರವನ್ನು ಸೃಷ್ಟಿಸುವುದು, **ಬಿಭರ್ತಿ** ರಕ್ಷಿಸುವುದು ಅದರ ಮಧ್ಯದಲ್ಲಿ ಕ್ರೀಡಿಸುವುದು ಕೊನೆಗೆ ತನ್ನಲ್ಲಿಯೇ ಲಯಗೊಳಿಸುವುದೊ **ತಥಾ** ಹಾಗೆ, **ಅಮೋಘಸಂಕಲ್ಪಃ** ಸತ್ಯವಾದ ಇಚ್ಛೆಯುಳ್ಳ, **ನಾನಾಶಕ್ತ್ಯುಪಬೃಂಹಿತಃ** ಆಯಾ ಕಾರ್ಯಗಳಿಗೆ ಬೇಕಾದ ಶಕ್ತಿಗಳಿಂದ ಪೂರ್ಣನಾದ, **ತ್ವಂ** ನೀನು, **ಆತ್ಮಮಾಯಾಯೋಗೇನ** ನಿನ್ನ ಸ್ವರೂಪೇಚ್ಛೆಯಿಂದಲೂ ನಿನ್ನ ಅಧೀನವಾದ ಪ್ರಕೃತಿ ರೂಪವಾದ ಉಪಾಯದಿಂದಲೂ ಜಗತ್ತನ್ನು, **ಸೃಜನ್** ಸೃಷ್ಟಿಸಿ, **ಆತ್ಮನಾ** ನಿನ್ನಿಂದಲೇ, **ಆತ್ಮಾನಂ ಗೃಹ್ಣನ್** ಅವತಾರವನ್ನು ಸ್ವೀಕರಿಸಿ, **ಬಿಭ್ರತ್** ಪಾಲನ ಮಾಡಿ, **ವಿಲುಂಪನ್** ನಾಶಮಾಡಿ, **ಕ್ರೀಡಸಿ** ಕ್ರೀಡಿಸುವಿ. **ಮಾಧವ** ಲಕ್ಷ್ಮೀಪತಿಯೇ,

**ತದ್ವಿಷಯಾಂ** ನಿನ್ನ ಸೃಷ್ಟ್ಯಾದಿವಿಷಯಕವಾದ, **ಮಯಿ ಮನೀಷಾಂ ಧೇಹಿ** ನನ್ನಲ್ಲಿ ಬುದ್ಧಿಯನ್ನು ಇಡು.

'ನಾನಾಶಕ್ತ್ಯುಪಬೃಂಹಿತಃ' 'ಅಮೋಘಸಂಕಲ್ಪಃ' ಎಂಬ ಎರಡು ವಿಶೇಷಣಗಳಿಂದ ಶ್ರೀಹರಿಗೆ ಊರ್ಣನಾಭಿಯಿಂದ ವೈಲಕ್ಷಣ್ಯ ಇದೆ ಎಂದು ತಿಳಿಸುವರು. ಊರ್ಣನಾಭಿಯು ತನ್ನಿಂದ ಸೃಷ್ಟವಾದ ದಾರದ ಮಧ್ಯದಲ್ಲಿ ಅದನ್ನು ಆಶ್ರಯಿಸಿ ಇರುವುದು. ನೀನಾದರೋ ನಿನ್ನಿಂದ ಸೃಷ್ಟವಾದ ಜಗತ್ತಿನಿಂದ ವಿಲಕ್ಷಣನಾದ್ದರಿಂದ ಆ ಜಗತ್ತಿನ ಹೊರಗೆ ಇರುವುದು, ಅದನ್ನು ಉಪಜೀವಿಸದೇ ಇರುವುದು ಸಾಧ್ಯವಿದೆ. ಅದನ್ನು ಕೂಡಾ ತಿಳಿಯುವೆನು.

ಮಾಧವ ಎಂಬ ಸಂಬೋಧನದಿಂದ ಸೃಷ್ಟ್ಯಾದಿವ್ಯಾಪಾರಗಳಲ್ಲಿ ರಮೆಯ ಉಪಯೋಗವೂ ಇದೆ ಎಂದು ತಿಳಿಸುವರು. ॥ ೨೬-೨೭ ॥

ಸೃಷ್ಟಿಮಾಡಲು ಆಲಸ್ಯದಿಂದ ಈ ವಿಧವಾದ ಜ್ಞಾನವನ್ನು ಪ್ರಾರ್ಥಿಸುವಿಯೇನು ? ಎಂದರೆ ಇಲ್ಲವೆಂದು ಹೇಳುವನು-

**ಭಗವಚ್ಛಿಕ್ಷಿತಮಹಂ ಕರವಾಣಿ ಹ್ಯತಂದ್ರಿತಃ ।**
**ನೇಹಮಾನಃ ಪ್ರಜಾಸರ್ಗಂ ಬದ್ಧ್ಯೇಯಂ ಯದನುಗ್ರಹಾತ್ ॥ ೨೮ ॥**

**ಅಹಂ** ನಾನು, **ಭಗವಚ್ಛಿಕ್ಷಿತಂ** ಭಗವಂತನಾದ ನಿನ್ನಿಂದ ಆಜ್ಞಾಪಿತವಾದುದನ್ನು, **ಅತಂದ್ರಿತಃ** ಆಲಸ್ಯವಿಲ್ಲದೇ, **ಕರವಾಣಿ** ಮಾಡುವೆನು, **ಯದನುಗ್ರಹಾತ್** ಜ್ಞಾನದಾನ ರೂಪವಾದ ಯಾವ ನಿನ್ನ ಅನುಗ್ರಹದಿಂದ, **ಪ್ರಜಾಸರ್ಗಂ** ಪ್ರಜೆಗಳ ಸೃಷ್ಟಿಯನ್ನು, **ಈಹಮಾನಃ** ಮಾಡುವವನಾಗಿ, **ನ ಬದ್ಧ್ಯೇಯಂ** ಅಹಂಕಾರಾದಿಗಳಿಂದ ಬದ್ಧನಾಗಲಾರೆನೋ ಅಂತಹ ಜ್ಞಾನದಾನವನ್ನು ಅನುಗ್ರಹಿಸು.

ಈಗ ನಿನ್ನ ಸನ್ಮಾನದಿಂದ ಮದ ಬರದಿರಲಿ ಎಂದು ಪ್ರಾರ್ಥಿಸುವರು-

**ಯಾವತ್ಸಖಾ ಸಖ್ಯುರಿವೇಶ ತೇ ಕೃತಃ**
**ಪ್ರಜಾವಿಸರ್ಗೇ ವಿಭಜಾಮಿ ಭೋಜನಮ್ ।**
**ಅವಿಕ್ಲವಸ್ತೇ ಪರಿಕರ್ಮಣಿ ಸ್ಥಿತೋ ಮಾ ಮೇ**
**ಸಮುನ್ನದ್ಧಮದೋಽಜಮಾನಿನಃ ॥ ೨೯ ॥**

**ಭೋ ಈಶ** ಹೇ ಸ್ವಾಮಿಯೇ, **ತೇ** ನಿನ್ನಿಂದ, **ಸಖ್ಯುಃ** ಗೆಳೆಯನಿಗೆ, **ಸಖಾ ಇವ** ಗೆಳೆಯನು ಸನ್ಮಾನ ಮಾಡುವಂತೆ, **ಅಹಂ ಕೃತಃ** ಕೈ ಹಿಡಿದು ಸನ್ಮಾನಿತನಾಗಿ, **ಪ್ರಜಾವಿಸರ್ಗೇ** ಪ್ರಜೆಗಳನ್ನು ಸೃಷ್ಟಿಸುವುದೆಂಬ, **ತೇ** ನಿನ್ನ **ಪರಿಕರ್ಮಣಿ** ಸೇವೆಯಲ್ಲಿ **ಸ್ಥಿತಃ** ಇದ್ದು **ಅವಿಕ್ಲವಃ** ವ್ಯಾಕುಲವಿಲ್ಲದೇ, **ಯಾವತ್ ತೇ** ಯಾವಾಗ ನಿನ್ನ **ಜನಂ ವಿಭಜಾಮಿ** ಉತ್ತಮ-ಮಧ್ಯಮ-ಅಧಮರನ್ನಾಗಿ ಸೃಷ್ಟಿಸುವೆನು, **ತೇಷಾಂ** ಅವರಿಗೆ, **ಭೋಜನಂ** ಭೋಗವನ್ನು **ವಿಭಜಾಮಿ** ವಿಭಾಗಮಾಡಿ ಕೊಡುವೆನೋ, **ತಾವತ್** ಆಗ, **ಅಜಮಾನಿನಃ** ಅಕಾರವಾಚ್ಯನಾದ ಭಗವಂತನಿಂದ ಹುಟ್ಟಿದವನೆಂಬ ಅಭಿಮಾನ ಉಳ್ಳ **ಮೇ** ನನಗೆ, **ಸಮುನ್ನದ್ಧಮದಃ** ಉತ್ಕೃಷ್ಟವಾದ ಮದವು, **ಮಾ ಭೂತ್** ಉಂಟಾಗುವುದು ಬೇಡ ಎಂದು ಪ್ರಾರ್ಥಿಸಿದನು.

ಪ್ರಭುಗಳು ಮಾಡುವ ಗೌರವದಿಂದ, ಐಶ್ವರ್ಯದಿಂದ, ಒಳ್ಳೆಯ ಕುಲದಲ್ಲಿ ಜನಿಸಿರುವೆನೆಂಬ ಭಾವದಿಂದ ಮದ ಹುಟ್ಟುವುದು ಜಗತ್ತಿನಲ್ಲಿ ಕಂಡಿದೆ. ಆ ರೀತಿ ಮದೋತ್ಪತ್ತಿಯು ಆಭಿಜಾತ್ಯ-ಐಶ್ವರ್ಯ-ಪ್ರಭುಸನ್ಮಾನಗಳಿದ್ದರೂ ಆಗುವುದು ಬೇಡವೆಂದು ಭಾವ. ।। ೨೯ ।।

*ಪರಾವರ ತತ್ತ್ವಜ್ಞಾನ ಮಾಡಿಕೊಡು ಎಂಬ ಪ್ರಾರ್ಥನೆಯಲ್ಲಿ ಪರತತ್ತ್ವಸ್ವರೂಪ ವಿಷಯಕ ಜ್ಞಾನವಿಜ್ಞಾನದಾನ ಪ್ರಕಾರವನ್ನು ತಿಳಿಸಲು ಹೇಳುವರು-*

*ಭಗವಾನುವಾಚ -*

**ಜ್ಞಾನಂ ಪರಮಗುಹ್ಯಂ ಮೇ ಯದ್ವಿಜ್ಞಾನಸಮನ್ವಿತಮ್ ।**
**ಸರಹಸ್ಯಂ ತದಂಗಂ ಚ ಗೃಹಾಣ ಗದಿತಂ ಮಯಾ** ।। ೩೦ ।।

**ಮೇ** ನನ್ನ **ವಿಜ್ಞಾನಸಮನ್ವಿತಂ** ಯಾವ ಯಾವ ಅಧಿಕಾರಿಯು ಎಷ್ಟು ಗುಣ ಉಳ್ಳವನನ್ನಾಗಿ ಭಗವಂತನನ್ನು ತಿಳಿಯಬೇಕು ಎಂಬ ವಿಜ್ಞಾನದಿಂದ ಸಹಿತವಾದ, **ಸರಹಸ್ಯಂ** ಉಪನಿಷತ್ಸಂವಾದವಿರುವ, **ಪರಮಗುಹ್ಯಂ** ಅತಿಗೋಪ್ಯವಾದ, **ಜ್ಞಾನಂ** ಸರ್ವಾಧಿಕಾರಿ ಸಾಧಾರಣವಾದ ಜ್ಞಾನವನ್ನು, **ತದಂಗಂ ಚ** ಜ್ಞಾನಸಾಧನವನ್ನೂ, **ಮಯಾ ಗದಿತಂ** ನನ್ನಿಂದ ಹೇಳಲ್ಪಡುವುದನ್ನು, **ಗೃಹಾಣ** ತಿಳಿದುಕೋ. ।। ೩೦ ।।

ಇಲ್ಲಿ ಜ್ಞಾನವೆಂದರೆ ಶಾಸ್ತ್ರಜನ್ಯಜ್ಞಾನ, ವಿಜ್ಞಾನವೆಂದರೆ ಅನುಭವ ಎಂಬ ವ್ಯಾಖ್ಯಾನ ಅಪ್ರಾಮಾಣಿಕವೆಂಬ ಅಭಿಪ್ರಾಯದಿಂದ ಅವುಗಳ ಅರ್ಥವನ್ನು ಪ್ರಮಾಣದಿಂದ ತಿಳಿಸುವರು-

**ತಾತ್ಪರ್ಯ- ಯೇನ ಯೇನ ಯಥಾ ಜ್ಞಾತ್ವಾ ನಿಯತಂ ಮುಕ್ತಿರಾಪ್ಯತೇ ।**
**ತದ್ವಿಜ್ಞಾನಮಿತಿ ಪ್ರೋಕ್ತಂ ಜ್ಞಾನಂ ಸಾಧಾರಣಂ ಸ್ಮೃತಮ್ ॥** -ಇತಿ ವಾಮನೇ

ಶ್ರೀಹರಿಯು ಯಾವ ಯಾವ ಗುಣಗಳಿಂದ ಕೂಡಿದವನೆಂದು, ಯಾವ ಯಾವ ಅಧಿಕಾರಿಯು ತಿಳಿದು ನಿಯಮದಿಂದ ಮುಕ್ತಿಯನ್ನು ಹೊಂದುತ್ತಾನೋ ಅದು ವಿಜ್ಞಾನವು, ಸರ್ವಾಧಿಕಾರಿಸಾಧಾರಣವಾದುದು ಜ್ಞಾನವು ಎಂದು ವಾಮನಪುರಾಣದಲ್ಲಿ ಹೇಳಿದೆ. ॥ ೩೦ ॥

ಅದರಲ್ಲಿ ಬ್ರಹ್ಮದೇವರಿಗೆ ಮುಕ್ತಿಸಾಧನವಾದ ವಿಜ್ಞಾನವನ್ನು ಮೊದಲಿಗೆ ತಿಳಿಸುವನು-

**ಯಾವಾನಹಂ ಯಥಾಭಾವೋ ಯದ್ರೂಪಗುಣಕರ್ಮಕಃ ।**
**ತಥೈವ ತತ್ತ್ವವಿಜ್ಞಾನಮಸ್ತು ತೇ ಮದನುಗ್ರಹಾತ್ ॥ ೩೧ ॥**

**ಅಹಂ** ನಾನು, **ಯಾವಾನ್** ಎಷ್ಟು ಪರಿಮಾಣ ಉಳ್ಳವನು, **ಯಥಾಭಾವಃ** ಯಾವ ವಿಧವಾದ ಸತ್ತಾ ಉಳ್ಳವನು ಮತ್ತೊಬ್ಬರ ಅಧೀನವಾಗದ ಸತ್ತಾ ಉಳ್ಳವನು, **ಯದ್ರೂಪಗುಣಕರ್ಮಕಃ** ಯಾವ ಅವತಾರ ಉಳ್ಳವನು ಎಂತಹ ಗುಣ ಉಳ್ಳವನು, ಯಾವ ರೀತಿಯಾದ ಕರ್ಮ ಉಳ್ಳವನು ಎಂದು ವೇದದಲ್ಲಿ ಹೇಳಲ್ಪಟ್ಟಿದೆಯೋ, **ತಥೈವ** ಅದೆಲ್ಲದರ, **ತತ್ತ್ವವಿಜ್ಞಾನಂ** ಸರಿಯಾದ ಜ್ಞಾನವು, **ತೇ** ನಿನಗೆ, **ಮದನುಗ್ರಹಾತ್** ನನ್ನ ಅನುಗ್ರಹದಿಂದ, **ಅಸ್ತು** ಆಗಲಿ. ॥ ೩೧ ॥

...ಚತುಃಶ್ಲೋಕೀ ಭಾಗವತ...

ಪರವಾದುದು ಸ್ವತಂತ್ರ ಅಪರವಾದುದು ಅಸ್ವತಂತ್ರ ಎಂಬುದನ್ನು ನಾನು ಯಾವ ಪ್ರಕಾರದಿಂದ ತಿಳಿಯಲಿ ಎಂದು ಕೇಳಿದ ಪ್ರಶ್ನೆಗೆ ಪರವಸ್ತುವಿಗೆ ಸ್ವಾತಂತ್ರ್ಯ ಅಪರವಸ್ತುವಿಗೆ ಅಸ್ವಾತಂತ್ರ್ಯವನ್ನು ಉಪಪಾದಿಸುತ್ತಾ ಜ್ಞಾನವನ್ನು ನೀಡುತ್ತಿರುವ ವಿಷಯವನ್ನು ಹೇಳುತ್ತಿದ್ದಾರೆ-

**ಅಹಮೇವಾಸಮಗ್ರೇ ಚ ನಾನ್ಯದ್ಯತ್ ಸದಸತ್ಪರಮ್ ।**
**ಪಶ್ಚಾದಹಂ ತ್ವಮೇತಚ್ಚ ಯೋಽವಶಿಷ್ಯೇತ ಸೋಽಸ್ಮ್ಯಹಮ್ ॥ ೩೨ ॥**

**ಚ** ಯಾವ ಕಾರಣ, **ಅಗ್ರೇ** ಸೃಷ್ಟಿಯ ಮೊದಲು, **ಅಹಂ** ನಾನು, **ಯ ಏವ ಆಸಂ** ಯಾವ ರೀತಿಯಾಗಿ ಇದ್ದನೋ ಅಂದರೆ ಆ ಕಾಲದಲ್ಲಿ ಬೇರೆಯವರಿಗೆ ಸ್ವಾತಂತ್ರ್ಯ

ತೋರದಿರುವುದರಿಂದ ನಾನೇ ಸ್ವತಂತ್ರನೆಂದು ಶ್ರುತ್ಯಾದಿಗಳಿಂದ ನಿರ್ಣಯಿಸಲು ಶಕ್ಯನಾಗಿದ್ದೆ. **ಪಶ್ಚಾತ್** ಲಯವಾದ ಮೇಲೆ, **ಯಃ** ಯಾವ ರೀತಿಯಾಗಿ, **ಅವಶಿಷ್ಯೇತ** ಆವಾಗಲೂ ಅನ್ಯರಿಗೆ ಸ್ವಾತಂತ್ರ್ಯ ತೋರದಿರುವುದರಿಂದ ಸ್ವತಂತ್ರನೆಂದು ನಿರ್ಣಯಿಸುವಂತೆ ಇದ್ದೆ. ಆದ್ದರಿಂದ ಸ್ಥಿತಿಕಾಲದಲ್ಲಿಯೂ, **ಅಹಂ** ನಾನು, **ಸಃ** ಅದೇರೀತಿ ಸ್ವತಂತ್ರನಾಗಿರುವೆನು. ಪೂರ್ವೋತ್ತರ ಕಾಲಗಳಲ್ಲಿ ಅನ್ಯರಿಗೆ ಸತ್ತಾಪ್ರದತ್ವರೂಪ ಸ್ವಾತಂತ್ರ್ಯಯುತನಾದ್ದರಿಂದ ಸ್ಥಿತಿಕಾಲದಲ್ಲಿಯೂ ಸ್ವತಂತ್ರನೆಂದು ಅನುಮಾನ ಮಾಡಬಹುದು. ಅನುಮಾನವಿರುವುದರಿಂದ ಸ್ಥಿತಿಕಾಲದಲ್ಲಿ ಅನ್ಯರಿಗೆ ತೋರುವ ಸ್ವಾತಂತ್ರ್ಯವು ಭ್ರಮವಿಷಯವೆಂದೇ ಭಾವ.

'ಆತ್ಮೈವೇದಮಗ್ರ ಆಸೀತ್' ಮುಂತಾಗಿ ಶ್ರುತಿಯಲ್ಲಿ ಬೇರೆ ವಸ್ತುಗಳೇ ಇರಲಿಲ್ಲವೆಂದು ಹೇಳುತ್ತದೆ. ಆದ್ದರಿಂದ ಅವು ಭಗವದಧೀನವಾಗಿವೆ ಎಂದು ಹೇಗೆ ಹೇಳಲು ಸಾಧ್ಯ. ಅಂದಮೇಲೆ ಅನ್ಯಸತ್ತಾದಿಪ್ರದತ್ವರೂಪವಾದ ಹೇತು ಹೇಗೆ ಸಿದ್ಧವಾಗುತ್ತದೆ. ಎಂದರೆ ಶ್ರುತಿಯಲ್ಲಿಯ ಅವಧಾರಣಾರ್ಥ ಹೇಳುವರು. **ಅನ್ಯತ್ ಯತ್ ಸತ್** ಬೇರೆಯಾದ ಕಾಲಕರ್ಮಾದಿಗಳು, **ಅಸತ್** ಅವ್ಯಕ್ತವು, **ತ್ವಂ** ನೀನು, **ಏತಚ್ಚ** ಜೀವಸಮೂಹವು ಇದ್ದರೂ, **ಪರಂ ನ** ಸ್ವತಂತ್ರವಾಗಿರಲಿಲ್ಲ ಎಂದು ಶ್ರುತಿ ಹೇಳುತ್ತದೆ. ಈಶ್ವರಾಧೀನವಾದುದರಿಂದ ಬೇರೆ ವಸ್ತುಗಳು ಗೌಣೀವೃತ್ತಿಯಿಂದ ಇಲ್ಲವೆಂದು ಹೇಳಲ್ಪಡುತ್ತದೆ. ಆದ್ದರಿಂದ ಅಸಿದ್ಧಿ ಇಲ್ಲ. ।। ೩೨ ।।

ಈ ಶ್ಲೋಕದಲ್ಲಿ ಪರಶಬ್ದಕ್ಕೆ ಭಿನ್ನ ಎಂದರ್ಥ ಮಾಡಿದರೆ ಅನ್ಯತ್ ಎಂಬ ಪದವು ವ್ಯರ್ಥವಾಗುವುದು. ಆದ್ದರಿಂದ ವ್ಯಾಖ್ಯಾನಿಸುವರು-

**ತಾತ್ಪರ್ಯ- ಪರಂ ಸ್ವತಂತ್ರಂ ನ ।**

ಇಲ್ಲಿ ನ ಎಂದು ಅನ್ವಯ ಮಾಡಿದ್ದರಿಂದ ಯತ್ ಸದಸತ್ ತನ್ನ ಆಸೀತ್ ಎಂಬ ಅನ್ವಯ ಭ್ರಮವನ್ನು ನಿವಾರಿಸಿದಂತಾಯಿತು. ಕೆಲವು ಅರ್ಥವಾಗದೇ ಇದ್ದುದರಿಂದ, ಕೆಲವು ವಿಪರೀತ ಅರ್ಥವಾಗುವುದರಿಂದಲೂ ಅದನ್ನು ನಿವಾರಿಸಲು ಶ್ಲೋಕತಾತ್ಪರ್ಯವನ್ನು ಪ್ರಮಾಣದಿಂದ ತಿಳಿಸುವರು-

**ತಾತ್ಪರ್ಯ- ವಿಷ್ಣೋರಧೀನಂ ಪ್ರಾಕ್ ಸೃಷ್ಟೇಸ್ತಥೈವ ಚ ಲಯಾದನು ।**
**ಅಸ್ಯ ಸತ್ತ್ವಪ್ರವೃತ್ತ್ಯಾದಿ ವಿಶೇಷೇಣಾಽಧಿಗಮ್ಯತೇ ।।**

ಸ್ವಾತಂತ್ರ್ಯಸ್ಥಿತಿಕಾಲೇ ತು ಕಥಂಚಿದ್ಬುದ್ಧಿ ಮೋಹತಃ ।
ಪ್ರತೀಯಮಾನಮಪಿ ತು ತಸ್ಮಾನ್ನೈವೇತಿ ಗಮ್ಯತೇ ॥

ಜನಿಷ್ಯೇऽಹಂ ಲಯಿಷ್ಯೇऽಹಮಿತಿ ನ ಹ್ಯಭಿಸಂಧಿತಃ ।
ಅತೋ ಜೀವನಮಪ್ಯೇತದ್ಬವೇದೀಶಾಭಿಸಂಹಿತಮ್ ॥

ಅತಃ ಸ್ವರೂಪಭೇದೇಪಿ ಹ್ಯಾತ್ಮೈವೇದಮಿತಿ ಶ್ರುತಿಃ ।
ವದತ್ಯಸ್ಯೇಶತಂತ್ರತ್ವಾದ್ಯಥಾऽಶಕ್ತಸ್ತ್ವಸನ್ನಿತಿ ॥

ವಿದ್ಯಂತೇ ಹಿ ತದಾ ಜೀವಾಃ ಕಾಲಕರ್ಮಾದಿಕಂ ತಥಾ ।
ಕ್ವಾऽನ್ಯಥಾ ಹಿ ಪುನಃ ಸೃಷ್ಟಿಃ ಪೂರ್ವಕರ್ಮಾನುಸಾರಿಣೀ ॥ -ಇತಿ ಬ್ರಹ್ಮತರ್ಕೇ

ತ್ವಂ ಏತಚ್ಚ ಪರಂ ನ ಭವೇತ್ । ಸ್ವತಂತ್ರಂ ನ ॥ ೩೨ ॥

**ಪರಂ** ಸ್ವತಂತ್ರವಾದುದು ಇರಲಿಲ್ಲ, ಜಗತ್ತಿನ ಸೃಷ್ಟಿಗಿಂತ ಪೂರ್ವದಲ್ಲಿ, ಪ್ರಲಯಕಾಲದಲ್ಲಿ ಅನಂತರವೂ ಇಲ್ಲದಿರುವ ಜೀವ-ಜಡರೂಪವಾದ ವಸ್ತುವಿನ ಸತ್ತಾ-ಪ್ರವೃತ್ತಿ-ಪ್ರತೀತಿಗಳು ಶ್ರೀಹರಿಯ ಅಧೀನವೆಂದೇ ಶ್ರುತ್ಯಾದಿಗಳಲ್ಲಿ ಹೇಳಲ್ಪಡುತ್ತದೆ. 'ನಾನು ಹುಟ್ಟುವೆನು' 'ನಾಶ ಹೊಂದುವೆನು' ಎಂದು ಸ್ಥಿತಿಕಾಲದಲ್ಲಿ ಅಜ್ಞಾನದಿಂದ ಜೀವರಿಗೆ ಸ್ವಾತಂತ್ರ್ಯವು ತೋರಿದರೂ ಜಗತ್ಸೃಷ್ಟಿಗಿಂತ ಪೂರ್ವೋತ್ತರಕಾಲಗಳಲ್ಲಿ ಇಲ್ಲದಿರುವುದರಿಂದ ಸ್ವಾತಂತ್ರ್ಯವು ಜೀವರಿಗೆ ಸರ್ವಥಾ ಇಲ್ಲವೆಂದು ತಿಳಿಯುತ್ತದೆ. ಏಕೆಂದರೆ ಜೀವಾದಿಗಳಿಗೆ ಸತ್ತಾ- ಪ್ರವೃತ್ತಿ-ಪ್ರತೀತಿಗಳು ಸ್ವೇಚ್ಛೆಯಿಂದ ಆಗುವುದಿಲ್ಲ ಆದಕಾರಣ ಸ್ವಾತಂತ್ರ್ಯಜ್ಞಾನವು ಭ್ರಮವೇ ಆಗಿದೆ. ಜೀವರಿಗೆ ಸ್ವಾತಂತ್ರ್ಯವಿಲ್ಲ-ದಿರುವುದರಿಂದ ಜೀವರ ಜೀವನವು ಶ್ರೀಹರಿಯ ಇಚ್ಛೆಯಿಂದಲೇ ಆಗುತ್ತದೆ. ಆದಕಾರಣ ಅಶಕ್ತನಾದ ಪುರುಷನು **ಅಸನ್** ಇಲ್ಲವೆಂದು ಹೇಗೆ ಹೇಳಲ್ಪಡುತ್ತಾನೋ ಹಾಗೆಯೇ ಸರ್ವವಸ್ತುಗಳೂ ಶ್ರೀಹರಿಯಿಂದ ಭಿನ್ನವಾಗಿದ್ದರೂ ಶ್ರೀಹರಿಯ ಅಧೀನವೇ ಆಗಿರುವುದರಿಂದ 'ಇದಮಾತ್ಮೈವ' ಎಂಬ ಶ್ರುತಿಯಲ್ಲಿ ಶ್ರೀಹರಿಯಿಂದ ಬೇರೆಯಾಗಿ ಇಲ್ಲವೆಂದು ಹೇಳಲ್ಪಡುತ್ತದೆ.

ಪ್ರಲಯಕಾಲದಲ್ಲಿ ಜೀವ-ಕಾಲ-ಕರ್ಮ-ಪ್ರಕೃತಿ ಮೊದಲಾದವುಗಳು ಶ್ರೀಹರಿಯ ಅಧೀನಗಳಾಗಿ ಇರುತ್ತವೆ. ಅವುಗಳು ಸರ್ವಥಾ ಇಲ್ಲವೇ ಇಲ್ಲ ಎಂದಾದರೇ ಜೀವರಿಗೆ ಕರ್ಮಾನುಸಾರ ಪುನಃ ಸೃಷ್ಟಿಯೂ ಹೇಗಾದೀತು ? ಪೂರ್ವಕರ್ಮವನ್ನು ಅನುಸರಿಸಿಯೇ ಜೀವರಿಗೆ ಸೃಷ್ಟಿಯು ಎಂದು ಬ್ರಹ್ಮತರ್ಕದಲ್ಲಿ ಹೇಳಿದೆ.

ಚತುರ್ಮುಖನಾದ ನೀನು, ಜೀವರ ಸಮುದಾಯವು 'ಪರಂ ನ' ಅಂದರೆ ಸ್ವತಂತ್ರರಲ್ಲ ಎಂದರ್ಥವು. ।। ೩೨ ।।

ಉಪಚಾರಕ್ಕೆ ಮತ್ತೊಂದು ನಿಮಿತ್ತವನ್ನು ತಿಳಿಸುತ್ತ ಅಪರರೂಪವನ್ನು ಉಪದೇಶಿಸುವನು-

**ಋತೇऽರ್ಥಂ ಯತ್ಪ್ರತೀಯೇತ ನ ಪ್ರತೀಯೇತ ಚಾऽತ್ಮನಿ ।**
**ತದ್ವಿದ್ಯಾದಾತ್ಮನೋ ಮಾಯಾಂ ಯಥಾऽऽಭಾಸೋ ಯಥಾ ತಮಃ ।। ೩೩ ।।**

**ಯತ್** ಯಾವ ವಸ್ತುವು, **ಆತ್ಮನಿ** ಪರಮಾತ್ಮನಲ್ಲಿ ಇದ್ದರೂ ಈ ವಸ್ತುಗಳಿಂದ ಯಾವ ಪ್ರಯೋಜನವೂ ದೇವರಿಗೆ ಇಲ್ಲದಿರುವುದರಿಂದ ಈ ಯಾವ ವಸ್ತುಗಳೂ ಇಲ್ಲವೆಂದು ಹೇಳಲ್ಪಡುವುದು, **ತತ್** ಅಂದರೆ, **ಆತ್ಮನಃ** ಪರಮಾತ್ಮನ ಅಧೀನವಾದ, **ಮಾಯಾಂ** ಪ್ರಕೃತಿಯನ್ನು, **ವಿದ್ಯಾತ್** ತಿಳಿಯಬೇಕು. ಈ ವಸ್ತುಗಳಿಂದ ಭಗವಂತನಿಗೆ ಯಾವ ಪ್ರಯೋಜನವೂ ಇಲ್ಲವೆಂದು ಸಿದ್ಧವಾಗಿಲ್ಲ. ಪರಮಾತ್ಮನಲ್ಲಿಯೂ ಪ್ರಕೃತ್ಯಾದಿಗಳಿಂದ ನಿರ್ಮಿತವಾದ ದೇಹಾದಿಗಳು, ಕುವಾದಿಗಳು ಹೇಳುವ ಯುಕ್ತಿಗಳಿಂದ ತೋರುವುದಲ್ಲ ಎಂದರೆ ಹೇಳುವರು, **ಋತೇ ಅರ್ಥಂ ಪ್ರತೀಯತೇ** ಪ್ರಯೋಜನವಿಲ್ಲದಿದ್ದರೂ ಇದ್ದಂತೆ ತೋರುತ್ತದೆ. ಯುಕ್ತ್ಯಾದಿಗಳು ದುಷ್ಟವಾದುದರಿಂದ ತೋರುವುದು ಭ್ರಾಂತಿ ಎಂದು ಭಾವ. ಏಕೆಂದರೆ, **ನ ಪ್ರತೀಯೇತ** ವೇದಾದಿಗಳಲ್ಲಿ ಪರಮಾತ್ಮನಿಗೆ ಪ್ರಕೃತ್ಯಾದಿಗಳಿಂದ ಪ್ರಯೋಜನವಿದೆ ಎಂದು ಹೇಳಿಲ್ಲ. ಆದರೂ ಪ್ರಯೋಜನವಿದೆ ಎಂದು ಹೇಳುವುದಾದರೇ ಈಶ್ವರನು ಈಶ್ವರನೇ ಅಲ್ಲ ಎಂದು ಹೇಳಬೇಕಾದೀತು. ಆದ್ದರಿಂದ ಯಾವ ವಸ್ತುಗಳಿಂದಲೂ ಪರಮಾತ್ಮನಿಗೆ ಪ್ರಯೋಜನವನ್ನು ಹೇಳಕೂಡದು. ಇಲ್ಲಿ ಮಾಯಾ ಎಂದರೆ ಇಂದ್ರಜಾಲವಲ್ಲ ಎಂದು ನಾಲ್ಕನೆಯ ಪಾದದಲ್ಲಿ ತಿಳಿಸುವರು. **ಆಭಾಸಃ** ಪ್ರತಿಬಿಂಬನಾದ ಜೀವನು, **ತಮಃ** ಪ್ರಕೃತಿ-ಕಾಲ-ಕರ್ಮ ಮುಂತಾದ ಎಲ್ಲ ಜಡಗಳು, **ಯಥಾ** ಹೇಗೆ ಛತ್ರ-ಚಾಮರ ಹಾಕುವವರು ರಥದಲ್ಲಿದ್ದರೂ ರಥಿಕರೆಂದು ಕರೆಯಲ್ಪಡುವುದಿಲ್ಲವೋ ಹಾಗೆ ಜೀವ-ಪ್ರಕೃತಿ -ಕಾಲ-ಕರ್ಮ ಮುಂತಾದವುಗಳು ಪರಮಾತ್ಮನಲ್ಲಿ ಇದ್ದರೂ, ಜೀವನಿಂದ ಜೀವನವಿಲ್ಲದಿದ್ದರಿಂದ, ಪ್ರಕೃತಿಯಿಂದ ಬಂಧವಿಲ್ಲದ್ದರಿಂದ, ಕರ್ಮಗಳ ಫಲವಿಲ್ಲದ್ದರಿಂದ ಕಾಲದಿಂದ ಪರಿಣಾಮವಿಲ್ಲದ್ದರಿಂದ, ಆಕಾಶಾದಿಗಳಿಂದ ಅವಕಾಶದಾನಾದಿಗಳಿಲ್ಲದ್ದರಿಂದ ಅವನಲ್ಲಿ ಈ ವಸ್ತುಗಳು ಇಲ್ಲವೆಂದು ಹೇಳುವುದು ಯುಕ್ತವಾಗಿದೆ.

ಈ ಶ್ಲೋಕದಲ್ಲಿ 'ಪ್ರತೀಯೇತ' 'ನ ಪ್ರತೀಯೇತ' ಎಂದು ವ್ಯಾಹತವಾಗಿ ಕಾಣುವುದು. ಮತ್ತು ಲಿಜ ಪ್ರಯೋಗವು ವ್ಯರ್ಥ ಎಂದರೆ ತಾತ್ಪರ್ಯ ಹೇಳುವರು-

ತಾತ್ಪರ್ಯ- ಅರ್ಥವದಿವ ಪ್ರತೀಯತೇ । ನಚ ಪರಮಾತ್ಮನ್ಯರ್ಥವತ್ ಪ್ರತೀಯತೇ । ಅರ್ಥಂ ಪ್ರಯೋಜನಮೃತೇ । ನಹಿ ಜೀವಪ್ರಕೃತಿಭ್ಯಾಮೀಶ್ವರಸ್ಯ ಅರ್ಥಃ ।

ಮುಖ್ಯತೋ ವಿಷ್ಣು ಶಕ್ತಿರ್ಹಿ ಮಾಯಾಶಬ್ದೇನ ಗಮ್ಯತೇ ।
ಉಪಚಾರತಸ್ತು ಪ್ರಕೃತಿಃ ಜೀವಶ್ಚೈವ ಹಿ ಭಣ್ಯತೇ ॥ಇತಿ ಚ॥ ಯಥಾ ಆಭಾಸಃ ಜೀವಃ ।

ಸರ್ವಂ ಪರೇ ಸ್ಥಿತಮಪಿ ನೈವ ತತ್ರೇತಿ ಭಣ್ಯತೇ ।
ಯತೋ ಹರೇರ್ನ ಜೀವೇನ ಜೀವನಂ ನ ಹರೌ ತತಃ ।

ಜೀವಃ ಪ್ರಕೃತಿರಪ್ಯತ್ರ ಯತೋ ನೈವ ಹಿ ಬಂಧಕೃತ್ ।
ಕರ್ಮ ಚಾಽಫಲದಾತೃತ್ವಾತ್ ಕಾಲಸ್ಯಾಪರಿಣಾಮನಾತ್ ।

ಯಥಾ ಛತ್ರಧರಾದ್ಯಾಸ್ತು ರಥಸ್ಥಾ ಅಪಿ ಸರ್ವಶಃ ।
ರಥಿನೊ ನೈವ ಭಣ್ಯಂತೇ ಏವಂ ಹರಿಗತಾ ಅಪಿ ॥

ಶ್ರೀಹರಿಗೆ ಜೀವ-ಜಡಗಳಿಂದ ಪ್ರಯೋಜನವಿದೆ ಎಂಬ ಪ್ರತೀತಿಯು ಭ್ರಮವು ಎಂದು 'ಋತೇಽರ್ಥಂ ಯತ್ಪ್ರತೀಯೇತ' ಎಂಬ ಪ್ರಥಮ ಪಾದದ ಅರ್ಥವು. ವೇದಾದಿಗಳಲ್ಲಿ ಶ್ರೀಹರಿಗೆ ಪ್ರಕೃತ್ಯಾದಿಗಳಿಂದ ಪ್ರಯೋಜನವಿದೆ ಎಂದು ಎಲ್ಲಿಯೂ ಹೇಳಿಲ್ಲ.

'ಅರ್ಥಂ ಋತೇ' ಎಂಬುದಕ್ಕೆ ಪ್ರಯೋಜನವಿಲ್ಲದೇ ಎಂದರ್ಥ. ಜೀವ-ಪ್ರಕೃತಿಗಳಿಂದ ಶ್ರೀಹರಿಗೆ ಪ್ರಯೋಜನವಿಲ್ಲ. ಮುಖ್ಯವಾಗಿ ಶ್ರೀವಿಷ್ಣುವಿನ ಶಕ್ತಿಗೆ ಮಾಯಾ ಎಂದು ಹೆಸರು. ಅಮುಖ್ಯವಾಗಿ ಪ್ರಕೃತಿ-ಜೀವರಿಗೆ ಮಯಾ ಎಂದು ಹೆಸರು. 'ಯಥಾಽಽಭಾಸಃ' ಎಂಬಲ್ಲಿದ್ದ ಆಭಾಸ ಎಂಬುದಕ್ಕೆ ಪ್ರತಿಬಿಂಬನಾದ ಜೀವನು ಎಂದು ಅರ್ಥ. ತಮಃ ಎಂದರೆ ಪ್ರಕೃತಿ ಎಂದು ಅರ್ಥ. ಜೀವರೆಲ್ಲರೂ ಶ್ರೀಹರಿಯಲ್ಲಿದ್ದರೂ ಜೀವರಿಂದ ಶ್ರೀಹರಿಗೆ ಜೀವನ ವಾಗದಿರುವುದರಿಂದ ಜೀವನು ಪರಮಾತ್ಮನಲ್ಲಿ ಇಲ್ಲವೆಂದು ಹೇಳುತ್ತಾರೆ. ಜೀವನು ಶರೀರದಲ್ಲಿದ್ದು ಜೀವನವನ್ನು ಹೇಗೆ ಕೊಡುತ್ತಾನೋ ಹಾಗೆ ಶ್ರೀಹರಿಯಲ್ಲಿದ್ದು ಶ್ರೀಹರಿಗೆ ಜೀವನವನ್ನು ಕೊಡುವುದಿಲ್ಲ ಎಂದು 'ನ ಪ್ರತೀಯೇತ ಚಾಽತ್ಮನಿ' ಎಂಬ ಮಾತು ತಿಳಿಸುತ್ತದೆ. ಜೀವರು, ಜಡಪ್ರಕೃತಿಯು ಶ್ರೀಹರಿಯನ್ನು ಬಂಧಿಸದಿರುವುದರಿಂದ ಜಡಪ್ರಕೃತಿಯೂ ದೇವರಲ್ಲಿ ಇಲ್ಲ ಎಂದು ಹೇಳುತ್ತಾರೆ.

ಕರ್ಮವು ಶ್ರೀಹರಿಗೆ ಫಲವನ್ನು ಕೊಡದಿರುವುದರಿಂದ ಇಲ್ಲವೆಂದು ಹೇಳಲ್ಪಡುತ್ತದೆ. ಕಾಲವು ಶ್ರೀಹರಿಗೆ ಸ್ವಕಾರ್ಯವಾದ ಪರಿಣಾಮಾದಿಗಳನ್ನು ಮಾಡದಿರುವುದರಿಂದ ಇಲ್ಲವೆಂದು ಹೇಳಲ್ಪಡುತ್ತದೆ. ಛತ್ರ-ಚಾಮರಾದಿಗಳನ್ನು ಧರಿಸಿದ ಭೃತ್ಯರು ಎಲ್ಲರೂ ರಥದಲ್ಲಿದ್ದರೂ ಅವರನ್ನು ರಥಿಕರೆಂದು ವ್ಯವಹರಿಸುವುದಿಲ್ಲ. ಹಾಗೆಯೇ ಜೀವಾದಿಗಳು ಶ್ರೀಹರಿಯನ್ನಾಶ್ರಯಿಸಿಕೊಂಡಿದ್ದರೂ ತಮ್ಮ ತಮ್ಮ ಜೀವನಾದಿ ಕರ್ಮಗಳನ್ನು ಮಾಡದಿರುವುದರಿಂದ ಶ್ರೀಹರಿಯಲ್ಲಿದ್ದರೂ ಹರಿಯಲ್ಲಿದ್ದಾರೆ ಎಂದು ಹೇಳಲ್ಪಡುವುದಿಲ್ಲ

ಈ ತಾತ್ಪರ್ಯದಿಂದ ಲಡರ್ಥದಲ್ಲಿ ಲಿಜ್‌ಪ್ರಯೋಗವನ್ನು ಮಾಡಿದ್ದಾರೆ. 'ಅರ್ಥವತ್' ಎಂಬುದು ಶೇಷ ಎಂದು ತಿಳಿಸಿದಂತಾಯಿತು.

ಅಂತು ವೇದದಲ್ಲಿಯೂ ಜೀವ-ಪ್ರಕೃತಿಗಳಿಂದ ಶ್ರೀಹರಿಗೆ ಪ್ರಯೋಜನ ಇದೆ ಎಂದು ಹೇಳದಿರುವುದರಿಂದ ಪ್ರಯೋಜನವಿದ್ದಂತೆ ತೋರುವುದು ಭ್ರಾಂತಿಯೇ ಆಗಿದೆ. ಪ್ರತಿಬಿಂಬನಾದ ಜೀವ-ಪ್ರಕೃತ್ಯಾದಿಗಳು ಶ್ರೀಹರಿಯಲ್ಲಿದ್ದರೂ ಪ್ರಯೋಜವಿಲ್ಲದ್ದರಿಂದ ಇಲ್ಲ ಎಂದು ಹೇಳಲ್ಪಡುವವು ಎಂದು ಶ್ಲೋಕದ ಭಾವ.

ಹೇಗೆ ಶ್ರೀಹರಿಯಲ್ಲಿದ್ದರೂ ಪ್ರಕೃತ್ಯಾದಿಗಳು ಹರಿಯ ಅಧೀನವಾದುದರಿಂದ ಅವನಲ್ಲಿ ಇಲ್ಲ ಎಂದು ಹೇಳುವರೋ ಹಾಗೆ ಭೂತಾದಿಗಳಲ್ಲಿದ್ದರೂ ಶ್ರೀಹರಿಯು 'ನ ಭೂತಸ್ಥ' ಎಂದು ಭೂತಗಳಲ್ಲಿಲ್ಲ ಎನ್ನಲು ಭೂತಾಧೀನತ್ವವೇ ನಿಮಿತ್ತವೇ? ಎಂಬ ಶಂಕೆಗೆ ಅಲ್ಲ ಅದಕ್ಕೆ ಬೇರೆ ಕಾರಣವಿದೆ ಎಂದು ದೃಷ್ಟಾಂತಪೂರ್ವಕ ತಿಳಿಸುವರು-

**ಯಥಾ ಮಹಾಂತಿ ಭೂತಾನಿ ಭೂತೇಷೂಚ್ಚಾವಚೇಷು ಚ ।**
**ಪ್ರವಿಷ್ಟಾನ್ಯಪ್ರವಿಷ್ಟಾನಿ ತಥಾ ತೇಷು ನ ತೇಷ್ವಹಮ್ ॥ ೩೪ ॥**

**ಯಥಾ** ಹೇಗೆ, **ಮಹಾಂತಿ ಭೂತಾನಿ** ಪಂಚಮಹಾಭೂತಗಳು, **ಉಚ್ಚಾವಚೇಷು ಭೂತೇಷು** ತಮ್ಮ ಕಾರ್ಯವಾದ ಶರೀರಗಳಲ್ಲಿ **ಪ್ರವಿಷ್ಟಾನಿ** ಸೇರಿಕೊಂಡಿವೆ, ಶರೀರದ ಹೊರಗೂ, ಅವುಗಳು ಇಲ್ಲದಿರುವಾಗಲೂ ಇರುವುದರಿಂದ, **ಅಪ್ರವಿಷ್ಟಾನಿ** ಶರೀರದಲ್ಲಿ ಸೇರಿಲ್ಲವೋ, **ತಥಾ** ಹಾಗೆ, **ಅಹಂ ಅಪಿ** ನಾನೂ ಸಹ, ಅನಂತ ದೇಶ-ಕಾಲಗಳಲ್ಲಿ ವ್ಯಾಪ್ತನಾದುದರಿಂದ **ತೇಷು** ಭೂತಗಳಲ್ಲಿ ಪ್ರಕೃತ್ಯಾದಿಗಳಲ್ಲಿ **ಪ್ರವಿಷ್ಟಃ** ಪ್ರವೇಶಮಾಡಿದ್ದೇನೆ, ಅವುಗಳಿಂದ ಹೊರಗೂ ಅವುಗಳು ಇಲ್ಲದಿರುವಾಗಲೂ ಇರುವುದರಿಂದ, **ತೇಷು ನ** ಅವುಗಳಲ್ಲಿ ಸೇರಿಲ್ಲ, ಆದ್ದರಿಂದ ಅವುಗಳಲ್ಲಿದ್ದರೂ ಅವುಗಳಲ್ಲಿ ಇಲ್ಲ ಎಂಬ ಮಾತು ಯುಕ್ತವೇ ಆಗುತ್ತದೆ. ॥ ೩೪ ॥

ಮೂಲದಲ್ಲಿ ಅಭಿಪ್ರೇತವಾದ ದೃಷ್ಟಾಂತವನ್ನು ತಿಳಿಸುವರು-

**ತಾತ್ಪರ್ಯ- ಯಥಾ ಮಹಾಂತಿ ಭೂತಾನಿ ಶರೀರೇಷು ಬಹಿಸ್ತಥಾ ।**
**ಏವಂ ಹರಿಶ್ಚ ಭೂತೇಷು ಬಹಿಶ್ಚ ವ್ಯಾಪ್ತಿಹೇತುತಃ**
**ತಸ್ಮಾತ್ತತ್‌ಸ್ಥೋ ನ ತತ್‌ಸ್ಥಶ್ಚ ಪ್ರೋಚ್ಯತೇ ಹರಿರೀಶ್ವರಃ ॥ -ಇತಿ ಚ**

ಹೇಗೆ ಪಂಚಮಹಾಭೂತಗಳು ಸ್ವಕಾರ್ಯವಾದ ಶರೀರಗಳಲ್ಲಿ ಪ್ರವಿಷ್ಟವಾಗಿದ್ದರೂ ಶರೀರವನ್ನು ಬಿಟ್ಟು ಹೊರಗೂ ಬೇರೆ ಕಡೆಯೂ ಇರುವುದರಿಂದ ಅಪ್ರವಿಷ್ಟವೆನಿಸುತ್ತವೆಯೋ ಹಾಗೆಯೇ ಶ್ರೀಹರಿಯೂ ಪಂಚಭೂತಗಳಲ್ಲಿಯೂ ಅವುಗಳಿಂದ ಬೇರೆಯಾದ ಪ್ರಕೃತ್ಯಾದಿಗಳಲ್ಲಿಯೂ ವ್ಯಾಪಿಸಿಕೊಂಡಿರುವುದರಿಂದ ಭೂತಗಳಲ್ಲಿದ್ದಾನೆಂದೂ ಭೂತಗಳು ಇಲ್ಲದಿರುವ ಕಾಲದಲ್ಲಿ ಅಲ್ಲಿ ಇಲ್ಲದಿರುವುದರಿಂದ ಇಲ್ಲವೆಂದೂ ಅನ್ನಿಸಿಕೊಳ್ಳುವನು. ॥ ೩೪ ॥

*ಈ ವರೆಗೆ ಬೇರೆ ವಸ್ತುಗಳು ಇರುವ ಇಲ್ಲದಿರುವ ದೇಶಕಾಲಗಳಲ್ಲಿ ತನ್ನ ಸತ್ತಾ ಇದೆ ಎಂದು ಹೇಳಿ ಈಗ ತನ್ನ ಶಕ್ತ್ಯಾದಿಗಳು ತನ್ನಂತೆ ಸರ್ವದಾ ಸರ್ವತ್ರ ಇರುವವು ಎಂದೂ ಮತ್ತು 'ತದಂಗಂ ಚ' ಎಂದು ಹೇಳಿದ ಸಾಧನವನ್ನು ತಿಳಿಸುವರು-*

**ಏತಾವದೇವ ಜಿಜ್ಞಾಸ್ಯಂ ತತ್ತ್ವಜಿಜ್ಞಾಸುನಾಽತ್ಮನಃ ।**
**ಅನ್ವಯವ್ಯತಿರೇಕಾಭ್ಯಾಂ ಯತ್ಸ್ಯಾತ್ ಸರ್ವತ್ರ ಸರ್ವದಾ ॥ ೩೫ ॥**

**ಯತ್** ಯಾವ ಶಕ್ತಿ-ಜ್ಞಾನಾದಿಗಳು, **ಸರ್ವತ್ರ** ಎಲ್ಲ ದೇಶದಲ್ಲಿ, **ಸರ್ವದಾ** ಎಲ್ಲ ಕಾಲದಲ್ಲಿ, **ಅನ್ವಯವ್ಯತಿರೇಕಾಭ್ಯಾಂ** ಬೇರೆ ವಸ್ತುಗಳಿರುವ ಇಲ್ಲದಿರುವ ದೇಶ-ಕಾಲಗಳಲ್ಲಿ ಮತ್ತು ತನ್ನಿಂದ ಭಿನ್ನವಾದ ವಿಷಯದಲ್ಲಿ ಇರುವ ಅಲ್ಲಿ ಇಲ್ಲದಿರುವ ತದತಿರಿಕ್ತವಿಷಯಕ ಶಕ್ತಿ-ಜ್ಞಾನಾದಿಗಳಿಂದ ಸಹಿತನಾದವನು ಶ್ರೀಹರಿ ಎಂದು, **ಆತ್ಮನಃ** ಪರಮಾತ್ಮನ, **ತತ್ತ್ವಜಿಜ್ಞಾಸುನಾ** ಅಸಾಧಾರಣ ಧರ್ಮವನ್ನು ತಿಳಿಯಲಿಚ್ಛಿಸುವವನು, **ಏತಾವತ್** ಇಷ್ಟನ್ನು, **ಜಿಜ್ಞಾಸ್ಯಂ** ವಿಚಾರ ಮಾಡಬೇಕು.

ಈ ಜಿಜ್ಞಾಸೆ ಪರಮಾತ್ಮನ ಜ್ಞಾನಕ್ಕೆ ಮುಖ್ಯಸಾಧನವೆಂದು ಭಾವ. ಎಲ್ಲ ವಸ್ತುಗಳು ಇದ್ದ ಇಲ್ಲದಿದ್ದ ದೇಶ-ಕಾಲಗಳಲ್ಲಿ ಸರ್ವವಿಷಯಕ ಶಕ್ತಿಯುಳ್ಳವನು ಎಂದು ತಾತ್ಪರ್ಯ. ॥ ೩೫ ॥

ಇಲ್ಲಿ ಅನ್ವಯ-ವ್ಯತಿರೇಕ ಶಬ್ದಗಳ ಅರ್ಥ ಹೇಳುವರು-

**ತಾತ್ಪರ್ಯ- ಅನ್ಯಭಾವಾಭಾವಕಾಲೇ ದೇಶೇ ಚ ತದ್ವಿದ್ಯಮಾನಾವಿದ್ಯಮಾನಶಕ್ತಿಮಾಂಶ್ಚ ಇತ್ಯನ್ವಯವ್ಯತಿರೇಕೌ ।**

ಈ ತಾತ್ಪರ್ಯ ಹೊರಡಲು ಮುಖ್ಯವಾದ ಕಾರಣವೇನೆಂದರೆ ಯಾವುದು ಅನ್ವಯ-ವ್ಯತಿರೇಕಗಳಿಂದ ಕೂಡಿದೆಯೋ ಅಂದರೆ ವಿದ್ಯಮಾನ ಅವಿದ್ಯಮಾನವಾಗಿದೆಯೋ ಅದು ಪರಮಾತ್ಮ ಎಂದು ಹೇಳಿದಂತೆ ತೋರುವುದು. ನಿತ್ಯದಲ್ಲಿಯೂ ಸರ್ವಗತನಾದ ಬ್ರಹ್ಮನಿಗೆ ಇದನ್ನು ಹೇಗೆ ಹೇಳಲು ಸಾಧ್ಯ? ಎಂದರೆ, ಬ್ರಹ್ಮನಿಗೇನೇ ವಿದ್ಯಮಾನತ್ವ ಅವಿದ್ಯಮಾನತ್ವವಲ್ಲ ಕಿಂತು ಬೇರೆ ವಸ್ತುಗಳ ಅನ್ವಯ-ವ್ಯತಿರೇಕಗಳಿಂದ ಸಹಿತನಾಗಿ ಎಲ್ಲ ದೇಶ ಕಾಲಗಳಲ್ಲಿ ಇರುವವನು ಎಂದು ಆಚಾರ್ಯರು ತಾತ್ಪರ್ಯದಲ್ಲಿ ಅರ್ಥ ಮಾಡಿರುವರು. ಸಮಾಸದಲ್ಲಿ ಸೇರಿದ ಶಕ್ತಿಮಾನ್ ಎಂಬ ಪದವನ್ನು ಬೇರೆ ಮಾಡಿಕೊಂಡು ಕಾಲೇ ದೇಶೇ ಎಂಬಲ್ಲಿ ಸೇರಿಸಬೇಕು. ಅಂದರೆ ಚಶಬ್ದವು ಯುಕ್ತವಾಗುವುದು. ಅಂತು ಬೇರೆ ವಸ್ತುಗಳು ಇರುವ ಇಲ್ಲದಿರುವ ಎಲ್ಲ ದೇಶ-ಕಾಲಗಳಲ್ಲಿಯೂ ಶಕ್ತಿ-ಜ್ಞಾನಾದಿಗಳುಳ್ಳವನು, ತದ್ವಿದ್ಯಮಾನ ದೇಶಕಾಲಗಳಲ್ಲಿ ಇರುವ ಇಲ್ಲದಿರುವ ಪದಾರ್ಥಗಳ ಸತ್ತಾ-ಉತ್ಪತ್ತಿ ಮುಂತಾದ ಶಕ್ತಿಯುಳ್ಳವನು.

**(ಅನ್ಯಸ್ಯ ಜಗತಃ ಭಾವಾಭಾವೌ ತಾಭ್ಯಾಂ ಯುಕ್ತಃ ಕಾಲಃ ದೇಶಃ ಅನ್ಯಭಾವಾಭಾವ ಕಾಲಃ ದೇಶಃ ತಸ್ಮಿನ್ ತದ್ವಿಷಯೇ ಶಕ್ತಿಮಾನ್ । ತದ್ವಿದ್ಯಮಾನಾವಿದ್ಯಮಾನಶಕ್ತಿಮಾಂಶ್ಚ ತಯೋಃ ದೇಶ ಕಾಲಯೋಃ ವಿದ್ಯಮಾನಃ ಅವಿದ್ಯಮಾನಃ ಪದಾರ್ಥಃ ಸ ತು ಉತ್ಪತ್ತ್ಯಾದಿಶಕ್ತಿಮಾನ್ । ಅನೇನ ಪ್ರಕಾರೇಣ ಅನ್ವಯವ್ಯತಿರೇಕೌ)**

**ಸಾರಾಂಶ-** ಸರ್ವದೇಶ-ಕಾಲಗಳಲ್ಲಿ ಸರ್ವವಿಷಯಕ ಶಕ್ತಿಯುಳ್ಳವನು ಶ್ರೀಹರಿ. ಅನ್ಯಭಾವಾಭಾವ ಸಹಿತ ದೇಶ-ಕಾಲಗಳ ನಿಯಮನ ಶಕ್ತಿಯು ಇದೆ. ದೇಶಕಾಲಗಳಲ್ಲಿರುವ ಎಲ್ಲ ಪದಾರ್ಥಗಳ ನಿಯಮನ ಶಕ್ತಿಯು ಇದೆ. 'ಅನ್ಯಭಾವಯುಕ್ತಕಾಲದೇಶಶಕ್ತಿಮತ್ತ್ವಂ ಅನ್ವಯ. ಅನ್ಯಾಭಾವಯುಕ್ತದೇಶಕಾಲಶಕ್ತಿಮತ್ತ್ವಂ ವ್ಯತಿರೇಕ. ಈ ವಿಧವಾದ ಅನ್ವಯ-ವ್ಯತಿರೇಕಗಳು ನಿತ್ಯ ಸರ್ವಗತನಿಗೂ ಉಪಪನ್ನವಾಗುವುದು.

ಈ ನಾಲ್ಕು ಶ್ಲೋಕಗಳ ಪದಾರ್ಥ- **ಅಗ್ರೇ** ಸೃಷ್ಟಿಯ ಪೂರ್ವದಲ್ಲಿ **ಅಹಮೇವ ಆಸಂ** ನಾನೊಬ್ಬನೇ ಇದ್ದೆನು, **ಚ** ಬೇರೆ ವಸ್ತುಗಳೂ ಇದ್ದವು. (ಅವಧಾರರಣ ಹೇಗೆಂದರೆ) **ಯದನ್ಯತ್ ಸದಸತ್** ಯಾವುದು ಕಾಲ-ಕರ್ಮಾದಿಗಳು ಅವ್ಯಕ್ತವು ಇತ್ತೋ ಅದು, **ಪರಂ ನ ಆಸ** ಸ್ವತಂತ್ರವಾಗಿ ಇರಲಿಲ್ಲ. **ಪಶ್ಚಾತ್** ಸೃಷ್ಟಿಯ ನಂತರ, **ಅಹಂ ಆಸ** ನಾನು ಇದ್ದೆ **ಏತತ್** ಪ್ರತ್ಯಕ್ಷಸಿದ್ಧವಾದ ಜಗತ್ತು ಇತ್ತು, **ಯಾ ಅವಶಿಷ್ಯೇತ ಸಃ ಅಹಂ ಅಸ್ಮಿ** ಪ್ರಲಯದಲ್ಲಿ ಉಳಿಯುವವನು ನಾನು. ।। ೩೨ ।।

**ಆತ್ಮನಿ** ಪರಮಾತ್ಮನಲ್ಲಿ, **ಅರ್ಥಂ** ಪ್ರಯೋಜನವನ್ನು, **ಋತೇ** ಬಿಟ್ಟು, **ಯತ್ ಪ್ರತೀಯೇತ** (ಪ್ರತೀಯತೇ) ಯಾವುದು ತೋರುವುದೋ, ಜೀವ-ಪ್ರಕೃತಿಗಳಿಂದ ಪರಮಾತ್ಮನಿಗೆ ಪ್ರಯೋಜನವಿಲ್ಲ, **ಆತ್ಮನಿ ನ ಪ್ರತೀಯೇತ** ಬಂಧಕವಾಗಿ ತೋರುವುದಿಲ್ಲವೋ, **ತತ್** ಆ ಜೀವ-ಪ್ರಕೃತಿಗಳು, **ಆತ್ಮನೊ ಮಾಯಾಂ ವಿದ್ಯಾತ್** ಪರಮಾತ್ಮನ ಅಧೀನವಾದ ಮಾಯಾ ಶಬ್ದವಾಚ್ಯವೆಂದು ತಿಳಿಯಬೇಕು, ಅವು ಯಾವೆಂದರೇ, **ಯಥಾ ಆಭಾಸಃ** ಸತ್ಯವಾದ ಪ್ರತಿಬಿಂಬನಾದ ಜೀವನು, **ಯಥಾ ತಮಃ** ಸತ್ಯವಾದ ತಮಃಶಬ್ದವಾಚ್ಯವಾದ ಪ್ರಕೃತಿಯು ।। ೩೩ ।।

**ಮಹಾಂತಿ ಭೂತಾನಿ** ಪಂಚಮಹಾಭೂತಗಳು, **ಭೂತೇಷು ಉಚ್ಚಾವಚೇಷು** ಸ್ವಕಾರ್ಯಶರೀರಗಳಲ್ಲಿ **ಪ್ರವಿಷ್ಟಾನಿ** ಇವೆಯೋ, **ಅಪ್ರವಿಷ್ಟಾನಿ** ಸ್ವಕಾರ್ಯಶರೀರಗಳಿಗಿಂತಲೂ ಅಧಿಕವಾದ ವ್ಯಾಪ್ತಿ ಇರುವುದರಿಂದ ಅವುಗಳಲ್ಲಿ ಇಲ್ಲವೋ, **ತಥಾ** ಹಾಗೆ, **ಅಹಂ** ಅನಂತದೇಶಕಾಲಗಳಲ್ಲಿ ವ್ಯಾಪ್ತನಾದ ನಾನು, **ತೇಷು ಪ್ರವಿಷ್ಟಃ** ಭೂತಗಳಲ್ಲಿ ಇದ್ದೇನೆ, **ನ ಪ್ರವಿಷ್ಟಃ** ಭೂತಗಳ ಹೊರಗೂ ನಾನಿರುವುದರಿಂದ ಅವುಗಳಲ್ಲಿ ನಾನು ಪ್ರವಿಷ್ಟನಾಗಿಲ್ಲ. ।।೩೪।।

**ತತ್ತ್ವಜಿಜ್ಞಾಸುನಾ ಆತ್ಮನಾ** ಶ್ರೀಹರಿತತ್ತ್ವವನ್ನು ತಿಳಿಯಲಿಚ್ಛಿಸುವವನು, **ಆತ್ಮನಃ** ಪರಮಾತ್ಮನ, **ತತ್ತ್ವಂ** ಸರಿಯಾದ ಸ್ವರೂಪವನ್ನು, **ಏತಾವದೇವ** ಇಷ್ಟೇ, **ಜಿಜ್ಞಾಸ್ಯಂ** ತಿಳಿಯಬೇಕು, ಅದೇನೆಂದರೆ, **ಸರ್ವತ್ರ** ಎಲ್ಲ ದೇಶದಲ್ಲಿ **ಸರ್ವದಾ** ಎಲ್ಲ ಕಾಲದಲ್ಲಿ **ಅನ್ವಯವ್ಯತಿರೇಕಾಭ್ಯಾಂ** ಜಗತ್ತಿನ ಅನ್ವಯವ್ಯತಿರೇಕಗಳ ಜೊತೆಗೆ, **ಯತ್ ಸ್ಯಾತ್** ಯಾವುದು ಇರುವುದೋ, ಅನ್ಯಭಾವಾಭಾವ ಕಾಲದಲ್ಲಿ ದೇಶದಲ್ಲಿ ಅನ್ಯವಿಷಯಕ ಶಕ್ತಿಯುಳ್ಳದ್ದಾಗಿರುವುದೊ ಅದು ಶ್ರೀಹರಿಯ ಸ್ವರೂಪವಾಗಿದೆ. ।। ೩೫ ।।

*'ನೇಹಮಾನಃ' ಎಂಬಲ್ಲಿ ಪ್ರಾರ್ಥಿತವಾದ ವರವನ್ನೀಯುವನು-*

**ಏತನ್ಮತಂ ಮಮಾತಿಷ್ಠ ಪರಮೇಣ ಸಮಾಧಿನಾ ।**
**ಭವಾನ್ ಕಲ್ಪವಿಕಲ್ಪೇಷು ನ ವಿಮುಹ್ಯತಿ ಕರ್ಹಿಚಿತ್ ।। ೩೬ ।।**

**ಪರಮೇಣ ಸಮಾಧಿನಾ** ಅತ್ಯಂತ ಏಕಾಗ್ರವಾದ ಚಿತ್ತದಿಂದ, **ಮಮ** ನನಗೆ, **ಮತಂ** ಅಭಿಪ್ರೇತವಾದ, **ಏತತ್** ಸೃಷ್ಟ್ಯಾದಿಗಳನ್ನು **ಆತಿಷ್ಠ** ಚೆನ್ನಾಗಿ ಮಾಡು, **ಭವಾನ್** ನೀನು, **ಕಲ್ಪವಿಕಲ್ಪೇಷು** ಕಲ್ಪದಲ್ಲಿ ಮಾಡುವ ನಾನಾವಿಧವಾದ ಸೃಷ್ಟಿಯಿಂದ, **ಕರ್ಹಿಚಿತ್** ಎಂದಿಗೂ, **ನ ವಿಮುಹ್ಯತಿ** ಅಹಂಕಾರಾದಿಬಂಧವನ್ನು ಹೊಂದುವುದಿಲ್ಲ

ಭಗವಂತ ಕಾಣಿಸುವುದು ಕಾಣಿಸದಿರುವುದು ಸಹ ಅವನ ಇಚ್ಛೆಯಿಂದಲೇ ಎಂದು ತಿಳಿಸುತ್ತ ಶ್ರೀಹರಿಯು ತನ್ನ ಸ್ವರೂಪವನ್ನು ತಿರೋಧಾನ ಮಾಡುತ್ತಾನೆಂದು ಹೇಳುವರು-

**ಶುಕ ಉವಾಚ -**

**ಸಂಪ್ರದರ್ಶ್ಯೈವಮಜನೋ ಜನಾನಾಂ ಪರಮೇಷ್ಠಿನಃ ।**
**ಪಶ್ಯತಸ್ತಸ್ಯ ತದ್ರೂಪಮಾತ್ಮನೋ ನ್ಯರುಣದ್ಧರಿಃ ॥ ೩೭॥**

**ಅಜನಃ** ಇತರ ಜನವಿಲಕ್ಷಣನಾದ, ಜನನರಹಿತನಾದ, **ಹರಿಃ** ಪರಮಾತ್ಮನು, **ಏವಂ** ಈ ರೀತಿಯಾಗಿ, **ಜನಾನಾಂ** ರುದ್ರಾದಿಗಳಿಗಿಂತ, **ಪರಮೇಷ್ಠಿನಃ** ಉತ್ತಮವಾದ ಆಧಿಪತ್ಯ ದಲ್ಲಿರುವ ಬ್ರಹ್ಮನಿಗೆ, **ಸಂಪ್ರದರ್ಶ್ಯ** ತೋರಿಸಿ, **ತಸ್ಯ ಪಶ್ಯತಃ** ಬ್ರಹ್ಮನು ನೋಡುವಾಗಲೇ, **ಆತ್ಮನಃ** ತನ್ನ, **ತದ್ರೂಪಂ** ತೋರಿಸಿದ ಆ ರೂಪವನ್ನು, **ನ್ಯರುಣತ್** ಅಂತರ್ಹಿತಗೊಳಿಸಿದನು. ॥ ೩೭ ॥

**ಅಂತರ್ಹಿತೇಂದ್ರಿಯಾರ್ಥಾಯ ಹರಯೇಽವಹಿತಾಂಜಲಿಃ ।**
**ಸರ್ವಭೂತಮಯೋ ವಿಶ್ವಂ ಸಸರ್ಜೇದಂ ಸ ಪೂರ್ವವತ್ ॥ ೩೮ ॥**

**ಅಂತರ್ಹಿತೇಂದ್ರಿಯಾರ್ಥಾಯ** ಕಾಣದಾದ ರೂಪ ಉಳ್ಳ **ಹರಯೇ** ಶ್ರೀಹರಿಗೆ, **ಅವಹಿತಾಂಜಲಿಃ** ಕೈಕಟ್ಟಿದವನಾಗಿ, (ಕೈಜೋಡಿಸಿ ನಮಸ್ಕರಿಸಿ) **ಸರ್ವಭೂತಮಯಃ** ಎಲ್ಲರಿಗೂ ಪ್ರಧಾನನಾದ, **ಸಃ** ಬ್ರಹ್ಮನು, **ಪೂರ್ವವತ್** ಹಿಂದಿನ ಕಲ್ಪದಂತೆ, **ಇದಂ ವಿಶ್ವಂ** ಈ ಪ್ರಪಂಚವನ್ನು, **ಸಸರ್ಜ** ಸೃಷ್ಟಿಸಿದನು.

'ಸರ್ವಭೂತಮಯಃ' ಎಂಬಲ್ಲಿ ಮಯಟ್ ಪ್ರತ್ಯಯಕ್ಕೆ ತಾದಾತ್ಮ್ಯ ಎಂಬ ಅರ್ಥ ಅಲ್ಲ ಎಂದು ತಿಳಿಸಲು ವ್ಯಾಖ್ಯಾನಿಸುವರು-

**ತಾತ್ಪರ್ಯ- 'ಸರ್ವಸ್ಯಾಽಪಿ ಪ್ರಧಾನತ್ವಾತ್ ಸ ಸರ್ವಮಯ ಈರ್ಯತೇ ॥ -ಇತಿ ಚ**

ಎಲ್ಲರಿಗಿಂತ ಪ್ರಧಾನನಾದುದರಿಂದ ಬ್ರಹ್ಮನನ್ನು ಸರ್ವಮಯ ಎಂದು ವ್ಯವಹರಿಸುತ್ತಾರೆ. ॥ ೩೮ ॥

*ಸೃಷ್ಟಿಯ ನಂತರ ಹಿಂದೆ ಹೇಳಿದ ನಾರದರ ಸಂವಾದವಾಯಿತು ಎಂದು ಐದು ಶ್ಲೋಕಗಳಿಂದ ಹೇಳುವರು-*

**ಪ್ರಜಾಪತಿರ್ಧರ್ಮಪತಿರೇಕದಾ ನಿಯಮಾನ್ಯಮಾನ್ ।**
**ಭದ್ರಂ ಪ್ರಜಾನಾಮನ್ವಿಚ್ಛನ್ನತಿಷ್ಠತ್ ಸ್ವಾರ್ಥಕಾಮ್ಯಯಾ ॥ ೩೯ ॥**

**ಪ್ರಜಾಪತಿಃ** ಪ್ರಜೆಗಳಿಗೆ ಒಡೆಯನಾದ, **ಧರ್ಮಪತಿಃ** ಧರ್ಮರಕ್ಷಕನಾದ ಬ್ರಹ್ಮದೇವನು, **ಏಕದಾ** ಒಂದು ಸಲ, **ಪ್ರಜಾನಾಂ** ಜನರಿಗೆ, **ಭದ್ರಂ ಅನ್ವಿಚ್ಛನ್** ಕಲ್ಯಾಣವಾಗಲಿ ಎಂಬ ಇಚ್ಛೆಯುಳ್ಳವನಾಗಿ, **ಸ್ವಾರ್ಥಕಾಮ್ಯಯಾ** ತನಗೆ ಬೇಕಾದ ಭಗವಂತನ ಪ್ರೀತಿಗಾಗಿ, **ನಿಯಮಾನ್** ತಪಸ್ಸಂತೋಷ ಆಸ್ತಿಕ್ಯಂ ದಾನಮೀಶ್ವರಪೂಜನಮ್ । ಸಿದ್ಧಾಂತಶ್ರವಣಂ ಚೈವ ಹ್ರೀರ್ಮತಿಶ್ಚ ತಪೋ ವ್ರತಮ್ ॥ ಏತೇ ತು ನಿಯಮಾಃ ಪ್ರೋಕ್ತಾಃ ... ॥ ಎಂದು ಸ್ಮೃತಿಯಲ್ಲಿ ಹೇಳಿದ ತಪಸ್ಸು ಮುಂತಾದ ನಿಯಮಗಳನ್ನೂ, **ಯಮಾನ್** 'ಅಹಿಂಸಾ ಸತ್ಯಮಸ್ತೇಯಂ ಬ್ರಹ್ಮಚರ್ಯಂ ದಯಾಽಽರ್ಜವಮ್ । ಕ್ಷಮಾ ಧೃತಿರ್ಮಿತಾಹಾರಃ ಶೌಚಂ ಚೈತೇ ಯಮಾ ದಶ ॥ ಎಂದು ಸ್ಮೃತಿಯಲ್ಲಿ ಉಕ್ತವಾದ ಅಹಿಂಸಾದಿ ಯಮಗಳನ್ನೂ, **ಆತಿಷ್ಠತ್** ಅನುಷ್ಠಾನ ಮಾಡಿದನು. ॥ ೩೯ ॥

**ತಂ ನಾರದಃ ಪ್ರಿಯತಮೊ ರಿಕ್ಥಾದಾನಾಮನುವ್ರತಃ ।**
**ಶುಶ್ರೂಷಮಾಣಃ ಶೀಲೇನ ಪ್ರಶ್ರಯೇಣ ದಮೇನ ಚ ॥ ೪೦ ॥**

**ತಂ** ಬ್ರಹ್ಮದೇವರನ್ನು, **ರಿಕ್ಥಾದಾನಾಂ** ತಂದೆಯ ಹಣವನ್ನು ಪಡೆಯುವವರಲ್ಲಿ ಅಂದರೆ ಮಕ್ಕಳಲ್ಲಿ, **ಪ್ರಿಯತಮಃ** ಅಂತ್ಯಂತ ಪ್ರಿಯನಾದ, **ನಾರದಃ** ನಾರದರು, **ಶೀಲೇನ** ಒಳ್ಳೆಯ ನಡತೆಯಿಂದ, **ಪ್ರಶ್ರಯೇಣ** ವಿನಯದಿಂದ, **ದಮೇನ** ಇಂದ್ರಿಯನಿಗ್ರಹದಿಂದ, **ಅನುವ್ರತಃ** ಅನುಸರಿಸಿದವನಾಗಿ **ಶುಶ್ರೂಷಮಾಣಃ** ಸೇವಿಸುವವನಾಗಿ, ಬ್ರಹ್ಮದೇವರನ್ನು ಸಂತೋಷಪಡಿಸಿದನು ಎಂದು ಮುಂದಿನ ಶ್ಲೋಕದಲ್ಲಿ ಅನ್ವಯ ಮಾಡಿಕೊಳ್ಳಬೇಕು. ॥ ೪೦ ॥

**ಮಾಯಾಂ ವಿವಿದಿಷುರ್ವಿಷ್ಣೋಃ ಮಾಯೇಶಸ್ಯ ಮಹಾಮುನಿಃ ।**
**ಮಹಾಭಾಗವತೋ ರಾಜನ್ ಪಿತರಂ ಪರ್ಯತೋಷಯತ್ ॥ ೪೧ ॥**

**ಹೇ ರಾಜನ್** ರಾಜನಾದ ಪರೀಕ್ಷಿತನೇ, **ಮಹಾಭಾಗವತಃ** ಮಹಾಭಗವದ್ಭಕ್ತನಾದ, **ಮಹಾಮುನಿಃ** ನಾರದರು, **ಮಾಯೇಶಸ್ಯ** ಬ್ರಹ್ಮಾದಿಗಳ ಮಾಹಾತ್ಮ್ಯಕ್ಕೆ ನಿಯಾಮಕನಾದ, **ವಿಷ್ಣೋಃ** ಪರಮಾತ್ಮನ, **ಮಾಯಾಂ** ಮಾಹಾತ್ಮ್ಯವನ್ನು, **ವಿವಿದಿಷುಃ** ತಿಳಿಯಲು ಇಚ್ಛಿಸುವವನಾಗಿ, **ಪಿತರಂ** ತಂದೆಯಾದ ಬ್ರಹ್ಮದೇವರನ್ನು **ಪರ್ಯತೋಷಯತ್** ಸಂತೋಷಪಡಿಸಿದನು. ॥ ೪೧ ॥

ಇಲ್ಲಿ ಮಾಯಾಶಬ್ದಕ್ಕೆ ಅನಿರ್ವಾಚ್ಯವಾದ ಅವಿದ್ಯಾ ಎಂದು ಅರ್ಥವಲ್ಲ ಎಂದು ತಿಳಿಸಲು ಮಾಯಾಶಬ್ದದ ಅರ್ಥವನ್ನು ತಿಳಿಸುವರು-

**ತಾತ್ಪರ್ಯ- ಮಾಯಾಂ ಮಾಹಾತ್ಮ್ಯಂ ವಿವಿದಿಷುಃ ।**

ಪ್ರಕೃತ ಮಾಯಾ ಶಬ್ದಕ್ಕೆ ಮಾಹಾತ್ಮ್ಯ ಎಂದು ಅರ್ಥ. ಭಗವಂತನ ಮಾಹಾತ್ಮ್ಯವನ್ನು ತಿಳಿಯಲು ಇಚ್ಛಿಸುವವನು ಎಂಬ ಅರ್ಥವು 'ಮಾಯಾಂ ವಿವಿದಿಷುಃ' ಎಂಬುದಕ್ಕೆ ಬರುತ್ತದೆ.

ಹಾಗಾದರೆ 'ಮಾಯೇಶಸ್ಯ' ಎಂಬುದು ಅನುಪಪನ್ನ ಎಂದರೆ ಅಲ್ಲಿ ಅನ್ಯಶಬ್ದಾಧ್ಯಾಹಾರ ವಿವಕ್ಷಿತವಾಗಿದೆ. ಎಂದು ತಿಳಿಸುವರು-

**'ಅನ್ಯೇಷಾಂ ಮಾಹಾತ್ಮ್ಯಪತೇಃ ।'**

**ಮುಖ್ಯತೋ ವಿಷ್ಣುಮಾಹಾತ್ಮ್ಯಂ ಮಾಯಾಶಬ್ದೋದಿತಂ ಭವೇತ್ ।**
**ಪ್ರಧಾನತ್ವಾಚ್ಚ ಮಾತೃತ್ವಾತ್ ಮೇಯತ್ವಂ ಚೈವ ತಸ್ಯ ಹಿ ॥ -ಇತಿ ಚ**

'ಮಾಯೇಶಸ್ಯ' ಎಂಬುದಕ್ಕೆ ಬ್ರಹ್ಮ-ರುದ್ರಾದಿಗಳ ಮಾಹಾತ್ಮ್ಯಕ್ಕೆ ಸ್ವಾಮಿಯಾದವನು ಎಂದು ಅರ್ಥ. ಶ್ರೀವಿಷ್ಣುವಿನ ಮಾಹಾತ್ಮ್ಯವು ಎಲ್ಲದಕ್ಕಿಂತಲೂ ಪ್ರಧಾನವಾಗಿ-ರುವುದರಿಂದಲೂ ಎಲ್ಲವನ್ನು ತಿಳಿಯುವುದರಿಂದಲೂ ಎಲ್ಲರಿಂದಲೂ ತಿಳಿಯಲ್ಪಡುವುದರಿಂದಲೂ ಮುಖ್ಯವಾಗಿ ವಿಷ್ಣುಮಹಿಮೆಯೇ ಮಾಯಾ ಎನಿಸುತ್ತದೆ. ಅನಿರ್ವಾಚ್ಯವಾದ ಅವಿದ್ಯಾ ಅಲ್ಲ. ॥ ೪೧ ॥

ತಂದೆಯನ್ನು ಸಂತೋಷಪಡಿಸುವುದರಿಂದ ಪ್ರಾಪ್ಯವಾಗುವ ಫಲವನ್ನು ಹೇಳುವರು-

**ತುಷ್ಟಂ ನಿಶಾಮ್ಯ ಪಿತರಂ ಲೋಕಾನಾಂ ಪ್ರಪಿತಾಮಹಮ್ ।**
**ದೇವರ್ಷಿಃ ಪರಿಪಪ್ರಚ್ಛ ಭವಾನ್ ಯನ್ಮಾಽನುಪೃಚ್ಛತಿ ॥ ೪೨ ॥**

**ಲೋಕಾನಾಂ** ಪ್ರಪಂಚಕ್ಕೆ, **ಪ್ರಪಿತಾಮಹಮ್** ಅಜ್ಜನ ತಂದೆಯಾದ, **ಪಿತರಂ** ತನ್ನ ತಂದೆಯಾದ ಬ್ರಹ್ಮನನ್ನು, **ತುಷ್ಟಂ ನಿಶಾಮ್ಯ** ಸಂತುಷ್ಟನಾದುದನ್ನು ಕಂಡು, **ದೇವರ್ಷಿಃ** ನಾರದರು, **ಭವಾನ್** ನೀನು, **ಮಾ** ನನ್ನನ್ನು, **ಯತ್** ಯಾವುದನ್ನು, **ಅನುಪೃಚ್ಛತಿ** ಕೇಳುವಿಯೋ, **ತತ್** ಅದನ್ನು, **ಪರಿಪಪ್ರಚ್ಛ** ಕೇಳಿದನು. ॥ ೪೨ ॥

**ತಸ್ಮಾ ಇದಂ ಭಾಗವತಂ ಪುರಾಣಂ ದಶಲಕ್ಷಣಮ್ ।**
**ಪ್ರೋಕ್ತಂ ಭಗವತಾ ಪ್ರಾಹ ಪ್ರೀತಃ ಪುತ್ರಾಯ ಭೂತಕೃತ್ ॥ ೪೩ ॥**

**ಭೂತಕೃತ್** ಜಗತ್ತನ್ನು ರಚಿಸುವ ಬ್ರಹ್ಮನು, **ಪುತ್ರಾಯ** ನಾರದರಿಗೆ, **ಪ್ರೀತಃ** ಸಂತುಷ್ಟನಾಗಿ, **ಭಗವತಾ ಪ್ರೋಕ್ತಂ** ಶ್ರೀಹರಿಯಿಂದ ತನಗೆ ಹೇಳಲ್ಪಟ್ಟ **ದಶಲಕ್ಷಣಂ** ಲಕ್ಷಣೀಯಗಳಾದ ಹತ್ತು ಅರ್ಥಗಳುಳ್ಳ **ಇದಂ ಭಾಗವತಂ ಪುರಾಣಂ** ಈ ಭಾಗವತಪುರಾಣವನ್ನು **ತಸ್ಮೈ** ನಾರದರಿಗೆ, **ಪ್ರಾಹ** ಹೇಳಿದನು. ॥ ೪೩ ॥

ನಾರದನು ಮಾಡಿದ 'ಇತಿ ಸಂಕಲ್ಪ್ಯ ವರ್ಣಯ' ಎಂಬ ತಂದೆಯ ಆಜ್ಞಾಪಾಲನ ಪ್ರಕಾರವನ್ನು ಹೇಳುವರು-

**ನಾರದಃ ಪ್ರಾಹ ಮುನಯೇ ಸರಸ್ವತ್ಯಾಸ್ತಟೇ ನೃಪ ।**
**ಧ್ಯಾಯತೇ ಬ್ರಹ್ಮ ಪರಮಂ ವ್ಯಾಸಾಯಾಽಮಿತತೇಜಸೇ ॥ ೪೪ ॥**

**ಹೇ ನೃಪ** ಹೇ ರಾಜನೇ, **ನಾರದಃ** ನಾರದರು, **ಸರಸ್ವತ್ಯಾಃ** ಸರಸ್ವತೀನದಿಯ, **ತಟೇ** ದಡದಲ್ಲಿ, **ಪರಮಂ ಬ್ರಹ್ಮ ಧ್ಯಾಯತೇ** ಪರಬ್ರಹ್ಮನನ್ನು ಧ್ಯಾನಿಸುವ, **ಅಮಿತತೇಜಸೇ** ಅಪರಿಮಿತವಾದ ಸಾಮರ್ಥ್ಯ ಉಳ್ಳ, **ಮುನಯೇ** ಮಹಾಜ್ಞಾನಿಯಾದ, ('ವೇತ್ತಾ ಸರ್ವಸ್ಯ ವೇದ್ಯಸ್ಯ ಮುನಿರಿತ್ಯುಚ್ಯತೇ' ವೇದ್ಯವಾದ ಎಲ್ಲ ವಿಷಯಗಳನ್ನು ತಿಳಿದವರಿಗೆ ಮುನಿ ಎಂದು ಕರೆಯುತ್ತಾರೆ) **ವ್ಯಾಸಾಯ** ವೇದವ್ಯಾಸರಿಗೆ, **ಪ್ರಾಹ** ಹೇಳಿದನು. ವ್ಯಾಸರು ನನಗೆ ಹೇಳಿದರು ನಾನು ನಿನಗೆ ಹೇಳುವೆನು ಎಂಬುದನ್ನು 'ಪಿತುರ್ದ್ವೈಪಾಯನಾದಹಂ । ತದಹಂ ತೇಽಭಿಧಾಸ್ಯಾಮಿ । ಎಂದು ಹಿಂದೆಯೇ ಹೇಳಿದ್ದರಿಂದ ಇಲ್ಲಿ ಮತ್ತೆ ಹೇಳಲಿಲ್ಲ.

ಈ ಶ್ಲೋಕದಲ್ಲಿ 'ಮುನಯೇ' 'ಅಮಿತತೇಜಸೇ' ಎಂಬ ವಿಶೇಷಣಗಳಿಂದಲೇ ವ್ಯಾಸರು ನಾರದರಿಂದ ಕೇಳಿದ್ದು ದುಷ್ಟರಿಗೆ ಮೋಹವನ್ನುಂಟು ಮಾಡಲು, ನಾರದಾದಿಶಿಷ್ಟರನ್ನು ಅನುಗ್ರಹಿಸಲು ಎಂದು ಮೂಲದಲ್ಲಿ ಸೂಚಿತವಾದುದನ್ನೇ ಪ್ರಮಾಣದಿಂದ ದೃಢಪಡಿಸುವರು-

ತಾತ್ಪರ್ಯ- ಹರಿರ್ವ್ಯಾಸಾದಿರೂಪೇಣ ಸರ್ವಜ್ಞೋಽಪಿ ಸ್ವಯಂ ಪ್ರಭುಃ ।
ಶೃಣೋತಿ ನಾರದಾದಿಭ್ಯೋ ಮೋಹಾಯೈಷಾಂ ಪ್ರಸಿದ್ಧಯೇ ॥ -ಇತಿ ಪಾದ್ಮೇ

ಸರ್ವರಿಗೂ ಸ್ವಾಮಿಯಾದ ಶ್ರೀಹರಿಯು ಸ್ವಯಂ ಸರ್ವಜ್ಞನಾದರೂ ವ್ಯಾಸಮೊದಲಾದ ರೂಪಗಳಿಂದ ಅಯೋಗ್ಯಜನರಿಗೆ ಮೋಹ ಬರುವುದಕ್ಕಾಗಿಯೂ, ನಾರದಾದಿಗಳಿಗೆ ಪ್ರಸಿದ್ಧಿ ಬರುವುದಕ್ಕಾಗಿಯೂ ನಾರದಾದಿಗಳಿಂದ ಭಾಗವತ-ಪುರಾಣಾದಿಗಳನ್ನು ಕೇಳುತ್ತಾನೆ. ಎಂದು ಪಾದ್ಮಪುರಾಣದಲ್ಲಿ ಹೇಳಿದೆ. ॥ ೪೪ ॥

*ಈಗ ಪರೀಕ್ಷಿತನ ಪ್ರಶ್ನೆಗಳನ್ನು ಪರಿಹರಿಸಲು ಶ್ರೀಭಾಗವತವ್ಯಾಖ್ಯಾನವನ್ನು ಪ್ರತ್ಯೇಕ ಪ್ರಶ್ನೆಗಳ ಉತ್ತರವನ್ನು ಪ್ರತಿಜ್ಞೆ ಮಾಡುವರು-*

**ಯದುತಾಽಹಂ ತ್ವಯಾ ಪೃಷ್ಟೋ ವೈರಾಜಾತ್ ಪುರುಷಾದಿದಮ್ ।**
**ಯಥಾಸೀತ್ತದುಪಾಖ್ಯಾಸ್ಯೇ ಪ್ರಶ್ನಾನನ್ಯಾಂಶ್ಚ ಕೃತ್ಸ್ನಶಃ ॥ ೪೫ ॥**

**ಯತ್ ಅಹಂ ತ್ವಯಾ ಪೃಷ್ಟಃ** ನಾನು ನಿನ್ನಿಂದ ಯಾವುದನ್ನು ಪ್ರಶ್ನಿಸಿಲ್ಪಟ್ಟಿರುವೆನೋ, ಅಂದರೇ 'ಪುರುಷಾವಯವೈಃ ಲೋಕಾಃ ಸಪಾಲಾಃ ಪೂರ್ವಕಲ್ಪಿತಾಃ' ಮುಂತಾಗಿ **ವೈರಾಜಾತ್ ಪುರುಷಾತ್** ವಿರಾಟ್ ಪುರುಷನಿಂದ, **ಇದಂ** ಈ ಪ್ರಪಂಚವು, **ಯಥಾಸೀತ್** ಹೇಗೆ ಜನಿಸಿತು ಎಂದೇನು ಪ್ರಶ್ನಿಸಿದ್ದೆಯೋ, **ತದುಪಾಖ್ಯಾಸ್ಯೇ** ಅದನ್ನು ಭಾಗವತ ಹೇಳುವ ಮೂಲಕ ತಿಳಿಸುವೆನು, **ಅನ್ಯಾಂಶ್ಚ** ಬೇರೆ, **ಪ್ರಶ್ನಾನ್** ಪ್ರಶ್ನೆಗಳನ್ನು, **ಕೃತ್ಸ್ನಶಃ** ಸಂಪೂರ್ಣವಾಗಿ, **ಉಪಾಖ್ಯಾಸ್ಯೇ** ಹೇಳುವೆನು.

ವಿಜಯಧ್ವಜರ ಪ್ರಕಾರ, **ಯತ್** ಯಾವ ಪುರಾಣವನನ್ನು ಕೇಳಿದ್ದೆಯೋ, ವ್ಯಾಸಕೃತವಾದ ಆ ಪುರಾಣವನ್ನು ಹೇಳುವೆ. ಹೇಳುವಾಗ ಮುಖ್ಯವಾದ ವಿರಿಂಚನಲ್ಲಿರುವ ವಿರಾಟ್‌ನಾಮಕ ಶ್ರೀಹರಿಯಿಂದ ಈ ವಿಶ್ವ ಹೇಗೆ ಜನಿಸಿತು ಎಂದು ಮೊದಲಿಗೆ ಹೇಳುವೆ. **ಉತ** ಮತ್ತು, ಉಳಿದ ಪ್ರಶ್ನೆಗಳನ್ನೆಲ್ಲ ಪರಿಹರಿಸುವೆ ಎಂದರ್ಥ.

ಇಲ್ಲಿ ವಿಶೇಷವಾಗಿ ಪ್ರಕಾಶಮಾನವಾದ್ದರಿಂದ ವಿರಾಟ್ ಎಂದರೆ ಬ್ರಹ್ಮಾಂಡ. ಅದರ ಸಂಬಂಧಿಯಾದ ಪುರುಷ ವೈರಾಜ ಎಂದರೆ ಬ್ರಹ್ಮದೇವರು ಎಂಬ ಪ್ರತೀತಿಯನ್ನು ನಿರಾಕರಿಸಲು ವೈರಾಜ ಶಬ್ದವಾಚ್ಯ ಪುರುಷನನ್ನು ಪ್ರಮಾಣದಿಂದ ತಿಳಿಸುವರು-

ತಾತ್ಪರ್ಯ- ವಿರಾಡ್ ಬ್ರಹ್ಮಾ ಸಮುದ್ದಿಷ್ಟಃ ತದ್ಗತಃ ಪರಮೋ ಯತಃ ।
ಅತೋ ವೈರಾಜಮಿತ್ಯೇನಮಾಹುರೀಶತ್ವತೋ ವಿರಾಟ್ ॥ -ಇತಿ ಬೃಹತ್ಸಂಹಿತಾಯಾಮ್

ಚತುರ್ಮುಖಬ್ರಹ್ಮನು ಸರ್ವರಿಗೆ ನಿಯಾಮಕನಾದ್ದರಿಂದ ವಿರಾಟ್ ಎನಿಸುತ್ತಾನೆ. ಆ ಚತುರ್ಮುಖನಲ್ಲಿ ಲಕ್ಷ್ಮೀಪತಿಯಾದ ಶ್ರೀಹರಿಯು ನಿಯಾಮಕನಾಗಿದ್ದಾನೆ. ಆದಕಾರಣ ಈ ಶ್ರೀಹರಿಯನ್ನು ವೈರಾಜನೆಂದು ಹೇಳುತ್ತಾರೆ. ಹೀಗೆಂದು ಬೃಹತ್ಸಂಹಿತೆಯಲ್ಲಿ ಹೇಳಿದೆ. (ಮಾಯಾಯಾ ಪರಃ ಪರಮಃ) ರಾಜಶಬ್ದಪರ್ಯಾಯವಾದ ರಾಟ್ ಶಬ್ದ ಈಶತ್ವವಾಚಕವಾಗಿದೆ. ವಿಶಬ್ದ ವೈಶಿಷ್ಟ್ಯವಾಚಕವೆಂದು ಭಾವ.

॥ ಇಲ್ಲಿಗೆ ಒಂಬತ್ತನೆ ಅಧ್ಯಾಯ ಸಮಾಪ್ತವಾಯಿತು ॥

# ಅಥ ದಶಮೋಽಧ್ಯಾಯಃ

**ಸಾರಾಂಶ**

**ಸರ್ಗ** ಬ್ರಹ್ಮಾಂಡದ ಹೊರಗಿನ ಸೃಷ್ಟಿ **ವಿಸರ್ಗ** ಬ್ರಹ್ಮಾಂಡದ ಒಳಗಿನ ಸೃಷ್ಟಿ **ಸ್ಥಾನ** ದುಷ್ಟಶಿಕ್ಷಣ-ಶಿಷ್ಟರಕ್ಷಣ, **ಪೋಷಣ** ಭಕ್ತರಲ್ಲಿ ದೇವರು ಮಾಡುವ ಅನುಗ್ರಹ, **ಊತಿ** ಜೀವರು ಮಾಡುವ ಕರ್ಮಗಳು, **ಮನ್ವಂತರಕಥಾ** ಮನುಗಳ ಮನ್ವಂತರಗಳಲ್ಲಿಯ ಧರ್ಮಗಳ ವಿಚಾರ, **ಈಶಕಥಾ** ಭಗವಂತನ ಅವತಾರಗಳ ಕಥೆ, **ನಿರೋಧ** ದೇವರು ಮಾಡುವ ಪ್ರಲಯದ ವಿಚಾರ, **ಮುಕ್ತಿ** ಸ್ವರೂಪಾನಂದಾವಿರ್ಭಾವ, **ಆಶ್ರಯ** ಭಗವಂತನ ಸರ್ವಾಶ್ರಯತ್ವ ಈ ಹತ್ತು ವಿಷಯಗಳನ್ನು ಪುರಾಣವು ನಿರೂಪಿಸಬೇಕು. ಪ್ರಕೃತ ಈ ಹತ್ತು ವಿಷಯಗಳನ್ನು ತಿಳಿಸುತ್ತದೆ ಭಾಗವತಪುರಾಣ. ಹತ್ತನೆಯದಾದ ಸರ್ವಾಶ್ರಯತ್ವ ಎಂಬ ಪ್ರಮೇಯವನ್ನು ದೃಢಪಡಿಸುವುದಕ್ಕಾಗಿಯೇ ಉಳಿದ ಒಂಭತ್ತು ವಿಷಯಗಳನ್ನು ಪುರಾಣವು ಪ್ರತಿಪಾದಿಸುತ್ತದೆ.

ಪುರುಷನಾಮಕನಾದ ಪರಮಾತ್ಮನು ತಾನು ಸೃಷ್ಟಿಸಿದ ತತ್ತ್ವಗಳಿಂದ ಸಹಿತನಾಗಿ ಬ್ರಹ್ಮಾಂಡವನ್ನು ಪ್ರವೇಶಿಸುತ್ತಾನೆ. ಬ್ರಹ್ಮಾಂಡವನ್ನು ಇಬ್ಭಾಗ ಮಾಡಿದ ಮೇಲೆ ತಾನಿರುವುದಕ್ಕಾಗಿ ನೀರನ್ನು ಸೃಷ್ಟಿಮಾಡಿಕೊಂಡ. ತಾನು ಸೃಷ್ಟಿಸಿದ ಆ ಜಲದಲ್ಲಿ ದೇವರು ದೇವಮಾನದ ಸಾವಿರವರ್ಷಗಳ ವರೆಗೆ ವಾಸಿಸುತ್ತಾನೆ. ಆದ್ದರಿಂದ ದೇವರು ನಾರಾಯಣ ಎಂದು ಪ್ರಸಿದ್ಧನಾದ. ನಾಶವಿಲ್ಲದಿದ್ದುದರಿಂದ ಪರಮಾತ್ಮ ನರ. ನರಸಂಬಂಧಿಯಾದುದರಿಂದ ಜಲವು ನಾರ. ಈ ನಾರ ನೀರನ್ನು ವಾಸಸ್ಥಾನವಾಗಿ ಮಾಡಿಕೊಂಡ ದೇವರು. ಆದ್ದರಿಂದ ಪರಮಾತ್ಮ ನಾರಾಯಣ ಎನಿಸುತ್ತಾನೆ. ಬ್ರಹ್ಮದೇವರ ದೇಹದಲ್ಲಿ ಸಂಚಾರಮಾಡುತ್ತಿರುವ ಪರಮಾತ್ಮನಿಂದಲೇ ಮುಖ್ಯಪ್ರಾಣದೇವರು ಜನಿಸಿದರು. ಬ್ರಹ್ಮದೇವರ ಇಚ್ಛೆಗಳಿಗೆ ಅನುಗುಣವಾಗಿ ಆಯಾ

ಅವಯವಗಳು ಅವರಿಗೆ ಉತ್ಪನ್ನವಾದವು. ಆದ್ದರಿಂದಲೇ ಜೀವರಾಶಿಗಳಿಗೆ ಬ್ರಹ್ಮದೇವರ ಇಚ್ಛೆಗಳಿಗೆ ಅನುಗುಣವಾದ ಹಸಿವೆ-ನೀರಡಿಕೆ ಮೊದಲಾದ ಭಾವನೆಗಳು ಬಂದವು.

ಸಾತ್ತ್ವಿಕಸಾತ್ತ್ವಿಕ-ಸಾತ್ತ್ವಿಕರಾಜಸ-ಸಾತ್ತ್ವಿಕತಾಮಸ, ರಾಜಸಸಾತ್ತ್ವಿಕ-ರಾಜಸರಾಜಸ-ರಾಜಸತಾಮಸ, ತಾಮಸಸಾತ್ತ್ವಿಕ-ತಾಮಸರಾಜಸ- ತಾಮಸತಾಮಸ ಎಂದು ಜೀವರು ಭಿನ್ನರಾಗಿದ್ದಾರೆ. ಇಲ್ಲಿ ರಾಜಸಸಾತ್ತ್ವಿಕರ ತನಕ ಜೀವರು ಮುಕ್ತರಾಗಿ ಸ್ವರೂಪಾನಂದ-ಸುಖವನ್ನು ಅನುಭವಿಸುತ್ತಾರೆ. ಉಳಿದ ರಾಜಸರಿಂದ ತ್ರಿವಿಧತಾಮಸರಿಂದ ಸಾತ್ತ್ವಿಕರು ಪೀಡೆಗೆ ಒಳಗಾದಾಗ ಅವರನ್ನು ರಕ್ಷಿಸುವುದಕ್ಕಾಗಿ ಪರಮಾತ್ಮ ಅವತರಿಸುತ್ತಾನೆ.

*ಈ ಅಧ್ಯಾಯದಲ್ಲಿ ವೈರಾಜನಾಮಕನಾದ ಶ್ರೀಹರಿಯು ಮಾಡಿದ ಸಕಲಜಗತ್ಸೃಷ್ಟಿಯನ್ನು ಹೇಳುವರು. ಹತ್ತುಲಕ್ಷಣಗಳುಳ್ಳ ಪುರಾಣವನ್ನು ಹೇಳಿದರು ಎಂದು ಹಿಂದೆ ತಿಳಿಸಿದ ಪುರಾಣದ ಹತ್ತು ಲಕ್ಷಣಗಳನ್ನು ಮೊದಲಿಗೆ ತಿಳಿಸುತ್ತಿದ್ದಾರೆ-*

**ಶ್ರೀ ಶುಕ ಉವಾಚ-**

**ಅತ್ರ ಸರ್ಗೋ ವಿಸರ್ಗಶ್ಚ ಸ್ಥಾನಂ ಪೋಷಣಮೂತಯಃ ।**
**ಮನ್ವಂತರೇಶಾನುಕಥಾ ನಿರೋಧೋ ಮುಕ್ತಿರಾಶ್ರಯಃ ॥ ೧ ॥**

**ಅತ್ರ** ಶ್ರೀಮದ್ಭಾಗವತದಲ್ಲಿ **ಸರ್ಗಃ** ಸೃಷ್ಟಿಯು, **ವಿಸರ್ಗಃ** ವಿಶಿಷ್ಟವಾದ ಸೃಷ್ಟಿಯು, **ಸ್ಥಾನಂ** ಭಗವಂತನ ಉತ್ಕರ್ಷವು, **ಪೋಷಣಂ** ಭಗವಂತನು ಮಾಡುವ ಅನುಗ್ರಹವು, **ಊತಯಃ** ಜೀವರು ಮಾಡುವ ಕರ್ಮಗಳು, **ಮನ್ವಂತರೇಶಾನುಕಥಾ** ಆಯಾ ಮನ್ವಂತರಗಳಲ್ಲಿ ಸಜ್ಜನರು ಮಾಡುವ ಧರ್ಮಗಳ ಮತ್ತು ಭಗವದವತಾರಗಳ ಕಥೆಯು, **ನಿರೋಧಃ** ಪ್ರಲಯಕಾಲೀನವಾದ ಜೀವರ ನಿದ್ರೆ, **ಮುಕ್ತಿಃ** ಸ್ವರೂಪಾವಿರ್ಭಾವ-ರೂಪವಾದ ಮುಕ್ತಿಯು, **ಆಶ್ರಯಃ** ಎಲ್ಲದಕ್ಕೂ ಆಶ್ರಯನಾದ ಪರಮಾತ್ಮ, ಎಂಬ ಈ ಹತ್ತು ವಿಷಯಗಳ ಪ್ರತಿಪಾದನೆ ಎಲ್ಲಿ ಇದೆಯೋ ಅದುವೇ ಪುರಾಣವೆಂದು ತಿಳಿಯಬೇಕು. ॥ ೧ ॥

ಹಾಗಾದರೆ ಈಗ ತಿಳಿದಂತೆ ಅರ್ಥಭೇದವಿರುವುದರಿಂದ ಪುರಾಣಕ್ಕೆ ಏಕವಾಕ್ಯತೆ ಬರಲಾರದು ಎಂದು ಶಂಕಿಸಬಾರದು. ಅವಾಂತರವಾದ ವಿಷಯಗಳು ಭಿನ್ನವಾಗಿದ್ದರೂ ಕೂಡಾ ಪ್ರಧಾನವಾದ ವಿಷಯವು ಒಂದೇ ಇರುವುದರಿಂದ ಏಕವಾಕ್ಯತೆ ಇದೆ ಎಂದು ಹೇಳುವರು-

**ದಶಮಸ್ಯ ವಿಶುದ್ಧ್ಯರ್ಥಂ ನವಾನಾಮಿಹ ಲಕ್ಷಣಮ್ ।**
**ವರ್ಣಯಂತಿ ಮಹಾತ್ಮಾನಃ ಶ್ರುತೇನಾಽರ್ಥೇನ ಚಾಽಂಜಸಾ ॥ ೨ ॥**

**ದಶಮಸ್ಯ** ಹತ್ತನೆಯದಾದ ಮುಕ್ತಾಮುಕ್ತಪ್ರಪಂಚಕ್ಕೆ ಆಶ್ರಯನಾದ ಶ್ರೀಹರಿಯ **ವಿಶುದ್ಧ್ಯರ್ಥಂ** ತತ್ತ್ವವನ್ನು (ಸ್ವರೂಪವನ್ನು) ನಿಶ್ಚಯಿಸುವುದಕ್ಕಾಗಿ, **ನವಾನಾಂ** ಸರ್ಗಮುಂತಾದ ಒಂಬತ್ತರ ಸ್ವರೂಪವನ್ನು **ಮಹಾತ್ಮಾನಃ** ಪುರಾಣವ್ಯಾಖ್ಯಾತೃಗಳು, **ಶ್ರುತೇನ ಅರ್ಥೇನ** ಸಂಪ್ರದಾಯಪೂರ್ವಕವಾಗಿ ಅರ್ಥವನ್ನು ಕೇಳಿ, **ಚ** ಉಪಕ್ರಮಾದಿ ಯುಕ್ತಿಗಳ ಬಲದಿಂದಲೂ, **ವರ್ಣಯಂತಿ** ಹೇಳುವರು. ।। ೨ ।।

*ಸರ್ಗಮುಂತಾದ ಶಬ್ದಗಳ ಅರ್ಥವನ್ನು ತಾವೇ ತಿಳಿಸುವರು-*

**ಭೂತಮಾತ್ರೇಂದ್ರಿಯಧಿಯಾಂ ಜನ್ಮ ಸರ್ಗ ಉದಾಹೃತಃ ।**
**ಬ್ರಹ್ಮಣೋ ಗುಣವೈಷಮ್ಯಾದ್ವಿಸರ್ಗಃ ಪೌರುಷಃ ಸ್ಮೃತಃ ।। ೩ ।।**

**ಬ್ರಹ್ಮಣಃ** ಪರಬ್ರಹ್ಮನಿಂದ ಹುಟ್ಟಿದ, **ಗುಣವೈಷಮ್ಯಾತ್** ಗುಣವೈಷಮ್ಯವೆಂದು ಹೆಸರುಳ್ಳ ಮಹತ್ತತ್ವದಿಂದ ಅಹಂಕಾರದ್ವಾರಾ, **ಭೂತಮಾತ್ರೇಂದ್ರಿಯಧಿಯಾಂ** ಪಂಚಮಹಾಭೂತಗಳು ತನ್ಮಾತ್ರಾಗಳು ಇಂದ್ರಿಯಗಳು ಬುದ್ಧಿ ಉಪಲಕ್ಷಣಯಾ ಬ್ರಹ್ಮಾಂಡ ಇವುಗಳ, **ಯಜ್ಜನ್ಮ** ಏನು ಉತ್ಪತ್ತಿ ಇದೆಯೋ ಅದು, **ಸರ್ಗಃ ಉದಾಹೃತಃ** ಸರ್ಗವೆಂದು ಶ್ರುತ್ಯಾದಿಗಳಲ್ಲಿ ಹೇಳಲ್ಪಡುವುದು (**ಅಂಡೇ**) ಬ್ರಹ್ಮಾಂಡದಲ್ಲಿ **ಬ್ರಹ್ಮಣಃ** ವಿರಾಣ್ಣಾಮಕನಾದ ಶ್ರೀಹರಿಯ, (ಪುರುಷನ) ಹದಿನಾಲ್ಕು ಲೋಕರೂಪವಾದ ದೇಹದಿಂದ ಆದ ಸೃಷ್ಟಿಯು, **ವಿಸರ್ಗಃ** ವಿಸರ್ಗವೆನಿಸುತ್ತದೆ, ಅದೇ **ಪೌರುಷಃ ಸ್ಮೃತಃ** ಶಾಸ್ತ್ರಾಂತರದಲ್ಲಿ ಪೌರುಷ ಎಂದೂ ಕರೆಯಲ್ಪಡುವುದು. ಅಥವಾ ಪಂಚಮಹಾಭೂತಗಳ ಸಮೂಹದಿಂದ ಜನಿಸಿದ ಪುರುಷ ಎಂದರೆ ಜೀವ ಅವರ ಸೃಷ್ಟಿಯು ವಿಸರ್ಗ ಎನಿಸುವುದು.

ಇಲ್ಲಿ 'ಭೂತಮಾತ್ರೇಂದ್ರಿಯಧಿಯಾಂ' ಎಂದದ್ದರಿಂದ ಸೃಷ್ಟಿಯ ಕ್ರಮವಿದು ಎಂದು ತೋರುವುದು. 'ವಿಸರ್ಗಃ' ಮತ್ತು 'ಪೌರುಷಃ' ಎಂಬ ಪದಗಳಿಗೆ ಪ್ರತ್ಯೇಕ ಅರ್ಥ ತೋರುವುದಿಲ್ಲ. ಬ್ರಹ್ಮಾಂಡಬಾಹ್ಯಸೃಷ್ಟಿಯೂ ಪುರುಷಸಂಬಧಿಯಾದ್ದರಿಂದ ಪೌರುಷ ಎನ್ನಬಹುದು. ಕಾರಣ ಶ್ಲೋಕತಾತ್ಪರ್ಯವನ್ನು ಪ್ರಮಾಣದಿಂದ ತಿಳಿಸುವರು-

ತಾತ್ಪರ್ಯ- ಮಹದಾದ್ಯಂಡಪರ್ಯಂತಃ ಸರ್ಗೋऽಂಡೇ ಬ್ರಹ್ಮಣಸ್ತು ಯಃ ।
ಅನುಸರ್ಗ ಇತಿ ಪ್ರೋಕ್ತಃ ಪೌರುಷಶ್ಚೇತಿ ಕಥ್ಯತೇ ।।

ಪಂಚಭೂತಸಮೂಹೇನ ಜಾತಃ ಪುರುಷ ಉಚ್ಯತೇ ।
ಬಹುತ್ವಾತ್ತತ್ರ ಭೂತಾನಾಂ ತಾವತ್ವಾ ತ್ತತ್ವ ಮೇಕಜಮ್ ।। -ಇತಿ ವ್ಯೋಮಸಂಹಿತಾಯಾಮ್

ಅವಯವಗಳು ಅವರಿಗೆ ಉತ್ಪನ್ನವಾದವು. ಆದ್ದರಿಂದಲೇ ಜೀವರಾಶಿಗಳಿಗೆ ಬ್ರಹ್ಮದೇವರ ಇಚ್ಛೆಗಳಿಗೆ ಅನುಗುಣವಾದ ಹಸಿವೆ-ನೀರಡಿಕೆ ಮೊದಲಾದ ಭಾವನೆಗಳು ಬಂದವು.

ಸಾತ್ತ್ವಿಕಸಾತ್ತ್ವಿಕ-ಸಾತ್ತ್ವಿಕರಾಜಸ-ಸಾತ್ತ್ವಿಕತಾಮಸ, ರಾಜಸಸಾತ್ತ್ವಿಕ-ರಾಜಸರಾಜಸ-ರಾಜಸತಾಮಸ, ತಾಮಸಸಾತ್ತ್ವಿಕ-ತಾಮಸರಾಜಸ- ತಾಮಸತಾಮಸ ಎಂದು ಜೀವರು ಭಿನ್ನರಾಗಿದ್ದಾರೆ. ಇಲ್ಲಿ ರಾಜಸಸಾತ್ತ್ವಿಕರ ತನಕ ಜೀವರು ಮುಕ್ತರಾಗಿ ಸ್ವರೂಪಾನಂದ-ಸುಖವನ್ನು ಅನುಭವಿಸುತ್ತಾರೆ. ಉಳಿದ ರಾಜಸರಿಂದ ತ್ರಿವಿಧತಾಮಸರಿಂದ ಸಾತ್ತ್ವಿಕರು ಪೀಡೆಗೆ ಒಳಗಾದಾಗ ಅವರನ್ನು ರಕ್ಷಿಸುವುದಕ್ಕಾಗಿ ಪರಮಾತ್ಮ ಅವತರಿಸುತ್ತಾನೆ.

*ಈ ಅಧ್ಯಾಯದಲ್ಲಿ ವೈರಾಜನಾಮಕನಾದ ಶ್ರೀಹರಿಯು ಮಾಡಿದ ಸಕಲಜಗತ್ಸೃಷ್ಟಿಯನ್ನು ಹೇಳುವರು. ಹತ್ತುಲಕ್ಷಣಗಳುಳ್ಳ ಪುರಾಣವನ್ನು ಹೇಳಿದರು ಎಂದು ಹಿಂದೆ ತಿಳಿಸಿದ ಪುರಾಣದ ಹತ್ತು ಲಕ್ಷಣಗಳನ್ನು ಮೊದಲಿಗೆ ತಿಳಿಸುತ್ತಿದ್ದಾರೆ-*

**ಶ್ರೀ ಶುಕ ಉವಾಚ-**

**ಅತ್ರ ಸರ್ಗೋ ವಿಸರ್ಗಶ್ಚ ಸ್ಥಾನಂ ಪೋಷಣಮೂತಯಃ ।**
**ಮನ್ವಂತರೇಶಾನುಕಥಾ ನಿರೋಧೋ ಮುಕ್ತಿರಾಶ್ರಯಃ ॥ ೧ ॥**

**ಅತ್ರ** ಶ್ರೀಮದ್ಭಾಗವತದಲ್ಲಿ **ಸರ್ಗಃ** ಸೃಷ್ಟಿಯು, **ವಿಸರ್ಗಃ** ವಿಶಿಷ್ಟವಾದ ಸೃಷ್ಟಿಯು, **ಸ್ಥಾನಂ** ಭಗವಂತನ ಉತ್ಕರ್ಷವು, **ಪೋಷಣಂ** ಭಗವಂತನು ಮಾಡುವ ಅನುಗ್ರಹವು, **ಊತಯಃ** ಜೀವರು ಮಾಡುವ ಕರ್ಮಗಳು, **ಮನ್ವಂತರೇಶಾನುಕಥಾ** ಆಯಾ ಮನ್ವಂತರಗಳಲ್ಲಿ ಸಜ್ಜನರು ಮಾಡುವ ಧರ್ಮಗಳ ಮತ್ತು ಭಗವದವತಾರಗಳ ಕಥೆಯು, **ನಿರೋಧಃ** ಪ್ರಲಯಕಾಲೀನವಾದ ಜೀವರ ನಿದ್ರೆ, **ಮುಕ್ತಿಃ** ಸ್ವರೂಪಾವಿರ್ಭಾವ-ರೂಪವಾದ ಮುಕ್ತಿಯು, **ಆಶ್ರಯಃ** ಎಲ್ಲದಕ್ಕೂ ಆಶ್ರಯನಾದ ಪರಮಾತ್ಮ, ಎಂಬ ಈ ಹತ್ತು ವಿಷಯಗಳ ಪ್ರತಿಪಾದನೆ ಎಲ್ಲಿ ಇದೆಯೋ ಅದುವೇ ಪುರಾಣವೆಂದು ತಿಳಿಯಬೇಕು. ॥ ೧ ॥

ಹಾಗಾದರೆ ಈಗ ತಿಳಿದಂತೆ ಅರ್ಥಭೇದವಿರುವುದರಿಂದ ಪುರಾಣಕ್ಕೆ ಏಕವಾಕ್ಯತೆ ಬರಲಾರದು ಎಂದು ಶಂಕಿಸಬಾರದು. ಅವಾಂತರವಾದ ವಿಷಯಗಳು ಭಿನ್ನವಾಗಿದ್ದರೂ ಕೂಡಾ ಪ್ರಧಾನವಾದ ವಿಷಯವು ಒಂದೇ ಇರುವುದರಿಂದ ಏಕವಾಕ್ಯತೆ ಇದೆ ಎಂದು ಹೇಳುವರು-

**ದಶಮಸ್ಯ ವಿಶುದ್ಧ್ಯರ್ಥಂ ನವಾನಾಮಿಹ ಲಕ್ಷಣಮ್ ।**
**ವರ್ಣಯಂತಿ ಮಹಾತ್ಮಾನಃ ಶ್ರುತೇನಾಽರ್ಥೇನ ಚಾಽಂಜಸಾ ॥ ೨ ॥**

**ದಶಮಸ್ಯ** ಹತ್ತನೆಯದಾದ ಮುಕ್ತಾಮುಕ್ತಪ್ರಪಂಚಕ್ಕೆ ಆಶ್ರಯನಾದ ಶ್ರೀಹರಿಯ **ವಿಶುದ್ಧ್ಯರ್ಥಂ** ತತ್ತ್ವವನ್ನು (ಸ್ವರೂಪವನ್ನು) ನಿಶ್ಚಯಿಸುವುದಕ್ಕಾಗಿ, **ನವಾನಾಂ** ಸರ್ಗಮುಂತಾದ ಒಂಬತ್ತರ ಸ್ವರೂಪವನ್ನು, **ಮಹಾತ್ಮಾನಃ** ಪುರಾಣವ್ಯಾಖ್ಯಾತೃಗಳು, **ಶ್ರುತೇನ ಅರ್ಥೇನ** ಸಂಪ್ರದಾಯಪೂರ್ವಕವಾಗಿ ಅರ್ಥವನ್ನು ಕೇಳಿ, **ಚ** ಉಪಕ್ರಮಾದಿ ಯುಕ್ತಿಗಳ ಬಲದಿಂದಲೂ, **ವರ್ಣಯಂತಿ** ಹೇಳುವರು. ।। ೨ ।।

*ಸರ್ಗಮುಂತಾದ ಶಬ್ದಗಳ ಅರ್ಥವನ್ನು ತಾವೇ ತಿಳಿಸುವರು-*

**ಭೂತಮಾತ್ರೇಂದ್ರಿಯಧಿಯಾಂ ಜನ್ಮ ಸರ್ಗ ಉದಾಹೃತಃ ।**
**ಬ್ರಹ್ಮಣೋ ಗುಣವೈಷಮ್ಯಾದ್ವಿಸರ್ಗಃ ಪೌರುಷಃ ಸ್ಮೃತಃ ।। ೩ ।।**

**ಬ್ರಹ್ಮಣಃ** ಪರಬ್ರಹ್ಮನಿಂದ ಹುಟ್ಟಿದ, **ಗುಣವೈಷಮ್ಯಾತ್** ಗುಣವೈಷಮ್ಯವೆಂದು ಹೆಸರುಳ್ಳ ಮಹತ್ತತ್ವದಿಂದ ಅಹಂಕಾರದ್ವಾರಾ, **ಭೂತಮಾತ್ರೇಂದ್ರಿಯಧಿಯಾಂ** ಪಂಚಮಹಾಭೂತಗಳು ತನ್ಮಾತ್ರಾಗಳು ಇಂದ್ರಿಯಗಳು ಬುದ್ಧಿ ಉಪಲಕ್ಷಣಯಾ ಬ್ರಹ್ಮಾಂಡ ಇವುಗಳ, **ಯಜ್ಜನ್ಮ** ಏನು ಉತ್ಪತ್ತಿ ಇದೆಯೋ ಅದು, **ಸರ್ಗಃ ಉದಾಹೃತಃ** ಸರ್ಗವೆಂದು ಶ್ರುತ್ಯಾದಿಗಳಲ್ಲಿ ಹೇಳಲ್ಪಡುವುದು (**ಅಂಡೇ**) ಬ್ರಹ್ಮಾಂಡದಲ್ಲಿ **ಬ್ರಹ್ಮಣಃ** ವಿರಾಣ್ಣಾಮಕನಾದ ಶ್ರೀಹರಿಯ, (ಪುರುಷನ) ಹದಿನಾಲ್ಕು ಲೋಕರೂಪವಾದ ದೇಹದಿಂದ ಆದ ಸೃಷ್ಟಿಯು, **ವಿಸರ್ಗಃ** ವಿಸರ್ಗವೆನಿಸುತ್ತದೆ, ಅದೇ **ಪೌರುಷಃ ಸ್ಮೃತಃ** ಶಾಸ್ತ್ರಾಂತರದಲ್ಲಿ ಪೌರುಷ ಎಂದೂ ಕರೆಯಲ್ಪಡುವುದು. ಅಥವಾ ಪಂಚಮಹಾಭೂತಗಳ ಸಮೂಹದಿಂದ ಜನಿಸಿದ ಪುರುಷ ಎಂದರೆ ಜೀವ ಅವರ ಸೃಷ್ಟಿಯು ವಿಸರ್ಗ ಎನಿಸುವುದು.

ಇಲ್ಲಿ 'ಭೂತಮಾತ್ರೇಂದ್ರಿಯಧಿಯಾಂ' ಎಂದದ್ದರಿಂದ ಸೃಷ್ಟಿಯ ಕ್ರಮವಿದು ಎಂದು ತೋರುವುದು. 'ವಿಸರ್ಗಃ' ಮತ್ತು 'ಪೌರುಷಃ' ಎಂಬ ಪದಗಳಿಗೆ ಪ್ರತ್ಯೇಕ ಅರ್ಥ ತೋರುವುದಿಲ್ಲ. ಬ್ರಹ್ಮಾಂಡಬಾಹ್ಯಸೃಷ್ಟಿಯೂ ಪುರುಷಸಂಬಧಿಯಾದ್ದರಿಂದ ಪೌರುಷ ಎನ್ನಬಹುದು. ಕಾರಣ ಶ್ಲೋಕತಾತ್ಪರ್ಯವನ್ನು ಪ್ರಮಾಣದಿಂದ ತಿಳಿಸುವರು-

ತಾತ್ಪರ್ಯ- ಮಹದಾದ್ಯಂಡಪರ್ಯಂತಃ ಸರ್ಗೋಽಂಡೇ ಬ್ರಹ್ಮಣಸ್ತು ಯಃ ।
ಅನುಸರ್ಗ ಇತಿ ಪ್ರೋಕ್ತಃ ಪೌರುಷಶ್ಚೇತಿ ಕಥ್ಯತೇ ।।

ಪಂಚಭೂತಸಮೂಹೇನ ಜಾತಃ ಪುರುಷ ಉಚ್ಯತೇ ।
ಬಹುತ್ವಾತ್ತತ್ರ ಭೂತಾನಾಂ ತಾವತ್ವಾ ತ್ತತ್ವ ಮೇಕಜಮ್ ।। -ಇತಿ ವ್ಯೋಮಸಂಹಿತಾಯಾಮ್

ಮಹತ್ತತ್ವವನ್ನಾರಂಭಿಸಿ ಬ್ರಹ್ಮಾಂಡಪರ್ಯಂತವಾದ ಸೃಷ್ಟಿಯು ಸರ್ಗವೆನಿಸುತ್ತದೆ. ಬ್ರಹ್ಮಾಂಡದಲ್ಲಿ ವಿರಾಣ್ಣಾಮಕನಾದ ಬ್ರಹ್ಮನಿಗೆ ಹದಿನಾಲ್ಕು ಲೋಕವೆಂಬ ದೇಹಸಂಬಂಧದಿಂದ ಆಗುವ ಸೃಷ್ಟಿಯು ಅನುಸರ್ಗ ಅರ್ಥಾತ್ ವಿಸರ್ಗವೆನಿಸುತ್ತದೆ. ಪುರುಷರೂಪ ವಿರಾಟ್ ದೇಹದಿಂದ ಹುಟ್ಟಿದ್ದರಿಂದ ಪೌರುಷಸರ್ಗ ಎಂದು ಹೇಳಲ್ಪಡುತ್ತದೆ. (ಬ್ರಹ್ಮಾಂಡದ ಹೊರಗಿನ ಸೃಷ್ಟಿಯನ್ನು ಪರಿಹರಿಸಲು ಪೌರುಷ-ಶಬ್ದಾಂತರ್ಗತ ಪುರುಷಶಬ್ದದ ವಿವಕ್ಷಿತವಾದ ಅರ್ಥವನ್ನು ತಿಳಿಸುವರು-

ಪಂಚಭೂತಗಳ ಸಮೂಹದಿಂದ ಅಂದರೆ ಮೇಲನದಿಂದ ಪಂಚೀಕರಣದಿಂದ ಹುಟ್ಟಿದ ದೇಹ ಉಳ್ಳ ಬ್ರಹ್ಮನು ಪುರುಷನೆನಿಸುತ್ತಾನೆ. ಬ್ರಹ್ಮಾಂಡಬಾಹ್ಯಸೃಷ್ಟಿಯು ಪಂಚೀಕರಣದಿಂದ ಜನ್ಯವಲ್ಲ.

(ಬ್ರಹ್ಮಾಂಡದ ಒಳಗಿನ ಪದಾರ್ಥಗಳು ಪೌರುಷಗಳೆಂದಾದರೆ ಅವುಗಳಲ್ಲಿ ಕೆಲವು ಪಾರ್ಥಿವ, ಕೆಲವು ಆಪ್ಯ ಎಂಬ ವ್ಯವಹಾರವೇಕೆ? ಮತ್ತು ವಿರಾಡ್‌ದೇಹ ಪಂಚಭೂತ ಜನ್ಯವೇಕೆ ಎಂದರೆ) ವಿರಾಟ್‌ದೇಹದಲ್ಲಿ ಪೃಥಿವ್ಯಾದಿಭೂತಸ್ವಭಾವಗಳಾದ ಕಾಠಿನ್ಯಾದಿಗಳು ಬಹಳವಾಗಿ ಇರುವುದರಿಂದ ಬ್ರಹ್ಮದೇಹವು ಪಂಚಭೂತಜನ್ಯವಾಗಿದೆ. ಪರ್ವತ ಮೊದಲಾದವುಗಳಲ್ಲಿ ಪೃಥಿವಿಯ ಭಾಗ ಹೆಚ್ಚಿದ್ದುದರಿಂದ ಪಾರ್ಥಿವವೆಂದು ಜಲಭಾಗ ಹೆಚ್ಚಿದ್ದುದನ್ನು ಆಪ್ಯ ಎಂದು, ಒಂದೇ ಭೂತದಿಂದ ಹುಟ್ಟಿದ್ದು ಎಂದು ವ್ಯವಹರಿಸುವರು. ಎಂದು ವ್ಯೋಮಸಂಹಿತೆಯಲ್ಲಿ ಹೇಳಿದೆ. ॥ ೩ ॥

**ಸ್ಥಿತಿರ್ವೈಕುಂಠವಿಜಯಃ ಪೋಷಣಂ ತದನುಗ್ರಹಃ ।**
**ಮನ್ವಂತರಾಣಿ ಸದ್ಧರ್ಮಾ ಊತಯಃ ಕರ್ಮವಾಸನಾಃ ॥ ೪ ॥**

**ವೈಕುಂಠವಿಜಯಃ** ಶ್ರೀಹರಿಯ ದುಷ್ಟನಿಗ್ರಹರೂಪವಾದ ಉತ್ಕರ್ಷವು, **ಸ್ಥಿತಿಃ** ಸ್ಥಾನವು ಎಂದು ಕರೆಯಲ್ಪಡುವುದು, **ತದನುಗ್ರಹಃ** ವೈಕುಂಠನಾಮಕನಾದ ಶ್ರೀಹರಿಯು ಭಕ್ತರಿಗೆ ಮಾಡುವ ಪ್ರಸಾದವು, **ಪೋಷಣಂ** ಪೋಷಣವೆಂದು ಹೇಳಲ್ಪಡುವುದು, **ಸದ್ಧರ್ಮಾಃ** ಆಯಾ ಮನ್ವಂತರಗಳಲ್ಲಿರುವ ಸಜ್ಜನರು ಮಾಡುವ ಧರ್ಮಗಳು, **ಮನ್ವಂತರಾಣಿ** ಮನ್ವಂತರಗಳೆನಿಸುತ್ತವೆ. **ಕರ್ಮವಾಸನಾಃ** ಜೀವರುಗಳಲ್ಲಿರುವ ಕರ್ಮಗಳು, ವಾಸನಾಗಳು (ಸಂಸ್ಕಾರಗಳು) **ಊತಯಃ** ಊತಿಗಳೆನಿಸುತ್ತವೆ. ॥ ೪ ॥

**ಅವತಾರಾನುಚರಿತಂ ಹರೇಶ್ಚಾಸ್ಯಾಽನುವರ್ತಿನಾಮ್ ।**
**ಪುಂಸಾಮೀಶಕಥಾ ಪ್ರೋಕ್ತಾ ನಾನಾಖ್ಯಾನೋಪಬೃಂಹಿತಃ ॥ ೫ ॥**

**ಹರೇಃ** ಶ್ರೀಹರಿಯ, **ಅವತಾರಾನುಚರಿತಂ** ಮತ್ಸ್ಯಾದಿ ಅವತಾರಗಳ ಚರಿತ್ರೆಯು, **ಹರೇಃ ಅನುವರ್ತಿನಾಂ ಪುಂಸಾಂ** ಶ್ರೀಹರಿಯ ಭೃತ್ಯರಾದ ಬ್ರಹ್ಮಾದಿಗಳ, **ನಾನಾಖ್ಯಾನೋಪಬೃಂಹಿತಾಃ** ನಾನಾವಿಧವಾದ ಇತಿಹಾಸಗಳಿಂದ ಪೂರ್ಣವಾದ, **ಕಥಾಃ** ಕಥೆಗಳು, **ಈಶಕಥಾ ಪ್ರೋಕ್ತಾ** ಈಶಾನುಕಥಾ ಎನಿಸಿಕೊಳ್ಳುತ್ತವೆ. ।। ೫ ।।

**ನಿರೋಧೋಽಸ್ಯಾನುಶಯನಮಾತ್ಮನಾ ಸಹ ಶಕ್ತಿಭಿಃ ।**
**ಮುಕ್ತಿರ್ಹಿತ್ವಾಽನ್ಯಥಾ ರೂಪಂ ಸ್ವರೂಪೇಣ ವ್ಯವಸ್ಥಿತಿಃ ।। ೬।।**

**ಆತ್ಮನಃ** ಮುಕ್ತಾಮುಕ್ತ ಜೀವಸಮೂಹದ, **ಅಸ್ಯ** ಪ್ರಕೃತನಾದ ಪರಮಾತ್ಮನಲ್ಲಿ ಪ್ರವೇಶಮಾಡಿ, **ಸಹ ಶಕ್ತಿಭಿಃ** ಇಚ್ಛಾದಿಗಳಿಗೆ ಅನುಕೂಲವಾದ ಶಕ್ತಿಗಳಿಂದ ಸಹಿತವಾಗಿ, **ಶಯನಂ** ಪ್ರಲಯಕಾಲದಲ್ಲಿಯ ನಿದ್ರೆಯು, **ನಿರೋಧಃ** ನಿರೋಧಶಬ್ದವಾಚ್ಯವಾಗಿದೆ. **ಅನ್ಯಥಾ ರೂಪಂ ಹಿತ್ವಾ** ಪ್ರಕೃತಿಬಂಧವನ್ನು ತ್ಯಜಿಸಿ, **ಸ್ವರೂಪೇಣ** ಚಿದಾನಂದಾತ್ಮಕವಾದ ದೇಹದಿಂದ **ವ್ಯವಸ್ಥಿತಿಃ** ಇರುವುದೇ, **ಮುಕ್ತಿಃ** ಮುಕ್ತಿ ಎನಿಸಿಕೊಳ್ಳುವುದು. ।। ೬ ।।

ಈ ಶ್ಲೋಕದಲ್ಲಿ ಮುಕ್ತಿ ಯಾವುದು ನಿರೋಧ ಯಾವುದು ಎಂದು ತಿಳಿಯದಿರುವುದರಿಂದ ಪ್ರಮಾಣದಿಂದ ವ್ಯಾಖ್ಯಾನಿಸುವರು-

**ತಾತ್ಪರ್ಯ- ಅನುಪ್ರವಿಶ್ಯ ಪರಮಂ ಜೀವಸ್ಯ ಶಯನಂ ತು ಯತ್ ।**
**ಸಹೈವ ಶಕ್ತಿಭಿಃ ಸ್ವೀಯೈರಿಚ್ಛಾದ್ಯೈರಪ್ರಕಾಶಿತೈಃ ।**
**ಸನ್ನಿರೋಧ ಇತಿ ಪ್ರೋಕ್ತೋ ವಿಮುಕ್ತಿಃ ಯತ್ರ ಮೋಕ್ಷಿಣಾಮ್ ।। -ಇತಿ ನಾರದೀಯೇ**

ಲಯಕಾಲದಲ್ಲಿ ಜೀವನ ಶಕ್ತಿಸಾಧ್ಯಗಳಾದ ಇಚ್ಛಾ-ಪ್ರಯತ್ನ-ಪರಿಸ್ಪಂದಗಳು ಕಾಣದಿರುವುದರಿಂದ ಇಚ್ಛಾದ್ಯನುಕೂಲವಾದ ಶಕ್ತಿಗಳು ಸುಪ್ತವಾಗಿರುತ್ತವೆ ಎಂದು ಹೇಳಬೇಕು. ಹೀಗೆ ಇಚ್ಛಾದಿಶಕ್ತಿಗಳಿಂದ ಕೂಡಿಕೊಂಡೇ ಜೀವನು ಶ್ರೀಹರಿಯಲ್ಲಿ ಪ್ರವೇಶಿಸಿ ಸುಪ್ತಿಗೆ ಒಳಗಾಗುತ್ತಾನೆ. ಇದನ್ನೇ ನಿರೋಧ ಎಂದು ತಿಳಿಯಬೇಕು. ಯಾವ ಅವಸ್ಥೆಯಲ್ಲಿ ವಿಶೇಷವಾಗಿ ಪ್ರಕೃತಿಬಂಧದಿಂದ ಬಿಡುಗಡೆಯಾಗುತ್ತದೊ ಅದು ಮುಕ್ತಿಯು ಎನಿಸುತ್ತದೆ. ಹೀಗೆಂದು ನಾರದೀಯಪುರಾಣದಲ್ಲಿ ಹೇಳಿದೆ.

ತಾತ್ಪರ್ಯದಲ್ಲಿ **ಮೋಕ್ಷಿಣಾಂ** ಸಂಸಾರದಿಂದ ಮುಕ್ತರಾದ ಚೇತನರಿಗೆ, **ಯಾ ಸ್ವರೂಪೇಣ ವ್ಯವಸ್ಥಿತಿಃ ಸಾ ವಿಮುಕ್ತಿಃ** ಎಂದು ಹೇಳಿದ್ದರಿಂದ ಮೂಲದಲ್ಲಿ **ಚೇತನಾನಾಂ** ಎಂದು ಅಧ್ಯಾಹಾರ ಸೂಚಿತವಾಗಿದೆ. ಇಲ್ಲವಾದರೇ ಕೆಸರಿನಿಂದ ಲಿಪ್ತವಾದ ಒಂದು ವಸ್ತು ಕೆಸರನ್ನು ಕಳೆದುಕೊಂಡಾಗ ತನ್ನ ಸ್ವರೂಪ ಕಲ್ಲೋ ಕಬ್ಬಿಣವೋ ಆದಾಗ ಮುಕ್ತಿ ಎನ್ನಬೇಕಾದೀತು ಎಂಬ ಶಂಕೆಗೆ ಅವಕಾಶವಿಲ್ಲ

**ಆಭಾಸಶ್ಚ ನಿರೋಧಶ್ಚ ಯತಸ್ತತ್ತ್ರಯಮೀಯತೇ ।**
**ಸ ಆಶ್ರಯಃ ಪರಂ ಬ್ರಹ್ಮ ಪರಮಾತ್ಮೇತಿ ಶಬ್ದ್ಯತೇ ॥ ೭ ॥**

**ಯತಃ** ಯಾವನ ಬಲದಿಂದ ಜಗತ್ತಿಗೆ, **ಆಭಾಸಃ** ಜ್ಞಾನವು, **ನಿರೋಧಃ** ಲಯವು ಮತ್ತು ಸೃಷ್ಟಿ-ಸ್ಥಿತಿಗಳು, **(ಭವತಿ )** ಆಗುವವೋ ಆದ್ದರಿಂದಲೇ, **ತತ್** ಹಿಂದೆ ಹೇಳಿದ, **ತ್ರಯಂ** ಮೂರು, **ಯತಃ-ಯತ್ರ** ಯಾವನಲ್ಲಿ ಕರ್ತೃತ್ವಸಂಬಂಧದಿಂದ, **ಈಯತೇ** ಇವೆ ಎಂದು ವೇದಗಳಲ್ಲಿ ಪ್ರತಿಪಾದಿಸಲ್ಪಡುವನೋ, **ಸಃ** ಅವನು, **ಆಶ್ರಯಃ** ಜಗತ್ಕರ್ತೃತ್ವಾಶ್ರಯನು ಜಗದಾಶ್ರಯನೂ ಆದ್ದರಿಂದ ಆಶ್ರಯನೆಂದು ಕರೆಯಲ್ಪಡುವನು. ಅವನು, **ಪರಂ ಬ್ರಹ್ಮ ಪರಮಾತ್ಮಾ ಇತಿ** ಪರಬ್ರಹ್ಮ, ವಾಸುದೇವ ಎಂಬ ಶಬ್ದಗಳಿಂದ **ಶಬ್ದ್ಯತೇ** ಕರೆಯಲ್ಪಡುವನು.

ಈ ಶ್ಲೋಕದ ಸರಿಯಾದ ಅರ್ಥವೇನೆಂದು ತಿಳಿಯುವುದಿಲ್ಲ. ವಿಪರೀತವಾದ ಅರ್ಥವೇ ತೋರುತ್ತದೆ. ಆದ್ದರಿಂದ ಪ್ರಮಾಣದಿಂದ ವ್ಯಾಖ್ಯಾನಿಸುವರು-

**ತಾತ್ಪರ್ಯ- ಸೃಷ್ಟಿಸ್ಥಿತ್ಯಪ್ಯಯಾಭಾಸಾ ಯದ್ಬಲಾದ್ಯತ್ರ ಚ ಸ್ಥಿತಾಃ ।**
**ತದ್ ಬ್ರಹ್ಮ ಜಗದಾಧಾರಂ ವಾಸುದೇವೇತಿ ತದ್ವಿದುಃ ॥ -ಇತಿ ಭಾಗವತತಂತ್ರೇ**

ಸೃಷ್ಟಿ-ಸ್ಥಿತಿ-ಸಂಹಾರ-ಜ್ಞಾನಗಳು ಯಾರ ಪ್ರಯತ್ನದಿಂದ ವಿಶ್ವಕ್ಕೆ ಆಗುತ್ತವೋ ಆ ಸೃಷ್ಟ್ಯಾದಿಗಳು ಯಾರ ಅಧೀನವಾಗಿವೆಯೋ ಅಂತಹ ಜಗತ್ತಿಗೆ ಆಧಾರನಾದ ಪರಬ್ರಹ್ಮನನ್ನು ವಾಸುದೇವನೆಂದು ಹೇಳುತ್ತಾರೆ. ಎಂದು ಭಾಗವತತಂತ್ರದಲ್ಲಿ ಹೇಳಿದೆ. ಜಗದಾಧಾರವೆಂಬುದು ಆಶ್ರಯಶಬ್ದದ ವ್ಯಾಖ್ಯಾನಾಂತರ. ಉತ್ಪತ್ತ್ಯಾದಿಗಳು ಜಗತ್ತಿನಲ್ಲಿದ್ದರೂ ತತ್ಪ್ರಯತ್ನಜನ್ಯತ್ವ ಎಂಬ ಸಂಬಂಧದಿಂದ ಪರಮಾತ್ಮನಲ್ಲಿವೆ. ಜಗತ್ಸೃಷ್ಟ್ಯಾದ್ಯಾಶ್ರಯತ್ವವೂ ಅರ್ಥ.

ಹಿಂದಿನ ಶ್ಲೋಕದಲ್ಲಿ ಹೇಳಿದ ಆಶ್ರಯ ಶಬ್ದಾರ್ಥ ಹೇಗೋ ಬ್ರಹ್ಮಾದಿಗಳಲ್ಲಿ ಸಂಭಾವಿತವಾಗಬಹುದು. ಕಾರಣ ಅನತಿಪ್ರಸಕ್ತವಾದ ಆಶ್ರಯಶಬ್ದಾರ್ಥ ಹೇಳಲು, ಪ್ರಕಾರಾಂತರದಿಂದ ಹೇಳಿ ಸಾಧಿಸಲು ಜೀವರಿಗೆ ಆಧ್ಯಾತ್ಮಿಕಾದಿವಿಷಯಕ ಸಮ್ಯಕ್ ಜ್ಞಾನವು ಅನ್ಯೋನ್ಯಸಾಪೇಕ್ಷವಾಗಿದೆ ಎಂದು ಮೊದಲಿಗೆ ಹೇಳುವರು-

**ಆಧ್ಯಾತ್ಮಿಕೋ ಯಃ ಪುರುಷಃ ಸೋಽಸಾವೇವಾಧಿದೈವಿಕಃ ।**
**ಯಸ್ತತ್ರೋಭಯವಿಚ್ಛೇದಃ ಸ ಸ್ಮೃತೋ ಹ್ಯಾಧಿಭೌತಿಕಃ ॥ ೮ ॥**

**ಆಧ್ಯಾತ್ಮಿಕಃ** ದೇಹಸಂಬಂಧಿಯಾದ ಚಕ್ಷುರಾದಿಇಂದ್ರಿಯಗಳು, **ಆಧಿದೈವಿಕಃ** ಪ್ರಕಾಶಾದಿಗಳು, **ಸ್ವತಃ ಏವ** ಕೇವಲ ತಾವೇ ಜ್ಞಾನಸಾಧನವಾಗಲಾರವು. ತಮ್ಮ ತಮ್ಮ ಅಭಿಮಾನಿಗಳಿಂದ ಪ್ರೇರಿತವಾಗಿಯೇ ಜ್ಞಾನಸಾಧನವಾಗುತ್ತವೆ ಎಂದು ತಿಳಿಸಲು **ಪುರುಷಃ** ಎಂದಿದ್ದಾರೆ. ಅವರಿಗೆ ಐಕ್ಯಹೇಳಿದ್ದು ವಸ್ತುಸ್ಥಿತಿ ತಿಳಿಸಲು ಎಂದು ತಿಳಿಯಬೇಕು.

**ಆಧ್ಯಾತ್ಮಿಕಃ ಯಃ ಪುರುಷಃ** ಚಕ್ಷುರಾದಿಗಳಲ್ಲಿ ಪ್ರೇರಕನಾಗಿ ಇರುವ ಸೂರ್ಯ ಮುಂತಾದ ಜೀವನೇನಿರುವನೋ, **ಸೋಽಸಾವೇವ** ಅವನೇ, **ಆಧಿದೈವಿಕಃ** ದೇವತೆಗಳಲ್ಲಿ ಪ್ರಕಾಶಾದಿಗಳಿಗೆ ಪ್ರೇರಕನಾಗಿ ಇರುವವನು. **ತತ್ರ** ಆ ಪ್ರೇರಕನಿರುವಾಗ, **ಯಃ ಉಭಯವಿಚ್ಛೇದಃ** ಆಧ್ಯಾತ್ಮಿಕ-ಆಧಿದೈವಿಕಗಳಿಂದ ಉಂಟಾಗುವ ಸರಿಯಾದ ಅನುಭವವು ಯಾವ ರೂಪ-ರಸಾದಿಗಳೆಂಬ ಆಧಿಭೌತಿಕದ್ದಾಗುವುದೊ **ಸಃ** ಅದು, **ಆಧಿ ಭೌತಿಕಃ ಸ್ಮೃತಃ** ಆಧಿಭೌತಕವೆನಿಸುವುದು. ಅಂದರೆ ಆಧಿಭೌತಿಕವಾದ ರೂಪಾದಿಗಳ ಜ್ಞಾನವು ಆಧ್ಯಾತ್ಮಿಕ-ಆಧಿದೈವಿಕ ಅವುಗಳ ಅಭಿಮಾನಿಸಾಪೇಕ್ಷವೆಂದು ತಿಳಿಸಿದಂತಾಯಿತು.

ಆಧ್ಯಾತ್ಮಿಕ-ಆಧಿದೈವಿಕಜ್ಞಾನವು ಆಧಿಭೌತಿಕಸಾಪೇಕ್ಷವೆಂದು ತಿಳಿಸಲು ಉತ್ತರಾರ್ಧವನ್ನೇ ಯೋಜಿಸಬೇಕು ಎಂದು ಆಚಾರ್ಯರು ತಿಳಿಸುವರು-

ತಾತ್ಪರ್ಯ- ಆಧಿಭೌತಿಕೇನ ರೂಪೇಣ ಹಿ ಚಕ್ಷುಃಪ್ರಕಾಶಯೋಃ ಸಮ್ಯಕ್ತ್ವಪರಿಜ್ಞಾನಮ್ ।

**ತತ್ರ** ಪ್ರೇರಕದೇವತೆ ಇದ್ದಾಗ, **ಉಭಯವಿಚ್ಛೇದಃ** ಆಧ್ಯಾತ್ಮಿಕ-ಆಧಿದೈವಿಕಗಳ ಸಮ್ಯಗನುಭವವು ಯಾವುದರಿಂದ ಆಗುವುದೊ, **ಸಃ** ಅದು, ಆಧಿಭೌತಿಕ ಎಂದು ಯೋಜಿಸಿದಂತಾಯಿತು. ಅಂದರೆ ಚಕ್ಷುರಿಂದ್ರಿಯ ಮತ್ತು ಪ್ರಕಾಶಗಳಿಂದ ರೂಪಜ್ಞಾನವಾಗುವುದು. ಅದರಂತೆ ರೂಪಜ್ಞಾನವಾದರೆ ಇವನಿಗೆ ಕಣ್ಣು-ಪ್ರಕಾಶವು ಇವೆ ಎಂದು ಅನುಮಾನದಿಂದ ತಿಳಿಯಬಹುದು. ಹೀಗೆ ಪರಸ್ಪರ ಸಾಪೇಕ್ಷವಾಗಿವೆ ಎಂದು ಭಾವ. ಯಾದವಾರ್ಯರು ಈ ರೀತಿಯಾಗಿ ತಿಳಿಸಿದ್ದಾರೆ.

ವಿಜಯಧ್ವಜಾದಿಗಳು ಈ ರೀತಿಯಾಗಿ ತಿಳಿಸಿದ್ದಾರೆ- ಆಧ್ಯಾತ್ಮಿಕಾದಿಭಗವದ್ರೂಪಗಳಿಗೆ ಐಕ್ಯ ಹೇಳುತ್ತ ಜೀವನಿಗೆ ಈಶಾಧಿನತ್ವ ಹೇಳುವರು ಎಂದು ಅವತಾರಿಕಾ.

**ಆಧ್ಯಾತ್ಮಿಕಃ** ಶರೀರಸಂಬಂಧಿಯಾದ ಚಕ್ಷುರಾದಿಗಳಲ್ಲಿ ಪ್ರೇರಕನಾಗಿರುವ, **ಪುರುಷಃ** ವಿಷ್ಣುವು, **ಸೋಽಸಾವೇವ ಆಧಿದೈವಿಕಃ** ದೇವತೆಗಳಾದ ಆದಿತ್ಯಾದಿಗಳಲ್ಲಿರುವವನು ಯಾವನೊ, **ತತ್ರ** ಅಧಿಭೂತಗಳಾದ ಘಟಾದಿಗಳಲ್ಲಿ ಇದ್ದು **ಉಭಯವಿಚ್ಛೇದಃ**

ಚಕ್ಷುರಿಂದ್ರಿಯ ಮತ್ತು ಪ್ರಕಾಶಗಳಿಗೆ ಸಮ್ಯಕ್ ನಿಶ್ಚಾಯಕನಾದ ಆ ವಿಷ್ಣುವೇ, **ಆಧಿಭೌತಿಕಃ ಸ್ಮೃತಃ** ಆಧಿಭೌತಿಕನೆನಿಸುವನು.

*ಈಗ ಈಶ್ವರನಿಗೆ ಅನ್ಯಸಾಪೇಕ್ಷತ್ವವಿಲ್ಲ ಎಂದು ತಿಳಿಸುತ್ತ ಆದರಿಂದ ಸಾಧ್ಯವಾದ ಅನತಿ ಪ್ರಸಕ್ತವಾದ ಆಶ್ರಯಶಬ್ದಾರ್ಥವನ್ನು ತಿಳಿಸುವರು-*

**ಏತದೇಕತಮಾಭಾವೇ ಯದಾ ನೋಪಲಭಾಮಹೇ ।**
**ತ್ರಿತಯಂ ತತ್ರ ಯೋ ವೇದ ಸ ಆತ್ಮಾ ಸ್ವಾಶ್ರಯಾಶ್ರಯಃ ॥ ೯ ॥**

**ಏತದೇಕತಮಾಭಾವೇ** ಈ ಮೂರರ ಮಧ್ಯದಲ್ಲಿ ಯಾವುದೊಂದು ಇಲ್ಲದಿದ್ದರೂ ಅವುಗಳ ಅಭಿಮಾನಿಗಳ ಪ್ರೇರಣೆ ಇಲ್ಲದಿದ್ದರೂ, **ಯದಾ** ಯಾವ ಅವಸ್ಥೆಯಲ್ಲಿ ಅಂದರೆ ಸುಷುಪ್ತಿಯಲ್ಲಿ **ನೋಪಲಭಾಮಹೇ** ಏನನ್ನೂ ನಾವು ತಿಳಿಯುವುದಿಲ್ಲವೋ, **ತತ್ರ** ಆ ಅವಸ್ಥೆಯಲ್ಲಿ **ತ್ರಿತಯಂ** ಜೀವಸಂಬಂಧಿಯಾದ ಆಧ್ಯಾತ್ಮಿಕ-ಆಧಿಭೌತಿಕ-ಆಧಿದೈವಿಕ-ಗಳನ್ನೂ ಅವುಗಳ ಅಭಿಮಾನಿಗಳನ್ನೂ, ಯಃ ಯಾವ, **ಆತ್ಮಾ** ಜೀವಾಂತರ್ಯಾಮಿಯೂ, **ವೇದ** ತಿಳಿಯುವನೋ, **ಸಃ** ಅವನು, **ಸ್ವಾಶ್ರಯಾಶ್ರಯಃ** ಬ್ರಹ್ಮಾದಿಗಳಿಗೂ ಆಶ್ರಯನು.

ಈ ಶ್ಲೋಕಕ್ಕೆ ಅನ್ಯಥಾಪ್ರತೀತಿ ಆಗಬಾರದೆಂದು ತಾತ್ಪರ್ಯ ತಿಳಿಸುವರು-

**ತಾತ್ಪರ್ಯ- ಸುಪ್ತಾವಪಿ ಯಃ ಸರ್ವಂ ವೇತ್ತಿ ಜೀವಾನಾಂ ಸ ಪರಃ । 'ಸ್ವಪ್ನೇನ ಶಾರೀರಮಭಿ ಪ್ರಹತ್ಯಾಸುಪ್ತಃ ಸುಪ್ತಾನಭಿಚಾಕಶೀತಿ' ಇತಿ ಶ್ರುತೇಃ । ಸುಷ್ಟು ಆಶ್ರಯಾಣಾಮಪ್ಯಾಶ್ರಯಃ ।**

ಜೀವರಿಗೆ ಬಾಹ್ಯಪದಾರ್ಥಗಳ ಜ್ಞಾನವಿಲ್ಲದಿರುವಾಗಲೂ, ಸುಷುಪ್ತ್ಯವಸ್ಥೆಯಲ್ಲಿಯೂ, ಜಾಗ್ರ ದಾದ್ಯವಸ್ಥೆಗಳಲ್ಲಿಯೂ, ಶ್ರೀಹರಿಯು ಆಧ್ಯಾತ್ಮಿಕಾದಿಗಳನ್ನೆಲ್ಲವನ್ನೂ ತಿಳಿಯುತ್ತಾನೆ ಕಾರಣ ಶ್ರೀಹರಿಯೂ ಜೀವರಿಗಿಂತ ಉತ್ತಮನು.

ಜೀವರಿಗೆ ಸುಷುಪ್ತ್ಯವಸ್ಥೆಯನ್ನು ತಂದುಕೊಟ್ಟು ಸುಪ್ತಿ ಇಲ್ಲದ ಶ್ರೀಹರಿಯು ಸುಪ್ತರನ್ನೂ ಆಧ್ಯಾತ್ಮಿಕಾದಿ ಎಲ್ಲ ಪದಾರ್ಥಗಳನ್ನೂ ಚನ್ನಾಗಿ ತಿಳಿಯುತ್ತಾನೆ. ಎಂದು ಶ್ರುತಿಯು ತಿಳಿಸುತ್ತದೆ. ಮುಖ್ಯವಾಗಿ ಆಶ್ರಯರಾದ ರಮಾ-ಬ್ರಹ್ಮಾದಿಗಳಿಗೂ ಆಶ್ರಯನಾಗಿದ್ದಾನೆ ಪರಮಾತ್ಮ.

ಈ ಶ್ಲೋಕದಲ್ಲಿ ಕಣ್ಣಿಲ್ಲದಿದ್ದರೆ, ಪ್ರಕಾಶವಿಲ್ಲದಿದ್ದರೆ, ಘಟಾದಿಗಳಿಲ್ಲದಿದ್ದರೆ ನಮಗೆ ಜ್ಞಾನ ಬರದಿರುವುದರಿಂದ ಜೀವರು ಅಸ್ವತಂತ್ರರು ಎಂದು ತಿಳಿಸಿದಂತೆ ಆಯಿತು. ಸುಪ್ತ್ಯಾದಿಗಳಲ್ಲಿ ಇಂದ್ರಿಯ-ಪ್ರಕಾಶ-ವಿಷಯಗಳನ್ನು ಅಪೇಕ್ಷಿಸದೇ ಯಾವನು ಜೀವರ

ಎಲ್ಲವನ್ನು ಸ್ವರೂಪಜ್ಞಾನದಿಂದ ತಿಳಿಯುವನೋ ಅವನು ಆಶ್ರಯನು. ಎಂದೂ ತಿಳಿಸಿದಂತೆ ಆಯಿತು. 'ಪ್ರಾಣಾ ವಾ ಏವ್ವೆತಸ್ಮಿನ್ ಪುರೇ ಜಾಗ್ರತಿ' ಎಂದಿರುವುದರಿಂದ ಲಕ್ಷ್ಮೀದೇವಿ ನಿತ್ಯಮುಕ್ತಳಾದ್ದರಿಂದ, ಮುಕ್ತರಿಗೆ ದೇಹವಿಲ್ಲದಿರುವುದರಿಂದ ಇವರು ಕೂಡಾ ಇಂದ್ರಿಯ-ವಿಷಯ-ಪ್ರಕಾಶಗಳನ್ನು ಅಪೇಕ್ಷಿಸದೆಯೇ ಜ್ಞಾನವನ್ನು ಮಾಡಿಕೊಳ್ಳುತ್ತಾರೆ. ಆದ್ದರಿಂದ ಅವರಲ್ಲಿ ಈ ಲಕ್ಷಣವು ಅತಿಪ್ರಸಕ್ತವಾಗುತ್ತದೆ. ಆದ್ದರಿಂದ 'ಸ್ವಾಶ್ರಯಾಶ್ರಯಃ' ಎಂದು ಹೇಳಿದರು. ಅಂದರೆ ರಮಾ-ಮುಕ್ತ-ಪ್ರಾಣರಿಗೂ ಈ ಪರಮಾತ್ಮನೇ ಆಧಾರನಾಗಿದ್ದಾನೆ. ಇವನಲ್ಲಿಯ ಸ್ವಾತಂತ್ರ್ಯೇಣ ಸರ್ವಜ್ಞತ್ವ ಲಕ್ಷಣ ಇದು ಯಾರಲ್ಲೂ ಬರುವುದಿಲ್ಲ ॥ ೯ ॥

ಈ ರೀತಿ ಪುರಾಣದ ಲಕ್ಷಣಗಳನ್ನು ತಿಳಿಸಿ ವಿರಾಟ್‌ನಾಮಕನಾದ ವಿರಿಂಚನ ಉತ್ಪತ್ತಿಯನ್ನು ಹೇಳಲು ಮೊದಲಿಗೆ ವಿರಿಂಚಸೃಷ್ಟವಾದ ಪುರುಷಾಖ್ಯ ಹರಿಯ ಅವತಾರವನ್ನು ಹೇಳುತ್ತ ಶ್ರೀಹರಿ ಮಾಡಿದ ನೀರಿನ ಸೃಷ್ಟಿಯನ್ನು ಹೇಳುವರು-

**ಪುರುಷೋಽಂಡಂ ವಿನಿರ್ಭಿದ್ಯ ಯದಾಽಸೌ ಸ ವಿನಿರ್ಗತಃ ।**
**ಆತ್ಮನೋಽಯನಮನ್ವಿಚ್ಛನ್ನಪೋಽಸ್ರಾಕ್ಷೀಚ್ಛುಚಿಃ ಶುಚೀಃ ॥ ೧೦ ॥**

**ಸಃ** ಬ್ರಹ್ಮಾಂಡದಲ್ಲಿ ಪ್ರವಿಷ್ಟನಾದ ವಿಷ್ಣುವು, **ಅಂಡಂ ವಿನಿರ್ಭಿದ್ಯ** ತನ್ನ ಶರೀರ ಪರಿಮಿತ ಅವಕಾಶ ಉಳ್ಳದ್ದನ್ನಾಗಿ ಮಾಡಿ, **ವಿನಿರ್ಗತಃ** ಪ್ರಕಾಶಗೊಂಡನೋ ಆಗ, **ಪುರುಷಃ** ಪುರುಷನಾಮಕನಾಗಿ, **ಅಯನಂ** ಸ್ಥಾನವನ್ನು, **ಅನ್ವಿಚ್ಛನ್** ಇಚ್ಛಿಸಿ, **ಯತಃ** ಯಾವ ಕಾರಣ **ಶುಚಿಃ** ಸ್ವಯಂ ಶುದ್ಧನೋ ಆದ್ದರಿಂದ, **ಶುಚೀಃ** ಶುದ್ಧವಾದ, **ಅಪಃ** ಗರ್ಭೋದಕವನ್ನು **ಅಸ್ರಾಕ್ಷೀತ್** ಸೃಷ್ಟಿಸಿದನು.

ಇಲ್ಲಿ 'ವಿನಿರ್ಗತಃ' ಎಂದರೆ ಹೊರಗೆ ಬಂದನು ಎಂದರ್ಥ ತೋರುವುದು ಕಾರಣ ವ್ಯಾಖ್ಯಾನಿಸುವರು-

**ತಾತ್ಪರ್ಯ- ವಿನಿರ್ಗತಃ ಪ್ರಕಾಶಿತಃ ।**

ಶ್ರೀಹರಿಯು ಬ್ರಹ್ಮಾಂಡದಲ್ಲಿ ಪ್ರಕಾಶಿಸಿದನು ಎಂದರ್ಥ. ಗತ್ಯರ್ಥಕಗಳು ಜ್ಞಾನಾರ್ಥಕವಾಗಿವೆ. ಆದ್ದರಿಂದ ಈ ರೀತಿಯಾಗಿ ಅರ್ಥ ಮಾಡಬೇಕು.

*ನಾರಾಯಣನಾಮ ನಿರ್ವಚಮಾಡುವ ಮೂಲಕ ಅಬಾವಾಸವನ್ನು (ನೀರಿನಲ್ಲಿ ವಾಸಿಸುವುದು) ದೃಢಪಡಿಸುವರು-*

**ತಾಸ್ವವಾತ್ಸೀತ್ ಸ್ವಸೃಷ್ಟಾಸು ಸಹಸ್ರಪರಿವತ್ಸರಾನ್ ।**
**ತೇನ ನಾರಾಯಣೋ ನಾಮ ಯದಪಃ ಪುರುಷೋದ್ಭವಾಃ ॥ ೧೧ ॥**

**ಸ್ವಸೃಷ್ಟಾಸು** ತಾನು ಸೃಷ್ಟಿಸಿದ, **ತಾಸು** ನೀರಿನಲ್ಲಿ, **ಸಹಸ್ರಪರಿವತ್ಸರಾನ್** ಸಾವಿರ ವರ್ಷಪರ್ಯಂತ, **ಅವಾತ್ಸೀತ್** ವಾಸ ಮಾಡಿದನು, **ತೇನ** ಆದ್ದರಿಂದ, **ನಾರಾಯಣೋ ನಾಮ ಅಭೂತ್** ನಾರಾಯಣ ಎಂಬ ಹೆಸರು ಬಂದಿತು. ಇದರಿಂದ ಅಬಯನ ಅಬ್ವಾಸ ಎಂದು ಹೆಸರು ಬಿಟ್ಟು ನಾರಾಯಣ ಎಂಬ ಹೆಸರೇಕೆ ಎಂದರೆ, ಯತ್ ನಾಶವಿಲ್ಲದ್ದರಿಂದ ಪುರುಷನು ನರನು, **ಪುರುಷೋದ್ಭವಾಃ ಆಪಃ** ಅವನಿಂದ (ನರನಿಂದ) ಜನಿಸಿದ ನಾರಾ ಎಂದರೆ ನೀರು, ಅವು ಅಯನ ಆಶ್ರಯವಾದವನು ನಾರಾಯಣ ಎಂದು ಭಾವ.

ಈ ಎರಡೂ ಶ್ಲೋಕಗಳಿಗೆ ನಾವು ಹೇಳಿದ್ದೇ ಅರ್ಥವೆಂದು ನಿಶ್ಚಯಿಸಲು ಪ್ರಮಾಣ ಸಂವಾದ ತೋರಿಸುವರು-

**ತಾತ್ಪರ್ಯ- ಅಂಡಂ ಪ್ರವಿಷ್ಟೋ ಯೋ ವಿಷ್ಣುಃ ಸೋಽಂಡಂ ಭಿತ್ವಾ ಪ್ರಕಾಶಿತಃ ।**
**ಸೋಽಪೋಽಸೃಜತ್ತತೋ ನಾರಾ ನರೋ ನಾಶಾತ್ ಪರೋ ಯತಃ ॥**
**-ಇತಿ ನಾರಾಯಣಾಧ್ಯಾತ್ಮೇ**

ಯಾವ ವಿಷ್ಣುವು ಬ್ರಹ್ಮಾಂಡವನ್ನು ಪ್ರವೇಶಿಸಿದನೋ ಆತನು ಅಂಡವನ್ನು ವ್ಯಾಪಿಸಿ ಅಭಿವ್ಯಕ್ತನಾದನು. ಆ ಸರ್ವೋತ್ತಮನಾದ ಶ್ರೀಹರಿಯು ನಾಶವಿಲ್ಲದಿರುವುದರಿಂದ ನರನೆನಿಸುತ್ತಾನೆ. ಶ್ರೀಹರಿಯು ನೀರನ್ನು ಸೃಷ್ಟಿಸಿದ್ದರಿಂದ ನೀರುಗಳು ನಾರಾಃ ಎನಿಸುತ್ತವೆ. (ಆ ಜಲವು ಇವನಿಗೆ ಅಯನ (ಆಶ್ರಯವಾದ್ದರಿಂದ) ವಿಷ್ಣುವಿಗೆ ನಾರಾಯಣನೆಂಬ ನಾಮ ಎಂದು ಭಾವ. ಹೀಗೆಂದು ನಾರಾಯಣಾಧ್ಯತ್ಮದಲ್ಲಿ ಹೇಳಿದೆ. ॥ ೧೧ ॥

*ಶ್ರೀಹರಿಯ ಈ ಸೃಷ್ಟಿಯು ತನ್ನ ಆಧೀನವಾದ ಸಾಧನಾಂತರ ಸಹಕೃತವೆಂದು ಹೇಳುವರು. ಪ್ರಕೃತ್ಯಾದಿಗಳು ಉಪಾದನಕಾರಣ, ಕಾಲ-ಕರ್ಮಾದಿಗಳು ನಿಮಿತ್ತಕಾರಣ, ಜೀವರು ಅದೃಷ್ಟದ್ವಾರಾ ಕರ್ತೃಗಳು ಆಗುವರು. ಇವುಗಳಿಂದಲೇ ಜಗತ್ತು ಹುಟ್ಟುವಾಗ ಈಶ್ವರನೇಕೆ ಎಂಬ ಶಂಕೆಯನ್ನು ನಿರಾಕರಿಸುವರು-*

**ದ್ರವ್ಯಂ ಕರ್ಮ ಚ ಕಾಲಶ್ಚ ಸ್ವಾಭಾವೋ ಜೀವ ಏವ ಚ ।**
**ಯದನುಗ್ರಹತಃ ಸಂತಿ ನ ಸಂತಿ ಯದುಪೇಕ್ಷಯಾ ॥ ೧೨ ॥**

**ದ್ರವ್ಯಂ** ಪ್ರಕೃತ್ಯಾದಿಗಳು, **ಕರ್ಮ** ಪುಣ್ಯ-ಪಾಪಗಳು, **ಕಾಲಃ** ಕಾಲವು, **ಸ್ವಭಾವಃ** ಪ್ರಕೃತ್ಯಾದಿಗಳ ಪರಿಣಾಮಾದಿಗಳು, **ಜೀವಃ** ಜೀವನು, **ಯದನುಗ್ರಹತಃ ಏವ** ಯಾವನ ಅನುಗ್ರಹದಿಂದಲೇ, **ಸಂತಿ** ಕಾರ್ಯ ಮಾಡಲು ಸಮರ್ಥವಾಗುತ್ತವೋ, **ಯದುಪೇಕ್ಷಯಾ ನ ಸಂತಿ** ಯಾವನ ಅನುಗ್ರಹವಿಲ್ಲದೇ ಕಾರ್ಯಮಾಡಲಾರವೋ, ಅದ್ದರಿಂದ ಇವುಗಳಿಗೆ ಅನುಗ್ರಾಹಕನಾಗಿ ಈಶ್ವರನನ್ನು ಒಪ್ಪಲೇಬೇಕು. ।। ೧೨ ।।

*ಶ್ರೀಹರಿಯು ನೀರಿನಲ್ಲಿ ಮಲಗಿದನೆಂದು ಹೇಳಿದರು. ನಂತರ ಏನು ಮಾಡಿದನು ಎಂದು ಹೇಳುವರು-*

**ಏಕೋ ನಾನಾತ್ವಮನ್ವಿಚ್ಛನ್ ಯೋಗತಲ್ಪಾತ್ಸಮುತ್ಥಿತಃ ।**
**ವೀರ್ಯಂ ಹಿರಣ್ಮಯಂ ದೇವೋ ಮಾಯಯಾ ವ್ಯಸೃಜತ್ ತ್ರಿಧಾ ।। ೧೩ ।।**

**ಅಧಿದೈವಮಥಾಧ್ಯಾತ್ಮಮಧಿಭೂತಮಿತಿ ಪ್ರಭುಃ ।**
**ಪುನಸ್ತತ್ಪೌರುಷಂ ವೀರ್ಯಂ ತ್ರಿಧಾಽಭಿದ್ಯತ ತಚ್ಛೃಣು ।। ೧೪ ।।**

**ಪ್ರಭುಃ ದೇವಃ** ನೀರಿನಲ್ಲಿ ಮಲಗಿದ ಶ್ರೀನಾರಾಯಣನು, **ಏಕಃ** ಒಬ್ಬನೇ, **ನಾನಾತ್ವಂ ಅನ್ವಿಚ್ಛನ್** ಅಧಿದೈವಾದಿಗಳಿಗೆ ನಿಯಾಮಕವಾದ ಬಹುರೂಪವುಳ್ಳವನಾಗಬೇಕೆಂದು ಇಚ್ಛಿಸಿ, **ಯೋಗತಲ್ಪಾತ್** ಯೋಗನಿದ್ರೆಯಿಂದ, **ಸಮುತ್ಥಿತಃ** ಎದ್ದನು, **ಹಿರಣ್ಮಯಂ ವೀರ್ಯಂ** ಹಿರಣ್ಯಾತ್ಮಕವಾದ ತನ್ನ ವಿರ್ಯಾತ್ಮಕವೂ ಆದ ಬ್ರಹ್ಮಾಂಡವನ್ನು, **ಮಾಯಾಯಾ** ತನ್ನ ಇಚ್ಛೆಯಿಂದ, **ಅಧಿದೈವಂ ಅಧ್ಯಾತ್ಮಂ ಅಧಿಭೂತಂ ಇತಿ** ಅಧಿದೈವ-ಅಧ್ಯಾತ್ಮ-ಅಧಿಭೂತವೆಂದು, ಮತ್ತೆ, **ತತ್ಪೌರುಷಂ ವೀರ್ಯಂ** ಬ್ರಹ್ಮಾಂಡದಲ್ಲಿ ಬ್ರಹ್ಮದೇಹವಾಗಿ ಸೃಷ್ಟವಾದ ವೀರ್ಯವು, **ತ್ರಿಧಾ** ತ್ರಿವಿಧಸೃಷ್ಟಿಗೆ ಕಾರಣವಾಯಿತು. **ತತ್** ಅದನ್ನು, **ಶೃಣು** ಕೇಳು. ।। ೧೪ ।।

**ಅಂತಃ ಶರೀರ ಆಕಾಶೇ ಪುರುಷಸ್ಯ ವಿಚೇಷ್ಟತಃ ।**
**ಓಜಃ ಸಹೋ ಬಲಂ ಜಜ್ಞೇ ತತಃ ಪ್ರಾಣೋ ಮಹಾನಭೂತ್ ।। ೧೫ ।।**

**ಶರೀರೇ** ವಿರಾಡ್‌ನಾಮಕ ಬ್ರಹ್ಮಶರೀರದಲ್ಲಿ, **ಅಂತಃ ಆಕಾಶೇ** ಮಧ್ಯವಿರುವ ಅವಕಾಶದಲ್ಲಿ, **ವಿಚೇಷ್ಟತಃ** ವಿಶೇಷವಾಗಿ ಸ್ವತಂತ್ರವಾಗಿ ವರ್ತಿಸುವ, **ಪುರುಷಸ್ಯ** ಪುರುಷನಾಮಕ ಶ್ರೀಹರಿಯಿಂದ, **ವಿಚೇಷ್ಟತಃ** ವಿವಿಧವಾಗಿ ವ್ಯಾಪಾರ ಮಾಡುವ, **ಪುರುಷಸ್ಯ** ಬ್ರಹ್ಮದೇವರಿಗೆ, **ಓಜಃ** ಪರಾಭವಶಕ್ತಿಯು, **ಸಹಃ** ಸಹನಶಕ್ತಿಯು, **ಬಲಂ**

ಸ್ವೇಚ್ಛಾಕರಣಶಕ್ತಿಯು, **ತತಃ** ಅನಂತರ, **ಮಹಾನ್ ಪ್ರಾಣಃ** ಓಜಸ್ಸು ಮೊದಲಾದವುಗಳಿಗೆ ಅಭಿಮಾನಿಗಳಾದ ಮುಖ್ಯಪ್ರಾಣದೇವರು, **ಅಭೂತ್** ಜನಿಸಿದರು. ಬ್ರಹ್ಮಾಂತರ್ಯಾಮಿಯಾದ ಹರಿಯ ಓಜೋಬಲಾನುವಿಷ್ಟನಾದ ಹಿರಣ್ಯಗರ್ಭ, ಸಹೋಬಲಗಳಿಂದ ಸರ್ವೇಂದ್ರಿಯನಿಯಾಮಕನಾದ ಮುಖ್ಯಪ್ರಾಣನು ಜನಿಸಿದನೆಂದು ಭಾವ.

ಪ್ರಾಣನ ಮಹತ್ತ್ವವನ್ನು ಹೇಳುವರು-

**ಅನುಪ್ರಾಣಂತಿ ಯಂ ಪ್ರಾಣಾಃ ಪ್ರಾಣಂತಂ ಸರ್ವಜಂತುಷು ।**
**ಅಪಾನಂ ತಮಪಾನಂತಿ ನರದೇವಮಿವಾನುಗಾಃ ॥ ೧೬ ॥**

**ಅನುಗಾಃ** ಭೃತ್ಯರು, **ನರದೇವಂ ಇವ** ರಾಜನನ್ನು ಅನುಸರಿಸಿದಂತೆ, **ಸರ್ವಜಂತುಷು** ಎಲ್ಲ ಪ್ರಾಣಿಗಳಲ್ಲಿ, **ಪ್ರಾಣಂತಂ** ಚೇಷ್ಟಿಸುವ, **ಯಂ** ಯಾವ ಮುಖ್ಯ ಪ್ರಾಣನನ್ನು, **ಪ್ರಾಣಾಃ** ಇಂದ್ರಿಯದೇವತೆಗಳಾದ ಸೂರ್ಯಾದಿಗಳು, **ಅನುಪ್ರಾಣಂತಿ** ಅನುಸರಿಸಿ ಚೇಷ್ಟಿಸುವರು, **ಅಪಾನಂತಂ** ಚೇಷ್ಟೆಯನ್ನು ಬಿಡುವವನನ್ನು ಅನುಸರಿಸಿ, **ಅಪಾನಂತಿ** ಚೇಷ್ಟೆಯನ್ನು ತ್ಯಜಿಸುವರು, ಮುಖ್ಯಪ್ರಾಣನನ್ನೇ ಅನುಸರಿಸಿ ಇರುತ್ತಾರೆ.

**ಅಪಾನಂತಂ** ಪಿಂಗಲಾನಾಡಿನಿಂದ ಕೆಳಗೆ ಹೋಗುವವನನ್ನು ಅನುಸರಿಸಿ, **ಅಪಾನಂತಿ** ಕೆಳಗೆ ಹೋಗುತ್ತಾರೆ ಎಂದೂ ಅರ್ಥ. ॥ ೧೬ ॥

ಇಡಾ-ಪಿಂಗಲಾಗಳಲ್ಲಿ ಪ್ರಾಣಾಪಾನರ ಚೇಷ್ಟಾ-ಫಲಗಳನ್ನು ಹೇಳುವರು-

**ಪ್ರಾಣೇನ ಕ್ಷಿಪತಾ ಕ್ಷುತ್ತೃಡಂತರಾ ಜಾಯತೇ ವಿಭೋಃ ।**
**ಪಿಪಾಸಾತೋ ಜಕ್ಷತಶ್ಚ ಪ್ರಾಙ್ಮುಖಂ ನಿರಭಿದ್ಯತ ॥ ೧೭ ॥**

**ಪ್ರಾಣೇನ** ಮುಖ್ಯಪ್ರಾಣ ಮತ್ತು ಅಪಾನರಿಂದ, **ಕ್ಷಿಪತಾ** ಚಾಲನೆ ಮಾಡಿದ ಕಾರಣ, **ವಿಭೋಃ** ಬ್ರಹ್ಮದೇವರಿಗೆ, **ಕ್ಷುತ್** ಹಸಿವೆಯು, **ತೃಟ್** ನಿರಡಿಕೆ, **ಅಂತರಾ ಜಾಯತೇ** ಹುಟ್ಟುವವು, **ಪಿಪಾಸತಃ** ನಿರನ್ನು ಪಾನ ಮಾಡಲಿಚ್ಛಿಸುವ, **ಜಕ್ಷತಃ** ತಿನ್ನಲಿಚ್ಛಿಸುವವನಿಗೆ, **ಪ್ರಾಕ್** ಮೊದಲಿಗೆ, **ಮುಖಂ ನಿರಭಿದ್ಯತ** ಮುಖವು ವ್ಯಕ್ತವಾಯಿತು. ॥ ೧೭ ॥

**ಮುಖತಸ್ತಾಲು ನಿರ್ಭಿನ್ನಂ ಜಿಹ್ವಾ ತತ್ರೋಪಜಾಯತೇ ।**
**ತತೋ ನಾನಾರಸೋ ಜಜ್ಞೇ ಜಿಹ್ವಯಾ ಯೋಽಧಿಗಮ್ಯತೇ ॥ ೧೮ ॥**

**ಮುಖತಃ** ಮುಖದಲ್ಲಿ, **ತಾಲು** ತಾಲು ಎಂಬ ಅಧಿಷ್ಠಾನ ಮತ್ತು ಇಂದ್ರಿಯ ಅದರ ಅಭಿಮಾನಿಯು, **ನಿರ್ಭಿನ್ನಂ** ಜನಿಸಿದವು, **ತತ್ರ** ತಾಲುವಿನಲ್ಲಿ, **ಜಿಹ್ವಾ** ನಾಲಿಗೆ ಅದರ ಅಭಿಮಾನಿ ವರುಣನು ಜನಿಸಿದನು. (ಐತರೇಯದಲ್ಲಿ ಅಧಿದೈವಸೃಷ್ಟಿಯನ್ನೂ ಬ್ರಹ್ಮ ದೇವರಿಂದ ಹೇಳಿದೆ.) **ಜಿಹ್ವಯಾ** ರಸನೇಂದ್ರಿಯದಿಂದ, **ಯಃ ಅಧಿಗಮ್ಯತೇ** ಯಾವುದು ತಿಳಿಯಲ್ಪಡುವುದೊ, **ನಾನಾರಸಾಃ** ಅನೇಕರಸಗಳು, **ತತಃ ಜಜ್ಞೇ** ನಂತರ ಜನಿಸಿದವು. ॥ ೧೮ ॥

ಅಂತು ಅಧಿಷ್ಠಾನ-ಇಂದ್ರಿಯ-ಅಭಿಮಾನಿ-ವಿಷಯ ಈ ನಾಲ್ಕರಲ್ಲಿ ಯಾವುದನ್ನು ಹೇಳಿಲ್ಲವೊ ಅದನ್ನೂ ಊಹಿಸಬೇಕು.

**ವಿವಕ್ಷೋರ್ಮುಖತೋ ಭೂಮ್ನೋ ವಹ್ನಿರ್ವಾಗ್ವ್ಯಾಹೃತಂ ತಯೋಃ ।**
**ಜಲೇ ವೈ ತಸ್ಯ ಸುಚಿರಂ ನಿರೋಧಃ ಸಮಜಾಯತ ॥ ೧೯ ॥**

**ವಿವಕ್ಷೋಃ** ಮಾತನಾಡಲು ಇಚ್ಛಿಸುವ, **ಮುಖತಃ** ಮುಖದಿಂದಲೇ, **ವಹ್ನಿಃ** ವಹ್ನಿ ಎಂಬ ದೇವತೆ, **ವಾಕ್** ವಾಗಿಂದ್ರಿಯವು ಅದಕ್ಕೆ ಅಭಿಮಾನಿಯಾದ ವಹ್ನಿಯ ಅಂಶವು, **ವ್ಯಾಹೃತಂ** ಅಭಿವದನ (ಮಾತಾನಾಡುವುದು) ಜನಿಸಿದವು, **ತಯೋಃ** ವಾಗಿಂದ್ರಿಯ-ತದಭಿಮಾನಿಯಿಂದ, **ಜಲೇ** ಗರ್ಭೋದಕದಲ್ಲಿರುವ, **ತಸ್ಯ** ಬ್ರಹ್ಮದೇವರಿಗೆ ಗಾಳಿ ಹೋಗುವ ದ್ವಾರವಿಲ್ಲದ್ದರಿಂದ, **ಸುಚಿರಂ** ಬಹಳ ಕಾಲ, **ನಿರೋಧಃ ಸಮಜಾಯತ** ಶ್ವಾಸನಿರೋಧವಾಯಿತು. ॥ ೧೯ ॥

**ನಾಸಿಕೇ ನಿರಭಿದ್ಯೇತಾಂ ದೋಧೂಯತಿ ನಭಸ್ವತಿ ।**
**ತತ್ರ ವಾಯುರ್ಗಂಧವಹೋ ಘ್ರಾಣೋ ನಸಿ ಜಿಘೃಕ್ಷತಃ ॥ ೨೦ ॥**

**ನಭಸ್ವತಿ** ಪ್ರಾಣವಾಯುವು, **ದೋಧೂಯತಿ ಸತಿ** ಬಹಳವಾಗಿ ಚಲಿಸಿದಾಗ, **ನಾಸಿಕೇ ನಿರಭಿದ್ಯೇತಾಂ** ಘ್ರಾಣೇಂದ್ರಿಯಗೊಲಕಗಳು (ಮೂಗಿನ ಹೊರಳಿಗಳು) ಜನಿಸಿದವು, **ತತ್ರ** ಅಲ್ಲಿ, **ವಾಯುಃ** ವಾಯು ಎಂಬ ದೇವತೆಯು, **ಗಂಧವಹಃ** ಗಂಧವನ್ನು ಗ್ರಹಿಸುವ, **ಘ್ರಾಣಂ** ಘ್ರಾಣೇಂದ್ರಿಯವು ಅದರ ಅಭಿಮಾನಿ ನಾಸಿಕ್ಯವಾಯುವು, **ಜಿಘೃಕ್ಷತಃ** ಆಘ್ರಾಣಿಸಲಿಚ್ಛಿಸುವವರಿಂದ, **ಜಾತಃ** ಜನಿಸಿತು, ಗಂಧವಹ ಎಂಬುದರಿಂದ ಗಂಧವೇ ವಿಷಯ ಎಂದು ತಿಳಿಸಿದಂತಾಯಿತು. ॥ ೨೦ ॥

**ಯದಾತ್ಮನಿ ನಿರಾಲೋಕಃ ಆತ್ಮಾನಂ ಚ ದಿದೃಕ್ಷತಃ ।**
**ನಿರ್ಭಿನ್ನೇ ಅಕ್ಷಿಣೀ ತಸ್ಯ ಜ್ಯೋತಿಶ್ಚಕ್ಷುರ್ಗುಣಗ್ರಹಃ ॥ ೨೧ ॥**

**(ಸಃ** ಬ್ರಹ್ಮದೇವರು) **ಯದಾ** ಯಾವಾಗ, **ಆತ್ಮನಿ** ದೇಹದಲ್ಲಿ, **ನಿರಾಲೋಕಃ ಆಸೀತ್** ಪ್ರಕಾಶಶೂನ್ಯರಾದರೋ, **ತದಾ** ಆಗ, **ಆತ್ಮಾನಂ** ತನ್ನನ್ನು, **ಚ** ಬೇರೆ ವಸ್ತುಗಳನ್ನು, **ದಿದೃಕ್ಷತಃ** ನೋಡಲಿಚ್ಛಿಸುವ, **ತಸ್ಯ** ಬ್ರಹ್ಮನಿಗೆ, **ಅಕ್ಷಿಣೀ** ಕಣ್ಣಿನ ಗೋಲಕಗಳು ಜನಿಸಿದವು, **ಜ್ಯೋತಿಃ** ಸೂರ್ಯನು, **ಚಕ್ಷುಃ** ಇಂದ್ರಿಯವು ಅದರ ಅಭಿಮಾನಿಯಾದ ಸೂರ್ಯನ ಅಂಶವು, ಅವುಗಳಿಂದ, **ಗುಣಗ್ರಹಃ** ರೂಪಗ್ರಹಣವು ಉಂಟಾಯಿತು. ಇಲ್ಲಿ ರೂಪವೇ ವಿಷಯವೆಂದಂತಾಯಿತು.

**ಬೋಧ್ಯಮಾನಸ್ಯ ಋಷಿಭಿರಾತ್ಮನಸ್ತಜ್ಜಿಘೃಕ್ಷತಃ ।**
**ಕರ್ಣೌ ಚ ನಿರಭಿದ್ಯೇತಾಂ ದಿಶಃ ಶ್ರೋತ್ರಂ ಗುಣಗ್ರಹಃ ॥ ೨೨ ॥**

**ಋಷಿಭಿಃ** ಜ್ಞಾನಿಗಳಾದ ಅಗ್ನ್ಯಾದಿದೇವತೆಗಳಿಂದ, (ಜ್ಞಾನಸಾಧನವಾದ ವೇದಾದಿಗಳಿಂದ) **ಬೋಧ್ಯಮಾನಸ್ಯ** ವೇದದಿಂದ ತಿಳಿಯಿರಿ ಎಂದು ವಿಜ್ಞಾಪಿಸಲ್ಪಡುವ, **ಆತ್ಮನಃ** ವಿರಿಂಚನಿಗೆ, **ಜಿಘೃಕ್ಷತಃ** ವಿಜ್ಞಾಪನ ಕೇಳಲಿಚ್ಛಿಸುವವನಿಗೆ, **ಕರ್ಣೌ ನಿರಭಿದ್ಯೇತಾಂ** ಗೋಲಕಗಳು ಜನಿಸಿದವು, **ಶ್ರೋತ್ರಂ** ಶ್ರವಣೇಂದ್ರಿಯವು, **ದಿಶಃ** ದಿಕ್ ನಾಮಕರಾದ ದೇವತೆಗಳು ಅದರ ಅಭಿಮಾನಿಗಳು ಅವುಗಳಿಂದ, **ಗುಣಗ್ರಹಃ** ಶಬ್ದಗ್ರಹಣವು ಜನಿಸಿತು. ಇಲ್ಲಿ ಶಬ್ದವೇ ವಿಷಯವಾಗಿದೆ ಎಂದು ತಿಳಿಸಿದಂತಾಯಿತು. ॥ ೨೨ ॥

**ವಸ್ತುನೋ ಮೃದುಕಾಠಿನ್ಯಲಘುಗುರ್ವೂಷ್ಣಶೀತತಾಮ್ ।**
**ಜಿಘೃಕ್ಷತಸ್ತ್ವಙ್ ನಿರ್ಭಿನ್ನಾ ತಸ್ಯಾಂ ರೋಮಮಹೀರುಹಾಃ ।**
**ತತ್ರ ಚಾಽಂತರ್ಬಹಿರ್ವ್ಯಾಪ್ತಃ ತ್ವಚಾ ಲಬ್ಧಗುಣಾವೃತಃ ॥ ೨೩ ॥**

**ವಸ್ತುನಃ** ಘಟಾದಿ ಪದಾರ್ಥಗಳ, **ಮೃದುಕಾಠಿನ್ಯಲಘುಗುರ್ವೂಷ್ಣಶೀತತಾಂ** ಮೃದುತ್ವ-ಕಾಠಿಣ್ಯ-ಲಘುತ್ವ-ಉಷ್ಣತ್ವ-ಗುರುತಾ-ಶೀತತೆಗಳನ್ನು, **ಜಿಘೃಕ್ಷತಃ** ತಿಳಿಯಲಿಚ್ಛಿಸುವ ಬ್ರಹ್ಮನಿಗೆ, **ತ್ವಕ್** ಚರ್ಮವೆಂಬ ಅಧಿಷ್ಠಾನವು, **ನಿರ್ಭಿನ್ನಾ** ಜನಿಸಿತು. **ತಸ್ಯಾಂ** ಚರ್ಮದಲ್ಲಿ, **ರೋಮಮಹೀರುಹಾಃ** ರೋಮಶಬ್ದವಾಚ್ಯವಾದ ತ್ವಗಿಂದ್ರಿಯವು, ಅದರ ಅಭಿಮಾನಿಗಳು, ದೇವತೆಗಳಲ್ಲಿ ಮಹೀರುಹ ಎಂಬ ಹೆಸರಿನ ಪಾರಿಜಾತಾದಿದೇವತೆಗಳು ಹುಟ್ಟಿದರು, **ತತ್ರ** ಅಧಿಷ್ಠಾನವಾದ ಚರ್ಮದಲ್ಲಿ, **ಅಂತಃ ಬಹಿಃ ವ್ಯಾಪ್ತಃ** ಹೊರಗೂ ಒಳಗೂ ವ್ಯಾಪ್ತವಾದ **ತ್ವಚಾ** ತ್ವಗಿಂದ್ರಿಯದಿಂದ, **ಲಬ್ಧಗುಣಾವೃತಃ** ತಿಳಿಯುವ ಸ್ಪರ್ಶಗುಣದಿಂದ ಕೂಡಿದ, **ವಾತಃ** ವಾಯುವು ಜನಿಸಿದನು. ಇಲ್ಲಿ ಸ್ಪರ್ಶವೇ ವಿಷಯ. ಶರೀರದ ಹೊರಗೂ ಒಳಗೂ ಸ್ಪರ್ಶಜ್ಞಾನವು ಪ್ರಯೋಜನವೆಂದು ಸೂಚಿಸಿದಂತಾಯಿತು.

**ತ್ವಚಶ್ಚ ರೋಮನಾಮಾನಃ ವೃಕ್ಷನಾಮಾನ ಏವ ಚ ।**
**ದ್ವಿವಿಧಾಃ ಪಾರಿಜಾತಾದ್ಯಾ ಬಭೂವುಃ ಬ್ರಹ್ಮದೇಹತಃ ॥**

ಎಂದು ವಚನವಿದೆ ಮತ್ತು-

**ತ್ವಚಮಸ್ಯ ವಿನಿರ್ಭಿನ್ನಾಂ ವಿವಿಶುರ್ಧಿಷ್ಣ್ಯಮೌಷಧೀಃ ।**
**ಅಂಶೇನ ಲೋಮಭಿಃ......'**

ಎಂದು ತೃತೀಯಸ್ಕಂಧದಲ್ಲಿ ಹೇಳುವುದರಿಂದ ಉಕ್ತವಾದ ಅರ್ಥ ಸರಿಯಾಗಿದೆ.

**ಹಸ್ತೌ ರುರುಹತುಸ್ತಸ್ಯ ನಾನಾಕರ್ಮಚಿಕೀರ್ಷಯಾ ।**
**ತಯೋಸ್ತು ಬಲವಾನಿಂದ್ರ ಆದಾನಮುಭಯಾಶ್ರಯಮ್ ॥ ೨೪ ॥**

**ನಾನಾಕರ್ಮಚಿಕೀರ್ಷಯಾ** ಅನೇಕಕಾರ್ಯಗಳನ್ನು ಮಾಡುವ ಇಚ್ಛೆಯಿಂದ, **ಹಸ್ತೌ ರುರುಹತುಃ** ಕೈಗಳೆಂಬ ಅಧಿಷ್ಠಾನಗಳು, **ಬಲವಾನ್** ಬಲ ಎಂಬ ಇಂದ್ರಿಯವು ತದಭಿಮಾನಿಯು ಜನಿಸಿದವು, **ತಯೋಃ** ಅವುಗಳಲ್ಲಿ, **ಇಂದ್ರಃ** ಇಂದ್ರನು, **ಉಭಯಾಶ್ರಯಂ ಆದಾನಂ** ಇಂದ್ರಿಯಾಭಿಮಾನಿಗಳೇ ಆಶ್ರಯವಾಗಿ ಉಳ್ಳ ಸ್ವೀಕಾರಕ್ರಿಯೆಯು ಜನಿಸಿತು.

**ಗತಿಂ ಚಿಕೀರ್ಷತಃ ಪಾದೌ ರುರುಹಾತೇಽಭಿಕಾಮತಃ ।**
**ಪದ್ಭ್ಯಾಂ ಹವ್ಯಂ ಸ್ವಯಂ ಯಜ್ಞಃ ಕರ್ಮ ಯತ್ ಕ್ರಿಯತೇ ನೃಭಿಃ ॥ ೨೫ ॥**

**ಅಭಿಕಾಮತಃ** ಸ್ವೇಚ್ಛೆಯಿಂದ, **ಗತಿಂ** ಗಮನ (ನಡೆಯುವುದು) ಕ್ರಿಯೆಯನ್ನು, **ಚಿಕೀರ್ಷತಃ** ಮಾಡಲಿಚ್ಛಿಸಿದ ಬ್ರಹ್ಮದೇವರಿಗೆ, **ಪಾದೌ** ಅಧಿಷ್ಠಾನಗಳು ಮತ್ತು ಇಂದ್ರಿಯಗಳು, **ರುರುಹಾತೇ** ಜನಿಸಿದವು, **ಪದ್ಭ್ಯಾಂ** ಇಂದ್ರಿಯ ಮತ್ತು ಆಭಿಮಾನಿಗಳ ಜೊತೆಗೆ, **ಸ್ವಯಂ ಯಜ್ಞಃ** ಇಂದ್ರಪುತ್ರನು ಮತ್ತು ಅವನ ನಿಯಾಮಕನಾದ ಶ್ರೀಹರಿಯು ಜನಿಸಿದರು, **ನೃಭಿಃ** ಜನರಿಂದ, **ಹವ್ಯಂ ಕರ್ಮ** ಹವಿಸ್ಸಂಬಂಧಿಯಾದ ಹವನಾದಿಕಾರ್ಯಗಳು, **ಯತ್ ಕ್ರಿಯತೇ** ಏನು ಮಾಡಲ್ಪಡುವವೊ, **ತತ್** ಅವು, ಇಂದ್ರಪುತ್ರನಾದ ಯಜ್ಞನಿಂದ ಅಭಿಮನ್ಯಮಾನವಾದವುಗಳು. 'ಕ್ರಿಯಾಭಿಮಾನಾ-ದ್ಯಜ್ಞೋಽಸಾವಿಂದ್ರಪುತ್ರಃ' ಯಜ್ಞಕ್ರಿಯಾಕ್ಕೆ ಅಭಿಮಾನಿಯಾದವನು ಇಂದ್ರಪುತ್ರನಾದವನು ಎಂದು ಉಕ್ತವಾಗಿದೆ. ಯಾರನ್ನು ಉದ್ದೇಶಿಸಿ ಹವ್ಯಕರ್ಮ ಮಾಡುವವೋ ಅವನೇ ಸ್ವಯಂ ಯಜ್ಞನಾಮಕನಾದ ಪರಮಾತ್ಮನು ಎಂದರ್ಥ. ॥ ೨೫ ॥

**ನಿರಭಿದ್ಯತ ಶಿಶ್ನೋ ವೈ ಪ್ರಜಾನಂದಾಮೃತಾರ್ಥಿನಃ ।**
**ಉಪಸ್ಥ ಆಸೀತ್ ಕಾಮಾನಾಂ ಪ್ರಿಯಂ ತದುಭಯಾಶ್ರಯಮ್ ॥ ೨೬॥**

**ಪ್ರಜಾನಂದಾಮೃತರ್ಥಿನಃ** ಸಂತತಿ ಮತ್ತು ಮೈಥುನ ಜನ್ಯ ಆನಂದ ಎಂಬ ಅಮೃತವನ್ನು ಇಚ್ಛಿಸುವ ಬ್ರಹ್ಮನಿಗೆ, **ಶಿಶ್ನಃ** ಅಧಿಷ್ಠಾನವು, **ನಿರಭಿದ್ಯತ** ವ್ಯಕ್ತವಾಯಿತು, **ಉಪಸ್ಥಃ** ಜನನೇಂದ್ರಿಯವು ಅದರ ಅಭಿಮಾನಿಯು ಜನಿಸಿದನು. **ಕಾಮಾನಾಂ** ಕಾಮ್ಯರಾದ ಸ್ತ್ರೀಯರಿಂದ ಆಗುವ, **ಪ್ರಿಯಂ** ಸುಖವು ಅಭಿಮಾನಿಯು, **ತದುಭಯಾಶ್ರಯಂ** ಶಿಶ್ನ ಉಪಸ್ಥ ಎರಡರಿಂದಾಗುವ, **ಪ್ರಿಯಂ** ರತಿಸುಖವು ಜನಿಸಿತು.

**ಉತ್ಸಿಸೃಕ್ಷೋರ್ಧಾತುಮಲಂ ನಿರಭಿದ್ಯತ ವೈ ಗುದಮ್ ।**
**ತತಃ ಪಾಯುಸ್ತತೋ ಮಿತ್ರ ಉತ್ಸರ್ಗ ಉಭಯಾಶ್ರಯಃ ॥೨೭॥**

**ಧಾತುಮಲಂ** ಉಂಡ ಅನ್ನದ ಅಸಾರಭಾಗವನ್ನು, **ಉತ್ಸಿಸೃಕ್ಷೋಃ** ವಿಸರ್ಜಿಸಲು ಇಚ್ಛಿಸುವವನಿಗೆ, **ಗುದಂ ನಿರಭಿದ್ಯತ** ಮಲದ್ವಾರವು ಅಧಿಷ್ಠಾನವು ಜನಿಸಿತು, **ತತ್ರ** ಅಲ್ಲಿ **ಪಾಯುಃ** ಪಾಯು ಎಂಬ ಇಂದ್ರಿಯವು ಮತ್ತು ಅಭಿಮಾನಿಯು ಜನಿಸಿದವು, **ತತಃ** ಇಂದ್ರಿಯದಿಂದ, ದೇವತೆಗಳಲ್ಲಿ **ಮಿತ್ರಃ** ಮಿತ್ರನೆಂಬುವವನು ಜನಿಸಿದನು, **ಉಭಯಾಶ್ರಯಃ ಉತ್ಸರ್ಗಃ** ಇಂದ್ರಿಯ-ಅಭಿಮಾನಿಗಳನ್ನಾಶ್ರಯಿಸಿ ವಿಸರ್ಜನಕ್ರಿಯೆಯು ಜನಿಸಿತು.

ಬ್ರಹ್ಮದೇವರ ದೇಹ ದಿವ್ಯವಾದುದು. ಅಲ್ಲಿ ಮಲಾದಿಗಳು ಇರಲು ಹೇಗೆ ಸಾಧ್ಯ ಎಂಬ ಸಂಶಯವನ್ನು ಪ್ರಮಾಣದಿಂದ ಪರಿಹರಿಸುವರು -

ತಾತ್ಪರ್ಯ- ಮಲಾದಿಕಂ ಕದಾಚಿತ್ತು ಬ್ರಹ್ಮ ಲೋಕಾಭಿಪತ್ತಯೇ ।
ವಶಿತ್ವಾತ್ತಸ್ಯ ದಿವ್ಯತ್ವಾದಿಚ್ಛಯಾ ಭವತಿ ಪ್ರಭೋಃ ॥

ಚತುರ್ಮುಖನು ಪುರೀಷ-ಮಲ ಮತ್ತು ಅದರ ವಿಸರ್ಜನವನ್ನು ಜನರಿಗೆ ಹೊಂದಿಸಲು ಕೆಲವು ವೇಳೆ ತನ್ನ ಶರೀರದಲ್ಲಿ ತನ್ನ ಇಚ್ಛೆಯಿಂದಲೇ ಮಲವನ್ನು ನಿರ್ಮಿಸಿದನು. ಆದುದರಿಂದಲೇ ಸರ್ವರಿಗೂ ಮಲಾದಿಗಳು ಉಂಟಾದವು. ಚತುರ್ಮುಖನಿಗೆ ಸ್ವಾತಂತ್ರ್ಯವಿದ್ದುದರಿಂದಲೂ (ಅಂದರೆ ಪಾಯ್ವಾದಿ ಇಂದ್ರಿಯಾಭಿಮಾನಿದೇವತೆಗಳ ಅಧೀನತೆ ಇಲ್ಲದೇ ಇದ್ದುದರಿಂದ) ಬ್ರಹ್ಮದೇಹವು ದಿವ್ಯವಾಗಿರುವುದರಿಂದಲೂ (ಸ್ವಭಾವತಃ ಅಸಾರಾವೇಶವಿಲ್ಲದಿರುವುದರಿಂದ) ಚತುರ್ಮುಖನ ಇಚ್ಛೆಯಿಂದಲೇ ಮಲಾದಿಗಳು ಆಗುತ್ತವೆ ಎಂದು ಅಂಗೀಕರಿಸಬೇಕು.

ಬ್ರಹ್ಮನು ಇಂದ್ರಿಯಾಭಿಮಾನಿದೇವತೆಗಳಿಂದ ತಮ್ಮ ತಮ್ಮ ವ್ಯಾಪಾರವನ್ನು ಸಮಸ್ತಜನರ ದೇಹದಲ್ಲಿ ಮಾಡಿಸುವುದಕ್ಕಾಗಿ ತನ್ನ ದೇಹದಲ್ಲಿಯೂ ಎಲ್ಲ ವ್ಯಾಪಾರಗಳನ್ನು ತೋರಿಸಿ ಕೊಂಡನು. ಆದ್ದರಿಂದ ಬ್ರಹ್ಮನ ದೇಹದಲ್ಲಿ ವಸ್ತುತಃ ಮಲಾದಿಗಳು ಇಲ್ಲದಿದ್ದರೂ ತನ್ನ ಇಚ್ಛೆಯಿಂದ ತತ್ಕಾಲದಲ್ಲಿ ಮಲವನ್ನು ಸೃಷ್ಟಿಸಿ ಉತ್ಸರ್ಜನಾದಿಗಳನ್ನು ತೋರಿಸಿದನು. ಇದು ಪ್ರಮಾಣಸಿದ್ಧ ಎಂದು ಮೂಲದಲ್ಲಿ ವೈಶಬ್ದದಿಂದ ಸೂಚಿತವಾಗಿದೆ.

*ಛಿದ್ರೋತ್ಪತ್ತಿಯನ್ನು ಹೇಳುವ ಪ್ರಸಂಗದಲ್ಲಿ ನಾಭಿರೂಪ ಛಿದ್ರೋತ್ಪತ್ತಿಯನ್ನು ಆದರ ಪ್ರಯೋಜನವನ್ನೂ ತಿಳಿಸುವರು-*

**ಆಸಿಸೃಕ್ಷೋಃ ಪುರಃ ಪುರ್ಯಾಂ ನಾಭಿದ್ವಾರಮಪಾವೃತಮ್ ।**
**ತತೋಽಪಾನಸ್ತತೋ ಮೃತ್ಯುಃ ಪೃಥಕ್ತ್ವಮುಭಯಾಶ್ರಯಮ್ ॥ ೨೮ ॥**

**ಪುರಃ** ತಾನಿರುವ ದೇಹದಿಂದ, **ಪುರ್ಯಾಂ** ಬೇರೆಯವರ ದೇಹದಲ್ಲಿ, **ಆಸಿಸೃಕ್ಷೋಃ** ಪ್ರವೇಶಿಸಲಿಚ್ಛಿಸುವ ಬ್ರಹ್ಮದೇವರಿಗೆ, **ನಾಭಿದ್ವಾರಂ ಅಪಾವೃತಂ** ಹೊಕ್ಕಳೆಂಬ ಮಾರ್ಗವು ವ್ಯಕ್ತವಾಯಿತು. **ತತಃ** ನಾಭಿಯಿಂದ, **ಅಪಾನಃ** ಅಪಾನನಾಮಕ ಮುಖ್ಯವಾಯುವು, **ತತಃ** ಅಪಾನನಿಂದ, **ಮೃತ್ಯುಃ** ಮೃತ್ಯುನಾಮಕ ಮುಖ್ಯವಾಯುವಿನ ರೂಪಾಂತರವು, ದೇವತೆಗಳಲ್ಲಿ ಜನಿಸಿತು. **ಪೃಥಕ್ತ್ವಂ** ಮರಣವು, **ಉಭಯಾಶ್ರಯಂ** ಅಪಾನ-ಮೃತ್ಯುಗಳೇ ಕಾರಣವಾಗಿ ಉಳ್ಳದ್ದು ಜನಿಸಿತು. ಮೃತ್ಯುವಿಗೆ ಮಾರಕತ್ವ ಪ್ರಸಿದ್ಧವಿದೆ. ನಾಭಿಯಲ್ಲಿರುವ ಅಪಾನವು ನಾಭಿಯಿಂದ ವಿಶ್ಲಿಷ್ಟವಾದರೆ ಮಲೋತ್ಸರ್ಜನ ಹೆಚ್ಚಾಗಿ ಮರಣಬರುವುದು ಅನುಭವಸಿದ್ಧ ಮಾತು. ಇಲ್ಲಿಯೂ ಬ್ರಹ್ಮದೇಹದ ಮರಣೋತ್ಪತ್ತಿ ಹೇಳುವುದರ ತಾತ್ಪರ್ಯ ಮಲೋತ್ಪತ್ತಿಯಂತೆ ತಿಳಿಯಬೇಕು. ಎಲ್ಲ ಜನರಿಗೆ ಮರಣ ಹೊಂದಿಸಲು ತನ್ನ ದೇಹದಲ್ಲಿ ಒಂದು ಸಲ ಮರಣವನ್ನು ನಿರ್ಮಿಸಿದನು. ನಂತರ ಎಲ್ಲರಿಗೆ ಪ್ರಾರಂಭವಾಯಿತು. ॥ ೨೮ ॥

**ಆದಿತ್ಸೋರನ್ನಪಾನಾನಾಂ ಅಸೃಕ್ಕುಕ್ಷ್ಯಂತ್ರನಾಡಿಕೇ ।**
**ನದ್ಯಃ ಸಮುದ್ರಾಶ್ಚ ತಯೋಃ ತೃಪ್ತಿಃ ಪುಷ್ಟಿಸ್ತದಾಶ್ರಯೇ ॥ ೨೯ ॥**

**ಅನ್ನಪಾನಾನಾಂ** ಅನ್ನ-ಪಾನಗಳನ್ನು, **ಆದಿತ್ಸೋಃ** ಸ್ವೀಕರಿಸಲಿಚ್ಛಿಸುವ ಬ್ರಹ್ಮನಿಗೆ, **ಅಸೃಕ್** ರಕ್ತವು,(ಇಂದ್ರಿಯಸ್ಥಾನೀಯವಾದುದು) **ಕುಕ್ಷಿ** ಉದರವು,(ಹೊಟ್ಟೆ) ಅಧಿಷ್ಠಾನವು, **ಆಂತ್ರ ನಾಡಿಕೇ** ನರ-ನಾಡಿಗಳು ಹಸಿವೆ-ನೀರಡಿಕೆಗಳು ಹುಟ್ಟಿದವು. ಅಂತು ಆಂತ್ರಶಬ್ದದಿಂದ

ಸ್ವೀಕೃತವಾದ ಎಲ್ಲ ಇಂದ್ರಿಯಸ್ಥಾನೀಯವು, ನಾಡಿಗಳು ಅಧಿಷ್ಠಾನಗಳು, **ತಯೋಃ** ಕುಕ್ಷಿ-ನಾಡಿಗಳಿಂದ, **ಸಮುದ್ರಾಃ ನದ್ಯಃ** ಸಮುದ್ರಗಳು-ನದಿಗಳು ಜನಿಸಿದವು, **ತೃಪ್ತಿಃ ಪುಷ್ಟಿಃ ತದಾಶ್ರಯೇ** ಹಸಿವೆ-ನೀರಡಿಕೆ ಹಿಂಗುವುದು ತೃಪ್ತಿ, ಅನ್ನರಸದಿಂದ ಬರುವ ಸ್ಥೂಲತೆ ಪುಷ್ಟಿ ಇವು, ಕುಕ್ಷಿನಾಡೀನಿಮಿತ್ತವಾಗಿವೆ. ತೃಪ್ತಿ ಕುಕ್ಷಿಯಲ್ಲಿ ಆಶ್ರಿತ, ಪುಷ್ಟಿ ನಾಡಿಯಲ್ಲಿ ಆಶ್ರಿತ.

ಇಲ್ಲಿ ನಾಡಿಗಳು, ಅಧಿಷ್ಠಾನಗಳು, ರುಧಿರವು, ಇಂದ್ರಿಯವು ದೇಹದಲ್ಲಿ (ಅಧ್ಯಾತ್ಮಂ) ರುಧಿರನಾಮಕದೇವತೆಗಳು ರುಧಿರವನ್ನಾಶ್ರಯಿಸಿರುವರು. ಆಂತ್ರ ನಾಡಿಗಳಿಂದಲೇ ನದೀ, ಸಮುದ್ರ ಎಂಬ ಹೆಸರಿನ ದೇವತೆಗಳು ಜನಿಸಿದರು. ಅವರೇ ಹೊರಗೆ ನದೀ ಎಂಬ ಹೆಸರಿನವರು ಕುಕ್ಷಿಯು ಅಧಿಷ್ಠಾನವು ದೇಹದಲ್ಲಿ ಆಂತ್ರನಾಮಕದೇವತೆಗಳು ನರಗಳನ್ನು ಆಶ್ರಯಿಸಿರುವರು. ಇವರೇ ಹೊರಗೆ ಸಮುದ್ರ ಎಂಬ ಹೆಸರಿನವರು. ಈ ಎರಡು ವರ್ಗದಿಂದ ಸಾಧ್ಯವಾದ ಪ್ರಯೋಜನ ತೃಪ್ತಿ-ಪುಷ್ಟಿ ಎಂದು ವಿವೇಕ.

ನಾಡ್ಯಶ್ಚ ನಿರಭಿದ್ಯಂತ ತಾಭ್ಯೋ ಲೋಹಿತಮಾಹೃತಮ್ ।
ನದ್ಯಸ್ತತಃ ಸಮಭವನ್ನುದರಂ ನಿರಭಿದ್ಯತ ।
ಕ್ಷುತ್ಪಿಪಾಸೇ ತತಃ ಸ್ಯಾತಾಂ ಸಮುದ್ರಸ್ತತೋಽಭವತ್ ॥

ಎಂದು ಮುಂದೆ ಹೇಳುವುದರಿಂದ ಹೀಗೆ ವ್ಯಾಖ್ಯಾನಿಸಬೇಕು. ।। ೨೯ ।।

**ನಿದಿಧ್ಯಾಸೋರಾತ್ಮಮಾಯಾಂ ಹೃದಯಂ ನಿರಭಿದ್ಯತ ।**
**ತತೋ ಮನಶ್ಚಂದ್ರ ಇತಿ ಸಂಕಲ್ಪಃ ಕಾಮ ಏವ ಚ ॥ ೩೦ ॥**

**ಆತ್ಮಮಾಯಾಂ** ವಿಷ್ಣುಮಾಹಾತ್ಮ್ಯವನ್ನು, **ನಿದಿಧ್ಯಾಸೋಃ** ಬಹುಲವಾಗಿ ಚಿಂತಿಸಲು ಇಚ್ಛಿಸುವ ಬ್ರಹ್ಮನಿಗೆ, **ಹೃದಯಂ ನಿರಭಿದ್ಯತ** ಎದೆ ಎಂಬ ಇಂದ್ರಿಯವು ಮನೋಽಭಿಮಾನಿಯು (ಅಧಿದೈವಂ) ದೇವತೆಗಳಲ್ಲಿ **ಚಂದ್ರಃ** ಚಂದ್ರನು ಎಂದು ಪ್ರಸಿದ್ಧನಾದವನು, **ಸಂಕಲ್ಪಃ** ಸಂಕಲ್ಪವು, **ಕಾಮಃ** ಕಾಮವು, **ಚ** ಶ್ರದ್ಧಾ ಮುಂತಾದ ಮನೋವೃತ್ತಿಗಳು, **ತತಃ ಏವ** ಇಂದ್ರಿಯಾಭಿಮಾನಿಗಳಿಂದಲೇ ಜನಿಸಿದವು. ।।೩೦।।

**ತ್ವಕ್‌ಚರ್ಮಮಾಂಸರುಧಿರಮೇದೋಮಜ್ಜಾಸ್ಥಿಧಾತವಃ ।**
**ಭೂಮ್ಯಪ್ತೇಜೋಮಯಾಃ ಸಪ್ತ ಪ್ರಾಣೋ ವ್ಯೋಮಾಂಬುವಾಯುಭಿಃ ॥ ೩೧ ॥**

**ತ್ವಕ್‌ಚರ್ಮಮಾಂಸರುಧಿರಮೇದೋಮಜ್ಜಾಸ್ಥಿಧಾತವಃ** ಬ್ರಹ್ಮದೇವರ ದೇಹದಲ್ಲಿ ತ್ವಕ್, ಚರ್ಮ, ಮಾಂಸ, ರುಧಿರ, ಮೇದಸ್ಸು ಮಜ್ಜಾ ಅಸ್ಥಿ ಎಂಬ ಧಾತುಗಳು, **ಸಪ್ತ** ಏಳು ಸಂಖ್ಯಾಕವಾದವುಗಳು, **ಭೂಮ್ಯಪ್ತೇಜೋಮಯಾಃ** ಬ್ರಹ್ಮದೇಹಗತ ಭೂಮಿ-ನೀರು-ಅಗ್ನಿ ಎಂಬ ಭೂತತ್ರಯಗಳಿಂದ ಜನಿಸಿವೆ. **ಪ್ರಾಣಃ** ಮುಖ್ಯಪ್ರಾಣನ ಶರೀರರೂಪವಾದ ಜಡಪ್ರಾಣವು, **ವ್ಯೋಮಾಂಬುವಾಯುಭಿಃ** ಬ್ರಹ್ಮದೇವರ ದೇಹದಲ್ಲಿರುವ ಆಕಾಶ-ನೀರು -ವಾಯುವಿನಿಂದ, **(ವಿಕೃತಃ)** ವಿಕೃತವಾದುದು. ॥ ೩೧ ॥

**ಗುಣಾತ್ಮಕಾನೀಂದ್ರಿಯಾಣಿ ಭೂತಾದಿಪ್ರಭವಾ ಗುಣಾಃ ।**
**ಮನಃ ಸರ್ವವಿಕಾರಾತ್ಮಾ ಬುದ್ಧಿರ್ವಿಜ್ಞಾನರೂಪಿಣೀ ॥ ೩೨ ॥**

**ಇಂದ್ರಿಯಾಣಿ** ಶ್ರೋತ್ರ ಮೊದಲಾದ ಬಾಹ್ಯೇಂದ್ರಿಯಗಳು, **ಗುಣಾತ್ಮಕಾನಿ** ಬ್ರಹ್ಮದೇಹಗತವಾದ ತೈಜಸಾಹಂಕಾರಾಂಶದಿಂದ ಜನಿಸಿದವುಗಳು, ಅಥವಾ ಗುಣಗಳೆಂದರೆ ಶಬ್ದಾದಿಗಳು ಎಂದು ಅರ್ಥ. ಆಕಾಶಾದಿದ್ವಾರಾ ಶಬ್ದಾದ್ಯುಪಾದನಕಗಳೆಂದು ತಿಳಿಯಬೇಕು. 'ತೇಷಾಂ ಭೂತೈರುಪಚಯಃ ಸೃಷ್ಟಿಕಾಲೇ ವಿಧೀಯತೇ' ಎಂದು ಇದೆ. ಹಿಂದೆ **ಗುಣಾಃ** ಶಬ್ದಾದಿಗಳು (ವಿಷಯಗಳು) ಹುಟ್ಟಿವೆ ಎಂದು ಹೇಳಿದೆಯಷ್ಟೆ ಅವುಗಳು, **ಭೂತಾದಿಪ್ರಭವಾಃ** ಬ್ರಹ್ಮದೇಹಗತ ತಾಮಸಾಹಂಕಾರದಿಂದ ಜನಿಸಿದವುಗಳು, **ಮನಃ** ಮನಸ್ಸು **ಸರ್ವವಿಕಾರಾತ್ಮಾ** ಇಂದ್ರಿಯಗಳಿಗೂ ದೇವತೆಗಳ ದೇಹಕ್ಕೂ ವಿಕಾರವು ಯಾವುದರಿಂದ ಆಗುವುದೊ ಅಂತಹ ವೈಕಾರಿಕ ಅಹಂಕಾರರೂಪವಾದುದು, **ಬುದ್ಧಿಃ** ಇಂದ್ರಿಯಪ್ರಯೋಜನವೆಂದು ಹೇಳಿದ ಶಬ್ದಾದಿವಿಷಯಕ ನಿಶ್ಚಯವು, **ವಿಜ್ಞಾನರೂಪಿಣೀ** ಬ್ರಹ್ಮದೇಹಗತವಾದ ಮಹತ್ತತ್ತ್ವೋಪಾದಾನಕವಾಗಿದೆ. ॥ ೩೨ ॥

*'ಪುರುಷಾವಯವೈರ್ಲೋಕಾಃ' ಎಂಬಲ್ಲಿ ಲೋಕಾದಿಗಳನ್ನು ಭಗವಂತನ ಪ್ರತಿಮೆ ಎಂದು ಉಪಾಸನೆ ಮಾಡಲು ಪುರುಷಾವಯವದಿಂದ ಆದ ಸೃಷ್ಟಿಯನ್ನೇನು ಪ್ರಶ್ನಿಸಿದ್ದರೋ ಅದನ್ನು ಹೇಳಿ ಉಪಸಂಹರಿಸುವರು-*

**ಏತದ್ಭಗವತೋ ರೂಪಂ ಸ್ಥೂಲಂ ತೇ ವ್ಯಾಹೃತಂ ಮಯಾ ।**
**ಮಹ್ಯಾದಿಭಿಶ್ಚಾವರಣೈರಷ್ಟಭಿರ್ಬಹಿರಾವೃತಮ್ ॥ ೩೩ ॥**

**ಅತಃ ಪರಂ ಸೂಕ್ಷ್ಮತಮಮವ್ಯಕ್ತಂ ನಿರ್ವಿಶೇಷಣಮ್ ।**
**ಅನಾದಿಮಧ್ಯನಿಧನಂ ನಿತ್ಯಂ ವಾಙ್ಮನಸೋಃ ಪರಮ್ ॥ ೩೪ ॥**

**ಭಗವತಃ** ವೈರಾಜ ಪುರುಷನಿಗೆ, **ಏತತ್** ಬ್ರಹ್ಮಾಂಡವು ಅದರಲ್ಲಿಯ ಬ್ರಹ್ಮ ಶರೀರವೂ, **ಸ್ಥೂಲಂ ರೂಪಂ** ಸ್ಥೂಲವಾದ ರೂಪವಿದ್ದಂತೆ, ಅವನ ಅಧೀನವಾದ್ದರಿಂದ ಅವನ ದೇಹವಿದ್ದಂತೆ ಎಂದು, **ತೇ** ನಿನಗೆ, **ಮಯಾ** ನನ್ನಿಂದ, **ವ್ಯಾಹೃತಂ** 'ಪಾತಲಮೇತಸ್ಯ' ಮುಂತಾಗಿ ಹೇಳಲ್ಪಟ್ಟಿದೆ. ಧಾರಣಾರ್ಥವಾಗಿ ನೀನು ಕೇಳಿದ್ದು ಎಂದು ಶೇಷ ಇಟ್ಟುಕೊಳ್ಳಬೇಕು. ಸ್ಥೂಲತೆಯನ್ನು ತಿಳಿಸುವರು, **ಮಹ್ಯಾದಿಭಿಃ** ಪೃಥಿವಿ ಮೊದಲಾದ, **ಅಷ್ಟಭಿಃ** ಎಂಟು **ಆವರಣೈಃ** ಆವರಣಗಳಿಂದ, **ಬಹಿಃ** ಹೊರಗೆ, **ಆವೃತಂ ಚ** ಈ ಬ್ರಹ್ಮಾಂಡವು ಆವರಿಸಿಲ್ಪಟ್ಟಿದೆ. ಹಾಗಾದರೆ ಶ್ರೀಹರಿಯ ನಿಜರೂಪ ಯಾವುದೆಂದರೆ, **ಅತಃ ಪರಂ** ಜಡದೇಹದಿಂದ ಭಿನ್ನವಾದ ಚಿದ್ರೂಪವಾದ, **ಅತಃ** ಬ್ರಹ್ಮಾದಿಚೇತನ ಸಮೂಹದಿಂದ, **ಪರಂ** ಉತ್ತಮವಾದ, **ಸೂಕ್ಷ್ಮತಮಂ** ಸ್ಥೂಲತಮವಾದರೂ ಅತಿ ಸೂಕ್ಷ್ಮವಾದ, **ಅವ್ಯಕ್ತಂ** ಕಣ್ಣಿಗೆ ಕಾಣದ, **ನಿರ್ವಿಶೇಷಣಂ** ಅತಿಶಯರಹಿತವಾದ, **ಅನಾದಿಮಧ್ಯನಿಧನಂ** ಆದಿ-ಮಧ್ಯ-ಅಂತ್ಯಗಳಿಲ್ಲದ, **ನಿತ್ಯಂ** ಸದಾಏಕರೂಪವಾದ ವೃದ್ಧಿಹ್ರಾಸವಿಲ್ಲದ, **ವಾಙ್ಮನಸೋಃ ಪರಂ** ವಾಙ್ಮನಸುಗಳಿಗೆ ಗೋಚರಿಸಿದ ರೂಪ ಭಗವಂತನದ್ದಾಗಿದೆ. ।। ೩೩-೩೪ ।।

ಇಲ್ಲಿ 'ಸ್ಥೂಲಂ ರೂಪಂ' ಎಂದು ಹೇಳಿದ್ದು ಏನೆಂದು ತಿಳಿಯುವುದಿಲ್ಲ ಮತ್ತು 'ಅತಃ ಪರಂ' ಎಂದು ಆಕಾರವಿಲ್ಲದ ರೂಪ ಎಂದು ಹೇಳಿದಂತೆ ತೋರುವುದು ಕಾರಣ ಪ್ರಮಾಣದಿಂದಲೇ ಎರಡು ಶ್ಲೋಕದ ತಾತ್ಪರ್ಯವನ್ನು ಹೇಳುವರು-

**ತಾತ್ಪರ್ಯ- ಸ್ಥೂಲಂ ಭಗವತೋ ರೂಪಂ ಬ್ರಹ್ಮದೇಹ ಉದಾಹೃತಃ ।**
**ತತ್ತಂತ್ರತ್ವಾಚ್ಚ ಸೂಕ್ಷ್ಮಂ ಚ ಶಂಖಚಕ್ರಗದಾಧರಮ್ ।। -ಇತಿ ಚಾಽಽಧ್ಯಾತ್ಮೇ**

ಬ್ರಹ್ಮದೇವರ ದೇಹವು ಶ್ರೀಹರಿಯ ಅಧೀನವಾದುದರಿಂದಲೇ ಶ್ರೀಹರಿಗೆ (ಅಮುಖ್ಯವೃತ್ತಿಯಿಂದ) ಸ್ಥೂಲದೇಹವೆಂದು ಹೇಳಲ್ಪಡುವುದು. ಶ್ರೀಹರಿಯ ಸೂಕ್ಷ್ಮರೂಪವು ಶಂಖ-ಚಕ್ರ-ಗದಾಗಳನ್ನು ಧರಿಸಿರುವುದು, ನಿರಾಕಾರವಲ್ಲ ಎಂದು ಅಧ್ಯಾತ್ಮದಲ್ಲಿ ಹೇಳಿದೆ. ।। ೩೪ ।।

ನಿರ್ವಿಶೇಷಣ ಶಬ್ದಕ್ಕೆ ನಿರ್ಧರ್ಮಕ ಎಂದು ಅರ್ಥವು ತೋರುತ್ತದೆ. ಇದು ಸರಿಯಲ್ಲ ಎಂದು ತಿಳಿಸಲು ಆ ಶಬ್ದದ ಅರ್ಥವನ್ನು ಹೇಳುತ್ತಾರೆ-

**ತಾತ್ಪರ್ಯ- ನಿರ್ವಿಶೇಷಣಂ ನಿರತಿಶಯಮ್ ।**

ವಿಶೇಷಣ ಎಂಬ ಶಬ್ದವು ಅತಿಶಯವಾಚಕವಾಗಿದೆ. ಹೀಗಾಗಿ ನಿರ್ವಿಶೇಷ ಎಂದರೆ ಮೀರಲು ಸಾಧ್ಯವಾಗದೇ ಇದ್ದದ್ದು ಎಂಬ ಅರ್ಥವು ಬರುತ್ತದೆ. ಸರ್ವೋತ್ತಮ ಎಂಬ ಅರ್ಥವನ್ನು ಇಲ್ಲಿ ತಿಳಿಯಬೇಕು.

ವಿಶೇಷಣ ಎಂಬ ಶಬ್ದ ಅತಿಶಯನ ಮೀರುವುದು ಎಂಬ ಅರ್ಥದಲ್ಲಿ ಇದೆ ಎಂಬ ವಿಷಯದಲ್ಲಿ ಅಭಿಯುಕ್ತ ಪ್ರಯೋಗ ತೋರಿಸುವರು-

**'ಅಸ್ಯ ಕಾವ್ಯಸ್ಯ ಕವಯೋ ನ ಸಮರ್ಥಾ ವಿಶೇಷಣೇ' ಇತಿವತ್ ।। ೩೪ ।।**

ಈ ಕಾವ್ಯವನ್ನು ಮೀರಿಸುವಂತಹ ಕಾವ್ಯವನ್ನು ರಚಿಸುವ ಸಾಮರ್ಥ್ಯ ಯಾವ ಕವಿಗಳಿಗೂ ಇರುವುದಿಲ್ಲ. ಇಲ್ಲಿ ವಿಶೇಷಣ ಎಂಬ ಶಬ್ದವು ಅತಿಶಯನ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ. ।। ೩೪ ।।

*ಭಗವಂತನ ಎರಡು ರೂಪಗಳನ್ನು ಉಪದೇಶಿಸಿ ಆ ರೂಪವು ಜ್ಞಾನಿಗಳಿಗೆ ಮಾತ್ರ ಗೋಚರವಾಗಿದೆ. ಅಜ್ಞಾನಿಗಳಿಗೆ ಸರ್ವಥಾ ಗೋಚರವಲ್ಲ ಎಂಬುದನ್ನು ತಿಳಿಸುತ್ತಾರೆ-*

**ಅಮುನೀ ಭಗವದ್ರೂಪೇ ಮಯಾ ತೇ ಹ್ಯನುವರ್ಣಿತೇ ।**
**ಉಭೇ ಅಪಿ ನ ಗೃಹ್ಣಂತಿ ಮಾಯಾಸೃಷ್ಟೇऽವಿಪಶ್ಚಿತಃ ।। ೩೫ ।।**

**ಮಯಾ** ನನ್ನಿಂದ, **ತೇ** ನಿನಗೆ, **ಅಮುನೀ** ಈ ಸ್ಥೂಲ-ಸೂಕ್ಷ್ಮವಾದ, **ಭಗವದ್ರೂಪೇ** ಶ್ರೀಹರಿಯ ರೂಪಗಳು, **ಅನುವರ್ಣಿತೇ** ಹೇಳಲ್ಪಟ್ಟಿರುವವು, **ಮಾಯಾಸೃಷ್ಟೇ** ಶ್ರೀಹರಿಯ ಇಚ್ಛೆಯಿಂದ ಅವನ ಅಧೀನವಾದ ಪ್ರಕೃತಿಯಿಂದ ನಿರ್ಮಿತವಾದ ಪ್ರಪಂಚದಲ್ಲಿ, **ಯೇ ಅವಿಪಶ್ಚಿತಃ** ಯಾವ ಅಜ್ಞಾನಿಗಳಿರುವರೋ, **ತೇ** ಅವರು, **ಉಭೇ ಅಪಿ** ಎರಡೂ ರೂಪಗಳನ್ನು, **ನ ಗೃಹ್ಣಂತಿ** ತಿಳಿಯಲಾರರು, **ವಿಪಶ್ಚಿತಃ ಗೃಹ್ಣಂತಿ** ಜ್ಞಾನಿಗಳು ತಿಳಿಯುವರು.

ಇಲ್ಲಿ 'ಮಾಯಾಸೃಷ್ಟೇ' ಎಂಬುದು ದ್ವಿತೀಯಾವಿಭಕ್ತಿಯ ದ್ವಿವಚನ ಭಗವದ್ರೂಪಕ್ಕೆ ವಿಶೇಷಣವಾಗಿದೆ. ಅಂದಮೇಲೇ ಅವಿದ್ಯಾಕಲ್ಪಿತ, ಪಾರಮಾರ್ಥಿಕ ಸತ್ಯವಲ್ಲ ಎಂದು ವಿಪರೀತ ಅರ್ಥ ಆಗುವುದು. ಕಾರಣ 'ಮಾಯಾಸೃಷ್ಟೇ' ಎಂಬುದನ್ನು ವ್ಯಾಖ್ಯಾನಿಸುವರು. ಮತ್ತು 'ವಿಪಶ್ಚಿತಃ ನ ಗೃಹ್ಣಂತಿ' ಎಂಬುದು ವಿರುದ್ಧ. ಹಾಗಾದಲ್ಲಿ ತಮಗೂ ಅಜ್ಞಾನವಿರುವುದರಿಂದ ಅವುಗಳನ್ನು ವರ್ಣಿಸಿದ್ದೂ ಕೂಡುವುದಿಲ್ಲ ಆದ್ದರಿಂದ ಪ್ರಕೃತ ಅಭಿಪ್ರೇತವಾದ ಪದಚ್ಛೇದವನ್ನು ತಿಳಿಸುವರು-

**ತಾತ್ಪರ್ಯ- 'ಮಾಯಾಸೃಷ್ಟೇ ಜಗತಿ । ಯೇ ಅವಿಪಶ್ಚಿತಃ' ।**

ಮಾಯಾಸೃಷ್ಟೇ ಎಂದರೇ ಭಗವದಿಚ್ಛೆಯಿಂದಲೂ ಪ್ರಕೃತಿಯಿಂದಲೂ ನಿರ್ಮಿತವಾದ ಜಗತ್ತಿನಲ್ಲಿ ಎಂದು ಅರ್ಥ. ಆದ್ದರಿಂದ ಮಾಯಾಸೃಷ್ಟೇ ಎಂಬುದು ದ್ವಿತೀಯಾ ದ್ವಿವಚನವಲ್ಲ ಕಿಂತು ಸಪ್ತಮ್ಯಂತವು ಎಂದು ತಿಳಿದಂತಾಯಿತು. ಹೀಗಾಗಿ ಪ್ರಕೃತಿನಿರ್ಮಿತ ಜಗದ್ವಾಚಕವೆಂದಂತಾಯಿತು.

'ಯೇ ಅವಿಪಶ್ಚಿತಃ' ಎಂದು ಪದಚ್ಛೇದ ಮಾಡಿಕೊಳ್ಳಬೇಕು. ಯಾರು ಅಜ್ಞಾನಿಗಳೋ ಎಂಬ ಅರ್ಥವು ಹೇಳಿದಂತಾಗುತ್ತದೆ. ಹೀಗಾಗಿ ವಿರೋಧವಿರುವುದಿಲ್ಲ.

ಯಾರು ಜ್ಞಾನಿಗಳೋ ಅವರು ತಿಳಿಯುವರು, ಯಾರು ಅಜ್ಞಾನಿಗಳೋ ಅವರು ತಿಳಿಯುವುದಿಲ್ಲ ಎಂದು ಹೇಳಿದಂತಾಗುತ್ತದೆ.

*ಈವರೆಗೆ ಬ್ರಹ್ಮದೇಹಾಂತರ್ಗತನಾದ ವೈರಾಜಪುರುಷನಿಂದ ಸೃಷ್ಟಿಯನ್ನು ಹೇಳಿ ಅವನಿಗೆ ಸ್ಥಿತಿಕರ್ತೃತ್ವವನ್ನೂ ತಿಳಿಸಲು ನಾಮ-ರೂಪ-ಕ್ರಿಯಾನಿಯಮನಕರ್ತೃತ್ವವನ್ನು ಮೊದಲಿಗೆ ಹೇಳುವರು-*

**ಸ ವಾಚ್ಯವಾಚಕತಯಾ ಭಗವಾನ್ ಬ್ರಹ್ಮರೂಪಧೃಕ್ ।**
**ನಾಮರೂಪಕ್ರಿಯಾ ಧತ್ತೇ ಸಕರ್ಮಾಕರ್ಮಕಃ ಪರಃ** ॥ ೩೬ ॥

**ಬ್ರಹ್ಮರೂಪಧೃಕ್** ಬ್ರಹ್ಮದೇಹಾಂತರ್ಗತನಾದ, **ಸಃ** ವೈರಾಜಪುರುಷನು **ನಾಮರೂಪಕ್ರಿಯಾಃ** ಶಬ್ದಾತ್ಮಕ-ಅರ್ಥಾತ್ಮಕ-ಕ್ರಿಯಾತ್ಮಕವಾದ ಪ್ರಪಂಚವನ್ನು, **ವಾಚ್ಯವಾಚಕತಯಾ ಧತ್ತೇ** ಶಬ್ದವನ್ನು ವಾಚಕವನ್ನಾಗಿ, ಶಬ್ದ-ಅರ್ಥ-ಕ್ರಿಯಾಗಳನ್ನು ವಾಚ್ಯವಾಗಿ ನಿಯಮಿಸುವನು, **ಪರಃ** ಯಾವ ಕಾರಣ ಭಗವಂತ ಸ್ವತಂತ್ರನಾಗಿರುವನೋ, **ಸಕರ್ಮಾಕರ್ಮಕಃ** ಮುಖ್ಯಕರ್ತೃವಾದ್ದರಿಂದ ಸಕರ್ಮಾ ಎಂದೂ, ಕರ್ಮದಿಂದ ಸಾಧ್ಯವಾದ ಫಲವಿಲ್ಲದ್ದರಿಂದ ಅಕರ್ಮಕ ಎಂದು ವೇದಗಳಲ್ಲಿ ಕರೆಯಲ್ಪಡುತ್ತಾನೆ.

ಇಲ್ಲಿ 'ನಾಮರೂಪಕ್ರಿಯಾಃ ವಾಚಕತಯಾ ಧತ್ತೇ' ಎಂದು ಹೇಳಿದರೆ ರೂಪ-ಕ್ರಿಯೆಗಳಿಗೂ ವಾಚಕತಯಾ ಧಾರಣ ತೋರುವುದು ಮತ್ತು ಅಮೂರ್ತವಾದ ನಾಮಾದಿಗಳ ಧಾರಣವು ಎಂಥದು ಎಂದರೆ ತಾತ್ಪರ್ಯ ಹೇಳುವರು-

ತಾತ್ಪರ್ಯ- ನಾಮ್ನೈವ ವಾಚಕತ್ವೇನ ನಾಮರೂಪಕ್ರಿಯಾ ಅಪಿ ।

**ವಾಚ್ಯತ್ವೇನ ಹರಿರ್ದೇವೋ ನಿಯಾಮಯತಿ ಚೈಕರಾಟ್ ॥ -ಇತಿ ಚ**
**ಕರ್ತೃತ್ವಾತ್ತು ಸಕರ್ಮಾಽಸೌ ನಿಷ್ಫಲತ್ವಾದಕರ್ಮಕಃ ॥ -ಇತಿ ಚ**

ಸರ್ವಸ್ವತಂತ್ರನಾದ ಶ್ರೀಹರಿಯು ಶಬ್ದಗಳನ್ನು ವಾಚಕಗಳನ್ನಾಗಿ ನಾಮರೂಪಕ್ರಿಯೆಗಳನ್ನು ವಾಚ್ಯಗಳನ್ನಾಗಿ ನಿಯಮಿಸುತ್ತಾನೆ. ಶ್ರೀಹರಿಯು ಮುಖ್ಯಕರ್ತನಾದುದರಿಂದ ಸಕರ್ಮನೆಂದೂ ಕರ್ಮದ ಫಲಾಪೇಕ್ಷೆ ಇಲ್ಲದಿರುವುದರಿಂದ ಅಕರ್ಮನೆಂದೂ ಕರೆಯಲ್ಪಡುತ್ತಾನೆ. ॥ ೩೬ ॥

*ವಾಚ್ಯತಯಾ ನಾಮ-ರೂಪ-ಕ್ರಿಯೆಗಳನ್ನು ನಿಯಮಿಸುವನು ಎಂದು ಹೇಳಿದ್ದನ್ನೇ ವಿವರಿಸುವರು-*

**ಪ್ರಜಾಪತೀನ್ ಮನೂನ್ ದೇವಾನೃಷೀನ್ ಪಿತೃಗಣಾನ್ ಪೃಥಕ್ ।**
**ಸಿದ್ಧಚಾರಣಗಂಧರ್ವಾನ್ ವಿದ್ಯಾಧ್ರಾಸುರಗುಹ್ಯಕಾನ್ ॥ ೩೭ ॥**

**ಕಿನ್ನರಾಪ್ಸರಸೋ ನಾಗಾನ್ ಸರ್ಪಾನ್ ಕಿಂಪುರುಷಾನಪಿ ।**
**ಮಾತೃರಕ್ಷಃಪಿಶಾಚಾಂಶ್ಚ ಪ್ರೇತಭೂತವಿನಾಯಕಾನ್ ॥ ೩೮ ॥**

**ಕೂಷ್ಮಾಂಡ(ಡಾ)ಭೂತವೇತಾಲಾನ್ ಯಾತುಧಾನಾನ್ ಗ್ರಹಾನಪಿ ।**
**ಖಗಾನ್ ಮೃಗಾನ್ ಪಶೂನ್ ವೃಕ್ಷಾನ್ ಗಿರೀನ್ ನೃಪಸರೀಸೃಪಾನ್ ॥ ೩೯ ॥**

**ದ್ವಿವಿಧಾಶ್ಚತುರ್ವಿಧಾಶ್ಚಾನ್ಯೇ ಜಲಸ್ಥಲನಭೌಕಸಃ ।**
**ಕುಶಲಾಕುಶಲಮಿಶ್ರಾಣಾಂ ಕರ್ಮಣಾಂ ಗತಯಸ್ತ್ವಿಮಾಃ ॥ ೪೦ ॥**

ಇಲ್ಲಿ ದ್ವಿತೀಯಾಂತಕ್ಕೆ ಅನ್ವಯ ತೋರುವುದಿಲ್ಲ ಆದ್ದರಿಂದ ಅನ್ವಯವನ್ನು ಹೇಳುವರು-

ತಾತ್ಪರ್ಯ- ಪ್ರಜಾಪತ್ಯಾದೀನ್ ಧತ್ತೇ ॥

**ಪ್ರಜಾಪತೀನ್** ಬ್ರಹ್ಮಾದಿಪ್ರಜಾಪತಿಗಳನ್ನು, **ಮನೂನ್** ಮನುಗಳನ್ನು, **ದೇವಾನ್** ದೇವತೆಗಳನ್ನು, **ಋಷೀನ್** ಋಷಿಗಳನ್ನು, **ಪಿತೃಗಣಾನ್** ಪಿತೃಗಣಗಳನ್ನು, **ಸಿದ್ಧಚಾರಣ-ಗಂಧರ್ವಾನ್** ಸಿದ್ಧರು, ಚಾರಣರು, ಗಂಧರ್ವರನ್ನು, **ವಿದ್ಯಾಧ್ರಾಸುರಗುಹ್ಯಕಾನ್** ವಿದ್ಯಾಧ್ರರು, ಅಸುರರು, ಗುಹ್ಯಕರನ್ನು **ಪೃಥಕ್** ಅವಾಂತಾರ ಭೇದಸಹಿತವಾಗಿ, **ಕಿನ್ನರಾಪ್ಸರಸಃ** ಕಿನ್ನರರು-ಅಪ್ಸರೆಯರನ್ನು, **ನಾಗಾನ್** ನಾಗಗಳನ್ನು, **ಸರ್ಪಾನ್**

ಸರ್ಪಗಳನ್ನು, **ಕಿಂಪುರುಷಾನ್ ಅಪಿ** ಕಿಂಪುರುಷರನ್ನೂ ಸಹ, **ಮಾತೃರಕ್ಷಃಪಿಶಾಚಾನ್ ಚ** ಅದಿತಿ ಮೊದಲಾದವರನ್ನು ಅಥವಾ ಬ್ರಾಹ್ಮೀ ಮೊದಲಾದ ಸಪ್ತಮಾತೃಗಳನ್ನು, ರಾಕ್ಷಸರನ್ನು, ಘಂಟಾಕರ್ಣಾದಿಪಿಶಾಚಗಳನ್ನು, **ಪ್ರೇತಭೂತವಿನಾಯಕಾನ್** ಮಹೋದರ ಮೊದಲಾದ ಪ್ರೇತಗಳನ್ನು, ಭೃಂಗಿರುಟ್ಯಾದಿಭೂತಗಳನ್ನು, ವಿಘ್ನಾದಿಗಳನ್ನು **ಕೂಷ್ಮಾಂಡೋನ್ಮಾದವೇತಾಲಾನ್** ಪಲಾಂಡು ಮೊದಲಾದ ಕೂಷ್ಮಾಂಡರನ್ನು, ಕಾಲಕರ್ಣನೇ ಮೊದಲಾದ ಉನ್ಮಾದರನ್ನು, ಬೇತಾಳಗಳನ್ನು **ಯಾತುಧಾನಾನ್** ಭೃಗು-ಕುತ್ಸ ಮೊದಲಾದ ವಿಶಿಷ್ಟರಾದ ರಾಕ್ಷಸರನ್ನು **ಗ್ರಹಾನ್** ಅಷ್ಟಾದಶ ಗ್ರಹಗಳನ್ನು ಅಥವಾ ನವಗ್ರಹಗಳನ್ನು **ಖಗಾನ್** ಪಕ್ಷಿಗಳನ್ನು **ಮೃಗಾನ್** ಮೃಗಗಳನ್ನು **ಪಶೂನ್** ಪಶುಗಳನ್ನು **ವೃಕ್ಷಾನ್** ಗಿಡಗಳನ್ನು **ಗಿರೀನ್** ಪರ್ವತಗಳನ್ನು **ನೃಪಸರೀಸೃಪಾನ್** ಪ್ರಿಯವ್ರತ ಮೊದಲಾದ ರಾಜರನ್ನು ಸಹಸ್ರಪಾದ ಮೊದಲಾದ ಸರ್ಪಗಳನ್ನು, (ಅಥವಾ **ಹೇ ನೃಪ** ಹೇ ರಾಜನೇ ಎಂದು ಸಂಬೋಧನ ಎಂದೂ ತಿಳಿಯಬಹುದು.)

ಹೀಗೆ ಪ್ರತ್ಯೇಕವಾಗಿ ಹೇಳಲು ಅಶಕ್ಯವಾದ್ದರಿಂದ ಸಾಮಾನ್ಯವಾಗಿ ಹೇಳುವರು-

ಇಲ್ಲಿ **ವಿವಿಧಾಃ ದ್ವಿವಿಧಾಃ** ಎಂದು ಎರಡು ಪಾಠಗಳಿವೆ. ವಿವಿಧ ಎಂದರೆ ಅನೇಕವಿಧ ಎಂದರ್ಥ. ದ್ವಿವಿಧಎಂದಾಗ ಸ್ಥಾವರ-ಜಂಗಮ ಎಂದು ಎರಡುವಿಧವೆಂದರ್ಥ.

**ಚತುರ್ವಿಧಾಃ** ಜರಾಯುಜ ಮನುಷ್ಯ, ಅಂಡಜ ಕೋಳಿ ಮೊದಲಾದವು, ಸ್ವೇದಜ ಹೇನು ಮೊದಲಾದವುಗಳು, ಉದ್ಭಿಜ್ಜ ವೃಕ್ಷಾದಿಗಳು, **ಅನ್ಯೇ** ಇನ್ನುಳಿದ, **ಜಲಸ್ಥಲವನೌಕಸಃ** ನೀರು-ನೆಲ-ಆಕಾಶ ಇವುಗಳೇ ಮನೆಯಾಗಿ ಉಳ್ಳವುಗಳನ್ನು, ಪ್ರಜಾಪತಿಮೊದಲಾದ ನಾಮಗಳು ಪ್ರಜಾಪತಿಮೊದಲಾದ ದೇವತೆಗಳಿಗೆ ವಾಚಕಗಳು ಪ್ರಜಾಪತಿ ಮೊದಲಾದ ದೇವತೆ ಮುಂತಾದವರು ಆಯಾ ನಾಮಗಳಿಂದ ವಾಚ್ಯರು ಈರೀತಿ ನಿಯಮಿಸುವನು. ಈವರೆಗೆ ಉತ್ತಮ-ಮಧ್ಯಮ-ಅಧಮಜಾತಿಗಳು ಹೇಳಲ್ಪಟ್ಟವು. ಇದಕ್ಕೆ ಕಾರಣವೇನೆಂದು ಕೊನೆಗೆ ಹೇಳುವರು. **ಇಮಾಃ** ಪೂರ್ವೋಕ್ತವಾದ ಈ ಜಾತಿಗಳು, **ಕುಶಲಾಕುಶಲಮಿಶ್ರಾಣಾಂ** ಪುಣ್ಯ-ಪಾಪ-ಪುಣ್ಯಪಾಪಮಿಶ್ರಿತವಾದ, **ಕರ್ಮಣಾಂ** ಕರ್ಮಗಳ, **ಗತಯಃ** ಫಲರೂಪವಾದವುಗಳು. ।। ೩೩-೪೦ ।।

*ತ್ರಿವಿಧಕರ್ಮ ಫಲರೂಪಗಳಾದ ಉಕ್ತವಾದ ಜಾತಿಗಳಲ್ಲಿ ಮತ್ತೊಂದು ರೀತಿಯಿಂದ ತ್ರೈವಿಧ್ಯವನ್ನು ಹೇಳುವರು-*

**ಸತ್ತ್ವಂ ರಜಸ್ತಮ ಇತಿ ತಿಸ್ರಃ ಸುರನೃನಾರಕಾಃ ।**
**ತತ್ರಾऽಪ್ಯೇಕೈಕಶೋ ರಾಜನ್ ಭಿದ್ಯಂತೇ ಗತಯಸ್ತ್ರಿಧಾ ॥ ೪೧ ॥**

**ಗತಯಃ** ಪುಣ್ಯಾದಿಫಲರೂಪಗಳಾದ ಜಾತಿಗಳು, **ಸತ್ತ್ವಂ ರಜಃ ತಮ ಇತಿ ತಿಸ್ರಃ** ಸಾತ್ತ್ವಿಕ-ರಾಜಸ-ತಾಮಸ ಎಂದು ಮೂರು ವಿಧವಾಗಿವೆ. ಅವುಗಳನ್ನು ತಿಳಿಸುವರು- **ಸುರನೃನಾರಕಾಃ ಸುರ** ಬ್ರಹ್ಮದೇವರಿಂದ ಆರಂಭಿಸಿ ಎಲ್ಲ ದೇವತೆಗಳು-ಚಕ್ರವರ್ತಿಗಳು-ಗಂಧರ್ವರು-ಋಷಿಗಳು-ಪಿತೃಗಳು, **ನೃ** ಮನುಷ್ಯರು, **ನಾರಕ** ಅಸುರರು, (ಅಂತು ಬ್ರಹ್ಮಾದಿಕ್ಷಿಪಾಂತರು ಸಾತ್ತ್ವಿಕರು, ನೃಶಬ್ದವಾಚ್ಯರಾದ ಮನುಷ್ಯರು ರಾಜಸರು, ನಾರಕರೆನಿಸಿದ ಅಸುರರು ತಾಮಸರು ಎಂದಂತಾಯಿತು)

**ತತ್ರಾऽಪಿ** ಸಾತ್ತ್ವಿಕಾದಿಗಳಲ್ಲಿರುವವರು, **ಏಕೈಕಶಃ** ಪ್ರತ್ಯೇಕವಾಗಿ, **ಗತಯಃ** ಕರ್ಮಫಲವಾದ ಸುರಾದಿಜಾತಿಗಳು, **ತ್ರಿಧಾ ಭಿದ್ಯಂತೇ** ಮೂರು ರೀತಿಯಾಗಿ ವಿಭಕ್ತವಾಗಿವೆ. ಅಂದರೆ ಸಾತ್ತ್ವಿಕರು ಸಾತ್ತ್ವಿಕಸಾತ್ತ್ವಿಕ, ಸಾತ್ತ್ವಿಕರಾಜಸ, ಸಾತ್ತ್ವಿಕತಾಮಸ ಎಂದು ಮೂರು ವಿಧರಾಗಿದ್ದಾರೆ. ರಾಜಸರೂ ರಾಜಸಸಾತ್ತ್ವಿಕರು, ರಾಜಸರಾಜಸರು, ರಾಜಸತಾಮಸರು ಎಂದು ಮೂರು ವಿಧರಾಗಿದ್ದಾರೆ. ತಾಮಸರೂ ತಾಮಸಸಾತ್ತ್ವಿಕ, ತಾಮಸರಾಜಸ, ತಾಮಸತಾಮಸ ಎಂದು ಮೂರು ವಿಧರಾಗಿದ್ದಾರೆ.

ಸಾತ್ತ್ವಿಕಾದಿ ಭೇದದಿಂದ ಭಿನ್ನರಾದ ಸಾತ್ತ್ವಿಕಾದಿಗಳು ಯಾರು ಎಂದರೆ ಮೂಲದಲ್ಲಿ ಹೇಳದಿರುವ ಅವರನ್ನು ನೀಚಕ್ರಮದಿಂದ ಪ್ರಮಾಣದಿಂದ ತಿಳಿಸುವರು-

ತಾತ್ಪರ್ಯ- ತಾಮಸಾಸ್ತಾಮಸಾ ದೈತ್ಯಾಃ ಪ್ರಧಾನಾ ದೇವಶತ್ರವಃ ।
ತಾಮಸಾ ರಾಜಸಾಸ್ತೇಷಾಮನುಗಾಸ್ತೇಷು ಸಾತ್ತ್ವಿಕಾಃ ॥

ಅನಾಖ್ಯಾತಾಃ ಸುರಾಃ ಪ್ರೋಕ್ತಾ ಮಾನುಷಾ ದುಷ್ಟಚಾರಿಣಃ ।
ರಾಜಸಾಸ್ತಾಮಸಾಶ್ಚೈವ ಮಧ್ಯಾ ರಾಜಸರಾಜಸಾಃ ॥

ರಾಜಸಾಃ ಸಾತ್ವಿಕಾಸ್ತತ್ರ ಮಾನುಷೇಷೂತ್ತಮಾ ಗಣಾಃ ।
ದೇವಾಃ ಪೃಥಗನಾಖ್ಯಾತಾಃ ಸ್ಮೃತಾಃ ಸಾತ್ತ್ವಿಕತಾಮಸಾಃ ॥

ಅತಾತ್ತ್ವಿಕಾಸ್ತಥಾ ಖ್ಯಾತಾಃ ಸ್ಮೃತಾಃ ಸಾತ್ತ್ವಿಕರಾಜಸಾಃ ।
ಸಾತ್ತ್ವಿಕಾಸಾತ್ವಿಕಾಸ್ತತ್ರ ತಾತ್ವಿಕಾಃ ಪರಿಕೀರ್ತಿತಾಃ ॥

ತೇಷಾಂ ಚ ಸಾತ್ತ್ವಿಕಾಃ ಶೇಷಗರುತ್ಮದ್ರುದ್ರತತ್ಸ್ತ್ರಿಯಃ ।
ತತೋऽಪಿ ದೇವೀ ಬ್ರಹ್ಮಾಣೀ ಬ್ರಹ್ಮಾ ಚೈವ ತತಃ ಸ್ವಯಮ್ ॥

ದೇವತೆಗಳಿಗೆ ಶತ್ರುಗಳಾದ ಕಲಿ ಮೊದಲಾದ ಪ್ರಧಾನ ಅಸುರರು ತಾಮಸತಾಮಸರಾದ ದೈತ್ಯರು. ಈ ಪ್ರಧಾನ ಅಸುರರ ಭೃತ್ಯರು ತಾಮಸರಾಜಸರೆನಿಸುತ್ತಾರೆ. ಅಪ್ರಸಿದ್ಧರಾದ ಅಸುರರು ತಾಮಸಸಾತ್ತ್ವಿಕರಾಗಿದ್ದಾರೆ.

ಕೇವಲ ದುಷ್ಟಾಚಾರ ಉಳ್ಳ ಮನುಷ್ಯರು ರಾಜಸತಾಮಸರೆನಿಸುತ್ತಾರೆ. ಮಧ್ಯಮ ಮನುಷ್ಯರು ರಾಜಸರಾಜಸರೆನಿಸುತ್ತಾರೆ. ಮನುಷ್ಯೋತ್ತಮರು ರಾಜಸಸಾತ್ತ್ವಿಕರಾಗಿದ್ದಾರೆ. ರಾಜಸಸಾತ್ತ್ವಿಕರು ಮನುಷ್ಯೋತ್ತಮರು ಪುಣ್ಯವನ್ನೇ ಮಾಡುವವರು.

ರಾಜರನ್ನಾರಂಭಿಸಿ ಚಿರಪಿತೃಪರ್ಯಂತ ಉತ್ತಮಜೀವರು ಸಾತ್ತ್ವಿಕತಾಮಸರಾಗಿದ್ದಾರೆ. ಪ್ರತ್ಯೇಕ ಇಂತಹ ದೇವತೆಗಳೆಂದು ಹೆಸರು ಇಲ್ಲದವರು ಸಾತ್ತ್ವಿಕರಾಜಸರು. ತತ್ತ್ವಾಭಿನಾನಿಗಳಾಗದೇ ಇದ್ದು ದೇವತೆಗಳೆಂದು ಪ್ರಸಿದ್ಧಿ ಪಡೆದ ಆಜಾನಜದೇವತೆಗಳು ಮತ್ತು ಕರ್ಮಜದೇವತೆಗಳು ಸಾತ್ತ್ವಿಕರಾಜಸರಾಗಿದ್ದಾರೆ. ತತ್ತ್ವಾಭಿಮಾನಿದೇವತೆಗಳು ಸಾತ್ತ್ವಿಕಸಾತ್ತ್ವಿಕರು. ಅವರು ವಿಷ್ವಕ್ಸೇನ, ವಿಷ್ವಕ್ಸೇನನಿಗೆ ಸಮಾನರಾದವರನ್ನಾರಂಭಿಸಿ ಮೇಲಿನವರೆಲ್ಲರೂ ಸಾತ್ತ್ವಿಕಸಾತ್ತ್ವಿಕರಾಗಿದ್ದಾರೆ.

ಸಾತ್ತ್ವಿಕಸಾತ್ತ್ವಿಕರ ಮಧ್ಯದಲ್ಲಿಯೂ ಶೇಷ-ಗರುಡ-ರುದ್ರ ಅವರ ಹೆಂಡಂದಿರು ಹೆಚ್ಚು ಸತ್ತ್ವಗುಣ ಉಳ್ಳವರು. ಅವರಿಗಿಂತಲೂ ಭಾರತಿ-ಸರಸ್ವತಿಯರು ಹೆಚ್ಚು ಸತ್ತ್ವಗುಣ ಉಳ್ಳವರು. ಅವರಿಗಿಂತಲೂ ಬ್ರಹ್ಮ-ವಾಯುಗಳು ತಾವೇ ಇತರ ಜೀವರ ಪ್ರೇರಣೆ ಇಲ್ಲದೇ ಹೆಚ್ಚು ಸತ್ತ್ವಗುಣ ಉಳ್ಳವರು ಸಾತ್ತ್ವಿಕಸಾತ್ತ್ವಿಕತಮರೆಂದು ಭಾವ. ॥ ೪೧ ॥

*ಈವರೆಗೆ ಬ್ರಹ್ಮದೇಹಾಂತರ್ಗತ ಪುರುಷನಿಂದ ಅವಾಂತರ ಭೇದ ಉಳ್ಳ ಜಗತ್ತಿನ ಸೃಷ್ಟಿಯನ್ನು ಹೇಳಿ ಅವನೇ ಮತ್ಸ್ಯಾದಿರೂಪದಿಂದ ಸ್ಥಿತಿಯನ್ನು ಮಾಡುವನು ಎಂದು ಹೇಳುವರು-*

**ಯದೈವೈಕತಮೋಽನ್ಯಾಭ್ಯಾಂ ಸ್ವಭಾವ ಉಪಹನ್ಯತೇ ।**
**ತದೈವೇದಂ ಜಗದ್ಧಾತಾ ಭಗವಾನ್ ಧರ್ಮರೂಪಧೃಕ್ ॥**
**ಪುಷ್ಣಾತಿ ಸ್ಥಾಪಯನ್ ವಿಶ್ವಂ ತಿರ್ಯಙ್ನರಸುರಾತ್ಮಭಿಃ ॥ ೪೨ ॥**

**ಯದಾ** ಯಾವಾಗ, **ಏಕತಮಃ** ಹಿಂದೆ ಹೇಳಿದ ಮೂರು ರೀತಿಯ ಸಾತ್ತ್ವಿಕರಲ್ಲಿ ಯಾವನಾದರೊಬ್ಬನು ಅಂದರೆ ಸಾತ್ತ್ವಿಕಸಾತ್ತ್ವಿಕನಾಗಲಿ, ಸಾತ್ತ್ವಿಕರಾಜಸನಾಗಲಿ,

ಸಾತ್ತ್ವಿಕತಾಮಸನಾಗಲಿ ಉಪಲಕ್ಷಣಯಾ ರಾಜಸಸಾತ್ತ್ವಿಕನಾಗಲಿ ಎಂದರ್ಥ, **ಸ್ವಭಾವಃ** ಸಾತ್ತ್ವಿಕನು, **ಅನ್ಯಾಭ್ಯಾಂ ದ್ವಾಭ್ಯಾಂ** *ದ್ವಿವಿಧರಾಜಸ-ತ್ರಿವಿಧತಾಮಸರಿಂದ,* **ಉಪಹನ್ಯತೇ** ಬಾಧಿಸಲ್ಪಡುವನೋ, **ತದೈವ** ಆಗಲೇ, **ಧಾತಾ** ನಾಮ-ರೂಪ-ಕ್ರಿಯಾದಿಭೇದದಿಂದ ನಿಯಮಿಸುವ, **ಭಗವಾನ್** ವಿಷ್ಣುವು, **ಧರ್ಮರೂಪಧೃಕ್** ಧರ್ಮಪ್ರವರ್ತಕ ರೂಪವನ್ನು ಧರಿಸಿ, (ಧರ್ಮದಲ್ಲಿದ್ದು ಧರ್ಮನಾಮಕನಾಗಿ) **ವಿಶ್ವಂ** ಎಲ್ಲ **ಇದಂ ಜಗತ್** ಈ ಜಗತ್ತನ್ನು, **ತಿರ್ಯಙ್ನರಸುರಾತ್ಮಭಿಃ** ಮತ್ಸ್ಯ-ಕೂರ್ಮ-ವರಾಹ-ರಾಮ-ಕೃಷ್ಣ-ಉಪೇಂದ್ರಾದಿ ರೂಪಗಳಿಂದ, **ಸ್ಥಾಪಯನ್ ಪುಷ್ಣಾತಿ** ಬಂಧಕರನ್ನು ಸಂಹರಿಸಿ, ಭೋಗವನ್ನು, ಜ್ಞಾನ-ಭಕ್ತಿಗಳನ್ನೂ ಇತ್ತು ಬೆಳೆಸುವನು. ।। ೪೨ ।।

ಇಲ್ಲಿ ಏಕತಮಾದಿ ಶಬ್ದಾರ್ಥ ತಿಳಿಯದಿರುವುದರಿಂದ ವ್ಯಾಖ್ಯಾನಿಸುವರು-

**ತಾತ್ಪರ್ಯ- ಸಾತ್ತ್ವಿಕೇಷು ತ್ರಿಷು ಯದಾ ತ್ವೇಕಸ್ಯ ಪ್ರತಿಬಾಧನಮ್ ।**
**ರಜಸ್ತಮೋಭ್ಯಾಂ ವಿಷ್ಣುರ್ಹಿ ತದಾ ಪ್ರಾದುರ್ಭವತ್ಯಜಃ ।**
**ರಾಜಸಾನ್ ತಾಮಸಾನ್ ಹತ್ವಾ ಸಾತ್ತ್ವಿಕಾನ್ ವರ್ಧಯಿಷ್ಯತಿ ।। -ಇತಿ ಸ್ಕಾಂದೇ**

ಮೂರು ವಿಧರಾದ ಸಾತ್ತ್ವಿಕರಲ್ಲಿ ಯಾವಾಗ ಸಾತ್ತ್ವಿಕಸಾತ್ತ್ವಿಕ-ಸಾತ್ತ್ವಿಕರಾಜಸ-ಸಾತ್ತ್ವಿಕತಾಮಸ ಮತ್ತು ರಾಜಸಸಾತ್ತ್ವಿಕ ಇವರಲ್ಲಿ ಯಾರಿಗಾದರೂ ಒಬ್ಬನಿಗೆ ದ್ವಿವಿಧರಾಜಸ ತ್ರಿವಿಧತಾಮಸರಿಂದ ವಿಶೇಷ ಪೀಡೆಯುಂಟಾಗುವುದೋ ಆವಾಗ ಶ್ರೀಹರಿಯು ಮತ್ಸ್ಯಾದಿ ರೂಪಗಳಿಂದ ಅವತರಿಸುತ್ತಾನೆ. ರಾಜಸರನ್ನು, ತಾಮಸರನ್ನು ಸಂಹರಿಸಿ, ಸಾತ್ತ್ವಿಕರನ್ನು ಪೋಷಿಸಿತ್ತಾನೆ. ಹೀಗೆಂದು ಸ್ಕಾಂದಪುರಾಣದಲ್ಲಿದೆ.

*ಈಗ ಕೊನೆಗೆ ಸಂಹರಿಸುವವನೂ ಅವನೇ ಎಂದು ಹೇಳುವರು-*

**ತತಃ ಕಾಲಾಗ್ನಿರುದ್ರಾತ್ಮಾ ಯತ್ಸೃಷ್ಟಮಿದಮಾತ್ಮನಃ ।**
**ಸನ್ನಿಯಚ್ಛತಿ ತತ್ಕಾಲೇ ಘನಾನೀಕಮಿವಾನಿಲಃ ।। ೪೩ ।।**

ಸ್ಥಿತಿಯನಂತರ, **ಕಾಲೇ** ಪ್ರಲಯಕಾಲದಲ್ಲಿ **ಕಾಲಾಗ್ನಿರುದ್ರಾತ್ಮಾ** ಯಮ, ಸಾಂವರ್ತಕಾಗ್ನಿ ಮತ್ತು ರುದ್ರದೇವರಲ್ಲಿ ವ್ಯಾಪ್ತನಾದ ನೃಸಿಂಹದೇವರು, **ಆತ್ಮನಃ** ವಿರಿಂಚನಲ್ಲಿರುವ ಬ್ರಹ್ಮರೂಪದಿಂದ, **ಯತ್‌ಸೃಷ್ಟಂ ಇದಂ** ಸೃಷ್ಟಿಸಿದ ಯಾವ ಈ ಜಗತ್ತಿದೆಯೋ **ತತ್** ಅದನ್ನು, **ಅನಿಲಃ** ವಾಯುವು, **ಘನಾನೀಕಂ ಇವ** ಮೇಘಸಮೂಹದಂತೆ **ಸನ್ನಿಯಚ್ಛತಿ** ಸಂಹರಿಸುವನು.

ಇಲ್ಲಿ ಭಗವಂತನಿಗೆ ಕಾಲಾಗ್ನಿರುದ್ರರ ಅಭೇದ ಹೇಳಿದಂತೆ ತೋರುತ್ತದೆ. ಅದರಂತೆ ಹಿಂದಿನ ಶ್ಲೋಕದಲ್ಲಿ ತಿಯಜ್ಞರಸುರಾತ್ಮಭಿಃ ಎಂಬಲ್ಲಿ ಪ್ರಸಿದ್ಧ ತಿರ್ಯಗಾದಿಸ್ವರೂಪತ್ವವು ಯತ್ಸ್ಪಷ್ಟಮಿದಮಾತ್ಮನಃ ಎಂಬಲ್ಲಿ ಆತ್ಮನಃ ಎಂಬುದರಿಂದ ವಿರಿಂಚನನ್ನು ಸ್ವೀಕರಿಸಿದರೆ ಆವನಿಂದ ಅಭೇದವೂ ತೋರುವುದು. ಕಾರಣ ಯಥಾವತ್ತಾಗಿ ಪ್ರಮಾಣದಿಂದ ತಾತ್ಪರ್ಯ ತಿಳಿಸುವರು-

ತಾತ್ಪರ್ಯ- ಮತ್ಸ್ಯಾದಿರೂಪೀ ಪೋಷಯತಿ ನೃಸಿಂಹೋ ರುದ್ರಸಂಸ್ಥಿತಃ ।
ವಿಲಾಪಯೇದ್ವಿರಿಂಚಸ್ಥಃ ಸೃಜತೇ ವಿಷ್ಣುರವ್ಯಯಃ ॥ -ಇತಿ ವಾಮನೇ

ಮತ್ಸ್ಯಮೊದಲಾದ ರೂಪಗಳುಳ್ಳ ಶ್ರೀಹರಿಯು ಜಗತ್ತನ್ನು ಪೋಷಿಸುತ್ತಾನೆ. ರುದ್ರನಲ್ಲಿ ಅಂತರ್ಯಾಮಿಯಾಗಿರುವ ನೃಸಿಂಹನು ಸಂಹರಿಸುತ್ತಾನೆ. ಚತುರ್ಮುಖನಲ್ಲಿದ್ದ ಶ್ರೀವಿಷ್ಣುವು ಸೃಷ್ಟಿಸುತ್ತಾನೆ. ಹೀಗೆಂದು ವಾಮನಪುರಾಣದಲ್ಲಿದೆ. ॥ ೪೩ ॥

*ತಾವು ಹೇಳಿದ ವಿಷಯದಲ್ಲಿ ಶ್ರುತಿಯನ್ನು ಪ್ರಮಾಣಿಸುವರು-*

**ಇತ್ಥಂಭಾವೇನ ಕಥಿತೋ ಭಗವಾನ್ ಭಗವತ್ತಮಃ ।**
**ನೇತ್ಥಂಭಾವೇನ ಹಿ ಪರಂ ದ್ರಷ್ಟುಮರ್ಹಂತಿ ಸೂರಯಃ ॥ ೪೪ ॥**

**ಭಗವತ್ತಮಃ** ಅತಿಶಯವಾದ ಐಶ್ವರ್ಯ ಉಳ್ಳವನು ಆದ್ದರಿಂದಲೇ, **ಭಗವಾನ್** ಭಗವಚ್ಛಬ್ದಮುಖ್ಯವಾಚ್ಯನು, (ನಾರದಾದಿಗಳಂತೆ ಅಮುಖ್ಯವೃತ್ತಿಯಿಂದಲ್ಲ ಎಂದು ತಿಳಿಸಲು ಭಗವತ್ತಮಃ ಎಂದಿರುವರು) **ನಾಃ** ಪೂರ್ವಪ್ರಕೃತನಾದ ಪುರುಷನು, **ಇತ್ಥಂಭಾವೇನ** ಸೃಷ್ಟ್ಯಾದಿಕರ್ತೃತ್ವಾದಿ ಪ್ರಕಾರದಿಂದ, **ಕಥಿತಃ** 'ಯತೋ ವಾ...' ಮುಂತಾದ ಶ್ರುತಿಗಳಲ್ಲಿ ಹೇಳಲ್ಪಟ್ಟಿರುವನು, **ಹಿ** ಯಾವ ಕಾರಣ, **ಇತ್ಥಂಭಾವೇನ (ವಿಶಿಷ್ಟಂ)** ಕರ್ತೃತ್ವಾದಿ ವಿಶಿಷ್ಟನಾದ, **ಪರಂ** ಪರಮಾತ್ಮನನ್ನು, **ಸೂರಯಃ** ಜ್ಞಾನಿಗಳು, **ದ್ರಷ್ಟುಂ ಅರ್ಹಂತಿ** ಬಂಧಪ್ರತಿಷೇಧಕ್ಕಾಗಿ ನೋಡಲು ಯೋಗ್ಯರಾಗಿರುವರು. ಹೊರತು ನಿರ್ವಿಶೇಷನನ್ನು ತಿಳಿಯಲು ಅಲ್ಲ. 'ತಮೇವಂ ವಿದ್ವಾನ್' ಎಂದು ಶ್ರುತಿ ಇದೆ. ಆದ್ದರಿಂದ ವಿಶಿಷ್ಟನಲ್ಲೇ ಶ್ರುತಿಗೆ ತಾತ್ಪರ್ಯವಿದೆ ಎಂದು ಭಾವ. ॥ ೪೪ ॥

'ನೇತ್ಥಂಭಾವೇನ' ಎಂಬಲ್ಲಿ ನ ಇತ್ಥಂಭಾವೇನ ಎಂಬ ಪ್ರತೀತಿಯನ್ನು ವಾರಣ ಮಾಡಲು ಅಭಿಮತವಾದ ಪದಚ್ಛೇದವನ್ನು ತಿಳಿಸುತ್ತ ವ್ಯಾಖ್ಯಾನಿಸುವರು-

ತಾತ್ಪರ್ಯ- ಭಗವತ್ತಮಃ ನಾ ಪುರುಷಃ ।

ಬ್ರಹ್ಮಾದಿಗಳಿಂಗಿಂತ ಉತ್ತಮನಾದ **ನಾ** ಸರ್ವಜಗತ್ತಿಗೆ ಪ್ರೇರಕನಾದ ಪುರುಷ ಶಬ್ದವಾಚ್ಯನಾದ ಪರಮಾತ್ಮನು. ಶ್ಲೋಕದಲ್ಲಿಯ ನ ಎಂಬುದು ನಞ ಅಲ್ಲ ನೃಶಬ್ದದ ಪ್ರಥಮೈಕವಚನಾಂತ. ಪುರುಷವಾಚಕ ಭಗವತ್ತಮಃ ಎಂಬ ಹಿಂದಿನ ಶಬ್ದದ ಜೊತೆಗೆ ಅನ್ವಯ. ಹೊರತು ಉತ್ತರವಾಕ್ಯದಿಂದಲ್ಲ ಎಂದಂತಾಯಿತು. ನಿಷೇಧಾರ್ಥಕವೆಂದರೆ ಜ್ಞಾನಿಗಳು ವೇದದಲ್ಲಿ ಹೇಳಿದಂತೆ ತಿಳಿಯಲಾರರು ಎಂದರ್ಥವಾಗುತ್ತದೆ. ಈ ಅರ್ಥವು ಯುಕ್ತವಲ್ಲ.

ಹಿಂದಿನ ಶ್ಲೋಕದಲ್ಲಿ 'ಯತೋ ವಾ...' ಮುಂತಾದ ವಾಕ್ಯಗಳಿಂದ ಭಗವಂತನಿಗೆ ಕರ್ತೃತ್ವವನ್ನು ತಾತ್ಪರ್ಯಪೂರ್ವಕ ಪ್ರತಿಪಾದಿಸುವುದು ಎಂದು ಹೇಳಿದ್ದು ಸರಿಯಲ್ಲ. ನಿಷ್ಕ್ರಿಯನಿಗೆ ಸ್ವಾಭಾವಿಕವಾದ ಕರ್ತೃತ್ವ ಅಸಂಭಾವಿತವು. ಆದ್ದರಿಂದ ಮೇಲೆ ಹೇಳಿದ ವಾಕ್ಯಗಳಿಂದ 'ನೇಹಾ ನಾಸಾಽಸ್ತಿ...' ಮುಂತಾಗಿ ನಿಷೇಧಮಾಡಲು ಅನುವಾದ ಮಾಡುವುದೇ ಹೊರತು ಕರ್ತೃತ್ವವನ್ನು ಪ್ರತಿಪಾದಿಸಲು ಅಲ್ಲ ಎಂದರೇ ಉತ್ತರಿಸುವರು-

**ನ ಚಾಽಸ್ಯ ಜನ್ಮಕರ್ಮಾಣಿ ಪರಸ್ಯ ನ ವಿಧೀಯತೇ ।**
**ಕರ್ತೃತ್ವಂ ಪ್ರತಿಷೇಧಾರ್ಥಂ ಮಾಯಯಾರೋಪಿತಂ ಹಿ ತತ್ ॥ ೪೫ ॥**

**ಅಸ್ಯ** ಈ ಜಗತ್ತಿಗೆ, **ಜನ್ಮಕರ್ಮಾಣಿ** ಜನ್ಮಕರ್ಮಗಳು, **ಪರಸ್ಯ** ಪರಮಾತ್ಮನಿಂದ ಹೇಗೆ ಆಗುವವೊ ಹಾಗೆ, **ಅಸ್ಯ ಪರಸ್ಯ** ಪರಮಾತ್ಮನಿಗೆ, **ಕರ್ತೃತ್ವಂ ನ ವಿಧೀಯತೆ ಇತಿ ನ** ಕರ್ತೃತ್ವವನ್ನು ತಾತ್ಪರ್ಯತಃ ಪ್ರತಿಪಾದಿಸುವುದಿಲ್ಲ ಎಂದಲ್ಲ, (ಜಗಜ್ಜನ್ಮಾದಿಗಳಿಗೆ ಅನುಕೂಲವಾದ ಪರಮಾತ್ಮಕರ್ತೃತ್ವವನ್ನು ತಾತ್ಪರ್ಯತಃ ಪ್ರತಿಪಾದಿಸುತ್ತದೆ ಹೊರತು ಅನುವಾದ ಮಾಡುವುದಿಲ್ಲ) **ಪ್ರತಿಷೇಧಾರ್ಥಂ** ಜೀವರು ಬಂಧವನ್ನು ಕಳೆದು ಕೊಳ್ಳುವುದಕ್ಕಾಗಿ ಹೇಳುವುದು, ನಿರ್ವಿಶೇಷಜ್ಞಾನವು ಮೋಕ್ಷಸಾಧನವಲ್ಲ, **ಮಾಯಯಾ** ಸ್ವೇಚ್ಛೆಯಿಂದ, **ತತ್** ಕರ್ತೃತ್ವವು, **ಹಿ** ಯಾವ ಕಾರಣ, **ಆರೋಪಿತಂ** ನಿತ್ಯದಲ್ಲಿಯೂ ತನ್ನಲ್ಲಿ ಸ್ಥಾಪಿತವಾದುದು ಕಲ್ಪಿತವಲ್ಲ ಸ್ವಾಭಾವಿಕವೇ ಆಗಿದೆ. ಯಾವ ಕ್ಲೇಶವೂ ಇಲ್ಲದೇ ಜಗತ್ಸೃಷ್ಟ್ಯಾದಿ ಕರ್ಮಗಳನ್ನು ಭಗವಂತ ಮಾಡುತ್ತಾನೆ ಆದ್ದರಿಂದ ನಿಷ್ಕ್ರಿಯ ಇತ್ಯಾದಿಯಾಗಿ ದೇವರನ್ನು ವ್ಯವಹರಿಸುತ್ತಾರೆ ಎಂದು ಆಚಾರ್ಯರು ಅನ್ಯತ್ರ ವ್ಯಾಖ್ಯಾನಿಸಿದ್ದಾರೆ.

*ಈ ಶ್ಲೋಕದಲ್ಲಿ ಜನ್ಮಕರ್ಮಾಣಿ ಎಂಬುದಕ್ಕೆ ಯಾವುದರಿಂದಲೂ ಅನ್ವಯ ತೋರುವುದಿಲ್ಲ ಕಾರಣ ಅನ್ವಯ ತಿಳಿಸುವರು-*

**ತಾತ್ಪರ್ಯ- ಜನ್ಮಕರ್ಮಾಣಿ ವಿಧೀಯತೇ ಇತಿ ಕ್ರಿಯಾವಿಶೇಷಣಮ್ ।**

'ಜನ್ಮಕರ್ಮಾಣಿ' ಎಂಬುವುದು 'ವಿಧೀಯತೇ' ಎಂಬ ಕ್ರಿಯೆಯಿಂದ ಅನ್ವಯವನ್ನು ಹೊಂದುತ್ತದೆ.

'ನೇಹ ನಾನಾ...' ಮುಂತಾಗಿ ಪ್ರತಿಷೇಧ ಮಾಡಲು ಕರ್ತೃತ್ವವು ಮಾಯೆಯಿಂದ ಆರೋಪಿತ ಅಂದರೆ ಕಲ್ಪಿತ ಎಂಬ ಅನ್ಯಥಾಪ್ರತೀತಿಯನ್ನು ನಿವಾರಿಸಲು ದ್ವಿತೀಯಾರ್ಧದ ತಾತ್ಪರ್ಯವನ್ನು ಪ್ರಮಾಣದಿಂದ ತಿಳಿಸುವರು-

**ಪ್ರತಿಷೇಧಾಯ ಬಂಧಸ್ಯ ಜೀವಾನಾಂ ಪರಮೇಶಿತುಃ ।**
**ಸ್ವೇಚ್ಛಯೈವ ತು ಕರ್ತೃತ್ವಂ ನಿತ್ಯಾರೂಢಂ ಚಿದಾತ್ಮಕಮ್ ॥ -ಇತಿ ಭವಿಷ್ಯತ್ಪುರಾಣೇ**

ಜೀವರಿಗೆ ಸಂಸಾರಬಂಧವನ್ನು ನಿವೃತ್ತಿಗೊಳಿಸಲು ಮೂಲದಲ್ಲಿ 'ಜಿವಾನಾಂ ಬಂಧಸ್ಯ' ಎಂದು ಶೇಷ ಸೂಚಿತವಾಗಿದೆ. ಪರಮಾತ್ಮನಿಗೆ ಸ್ವೇಚ್ಛೆಯಿಂದಲೇ ಚಿದ್ರೂಪವಾದ ಕರ್ತೃತ್ವವು ನಿತ್ಯದಲ್ಲಿಯೂ ಸ್ಥಾಪಿತವಾಗಿದೆ ಎಂದು ಭವಿಷ್ಯತ್ಪುರಾಣದಲ್ಲಿ ಹೇಳಿದೆ.

ಆರೋಪಿತಶಬ್ದಕ್ಕೆ ಆರೂಢ ಎಂಬ ಅರ್ಥ ಶಬ್ದದಿಂದ ಬರುವುದಿಲ್ಲವೆಂದರೆ ಧಾತುವನ್ನು ತೋರಿಸುವರು-

**'ರೂಪ' ಉಪರಿ ಭಾವೇ ಇತಿ ಧಾತುಃ ।**

ರೂಪಧಾತುವಿಗೆ ಮೇಲೆ ಏರಿಸುವುದು ಎಂದರ್ಥವಿದೆ. ಆದಕಾರಣ ಆರೋಪಿತಂ ಎಂಬುದಕ್ಕೆ ನಿತ್ಯವೂ ಶ್ರೀಹರಿಯಲ್ಲಿ ಸ್ಥಾಪಿತವೆಂದರ್ಥವೇ ಹೊರತು ಕಲ್ಪಿತವೆಂದಲ್ಲ.

ಈ ಅರ್ಥದಲ್ಲಿ ಪ್ರಯೋಗ ತೋರಿಸುವರು-

**ಸುಭದ್ರಾಂ ರಥಮಾರೋಪ್ಯೇತ್ಯಾದಿವಚ್ಚ ।**

ಇಲ್ಲಿ ಆರೋಪ್ಯ ಎಂಬ ಶಬ್ದಕ್ಕೆ ಏರಿಸಿ ಎಂದು ಅರ್ಥ ಹೇಳಿದ್ದಾರೆ. ಸುಭದ್ರಾದೇವಿಯನ್ನು ರಥದಲ್ಲಿ ಏರಿಸಿ ಎಂದು ಈ ವಾಕ್ಯದ ಅರ್ಥ ಹೇಳಬೇಕು. ಹೀಗೆಯೇ ಪ್ರಕೃತದಲ್ಲಿಯೂ ಹೇಳಬೇಕು.

ಕರ್ತೃತ್ವ ಸ್ವಾಭಾವಿಕ ಎಂಬ ವಿಷಯದಲ್ಲಿ ಶ್ರುತಿಯನ್ನು ಹೇಳುವರು-

**'ಸ್ವಾಭಾವಿಕಜ್ಞಾನಬಲಕ್ರಿಯಾ ಚ' ಇತಿ ಚ ।**

ಶ್ರೀಹರಿಯ ಜ್ಞಾನ-ಬಲ-ಕ್ರಿಯೆಗಳು ಸ್ವಾಭಾವಿಕವೇ ಎಂದು ಶ್ರುತಿಯು ಇದೆ.

*ಹೇಳಿದ ಅರ್ಥವನ್ನು ಉಪಸಂಹರಿಸುತ್ತ ಬೇರೆ ಕಲ್ಪಗಳಿಗೆ ಈ ಕಲ್ಪದ ಸಾಧಾರಣತೆ ಇದೆ ಎಂದು ತಿಳಿಸುವರು-*

**ಅಯಂ ತೇ ಬ್ರಹ್ಮಣಃ ಕಲ್ಪಃ ಸವಿಕಲ್ಪ ಉದಾಹೃತಃ ।**
**ವಿಧಿಃ ಸಾಧಾರಣೋ ಯತ್ರ ಸರ್ಗಾಃ ಪ್ರಾಕೃತವೈಕೃತಾಃ ॥ ೪೬ ॥**

**ತೇ** ನಿನಗೆ, **ಮಯಾ** ನನ್ನಿಂದ, **ಯತ್ರ** ಯಾವ ಬ್ರಹ್ಮಕಲ್ಪದಲ್ಲಿ ಇತರ ಬ್ರಹ್ಮಕಲ್ಪಗಳಿಗೂ ಅವಾಂತರ ಕಲ್ಪಗಳಿಗೂ, **ಸಾಧಾರಣಃ ವಿಧಿಃ** ಸಮಾನ ಪ್ರಕಾರವಿಶೇಷಗಳಿವೆಯೋ **ಪ್ರಾಕೃತವೈಕೃತಾಃ ಸರ್ಗಾಃ** ಪ್ರಾಕೃತವಾದ ಮಹದಾದಿಸರ್ಗಗಳು, ವೈಕೃತವಾದ ಬ್ರಹ್ಮಾಂಡಾದಿ ಸರ್ಗಗಳು ಆಗುವವೋ ಅಂತಹ ಬ್ರಹ್ಮಕಲ್ಪಗಳಿಗೆ ಸಾಧಾರಣವು, **ಅಯಂ ತು ವಿಧಿಃ** ಬ್ರಹ್ಮಾಂಡದ ವರೆಗೆ ಹೇಳಿದ ಪ್ರಕಾರವಿಶೇಷ ಸ್ಥಾವರಾದಿಸರ್ಗವು ಬೇರೆ ಅವಾಂತರ ಕಲ್ಪಗಳಿಗೆ ಸಾಧಾರಣವು. ಅಂತಹ ಮಹಾಕಲ್ಪವು, **ಸವಿಕಲ್ಪಃ** ಅವಾಂತರಕಲ್ಪಸಹಿತವಾಗಿ, **ಉದಾಹೃತಃ** ಹೇಳಲ್ಪಟ್ಟಿದೆ.

ಸಾಧಾರಣ ಎಂದರೆ ಯಾವುದಕ್ಕೆ ಸಾಧಾರಣ ಎಂಬ ಆಕಾಂಕ್ಷೆ ಬರುವುದು ಅದನ್ನು ಪೂರ್ಣಗೊಳಿಸಿ ವ್ಯಾಖ್ಯಾನಿಸುವರು-

**ತಾತ್ಪರ್ಯ- ಅನ್ಯಕಲ್ಪಾನಾಂ ಸಾಧಾರಣಃ । ಯತ್ರೈವ ಪ್ರಾಕೃತವೈಕೃತಾಃ ಸರ್ವಸರ್ಗಾಃ । ಅನ್ಯ ಬ್ರಹ್ಮಕಲ್ಪಾನಾಂ ಚ ಸಾಧಾರಣಃ ॥ ೪೬ ॥**

ಈಗ ಅವಾಂತರ ಕಲ್ಪಸಹಿತವಾದ ಬ್ರಹ್ಮಸಂಬಂಧಿಯಾದ ಮಹಾಕಲ್ಪವನ್ನು ನಿನಗೆ ನಾನು ಹೇಳಿರುವೆನು. ಈ ವಿಧಿಯು ಅಂದರೆ ಪ್ರಕಾರವಿಶೇಷವು ಅಂದರೆ ಸ್ಥಾವರಾದಿಸರ್ಗವು ಬೇರೆ ಅವಾಂತರ ಕಲ್ಪಗಳಿಗೆ ಸಾಧಾರಣವಾದುದು ಸಮಾನವಾದುದು. (ಅನ್ಯಕಲ್ಪಾನಾಂ ಎಂದರೆ ಅವಾಂತರಕಲ್ಪಗಳಿಗೆ ಎಂದರ್ಥ)

ಅನ್ಯಬ್ರಹ್ಮಕಲ್ಪಾನಾಂ ಎಂಬಲ್ಲಿ ಮಹಾಕಲ್ಪವೇ ಏಕೆಂದರೆ ಎಲ್ಲಿ ಪ್ರಾಕೃತವೈಕೃತ, ಎಲ್ಲಿ ಸೃಷ್ಟಿಗಳಾಗುವವೋ ಎಂದಿದ್ದಾರೆ. ಮಹಾದಾದಿಸೃಷ್ಟಿಯಾದರೋ ಮಹಾಕಲ್ಪದ ಧರ್ಮ. ಆದ್ದರಿಂದ ಅದನ್ನೇ ಸ್ವೀಕರಿಸಬೇಕು. ಸ್ಥಾವರಾದಿಸರ್ಗಸಾಧಾರಣ್ಯ ಅವಾಂತರಕಲ್ಪಗಳಿಗೆ ಇದೆ ಎಂದು ತಿಳಿಯಬೇಕು. ॥ ೪೬ ॥

*ಕೇಳಿದ ಪ್ರಶ್ನೆಗಳಲ್ಲಿ ಉಳಿದವುಗಳನ್ನು ಮುಂದಿನ ಸ್ಕಂಧದಲ್ಲಿ ಹೇಳುವೆನೆಂದು, ಶ್ರೋತೃಗಳ ಮನಸ್ಸಮಾಧಾನಕ್ಕಾಗಿ ಪ್ರತಿಜ್ಞೆ ಮಾಡುವರು-*

**ಪರಿಮಾಣಂ ಚ ಕಾಲಸ್ಯ ಕಲ್ಪಲಕ್ಷಣವಿಗ್ರಹಮ್ ।**
**ಯಥಾ ಪರಸ್ತಾದ್ವ್ಯಾಖ್ಯಾಸ್ಯೇ ಪಾದ್ಮಂ ಕಲ್ಪಮಿಮಂ ಶ್ರುಣು ॥ ೪೭ ॥**

**ಕಾಲಸ್ಯ** ಕಾಲದ, **ಪರಿಮಾಣಂ** ಸ್ಥೂಲ ಮತ್ತು ಸೂಕ್ಷ್ಮಪರಿಮಾಣವನ್ನು **ಕಲ್ಪಲಕ್ಷಣವಿಗ್ರಹಂ** ಕಲ್ಪ ಮೊದಲಾದ ವಿಭಾಗವನ್ನು ಕಾಲನಾಮಕ ಭಗವಂತನ ಕಲ್ಪಾದಿರೂಪವಾದ ದೇಹವನ್ನು, **ಪರಸ್ತಾತ್** ಮುಂದಿನ ತೃತೀಯಸ್ಕಂಧದಲ್ಲಿ, **ಯಥಾ** ಯಥಾವತ್ತಾಗಿ ವಿವರಿಸುವೆನು. ಅದರಲ್ಲಿಯೂ ಮೊದಲು ನೀನು ಕೇಳಿದ, **ಪಾದ್ಮಂ ಕಲ್ಪಂ ಇಮಂ ಶ್ರುಣು** ಈ ಪಾದ್ಮಕಲ್ಪವನ್ನು ಹೇಳುವೆನು ಕೇಳು.

*ವಿದುರನನ್ನು ಕುರಿತು ಮೈತ್ರೇಯರು ಹೇಳಿದ ಪರಾಪರತತ್ತ್ವಗಳನ್ನು ಈ ರೀತಿ ಶುಕಾಚಾರ್ಯರು ರಾಜನಿಗೆ ತೃತೀಯಸ್ಕಂಧದಲ್ಲಿ ಹೇಳುವರು ಎಂದು ಹೇಳಲು ವಿದುರ-ಮೈತ್ರೇಯರ ಸಂವಾದವನ್ನು ಪ್ರಸ್ತಾವಿಸುವ ಶೌನಕರ ಪ್ರಶ್ನೆಯನ್ನು ಈ ಶ್ಲೋಕದಲ್ಲಿ ತಿಳಿಸುವರು-*

**ಶೌನಕ ಉವಾಚ-**

**ಯದಾಹ ನೋ ಭವಾನ್ ಸೂತ ಕ್ಷತ್ತಾ ಭಾಗವತೋತ್ತಮಃ ।**
**ಚಚಾರ ತೀರ್ಥಾನಿ ಭುವಸ್ತ್ಯಕ್ತ್ವಾ ಬಂಧೂನ್ ಸುದುಸ್ತ್ಯಜಾನ್ ॥ ೪೮ ॥**

**ಹೇ ಸೂತ** ಹೇ ಸೂತರೇ, **ಭವಾನ್** ನೀವು, **ಭಾಗವತೋತ್ತಮಃ** ಭಗವದ್ಭಕ್ತರಲ್ಲಿ ಉತ್ತಮನಾದ, **ಕ್ಷತ್ತಾ** ವಿದುರನು, **ಸುದುಸ್ತ್ಯಜಾನ್** ಬಿಡಲು ಬಹಳ ಕಷ್ಟದಾಯಕರಾದ, **ಬಂಧೂನ್** ಬಂಧುಗಳನ್ನು, **ತಕ್ತ್ವಾ** ಬಿಟ್ಟು, **ಭುವಃ ತೀರ್ಥಾನಿ** ಭೂಮಿಗೆ ಸಂಬದ್ಧವಾದ ತೀರ್ಥಗಳನ್ನು, ಅಥವಾ **ಭುವಃ** ಕ್ಷೇತ್ರಗಳನ್ನು, **ತೀರ್ಥಾನಿ** ತೀರ್ಥಗಳನ್ನು, **ಚಚಾರ** ಸಂಚರಿಸಿದನು ಎಂದು, **ಯತ್ ಆಹ** 'ವಿದುರಸ್ತೀರ್ಥಯತ್ರಾಯಾಂ ಮೈತ್ರೇಯಾದಾತ್ಮನೋ ಗತಿಂ' ಮುಂತಾಗಿ ಹೇಳಿರುವಿರೋ ತೀರ್ಥಗಳನ್ನು ಸಂಚರಿಸುವಾಗ ಮೈತ್ರೇಯರಿಂದ ಆತ್ಮಜ್ಞಾನ ಪಡೆದನೆಂದು ಹೇಳಿರುವಿರೋ ಆ ವಿಷಯವನ್ನು ವಿಸ್ತಾರವಾಗಿ ಕೇಳಲು ಪ್ರಶ್ನಿಸುವೆವು.

**ಕುತ್ರ ಕೌಷಾರವೇಸ್ತಸ್ಯ ಸಂವಾದೋಽಧ್ಯಾತ್ಮಸಂಭವಃ ।**
**ಯದ್ವಾ ಸ ಭಗವಾಂಸ್ತಸ್ಮೈ ಪೃಷ್ಟಸ್ತತ್ತ್ವಮುವಾಚ ಹ ॥ ೪೯ ॥**

**ಬ್ರೂಹಿ ನಸ್ತದಿದಂ ಸೌಮ್ಯ ವಿದುರಸ್ಯ ವಿಚೇಷ್ಟಿತಮ್ ।**
**ಬಂಧುತ್ಯಾಗನಿಮಿತ್ತಂ ಚ ಯಥೈವಾಗತವಾನ್ ಪುನಃ ॥ ೫೦ ॥**

ಆ ಪ್ರಶ್ನೆಗಳನ್ನೇ ತಿಳಿಸುವರು- **ಕೌಷಾರವೇಃ** ಮೈತ್ರೇಯರಿಗೆ, **ತಸ್ಯ** ವಿದುರನಿಗೆ, **ಕುತ್ರ** ಎಲ್ಲಿ **ಅಧ್ಯಾತ್ಮಸಂಭವಃ** ಪರಮಾತ್ಮನ ಜ್ಞಾನಜನಕವಾದ, **ಸಂವಾದಃ** ಪ್ರಶ್ನೋತ್ತರರೂಪವಾದ ಮಾತು ನಡೆಯಿತೋ, **ಭಗವಾನ್ ಸಃ** ಪೂಜ್ಯರಾದ ಮೈತ್ರೇಯರು, **ಪೃಷ್ಟಃ ಸನ್** ಪ್ರಶ್ನಿಸಲ್ಪಟ್ಟವರಾಗಿ, **ತಸ್ಮೈ** ವಿದುರನಿಗೆ, **ತತ್ತ್ವಂ ಉವಾಚ** ತತ್ತ್ವವನ್ನು ಹೇಳಿದರು. **ತದಿದಂ** ಇದನ್ನು, **ಹೇ ಸೌಮ್ಯ** ಸೂತರೇ, **ನಃ** ನಮಗೆ, **ವಿದುರಸ್ಯ ವಿಚೇಷ್ಟಿತಂ** ವಿದುರನ ವ್ಯಾಪಾರವನ್ನೂ, **ಬಂಧುತ್ಯಾಗ ನಿಮಿತ್ತಂ** ಬಂಧುಗಳನ್ನು ಬಿಡಲು ಕಾರಣವನ್ನು, **ಪುನಃ** ಮತ್ತೆ, **ಯಥಾ ಆಗತವಾನ್** ಹೇಗೆ ಬಂದನು ಎಂಬುದನ್ನು, **ಬ್ರೂಹಿ** ಹೇಳಿರಿ. ॥ ೪೯-೫೦ ॥

**ಸೂತ ಉವಾಚ -**

**ರಾಜ್ಞಾ ಪರೀಕ್ಷಿತಾ ಪೃಷ್ಟೋ ಯದವಾದೀನ್ಮಹಾಮುನಿಃ ।**
**ತದ್ವೋಽಭಿಧಾಸ್ಯೇ ಶೃಣುತ ರಾಜ್ಞಃ ಪ್ರಶ್ನಾನುಸಾರತಃ ॥ ೫೧ ॥**

॥ ಇತಿ ಶ್ರೀಮದ್ಭಾಗವತೇ ದ್ವಿತೀಯಸ್ಕಂಧೇ ದಶಮೋಽಧ್ಯಾಯಃ ॥

**ರಾಜ್ಞಾ** ಪರೀಕ್ಷಿತನಿಂದ, **ಪೃಷ್ಟಃ** ಪ್ರಶ್ನಿಸಲ್ಪಟ್ಟ **ಮಹಾಮುನಿಃ** ಶುಕಾಚಾರ್ಯರು, **ಯತ್** ಯಾವ ಉತ್ತರವನ್ನು **ಅವಾದೀತ್** ಹೇಳಿದರೋ, **ತತ್** ಅದನ್ನೇ, **ವಃ** ನಿಮಗೆ, **ರಾಜ್ಞಃ** ಪರೀಕ್ಷಿತನ, **ಪ್ರಶ್ನಾನುಸಾರತಃ** ಪ್ರಶ್ನೆಯನ್ನು ಅನುಸರಿಸಿ, ವಿದುರ-ಮೈತ್ರೇಯರ ಸಂವಾದದ ಮುಖಾಂತರ ಹೇಳಿದ್ದನ್ನೂ, **ಅಭಿಧಾಸ್ಯೇ** ಹೇಳುವೆನು.

॥ ಇಲ್ಲಿಗೆ ಹತ್ತನೆಯ ಅಧ್ಯಾಯವು ಸಮಾಪ್ತವಾಯಿತು ॥

॥ ಶ್ರೀಕೃಷ್ಣಾರ್ಪಣಮಸ್ತು ॥

ಸಮಾಪ್ತಶ್ಚಾಯಂ ಗ್ರಂಥಃ

# ಶ್ಲೋಕಾರ್ಧಾನುಕ್ರಮಣಿಕಾ

